ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ




# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ



'ನಾಮ ಮಹಿಮೆ'

ವಿಶೇಷ ಸಂಚಿಕೆ

₹ 75

ಜನವರಿ 2015

# Top Ten Travel Destination 2015




### Singapore & Malaysia Tour



### Grand Tour of USA



### Dubai, Abu Dhabi & Sharjah



### China Hong Kong Tour



### Mount Kailash & Manasa Sarovar



### Japan




### Grand UK & Europe



### Australia & New Zealand



### Sri Lanka - Ramayana Trails



### Cambodia & Thailand Tour



*We also organize Domestic & International Customized Package Tours & also offer special rates for groups and we can give presentation about the tour at the requested venue.*
















Travel & Tours

# 98, 1st Floor, D.V.G Road, Basavanagudi, Bangalore - 560 004

Contact : 9900080794, 9900080796, 9900080799, 9900080790 Tele : +91 80 2667 0647 / 2662 1983

E-mail : info@orchidtours.net www.orchidtours.net

# ವಿವೇಕಪ್ರಭ



ಜನವರಿ-2015

ಸಂಪುಟ 16 ಸಂಚಿಕೆ 01

## ಭಾಗ - 4 ವಿವಿಧ ಧರ್ಮಗಳಲ್ಲಿ ನಾಮಮಹಿಮೆ



## ಭಾಗ - 5 ಶ್ರೀರಾಮಕೃಷ್ಣ ಪರಂಪರೆಯಲ್ಲಿ ನಾಮಮಹಿಮೆ




**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಮುಕ್ತಿದಾನಂದ*
**ಸಂಪಾದಕರು**
*ಸ್ವಾಮಿ ಜ್ಞಾನಯೋಗಾನಂದ*
**ನೆರವು:**
*ಆರ್. ಎಸ್. ಪೂರ್ಣಾನಂದ*
*ಎನ್. ಎಸ್. ಶಾರದಾಪ್ರಸಾದ್*

*ಡಾ. ಕೆ. ಎಲ್. ಪ್ರಸನ್ನಾಕ್ಷಿ*
*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*
**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



**E-mail:** vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505


**ಮುಖಪುಟ:**
**ಜಪಾತ್ ಸಿದ್ಧಿಃ**

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.
– ಸ್ವಾಮಿ ವಿವೇಕಾನಂದ


**ಚಂದಾ ವಿವರ :** ಬಿಡಿ ಪ್ರತಿ: ₹14; ವಾರ್ಷಿಕ: ₹140; ಮೂರು ವರ್ಷ: ₹375; ಆಜೀವ (25 ವರ್ಷ): ₹3,000; ಪೋಷಕ ಸಹಾಯಧನ: ₹5,000 ಅಥವಾ ಹೆಚ್ಚು. ವಿದೇಶಗಳಿಗೆ: (ಏರ್‌ಮೇಲ್) ವಾರ್ಷಿಕ: $20; ಮೂರು ವರ್ಷ: $60; ಆಜೀವ (25 ವರ್ಷ): $300; ಪೋಷಕ ಸಹಾಯಧನ: $600 ಅಥವಾ ಹೆಚ್ಚು.



ಈ ಪತ್ರಿಕೆಯಲ್ಲಿ ಪ್ರಕಟವಾಗಿರುವ ಲೇಖನಗಳಲ್ಲಿನ ಅಭಿಪ್ರಾಯಗಳು ಲೇಖಕರವು. ಈ ಪತ್ರಿಕೆಯಲ್ಲಿ ಪ್ರಕಟವಾಗಿರುವ ಜಾಹೀರಾತುಗಳಲ್ಲಿನ ಮಾಹಿತಿಗಳ ನಿಖರತೆಗೆ ಈ ಪತ್ರಿಕೆ ಜವಾಬ್ದಾರಿಯಲ್ಲ. ಈ ಪತ್ರಿಕೆಯಲ್ಲಿನ ಯಾವ ಭಾಗವನ್ನೂ ಪ್ರಕಾಶಕರ ಲಿಖಿತ ಅನುಮತಿ ಇಲ್ಲದೆ ಬೇರೆಡೆ ಪ್ರಕಟಿಸುವಂತಿಲ್ಲ.



ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

## ಪ್ರಾರ್ಥನೆ

ಬಲು ಮಧುರವೊ ನಿನ್ನ ಹೆಸರು
ಕಿವಿಗೆ ಸುಧಯ ಕರೆವುದು ;
ದೀನ ಶರಣ ಪ್ರಾಣ ರಮಣ
ಅಮೃತ ಭವನ ಧನವಿದು.

ನಿನ್ನ ಹೆಸರ ಕೀರ್ತಿಸಿದರೆ
ನಾವು ಅಮರರಪ್ಪೆವೊ
ಚಿಂತೆಕಡಲು ನಿಮಿಷದಲ್ಲಿ
ಬತ್ತುತ ಬಯಲಪ್ಪುದೊ!

ಹೃದಯದಲ್ಲಿ ನಿನ್ನ ಮಧುರ
ಗಾಯನವನೆ ಗೈವೆವು!
ಹೃದಯನಾಥ ಚಿದಾನಂದ
ನಿರುತ ನಿನ್ನ ನೆನೆವೆವು.

**–ಪುಂಡರೀಕಾಕ್ಷ ಮುಖ್ಯೋಪಾಧ್ಯಾಯ**

*(ಮೂಲ ಬಂಗಾಳಿ ಗೀತೆ 'ಸುಂದರ ತೊಮಾರಿ ನಾಮ್' ಎಂದು ಆರಂಭವಾಗುತ್ತದೆ. ದಕ್ಷಿಣೇಶ್ವರದಲ್ಲಿ ಸ್ವಾಮಿ ವಿವೇಕಾನಂದರು ಈ ಹಾಡನ್ನು ಹಾಡುತ್ತಿದ್ದಾಗ ಶ್ರೀರಾಮಕೃಷ್ಣರು ಸಮಾಧಿಯ ಸ್ಥಿತಿಗೇರಿದ ನಿದರ್ಶನಗಳಿವೆ. (ಶ್ರೀರಾಮಕೃಷ್ಣ ವಚನವೇದ, ಭಾಗ ೧, ಪು.೫೮೦) ಇದರ ಕನ್ನಡಾನುವಾದ: ಡಾ.ಜಿ.ಎಸ್.ಶಿವರುದ್ರಪ್ಪ)*

## ಸೂಕ್ತಿಪ್ರಭ

ಜಪವೆಂದರೆ ನಿಶ್ಶಬ್ದವಾದ ಸ್ಥಳದಲ್ಲಿ ಕುಳಿತು ಮೌನವಾಗಿ ಭಗವಂತನ ನಾಮೋಚ್ಚಾರಣೆ ಮಾಡುವುದು. ಭಕ್ತಿ ಮತ್ತು ಏಕಾಗ್ರತೆಯಿಂದ ದೇವರ ಹೆಸರನ್ನು ಉಚ್ಚಾರಣೆ ಮಾಡಿದರೆ ಕೊನೆಗೆ ಭಗವಂತನ ಸಾಕ್ಷಾತ್ಕಾರವಾಗುವುದರಲ್ಲಿ ಸಂದೇಹವಿಲ್ಲ.

*–ಶ್ರೀರಾಮಕೃಷ್ಣರು*

ದೇವರ ನಾಮಜಪದಿಂದ ನೀನು ಎಲ್ಲವನ್ನೂ ಸಾಕ್ಷಾತ್ಕರಿಸಿಕೊಳ್ಳುವೆ. ಒಂದುವೇಳೆ ಮನಸ್ಸು ಶಾಂತವಾಗಿಲ್ಲದಿದ್ದರೂ, ನೀನು ಒಂದೆಡೆ ಕುಳಿತು ದೇವರ ಪವಿತ್ರ ನಾಮವನ್ನು ಹತ್ತುಲಕ್ಷ ಬಾರಿ ಜಪಿಸ ಬಹುದು.

*–ಶ್ರೀಮಾತೆ ಶಾರದಾದೇವಿ*

ಭಕ್ತಿಯನ್ನು ಪಡೆಯಬೇಕಾದರೆ ಭಗವಂತನ ನಾಮಜಪವನ್ನು ಮಾಡಬೇಕು. ಬರಿ ಮಂತ್ರೋಚ್ಚಾರಣೆಯಿಂದಲೇ ಎಷ್ಟೋ ಪ್ರಯೋಜನವಿದೆ. ಶಕ್ತಿಗೆಲ್ಲಾ ಕಾರಣ ಮಂತ್ರೋಚ್ಚಾರಣೆ. ಹಿಂದಿನ ಕಾಲದ ಅಸ್ತ್ರಕ್ರಿಯೆಯ ಹಿಂದೆಲ್ಲ ಮಂತ್ರಶಕ್ತಿಯಿತ್ತು. ನಮ್ಮ ಶಾಸ್ತ್ರದಲ್ಲೆಲ್ಲ ಅದನ್ನು ನಂಬುವರು. ಈ ಶಾಸ್ತ್ರವೆಲ್ಲ ಬರಿಯ ಕಲ್ಪನೆ ಎಂದು ಹೇಳುವುದು ಒಂದು ಮೂಢನಂಬಿಕೆ.

*–ಸ್ವಾಮಿ ವಿವೇಕಾನಂದ*

# ಹೊಸ ವರ್ಷದ ಹಾರ್ದಿಕ ಅಭಿನಂದನೆಗಳು – 2015

**ಮಾನ್ಯರೇ,**

**ನಿಮಗೆಲ್ಲರಿಗೂ ನೂತನ ವರ್ಷದ ಹಾರ್ದಿಕ ಶುಭಾಶಯಗಳು.**

**'ವಿವೇಕಪ್ರಭ' ಪತ್ರಿಕೆಯು ತನ್ನ ೧೫ ವರ್ಷಗಳ ಸೇವೆಯನ್ನು ಸುಸಂಪನ್ನಗೊಳಿಸಿ, ೧೬ನೇ ವರ್ಷಕ್ಕೆ ಪದಾರ್ಪಣ ಮಾಡುತ್ತಿರುವ ಈ ಶುಭಗಳಿಗೆಯಲ್ಲಿ, ಆತ್ಮೀಯ ಚಂದಾದಾರರಾದ ನಿಮಗೆಲ್ಲರಿಗೂ, ನಿಮ್ಮ ಸಹಕಾರ ಮತ್ತು ಪ್ರೋತ್ಸಾಹಗಳಿಗಾಗಿ ಹಾರ್ದಿಕ ಧನ್ಯವಾದಗಳು.**

**ಈ ಸಂದರ್ಭದಲ್ಲಿ, ನಮಗೆ ಎಲ್ಲ ರೀತಿಯಲ್ಲಿಯೂ ಸಹಕರಿಸುತ್ತಿರುವ ನಮ್ಮ ಸಂಪಾದಕ ಮಂಡಲಿಯ ಸದಸ್ಯರಿಗೆ, ನಮ್ಮೆಲ್ಲ ಲೇಖಕಬಳಗಕ್ಕೆ, ಪತ್ರಿಕೆಗೆ ಹೊಸ ಹೊಸ ಚಂದಾದಾರರನ್ನು ನಿಯಮಿತವಾಗಿ ಮಾಡಿಕೊಡುತ್ತಿರುವ ಕರ್ನಾಟಕದಾದ್ಯಂತ ಇರುವ ರಾಮಕೃಷ್ಣ ಆಶ್ರಮಗಳಿಗೆ ಮತ್ತು ಇತರ ಚಂದಾಸಂಗ್ರಾಹಕರಿಗೆ, ಕರಡುಪ್ರತಿಯನ್ನು ಪರಿಷ್ಕರಿಸಲು ಸಹಾಯ ಮಾಡುತ್ತಿರುವವರಿಗೆ, ನಮ್ಮೆಲ್ಲ ಜಾಹೀರಾತುದಾರರಿಗೆ, ವಿವೇಕಪ್ರಭ ಪತ್ರಿಕೆಯ ಮುದ್ರಣಕಾರರಾದ ಬೆಂಗಳೂರಿನ 'ಮಯೂರ್ ಗ್ರಾಫಿಕ್ಸ್'ನ ಮಾಲೀಕರಾದ ಶ್ರೀ ಪಾರ್ಥಸಾರಥಿ ಅವರಿಗೆ, ನಮ್ಮ ಕಾರ್ಯಾಲಯದ ಸಿಬ್ಬಂದಿಗೆ ಸಹಕರಿಸುತ್ತಿರುವ ಹಲವಾರು ಸ್ವಯಂಸೇವಕರಿಗೆ, ಪ್ರತಿ ತಿಂಗಳೂ ಪತ್ರಿಕೆಯ ಪ್ರತಿಗಳನ್ನು ರವಾನಿಸುತ್ತಿರುವ ಮೈಸೂರು ಯಾದವಗಿರಿ ಅಂಚೆಕಛೇರಿಯ ಸಿಬ್ಬಂದಿಗೆ ಮತ್ತು 'ವಿವೇಕಪ್ರಭ' ಪತ್ರಿಕೆಯ ಪ್ರಕಟನೆಯಲ್ಲಿ ಹಲವಾರು ರೀತಿಯಲ್ಲಿ ಪರೋಕ್ಷವಾಗಿ ಮತ್ತು ಅಪರೋಕ್ಷವಾಗಿ ಸೇವೆ ಸಲ್ಲಿಸುತ್ತಿರುವ ಎಲ್ಲ ಸ್ನೇಹಿತರಿಗೂ ಈ ಮೂಲಕ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತಿದ್ದೇವೆ.**

**ಈ ಸಂತಸದ ಸಂದರ್ಭದಲ್ಲಿ, ಪತ್ರಿಕೆಯ ಉತ್ತರೋತ್ತರ ಅಭಿವೃದ್ಧಿಗೆ ಮತ್ತು ಚಂದಾದಾರರ ಹೆಚ್ಚಳಕ್ಕಾಗಿ ಮುಂದೆಯೂ ನಮಗೆ ಸಹಕಾರ ನೀಡಬೇಕೆಂದು ಹಿತೈಷಿ ಓದುಗರಾದ ತಮಗೆಲ್ಲರಿಗೂ ಕೇಳಿಕೊಳ್ಳುತ್ತೇವೆ.**

ಭಗವತ್ಸೇವೆಯಲ್ಲಿ ತಮ್ಮ

ಸ್ವಾಮಿ ಮುಕ್ತಿದಾನಂದ
ವ್ಯವಸ್ಥಾಪಕ ಸಂಪಾದಕರು

## ಸಂಪಾದಕೀಯ

# ‘ನಾಮ’ದ ಹಿಂದೆ, ಮುಂದೆ

ನಮಗೆ ಅತ್ಯಂತ ಪ್ರಿಯರಾಗಿರುವವರ ಹೆಸರು ಕಿವಿಗೆ ಬಿದ್ದೊಡನೆ ನಮ್ಮ ಅಂತರಂಗವೆಲ್ಲ ಹರ್ಷದಿಂದ ಪುಳಕಿತವಾಗುತ್ತದೆ. ಅರಿತೋ, ಅರಿಯದೆಯೋ ಅವರ ಚಿತ್ರ ಕಣ್ಣಮುಂದೆ ಬರುತ್ತದೆ. ಅವರ ಮಾತುಗಳೇ ಕೇಳಿಸುತ್ತವೆ; ಅವರ ಮಧುರ ಸ್ಮೃತಿಯಲ್ಲಿ ತೇಲಿಹೋಗುತ್ತೇವೆ. ಒಂದೆರಡು ಸಲವಾದರೂ ಅವರ ಹೆಸರನ್ನು ಬಾಯಲ್ಲಿ ಹೇಳಿಕೊಳ್ಳುತ್ತೇವೆ. ಹೆಸರು ಮಾಡುವ ಮ್ಯಾಜಿಕ್ ಈ ಬಗೆಯದು. ‘ಹೆಸರಿನಲ್ಲೇನಿದೆ?’ ಎಂದು ಎಷ್ಟೇ ಹೇಳಿಕೊಂಡರೂ ನಮಗೆಲ್ಲ ಗೊತ್ತಿದೆ, ಬೇರೆ ಯಾವುದನ್ನೂ ಮಾಡಲಾಗದ ಕೆಲಸ ವನ್ನು ಹೆಸರು ಮಾಡುತ್ತದೆ. ‘ನನ್ನ ಹೆಸರು ಹೇಳಿನೋಡು, ಕೆಲಸ ಆಗುತ್ತದೆ’ ಎಂಬ ಮಾತಿನ ಹಿಂದೆ ಅಡಗಿರುವ ಅರ್ಥವನ್ನೇ ಗಮನಿಸೋಣ. ಅದನ್ನೇ ಬಿಡಿಸಿ ನೋಡಿದರೆ ಹೀಗನ್ನಬೇಕು: ‘ನನ್ನ ಹೆಸರೆಂದರೆ ಬರಿ ಹೆಸರಲ್ಲ. ಅದರ ಹಿಂದೆ ನನ್ನ ವ್ಯಕ್ತಿತ್ವವಿದೆ; ನನ್ನ ಶಕ್ತಿಸಾಮರ್ಥ್ಯಗಳಿವೆ, ನಾನು ಮಾಡಿದ ಮಹತ್ಕಾರ್ಯಗಳಿವೆ. ನನ್ನ ಹೆಸರನ್ನು ಹೇಳಿದರೆ ಸಾಕು, ನನ್ನ ಈ ಎಲ್ಲ ಗುಣಗಳೊಂದಿಗೆ ನನ್ನ ವ್ಯಕ್ತಿತ್ವದ ಸಮಗ್ರ ಅಂಗಗಳೂ ಕಣ್ಣಮುಂದೆ ಬರಬೇಕು. ಆದ್ದರಿಂದ ನನ್ನ ಹೆಸರನ್ನು ಹೇಳುವ ಮೂಲಕ ನಾನು ಪರೋಕ್ಷವಾಗಿ ಅಲ್ಲೇ ಇದ್ದು ಕೆಲಸ ಮಾಡಿದಂತಾಯಿತು. ಹೀಗಾಗಿ ನಾನು ಬೇರೆಯಲ್ಲ, ನನ್ನ ಹೆಸರು ಬೇರೆಯಲ್ಲ. ನನ್ನ ಹೆಸರಿನ ಬಲ ಈ ಮಟ್ಟದ್ದು!’ ಲೌಕಿಕ ವ್ಯವಹಾರಗಳಲ್ಲಿ ಕಂಡು ಬರುವ ಈ ಸಣ್ಣ ಉದಾಹರಣೆ ಹೆಸರು ಮತ್ತು ಅದರ ಹಿಂದಿರುವ ವ್ಯಕ್ತಿತ್ವದ ನಡುವಿನ ಬಿಡಿಸಲಾಗದ ಸಂಬಂಧವನ್ನು ತೋರಿಸಿಕೊಡುತ್ತದೆ. ಈ ವಿಚಾರದ ಹಿಂದಿರುವ ತತ್ತ್ವವನ್ನು ಹುಡುಕುತ್ತ ಹೋದರೆ ಶಬ್ದ ಹಾಗೂ ಅರ್ಥ ಇವುಗಳ ಸಂಬಂಧವನ್ನು ಕುರಿತು ಆಳವಾಗಿ ಚಿಂತಿಸಬೇಕು. ಒಂದು ಹಂತದಲ್ಲಿ ಅವೆರಡೂ ಒಂದಾಗುತ್ತವೆ. ಆಧ್ಯಾತ್ಮಿಕ ದೃಷ್ಟಿಯಲ್ಲಿ ಈ ಸಂಬಂಧ ಅತ್ಯಂತ ಮಹತ್ವದ್ದಾಗಿದೆ.

### ನಾಮದ ಮೂಲ

ಧಾರ್ಮಿಕ, ಆಧ್ಯಾತ್ಮಿಕ ಪರಂಪರೆಗಳಲ್ಲಿ ಈ ವಿಶಿಷ್ಟ ಸಂಬಂಧ ವನ್ನು ಕುರಿತು ಸಾರ್ವತ್ರಿವಾಗಿ ಸ್ತುತಿಸಲಾಗಿದೆ. ಅಲ್ಲಿ ‘ನಾಮ’ ಎಂಬ ಮಾತಿನ ಮೂಲಕ ಭಗವಂತನ ಹೆಸರು, ಪರಮಾತ್ಮನ ನಾಮಧೇಯ, ಪರಬ್ರಹ್ಮನ ಸೂಚಕವಾದ ಪದ, ಅಲೌಕಿಕ ಸತ್ಯದ ಅಮೂರ್ತ ಅಸ್ತಿತ್ವದ ಶಬ್ದಸಂಕೇತ – ಹೀಗೆ ಈ ಹೆಸರನ್ನು ನಿರ್ದೇಶಿಸಲಾಗಿದೆ. ಸರ್ವಸಂಗಗಳನ್ನು ತೊರೆದ, ಸಂಪೂರ್ಣವಾಗಿ ತಮ್ಮನ್ನು ಭಗವಂತನಿಗೆ ಸಮರ್ಪಿಸಿಕೊಂಡ ಸಾಧುಸಂತರಂತೂ, ‘ನಾಮವನ್ನು ಬಿಟ್ಟು ಬೇರೇನೂ ಇಲ್ಲ; ಇಡೀ ಜಗತ್ತೇ ನಾಮದಿಂದ ತುಂಬಿಕೊಂಡಿದೆ’ ಎನ್ನುವವರೆಗೂ ಹೋಗುತ್ತಾರೆ. ಇಲ್ಲಿ ಸಹಜವಾಗಿ ಒಂದು ಪ್ರಶ್ನೆಯೇಳುತ್ತದೆ: ಆಧ್ಯಾತ್ಮಿಕ ಜಗತ್ತಿನಲ್ಲಿ ‘ನಾಮ’ಕ್ಕೆ ಇಷ್ಟೊಂದು ಪ್ರಾಧಾನ್ಯವೇಕೆ?

ಇದಕ್ಕೆ ಸರಳ ಉತ್ತರ: ಅದು ಭಗವಂತನೇ ಆಗಿರುವುದರಿಂದ.

ಶ್ರೀರಾಮಕೃಷ್ಣರು ಅನೇಕ ಬಾರಿ ಹೇಳುತ್ತಾರೆ, ‘‘ನಾಮ-ನಾಮಿ ಅಭೇದ’’ ಎಂದು. ಇದೇನೂ ಹೊಸ ಮಾತಲ್ಲ, ಹೊಸ ತತ್ತ್ವವಲ್ಲ. ಷಡ್ದರ್ಶನಗಳು ಈ ಮಾತನ್ನೇ ತಾತ್ತ್ವಿಕ ವಿಚಾರಗಳ ಮೂಲಕ ಪ್ರತಿಪಾದಿಸುತ್ತವೆ. ಭಕ್ತಿಪರಂಪರೆ ಅದನ್ನೇ ಅನುಭವದ ಹಿನ್ನೆಲೆ ಯಲ್ಲಿ ವಿವರಿಸುತ್ತವೆ. ಆದರೆ ಶ್ರೀರಾಮಕೃಷ್ಣರಲ್ಲಿ ಈ ಮಾತು ಕೇವಲ ಸ್ತುತಿಯ ಮಾತಲ್ಲ, ಉತ್ಪ್ರೇಕ್ಷೆಯ ನುಡಿಯಲ್ಲ; ತಾತ್ತ್ವಿಕ ನಿರ್ಣಯವೂ ಅಲ್ಲ. ಅವರ ಪಾಲಿಗೆ ಅದು ಜೀವಂತ ಅನುಭವ; ಪ್ರತಿಕ್ಷಣವೂ ಕಣ್ಣಮುಂದೆ ಕಾಣಿಸುವ ಅಲೌಕಿಕ ದರ್ಶನ, ಆಧ್ಯಾತ್ಮಿಕ ಅನುಭೂತಿ. ಕೃಷ್ಣನ ಹೆಸರು ಕಿವಿಗೆ ಬಿದ್ದ ಕೂಡಲೇ ಅವರಲ್ಲಿ ಭಾವಪರಿವರ್ತನೆಯಾಗುತ್ತದೆ; ಕಣ್ಣುಗಳಲ್ಲಿ ಧಾರಕಾರವಾಗಿ ನೀರು ಸುರಿಯತೊಡಗುತ್ತದೆ. ‘ಎಲ್ಲಿ ನನ್ನ ಕೃಷ್ಣ?’ ಎನ್ನುತ್ತ ಅವರು ವೃಂದಾವನದಲ್ಲೆಲ್ಲ ಅರಸತೊಡಗುತ್ತಾರೆ. ಕೃಷ್ಣನ ದರ್ಶನದಿಂದ ಜಗತ್ತು ಮರೆತುಹೋಗುತ್ತದೆ. ಇದೇ ರೀತಿ ಕಾಳಿ, ರಾಮ, ಶಿವ, ದುರ್ಗಾ – ಎಲ್ಲರ ದರ್ಶನವಾಗುತ್ತದೆ. ಇಂಥ ಘನೀಭೂತವಾದ ದರ್ಶನ ಭಾವಸಮಾಧಿಯಲ್ಲಿ ಕೊನೆಗೊಳ್ಳುವುದು, ಅವರು ಬಾಹ್ಯ ಜ್ಞಾನಶೂನ್ಯರಾಗಿ ನಿಂತುಬಿಡುತ್ತಿದ್ದರು. ಇದು ಒಂದರಡು ಬಾರಿ ನಡೆದುಹೋದ ಘಟನೆಯಲ್ಲ; ಅವರ ಜೀವನದಲ್ಲಿ ಪ್ರತಿದಿನವೂ, ಆಗಾಗ ನಡೆಯುತ್ತಿದ್ದ ಅಭೂತಪೂರ್ವ ಸಂಗತಿ. ಕೇವಲ ದೇವರ ನಾಮದ ಉಚ್ಚಾರವೊಂದೇ ಸಾಕು, ಅವರ ಅನುಭವ ಪರಂಪರೆ ಬಾಹ್ಯಪ್ರಪಂಚದಿಂದ ಅವರನ್ನು ಹಂತಹಂತವಾಗಿ ಮೇಲಿನ ಸ್ತರ ಕ್ಕೊಯ್ದು, ದಿವ್ಯ ನೆಲೆಯ ಪ್ರಜ್ಞೆಯ ಆಳಕ್ಕೆ ಅವರನ್ನು ತಳ್ಳಿಬಿಡುತ್ತಿತ್ತು. ‘ನಾಮ-ನಾಮಿ ಅಭೇದ’ ವೆಂಬ ಮಾತು ಅವರ ಬಾಯಿಯಿಂದ ಹಲವು ಬಾರಿ ಬಂದಿದ್ದರೆ, ಅದಕ್ಕೆ ಹಿನ್ನೆಲೆಯಾಗಿ ನಿಲ್ಲುವುದು ಈ ಸಂತ ಅನುಭವಗಳೇ.

### ಮೂಲ ಸೆಲೆ ಹುಡುಕಿ

ಲೌಕಿಕ ಪ್ರಪಂಚಕ್ಕೇ ಅಂಟಿಕೊಂಡಿರುವ ನಮಗೆಲ್ಲ ಇಲ್ಲೊಂದು ಪ್ರಶ್ನೆ ಏಳಬಹುದು: ಭಗವಂತ ಹಾಗೂ ಅವನ ನಾಮ ಇವೆರಡೂ ಒಂದೇ ಆಗಿದ್ದರೆ, ಅದನ್ನು ಹೇಗೆ ಕಂಡುಕೊಳ್ಳುವುದು? ಸ್ವತಃ ನಮಗೇ ಅನುಭವವಾಗದೆ ಅದನ್ನು ಏಕೆ ನಂಬಬೇಕು?

ಇಲ್ಲಿ ಶ್ರದ್ಧೆಯನ್ನು ಅವಲಂಬಿಸುವುದು ಅತ್ಯಂತ ಮುಖ್ಯವಾಗಿದೆ. ಭಗವಂತನನ್ನು ಕಾಣುವವರೆಗೂ ಅವನ ಅಸ್ತಿತ್ವವನ್ನೇ ನಂಬಲಾರೆ ಎಂಬ ದಿಟ್ಟತನದ ಮಾತು ತಾರ್ಕಿಕವಾಗಿ ಸರಿಕಾಣಬಹುದು. ಆದರೆ ಆಧ್ಯಾತ್ಮಿಕ ಮಾರ್ಗದಲ್ಲಿ ಅದನ್ನೊಂದು ತಡೆಯೆಂದೇ ಪರಿಗಣಿಸು ತ್ತಾರೆ. ಶ್ರದ್ಧೆ, ವಿಶ್ವಾಸ ಇವು ಎಲ್ಲವಕ್ಕೂ ಮೂಲ. ಪ್ರಪಂಚದ ಬಗ್ಗೆ, ತನ್ನ ಬಗ್ಗೆ, ಅಸ್ತಿತ್ವದ ಬಗ್ಗೆ ಅವಿಶ್ವಾಸ ಹೊಂದಿರುವ ವ್ಯಕ್ತಿಗೆ ದೃಢವಾದ ಅವಲಂಬನೆಯಿಲ್ಲದೆ, ಯಾವ ಸಾಧನೆಯೂ ಅಶಕ್ಯವೆನಿಸುವುದು.

ಇದೇ ತತ್ತ್ವ ಆಧ್ಯಾತ್ಮಿಕ ಕ್ಷೇತ್ರದಲ್ಲೂ ಅನ್ವಯಿಸುವುದು. ತಾರ್ಕಿಕ ನೆಲೆಗಟ್ಟಿನಲ್ಲಿ ಭಗವಂತನ ಅಸ್ತಿತ್ವವನ್ನು ಸಾಧಿಸುವ ವಿಚಾರಮಾರ್ಗ ಸಾಧಕನ ವೈಚಾರಿಕ ಸಂದೇಹಗಳನ್ನು ನಿವಾರಿಸಬೇಕು; ಅಂತೆಯೇ ಪ್ರಾಯೋಗಿಕ ನೆಲೆಯಲ್ಲಿ ಶ್ರದ್ಧೆಯ ತಳಹದಿ ಸಾಧಕನನ್ನು ಖಚಿತ ಮಾರ್ಗದಲ್ಲಿ ಕರೆದೊಯ್ಯಬೇಕು. ಶ್ರೀರಾಮಕೃಷ್ಣರು ಹಾಗೂ ಸ್ವಾಮಿ ವಿವೇಕಾನಂದರು ಬೋಧಿಸಿದ 'ಜ್ಞಾನ-ಭಕ್ತಿ ಸಮನ್ವಯ'ದ ಆಶಯ ಇದೇ ಆಗಿದೆ.

ಆಧ್ಯಾತ್ಮಿಕ ಪ್ರಪಂಚದಲ್ಲಿ ಸಾಧನೆಗೆ ಅತ್ಯಂತ ಮಹತ್ವವಿದೆ. ವ್ಯಕ್ತಿಯನ್ನು ಮಾನವನ ಹಂತದಿಂದ ದಿವ್ಯವ್ಯಕ್ತಿತ್ವದ ಹಂತಕ್ಕೆ ಮಾರ್ಪಡಿಸುವ ಅತಿಮುಖ್ಯವಾದ ಘಟ್ಟ ಇದು. ''ಗುರಿ ಎಷ್ಟು ಮುಖ್ಯವೋ, ಮಾರ್ಗವೂ ಅಷ್ಟೇ ಮುಖ್ಯ'' ಎಂದಿದ್ದಾರೆ ಸ್ವಾಮಿ ವಿವೇಕಾನಂದರು. ಹಲವು ಬಗೆಯ ಸಾಧನೆಗಳು, ವಿಧಿ ವಿಧಾನಗಳು, ಪರಂಪರೆಗಳು ನಮ್ಮಲ್ಲಿದ್ದರೂ ಅವೆಲ್ಲ ಕೆಲವು ನಿರ್ದಿಷ್ಟ ಕ್ರಮಗಳನ್ನು ಅನುಸರಿಸುವುದು ಪ್ರಪಂಚದಲ್ಲೆಲ್ಲ ಕಂಡುಬರುತ್ತದೆ. ನಮ್ಮ ಈಗಿನ ಹಂತದಲ್ಲಿ ನಮ್ಮ ಹಿಡಿತಕ್ಕೆ ನಿಲುಕದ ಸತ್ಯವನ್ನು ಕ್ರಮೇಣ ಗ್ರಹಿಸಬೇಕು; ಹಂತಹಂತವಾಗಿ ಮುಂದುವರಿಯಬೇಕು. ಇದಕ್ಕೆ ಒಂದು ಅವಲಂಬನೆ ಅಗತ್ಯ - ಅದೇ ಸಂಕೇತ. ಆರಂಭದ ಹಂತದಲ್ಲಿ ಮಾತ್ರ ಇದರ ಅಗತ್ಯವಿದೆ; ಕೊನೆಗೆ ಸಂಕೇತ ತಾನೇ ಗಮ್ಯವಾದ, ಗುರಿಯಾದ ಭಗವಂತನಲ್ಲಿ ಒಂದಾಗುವುದು. ಇಂತಹ ಸಂಕೇತಗಳಲ್ಲಿ ಪ್ರಮುಖವಾದದ್ದೇ -'ನಾಮ.'

## ನಾಮದ ಗರಡಿ

ನಾಮಜಪ, ನಾಮಸ್ಮರಣೆ, ಮಂತ್ರ, ಪುರಶ್ಚರಣ, ನಾಮ ಮಹಿಮೆಯನ್ನು ಕೊಂಡಾಡುವುದು ಇವೆಲ್ಲ ವಿವಿಧ ಸಾಧನೆಯ ಕ್ರಮಗಳು. ಇವು ಹೇಗೆ ಸಾಧಕನ ಮನಸ್ಸನ್ನು ತರಬೇತು ಮಾಡುವುದು, ಹೇಗೆ ಇಷ್ಟದೇವತೆಯ ಕಡೆಗೆ ನಮ್ಮನ್ನು ಕರೆದೊಯ್ಯುವುದು, ಕೊನೆಗೆ ಅಂತಿಮ ಸಾಕ್ಷಾತ್ಕಾರಕ್ಕೆ ಕಾರಣವಾಗುವುದು ಎಂಬುದರ ವಿವರಣೆಯಲ್ಲಿ ಎರಡು ಪ್ರಧಾನ ರೀತಿಗಳಿವೆ:

**೧) ಆಧ್ಯಾತ್ಮಿಕ ವಿವರಣೆ:** ಶಬ್ದದ ಉತ್ಪತ್ತಿ, ನಾಮ-ರೂಪಗಳ ಸಂಬಂಧ, ನಾದ ಅಥವಾ 'ಓಂಕಾರ' ದ ತಾತ್ತ್ವಿಕ ಅರ್ಥ, ಮಾನವನ ಗ್ರಹಿಕೆಗೆ ಮೂಲವಾಗಿರುವ 'ಸ್ಫೋಟವಾದ', ಕೊನೆಗೆ ಸತ್ಯದ ಸ್ವರೂಪಕ್ಕೂ ನಾಮಕ್ಕೂ ಇರುವ ಸಂಬಂಧ ಇವುಗಳನ್ನು ಕುರಿತ ವಿವರಣೆಗಳು.

**೨) ಪ್ರಾಯೋಗಿಕ ವಿವರಣೆ:** 'ನಾಮ'ವು ಆಧ್ಯಾತ್ಮಿಕ ಸಾಧನೆಗೆ ಹೇಗೆ ಸಹಕಾರಿ; ತಂತ್ರಶಾಸ್ತ್ರದ ಹಿನ್ನೆಲೆಯಲ್ಲಿ ಮಂತ್ರ ಹಾಗೂ ಬೀಜಮಂತ್ರಗಳು; ಮಂತ್ರದೀಕ್ಷೆಯ ಕ್ರಮಗಳು ಹಾಗೂ ಅದು ಸಾಧಕನಲ್ಲಿ ಕೆಲಸ ಮಾಡುವ ರೀತಿ; ನಾಮಸ್ಮರಣೆ ಹಾಗೂ ಅದರ ಮಹತ್ವ; ನಾಮಾರ್ಚನೆ, ಸಹಸ್ರನಾಮ ಪಾರಾಯಣ ಮೊದಲಾದ ವಿಧಿವಿಧಾನಗಳು; ದೈಹಿಕ ಮಾನಸಿಕ ಪರಿಶುದ್ಧಿಗಾಗಿ ಮಂತ್ರಜಪದ ಅಗತ್ಯವೇನು ಎಂಬ ವಿವರಣೆ; ಭಕ್ತಿಪರಂಪರೆಯಲ್ಲಿ ನಾಮಮಹಿಮೆಯನ್ನು ಸಾರುವ ವಿವಿಧ ಕಥೆಗಳು - ಇವನ್ನೆಲ್ಲ ಪ್ರಾಯೋಗಿಕವಾಗಿ ವಿವರಿಸಲಾಗಿದೆ.

ಈ ಎರಡು ವಿವರಣೆಗಳೂ ಪರಸ್ಪರ ಹಾಸುಹೊಕ್ಕಾಗಿವೆ; ಒಂದು ಇನ್ನೊಂದರ ಅಗತ್ಯವನ್ನು ಆಗಾಗ ಪೂರೈಸುತ್ತದೆ. ಆದರೆ ಇಲ್ಲಿ ಕಾಣಿಸುವ ವ್ಯತ್ಯಾಸವಿದು: ಮೊದಲನೆಯದರಲ್ಲಿ ತತ್ತ್ವವೇ ಪ್ರಧಾನ; ಎರಡನೆಯದರಲ್ಲಿ ಆಚರಣೆ ಪ್ರಧಾನ. ಇವೆರಡೂ ಪೂರಕವಾಗಿವೆ, ವಿರುದ್ಧವಾಗಿಲ್ಲ.

## ಹೊಸ ಪ್ರವಾಹ

ಆಧ್ಯಾತ್ಮಿಕ ಜಗತ್ತಿನಲ್ಲಿ 'ನಾಮ'ದ ಬಳಕೆ ಸಾರ್ವತ್ರಿಕವಾಗಿದೆ. ಭಾರತೀಯ ಮೂಲದ ಧರ್ಮಗಳೂ, ಮಧ್ಯಪ್ರಾಚ್ಯ ದೇಶಗಳಲ್ಲಿ ಹುಟ್ಟಿದ ಧರ್ಮಗಳೂ, ಇನ್ನಿತರ ಧಾರ್ಮಿಕ ಪಂಥಗಳೂ ನಾಮಜಪದ ವಿಧಾನವನ್ನು ಸಮರ್ಥವಾಗಿ ಬಳಸಿಕೊಂಡಿವೆ. ಆಧ್ಯಾತ್ಮಿಕವಾಗಿ ಮೊದಲ ಹೆಜ್ಜೆಯಿಂದ ಆರಂಭಿಸಿ, ವಿವಿಧ ಹಂತಗಳಲ್ಲಿ ಕ್ರಮಕ್ರಮವಾಗಿ ಹಾದುಹೋಗಿ, ಕೊನೆಗೆ ಅಂತಿಮ ಗುರಿ ತಲುಪುವ ತನಕವೂ ನಾಮಜಪ ಅನುಗಾಲದ ಸಂಗಾತಿಯಾಗಿ ತಮ್ಮೊಡನಿರುವುದನ್ನು ಈ ಧರ್ಮಗಳಲ್ಲೆಲ್ಲ ಕಂಡುಕೊಂಡಿದ್ದಾರೆ. ಆದ್ದರಿಂದಲೇ ಇರಬೇಕು, ಪ್ರತಿಯೊಂದು ಧರ್ಮದಲ್ಲೂ ಈ ಬಗೆಯ ಸಾಧನೆಯ ಇತಿಹಾಸ ಅನಾದಿಕಾಲದವರೆಗೂ ಸಾಗು ತ್ತದೆ. ಇತಿಹಾಸದಲ್ಲಿ ಕಂಡುಬರುವಂತೆ ಮಹಾತ್ಮರ ಉದಯವಾಗುವುದು ಕಾಲದ ಅಗತ್ಯಕ್ಕನುಗುಣವಾಗಿ; ಅದಕ್ಕೆ ಅನುಸಾರವಾಗಿ ಅವರು ಹಾಕಿಕೊಟ್ಟ ಪರಂಪರೆ ಹಾಗೂ ಮಾರ್ಗ ಮುಂದುವರಿಯುವುದು. ಅನಂತರ ಕಾಲಕ್ರಮದಲ್ಲಿ ಅವನತಿ, ಮತ್ತೆ ಪುನರುತ್ಥಾನ - ಹೀಗೆ ಕಾಲಚಕ್ರ ಮುಂದೆ ಸಾಗುವುದು. 'ನಾಮಜಪ'ದ ಇತಿಹಾಸ ಕೂಡ ಹೀಗೆಯೇ; ಈ ಬದಲಾವಣೆಗಳಿಗೆ ಅನುಗುಣವಾಗಿ ಉಚ್ಛ್ರಾಯ ಹಾಗೂ ಅವನತಿಯ ಅವಸ್ಥೆಗಳೊಂದಿಗೆ ಮುಂದುವರಿಯುವುದು. ಶ್ರೀರಾಮಕೃಷ್ಣರ ಮೂಲಕ ಇದೇರೀತಿಯ ಪುನರುತ್ಥಾನದ ಕಾರ್ಯ ನಡೆಯಿತು. ಭಾರತದ ಎಲ್ಲ ಧರ್ಮ, ಪ್ರಸ್ಥಾನ, ದರ್ಶನ, ಪರಂಪರೆಗಳಲ್ಲಿ ಮಹತ್ವದ ಸ್ಥಾನ ಪಡೆದಿದ್ದ 'ನಾಮಜಪ' ಮತ್ತು 'ಮಂತ್ರಜಪ' ಹಿನ್ನೆಲೆಗೆ ಸರಿದಿತ್ತು; ಶ್ರೀರಾಮಕೃಷ್ಣರು ಅದಕ್ಕೆ ತಮ್ಮ ಜೀವನ-ಅನುಭವಗಳಿಂದ ಮರುಹುಟ್ಟು ನೀಡಿದರು.

ಈ ಹಿನ್ನೆಲೆಯಲ್ಲಿ ಶ್ರೀರಾಮಕೃಷ್ಣ-ವಿವೇಕಾನಂದ ಭಾವಧಾರೆಯಲ್ಲಿ ನಾಮ, ನಾಮಜಪ, ಮಂತ್ರ, ಮಂತ್ರದೀಕ್ಷೆಗಳಿಗೆ ಅಪಾರ ಮಹತ್ವವಿದೆ. ಶ್ರೀರಾಮಕೃಷ್ಣ, ಶ್ರೀಶಾರದಾದೇವಿ ಹಾಗೂ ಸ್ವಾಮಿ ವಿವೇಕಾನಂದರಿಂದ ಆರಂಭಗೊಂಡ ಈ ಸಂಪ್ರದಾಯ ಅವರ ನೇರ ಶಿಷ್ಯ ಪರಂಪರೆಯ ಮೂಲಕ ಮುಂದುವರಿಯಿತು. ಈ ಆಧುನಿಕ ಆಧ್ಯಾತ್ಮಿಕ ಮಾರ್ಗವನ್ನು ವಿವಿಧ ಆಧ್ಯಾತ್ಮಿಕ ಆಯಾಮಗಳಿಂದ ತಿಳಿದುಕೊಳ್ಳುವ, ವಿಶ್ಲೇಷಿಸುವ ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ಸಾಧನೆಗೆ ಅದರಿಂದ ಸ್ಫೂರ್ತಿ ಪಡೆಯುವ ಅಗತ್ಯವಿದೆ. ಎಲ್ಲ ಒಳಿತಿನ, ಎಲ್ಲ ಪ್ರೇರಣೆಯ ಮೂಲವಾದ ಆ ಪರಮಾತ್ಮನು ನಮ್ಮನ್ನು ಈ ದಿಕ್ಕಿನಲ್ಲಿ ಮುನ್ನಡೆಸಲಿ ಎಂದು ಪ್ರಾರ್ಥಿಸೋಣ. ❖

**ಭಗವಂತನ ನಾಮ ಜಪಿಸಿ, ಅದರ ಮತ್ತಿನಿಂದ ದೇಹ ಮನಸ್ಸನ್ನು ಪವಿತ್ರಗೊಳಿಸು - ನಿನ್ನ ನಾಲಗೆಯನ್ನು ಪವಿತ್ರಗೊಳಿಸು.**

***-ಶ್ರೀರಾಮಕೃಷ್ಣರು***

# ಭಕ್ತಿಯೋಗದಲ್ಲಿ ಶಬ್ದ ಮತ್ತು ಪ್ರತೀಕ

ಸ್ವಾಮಿ ವಿವೇಕಾನಂದ

ಮತಾಚರಣೆಗಳ ಅಂತರಾಳದಲ್ಲೆಲ್ಲಾ ಒಂದು ಮಾತ್ರ ಬಹು ಪ್ರಧಾನವಾಗಿ ಎದ್ದು ನಿಲ್ಲುವುದು. ಅದೇ ನಾಮೋಪಾಸನೆ. ಯಾರು ಪುರಾತನ ಕ್ರೈಸ್ತಪಂಗಡಗಳನ್ನು ಕುರಿತು ಅಧ್ಯಯನ ಮಾಡಿರುವರೋ ಅಥವಾ ಜಗತ್ತಿನ ಇತರ ಧರ್ಮಗಳನ್ನು ಅಧ್ಯಯನ ಮಾಡಿರುವರೋ, ಅವರಿಗೆ ಅಲ್ಲೆಲ್ಲ ನಾಮೋಪಾಸನೆ ಬಳಕೆಯಲ್ಲಿರುವುದು ಮನವರಿಕೆಯಾಗಿರಬಹುದು. ನಾಮ ಅತಿ ಪವಿತ್ರ. ಭಗವಂತನ ಪವಿತ್ರ ನಾಮಕ್ಕೆ ಹೋಲಿಸುವಂತಹುದು ಯಾವುದೂ ಇಲ್ಲ, ಅದು ಎಲ್ಲಕ್ಕಿಂತಲೂ ಪವಿತ್ರವಾದದ್ದು ಎಂದು ಬೈಬಲ್ಲಿನಲ್ಲಿ ಓದಿದ್ದೇವೆ. ಎಲ್ಲಾ ನಾಮಗಳಿಗಿಂತ ಇದು ಪವಿತ್ರೋತ್ತಮ. ಈ ನಾಮವೇ ದೇವರು ಎಂದು ಕೂಡ ನಂಬಿದ್ದರು. ಇದು ಸತ್ಯ. ಈ ಪ್ರಪಂಚ ನಾಮರೂಪಗಳಲ್ಲದೆ ಮತ್ತೇನೂ ಪದಗಳಿಲ್ಲದೆ ನೀವು ಆಲೋಚಿಸಬಲ್ಲಿರಾ? ಪದವನ್ನು ಮತ್ತು ಆಲೋಚನೆಯನ್ನು ಪ್ರತ್ಯೇಕಿಸಲು ಅಸಾಧ್ಯ. ನಿಮ್ಮಲ್ಲಿ ಯಾರಾದರೂ ಅದನ್ನು ಪ್ರತ್ಯೇಕಿಸಲು ಸಾಧ್ಯವೇ ಪ್ರಯತ್ನಿಸಿ ನೋಡಿ. ನೀವು ಆಲೋಚಿಸುವಾಗಲೆಲ್ಲ ಶಬ್ದರೂಪಗಳ ಮೂಲಕ ಮಾತ್ರ ಅದನ್ನು ಮಾಡುತ್ತಿರುವಿರಿ. ಒಂದು ಮತ್ತೊಂದನ್ನು ಜ್ಞಾಪಕಕ್ಕೆ ತರುವುದು. ಆಲೋಚನೆ ಶಬ್ದವನ್ನು ತರುವುದು. ಶಬ್ದ ಆಲೋಚನೆಯನ್ನು ತರುವುದು. ಈ ವಿಶ್ವವೆಲ್ಲ ಭಗವಂತನ ಬಾಹ್ಯ ಪ್ರತೀಕದಂತಿದೆ. ಅದರ ಹಿಂದೆ ಅವನ ಪವಿತ್ರ ನಾಮ ಹುದುಗಿದೆ. ಪ್ರತಿಯೊಂದು ದೇಹವೂ ಒಂದು ಆಕಾರ. ಆ ಪ್ರತ್ಯೇಕ ಆಕಾರದ ಹಿಂದೆ ಹೆಸರಿದೆ. ನಮ್ಮ ಸ್ನೇಹಿತ ಹಾಗೆ ಇರುವನು, ಹೀಗೆ ಇರುವನು, ಎಂದು ಭಾವಿಸಿದೊಡನೆ ಅವನ ಆಕಾರ ನಮಗೆ ಹೊಳೆಯುವುದು. ಆ ಸ್ನೇಹಿತನ ಆಕಾರವನ್ನು ಆಲೋಚಿಸಿದೊಡನೆಯೇ ಅವನ ಹೆಸರು ಬರುವುದು. ಮನುಷ್ಯನ ಸ್ವಭಾವವೇ ಇದು. ಮನಶ್ಶಾಸ್ತ್ರದ ಪ್ರಕಾರ ಮನುಷ್ಯನ ಮನಸ್ಸಿನಲ್ಲಿ ರೂಪ ಇಲ್ಲದೆ ನಾಮ ಬರಲಾರದು. ನಾಮ ಇಲ್ಲದೆ ರೂಪ ಬರಲಾರದು. ಇವನ್ನು ಪ್ರತ್ಯೇಕಿಸುವುದು ಅಸಾಧ್ಯ. ಇವು ಒಂದೇ ಅಲೆಯ ಬಾಹ್ಯ ಮತ್ತು ಆಂತರಿಕ ಭಾಗಗಳು. ಆದಕಾರಣವೆ ನಾಮವನ್ನು ಜಗತ್ತಿನಲ್ಲೆಲ್ಲಾ ಕೊಂಡಾಡಿರುವರು ಮತ್ತು ಪೂಜಿಸುವರು. ತಿಳಿದೊ ತಿಳಿಯದೆಯೊ ಮಾನವನು ನಾಮದ ಮಹಿಮೆ ಅರಿತು ಕೊಂಡಿದ್ದಾನೆ.

ಧರ್ಮಗಳಲ್ಲಿ ಮಹಾಪುರುಷರ ಆರಾಧನೆಯು ಇರುವುದನ್ನು ನೋಡುತ್ತೇವೆ. ಅವರು ಕೃಷ್ಣ ಬುದ್ಧ ಏಸು ಮುಂತಾದವರನ್ನು ಪೂಜಿಸುತ್ತಾರೆ. ಅನಂತರ ಸಂತರ ಆರಾಧನೆ ಇರುವುದು. ಜಗತ್ತಿನಲ್ಲೆಲ್ಲಾ ಇಂತಹ ನೂರಾರು ಜನರನ್ನು ಪೂಜಿಸುವರು. ಇದನ್ನು ಏತಕ್ಕೆ ಮಾಡಬಾರದು? ಬೆಳಕಿನ ಸ್ಪಂದನ ಎಲ್ಲೆಡೆಯಲ್ಲಿಯೂ ಇರುವುದು. ಗೂಬೆ ಆ ಸ್ಪಂದನವನ್ನು ಕತ್ತಲೆಯಲ್ಲಿ ನೋಡುವುದು. ಮನುಷ್ಯನ ಕಣ್ಣಿಗೆ ಇದು ಕಾಣದೆ ಹೋದರೂ, ಅಲ್ಲಿದೆ ಎನ್ನುವುದನ್ನು ತೋರುವುದು. ಮನುಷ್ಯರಿಗೆ ಆ ಸ್ಪಂದನ ದೀಪದಲ್ಲಿ, ಸೂರ್ಯಚಂದ್ರರಲ್ಲಿ ಮಾತ್ರ ಕಾಣುವುದು. ಭಗವಂತನು ಸರ್ವವ್ಯಾಪಿಯಾಗಿರುವನು. ಎಲ್ಲದರಲ್ಲೂ ಆತ ವ್ಯಕ್ತವಾಗಿರುವನು. ಆದರೆ ಮನುಷ್ಯನಿಗೆ ದೇವರು ಮನುಷ್ಯನಲ್ಲಿ ಮಾತ್ರ ಗೋಚರಿಸುವನು. ದೇವರಜ್ಯೋತಿ, ಶಕ್ತಿ, ವ್ಯಕ್ತಿತ್ವ, ಮಾನವನಲ್ಲಿ ಪ್ರಕಾಶಿಸಿದಾಗ ಮಾತ್ರ ಮಾನವನು ಅದನ್ನು ಗ್ರಹಿಸಬಲ್ಲ. ಆದಕಾರಣವೇ ಎಲ್ಲಾ ಕಾಲದಲ್ಲಿಯೂ ಮಾನವನು ದೇವರನ್ನು ಮಾನವನ ಮೂಲಕ ಪೂಜಿಸುತ್ತಿರುವನು. ಮಾನವನು ಎಲ್ಲಿಯವರೆಗೆ ಮಾನವನಾಗಿರುವನೋ ಅಲ್ಲಿಯವರೆಗೂ ಹೀಗೆ ಮಾಡದೆ ವಿಧಿಯಿಲ್ಲ. ಇದನ್ನು ವಿರೋಧಿಸಬಹುದು, ಇದರಿಂದ ಪಾರಾಗಲು ಯತ್ನಿಸಬಹುದು. ಆದರೆ ಎಂದು ಅವನನ್ನು ಪಡೆಯಲು ಯತ್ನಿಸುವನೋ, ಆಗ ದೇವರನ್ನು ಪಡೆಯಲು ಅವನನ್ನು ಮನುಷ್ಯನಂತೆ ಭಾವಿಸು ವುದು ಅನಿವಾರ್ಯವೆಂದು ಗೊತ್ತಾಗುವುದು. ಆದಕಾರಣವೇ ಪ್ರಪಂಚದಲ್ಲಿರುವ ಪ್ರತಿಯೊಂದು ಧರ್ಮದಲ್ಲಿಯೂ ಭಗವಂತನ ಪೂಜೆಗೆ ಸಂಬಂಧಪಟ್ಟ ಈ ಮೂರು ಭಾವನೆಗಳನ್ನು–ರೂಪ, ನಾಮ, ದೇವಮಾನವರ ಆರಾಧನೆ ಇವನ್ನು ನೋಡುತ್ತೇವೆ. ಎಲ್ಲಾ ಧರ್ಮಗಳಲ್ಲಿಯೂ ಇವು ಇವೆ.

ಪದಗಳ ಶಕ್ತಿ ಎಷ್ಟು ಅದ್ಭುತವೆಂದು ನಿಮಗೆ ಗೊತ್ತಿದೆ. ಎಲ್ಲಾ ಶಾಸ್ತ್ರಗಳು, ಬೈಬಲ್, ಖೊರಾನು, ವೇದ ಎಲ್ಲಾ ಪದಗಳು. ಅವು ಶಕ್ತಿಮಯ. ಕೆಲವು ಪದಗಳಿಗೆ ಮಾನವತೆಯ ಮೇಲೆ ಅದ್ಭುತವಾದ ಶಕ್ತಿ ಇದೆ. ಅನಂತರ ಪ್ರತೀಕಗಳು ಎನ್ನುವ ಬೇರೆ ಆಕಾರವಿದೆ. ಮಾನವನ ಮನಸ್ಸಿನ ಮೇಲೆ ಪ್ರತೀಕಗಳಿಗೆ ಹೆಚ್ಚು ಪ್ರಭಾವವಿದೆ. ಧರ್ಮದಲ್ಲಿರುವ ಮಹಾಪ್ರತೀಕಗಳನ್ನು ಸುಮ್ಮಸುಮ್ಮನೆ ಸೃಷ್ಟಿ ಮಾಡಿಲ್ಲ. ಅವು ಭಾವದ ಸಹಜ ಅಭಿವ್ಯಕ್ತಿ. ನಾವು ಪ್ರತೀಕಗಳ ಮೂಲಕ ಆಲೋಚಿಸುವೆವು. ನಮ್ಮ ಮಾತುಗಳೆಲ್ಲ ಅವುಗಳ ಹಿಂದೆ ಇರುವ ಚಿಂತನೆಯ ಸಂಕೇತಗಳು. ಬೇರೆ ಬೇರೆ ಜನರು, ಕಾರಣವನ್ನು ತಿಳಿಯದೆ, ಬೇರೆ ಬೇರೆ ಸಂಕೇತಗಳನ್ನು ಬಳಸಲು ಪ್ರಾರಂಭಿಸಿದರು. ಸಂಕೇತಕ್ಕೂ ಆಲೋಚನೆಗೂ ಪರಸ್ಪರ ಸಂಬಂಧವಿರುವುದು. ಚಿಂತನೆಯು ಸಂಕೇತಗಳನ್ನು ಅಭಿವ್ಯಕ್ತಿಗೊಳಿಸಿರುವಂತೆ, ಸಂಕೇತಗಳು ಅವುಗಳ ಹಿಂದೆ ಇರುವ ಚಿಂತನೆಗಳನ್ನು ಅಭಿವ್ಯಕ್ತಿಗೊಳಿಸುತ್ತವೆ. ಭಕ್ತಿಯ ಒಂದು ಭಾಗವು ಹಲವು ಬಗೆಯ ಸಂಕೇತಗಳು, ಪದ, ಪ್ರಾರ್ಥನೆ ಮುಂತಾದುವನ್ನು ಕುರಿತು ಹೇಳುವುದು. ಎಲ್ಲಾ ಧರ್ಮದಲ್ಲಿಯೂ ಪ್ರಾರ್ಥನೆ ಇರುವುದು. ಆದರೆ ಒಂದು ವಿಷಯವನ್ನು ನೀವು ಜ್ಞಾಪಕದಲ್ಲಿಡಬೇಕು. ಆರೋಗ್ಯಕ್ಕೆ ಅಥವಾ ಐಶ್ವರ್ಯಕ್ಕಾಗಿ ಬೇಡುವುದು ಭಕ್ತಿಯಲ್ಲ. ಇವೆಲ್ಲ ಕಾಮ್ಯಕರ್ಮ. ಸ್ವರ್ಗಕ್ಕೆ ಹೋಗಬೇಕು ಅಥವಾ ಮತ್ತೆ ಯಾವುದಾದರೂ ಪ್ರಾಪಂಚಿಕ ವಿಷಯವನ್ನು ಹೊಂದಬೇಕು ಎಂದು ಬೇಡುವುದೆಲ್ಲ ಬರಿಯ ಕರ್ಮ. ದೇವರನ್ನು ಪ್ರೀತಿಸಬೇಕು, ಭಕ್ತನಾಗಬೇಕು ಎಂದು ಬಯಸುವವನು ಇಂತಹ ಪ್ರಾರ್ಥನೆಗಳನ್ನು ಧಿಕ್ಕರಿಸಬೇಕು. ಯಾರು ಜ್ಯೋತಿರೂಪಿಯಾದ ಭಗವಂತನ ಸಾನ್ನಿಧ್ಯವನ್ನು ಬಯಸುವರೋ ಅವರು ಕೊಂಡು ಮಾರುವ ವರ್ತಕನ ಸ್ವಭಾವವನ್ನು ಮೊದಲು ತ್ಯಜಿಸಬೇಕು, ಅನಂತರ ದೇವರ ಸಮೀಪಕ್ಕೆ ಹೋಗಬೇಕು. *(ಕೃತಿಶ್ರೇಣಿ, ಭಾಗ ೧, ಪು.೧೬೧-೬೨)*

ಭಕ್ತಿಯಲ್ಲಿ ಪರಿಶೀಲಿಸಬೇಕಾದ ಅತಿ ಮುಖ್ಯ ವಿಷಯವೆ ''ಪದ'' ಅಥವಾ ನಾಮಶಕ್ತಿ. ವಿಶ್ವವೆಲ್ಲ ನಾಮರೂಪಗಳಿಂದ ಆಗಿರು

ವುದು. ನಮ್ಮ ಕಣ್ಣಿಗೆ ಕಾಣುವುದೆಲ್ಲ ನಾಮರೂಪಗಳ ಸಂಯುಕ್ತ, ಅಥವಾ ಮಾನಸಿಕ ಕಲ್ಪನೆಯ ಪ್ರತೀಕ ವಾದ ರೂಪದಿಂದ ಕೂಡಿದ ನಾಮ ಮಾತ್ರವಾಗಿರುತ್ತದೆ. ಆದಕಾರಣ ಕೊನೆಗೆ ನಾಮರೂಪ ಗಳಲ್ಲದೆ ಯಾವುದೂ ಇಲ್ಲ. ದೇವರಿಗೆ ಆಕಾರವಿಲ್ಲ ಎಂದು ನಾವು ನಂಬುತ್ತೇವೆ. ಆದರೆ ನಾವು ಅವನನ್ನು ಆಲೋಚಿಸುವುದಕ್ಕೆ ಪ್ರಯ ತ್ನಿಸಿದೊಡನೆಯೆ, ಅವನು ನಾಮರೂಪಗಳನ್ನು ಧರಿಸುವನು. ಚಿತ್ತವು ಶಾಂತ ಸರೋವರದಂತೆ, ಆಲೋಚನೆಯು ಅದರ ಮೇಲೆ ಇರುವ ಅಲೆಗಳಂತೆ. ಸಾಧಾರಣವಾಗಿ ಇಂತಹ ಅಲೆಗಳು ಏಳುವ ರೀತಿಯೇ ನಾಮರೂಪಗಳ ಮೂಲಕ. ನಾಮರೂಪಗಳಿಲ್ಲದೆ ಯಾವ ಅಲೆಯೂ ಏಳಲಾರದು. ನಿರಾಕಾರವನ್ನು ನಾವು ಆಲೋಚಿಸಲಾರೆವು. ಅದು ನಮ್ಮ ಆಲೋಚನೆಯನ್ನು ಮೀರಿರುವುದು. ಅದು ಆಲೋಚನೆ ಯಾದೊಡನೆಯೆ, ವಸ್ತುವಾದೊಡನೆಯೆ, ಅದಕ್ಕೆ ನಾಮರೂಪಗಳು ಬೇಕೇಬೇಕು. ನಾವು ಇದನ್ನು ಬೇರ್ಪಡಿಸುವುದಕ್ಕೆ ಆಗುವುದಿಲ್ಲ. ಅನೇಕ ಗ್ರಂಥಗಳಲ್ಲಿ ದೇವರು ಶಬ್ದದಿಂದ ಜಗತ್ತನ್ನು ಸೃಷ್ಟಿಸಿದನು ಎಂದು ಇದೆ. ಸಂಸ್ಕೃತದಲ್ಲಿರುವ ಶಬ್ದಬ್ರಹ್ಮವೆ ಕ್ರೈಸ್ತಧರ್ಮದ ಪದ ಸಿದ್ಧಾಂತ. ಇದು ಹಳೆಯ ಭಾರತೀಯ ಸಿದ್ಧಾಂತ. ಹಿಂದಿನ ಕಾಲದ ಭಾರತೀಯ ಧರ್ಮ ಪ್ರಚಾರಕರು ಇದನ್ನು ಅಲೆಗ್ಜಾಂಡ್ರಿಯಾಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಇದನ್ನು ಪ್ರಚಾರಕ್ಕೆ ತಂದರು. ಹೀಗೆ ಶಬ್ದ ಮತ್ತು ಅವತಾರವೆಂಬ ಭಾವನೆ ಅಲ್ಲಿ ನೆಲೆಸಿತು.

ಶಬ್ದದಿಂದ ದೇವರು ಎಲ್ಲವನ್ನೂ ಸೃಷ್ಟಿಸಿದನು ಎಂಬ ಭಾವನೆಯಲ್ಲಿ ಬಹಳ ಗೂಢವಾದ ಅರ್ಥವಿದೆ. ದೇವರು ನಿರಾಕಾರ ವಾಗಿರುವುದರಿಂದ, ಸೃಷ್ಟಿ ಅಥವಾ ಆಕಾರಗಳ ಬಾಹ್ಯ ಅಭಿವ್ಯಕ್ತಿ ಯನ್ನು ವಿವರಿಸುವುದಕ್ಕೆ ಇದು ಅತ್ಯುತ್ತಮಮಾರ್ಗ. (ಕ್ರಿಯೇಶನ್) ಎನ್ನುವುದಕ್ಕೆ ಸಂಸ್ಕೃತದಲ್ಲಿ ಸೃಷ್ಟಿ ಅಥವಾ ಅಭಿವ್ಯಕ್ತಿ ಎಂದು ಹೆಸರು. ''ಶೂನ್ಯದಿಂದ ದೇವರು ಎಲ್ಲವನ್ನೂ ಸೃಷ್ಟಿಸಿದನು'' ಎನ್ನುವುದರ ಅರ್ಥವೇನು? ಸೃಷ್ಟಿಯು ಈಶ್ವರನಿಂದ ಹೊರಬಿದ್ದಿರುವುದು. ಅವನೇ ವಿಶ್ವವಾಗುವನು. ಪುನಃ ಇವೆಲ್ಲವೂ ಅವನಲ್ಲಿಗೆ ಹೋಗು ವುವು. ಎಂದೆಂದಿಗೂ ಇದು ಹಾಗೆಯೇ ಸಾಗುತ್ತಿರುವುದು. ಮನಸ್ಸಿ ನಲ್ಲಿ ಯಾವುದು ವ್ಯಕ್ತವಾದರೂ ಅದು ನಾಮರೂಪಗಳಿಲ್ಲದೆ ಇರಲಾ ರದು ಎಂಬುದನ್ನು ನೋಡಿಯಾಯಿತು. ಮನಸ್ಸು ಶಾಂತವಾಗಿದೆ, ಅಲ್ಲಿ ಯಾವ ಆಲೋಚನೆಯೂ ಇಲ್ಲ ಎಂದು ತಿಳಿದುಕೊಳ್ಳೋಣ. ಆದರೂ ಆಲೋಚನೆ ಬಂದೊಡನೆಯೆ ಅದು ನಾಮರೂಪಗಳನ್ನು ಧರಿಸುವುದು. ಪ್ರತಿಯೊಂದು ಆಲೋಚನೆಗೂ ಒಂದು ಹೆಸರು ಇದೆ, ಒಂದು ಆಕಾರವಿದೆ. ಇದರಂತೆಯೆ ಸೃಷ್ಟಿ ಅಥವಾ ಅಭಿವ್ಯಕ್ತಿಯೂ ನಾಮರೂಪಗಳೊಂದಿಗೆ ಅನವರತವೂ ಹೊಂದಿಕೊಂಡಿರುವುದು. ಆದಕಾರಣ ಮಾನವನಲ್ಲಿ ಈಗ ಇರುವ ಅಥವಾ ಮುಂದೆ ಇರಬಹು ದಾದ ಪ್ರತಿಯೊಂದು ಭಾವನೆಯೂ ಅದರ ಮತ್ತೊಂದು ಭಾಗ ವಾದ ಯಾವುದಾದರೂ ಹೆಸರು ಅಥವಾ ಶಬ್ದದೊಂದಿಗೆ ಹೊಂದಿ ಕೊಂಡಿರಲೇಬೇಕು. ಹೀಗೆ ಇರುವುದರಿಂದ ಈ ಪ್ರಪಂಚವು ಮನಸ್ಸಿ ನಿಂದ ಬಂದಿದೆ ಎನ್ನುವುದು, ನಿಮ್ಮ ಭಾವನೆಯಂತೆಯೇ ನಿಮ್ಮ ದೇಹವು ಆಗಿರುವುದು ಎನ್ನುವಷ್ಟೇ ಸಹಜ. ನಿಮ್ಮ ಭಾವನೆಯೇ ಸ್ಥೂಲವಾಗಿ ಹೊರಗೆ ವ್ಯಕ್ತವಾಗುತ್ತದೆ. ವಿಶ್ವದುದ್ದಕ್ಕೂ ಒಂದೇ ನಿಯಮವು ಕೆಲಸ ಮಾಡುತ್ತಿರುವುದು ಸತ್ಯವಾದರೆ, ಒಂದು ಕಣ ಹೇಗೆ ಆಗಿದೆ ಎನ್ನುವುದು ನಿಮಗೆ ಗೊತ್ತಿದ್ದರೆ ಇಡೀ ವಿಶ್ವವೇ ಹೇಗೆ ಆಗಿದೆ ಎನ್ನುವುದು ಗೊತ್ತಾಗುವುದು. ನಿಮ್ಮ ದೇಹವು ಹೊರಗಿನ ಸ್ಥೂಲಭಾಗವಾಗಿದ್ದು ಮನಸ್ಸು ಒಳಗಿನ ಸೂಕ್ಷ್ಮಭಾಗವಾಗಿರುವುದು. ಎರಡೂ ಎಂದಿಗೂ ಅವಿಭಾಜ್ಯವಾಗಿರುವುದರಿಂದ, ದೇಹವಿಲ್ಲದಾಗ ಮನಸ್ಸೂ ಇಲ್ಲವಾಗುವುದು. ಮನುಷ್ಯನ ಮೆದುಳು ಚಂಚಲವಾದರೆ ಅವನ ಭಾವನೆಯೆಲ್ಲ ಚಂಚಲವಾಗುವುದು. ಏಕೆಂದರೆ ಅವೆರಡೂ ಒಂದು – ಒಂದು ಸ್ಥೂಲ, ಮತ್ತೊಂದು ಸೂಕ್ಷ್ಮ. ಮನಸ್ಸು ಮತ್ತು ದ್ರವ್ಯ ಎಂಬ ಎರಡು ಇಲ್ಲ. ಕಂಬದಂತೆ ಇದ್ದ ಗಾಳಿಯಲ್ಲಿ ಒಂದು ಪದರ ದಟ್ಟವೂ, ಮತ್ತೊಂದು ವಿರಳವೂ ಆಗಿರುವಂತೆ ದೇಹವೂ ಕೂಡ. ಇದು ಮೊದಲಿನಿಂದ ಕೊನೆಯವರೆಗೂ ಒಂದೇ. ಸ್ಥೂಲದಿಂದ ಸೂಕ್ಷ್ಮದವರೆಗೆ ಬೇರೆ ಬೇರೆ ಪದರವಾಗಿರುವುದು. ಮತ್ತೆ ದೇಹವು ಬೆರಳಿನ ಉಗುರಿನಂತೆ ಇದೆ. ಉಗುರನ್ನು ಕತ್ತರಿಸಿದಾಗಲೂ ಬೆಳೆಯು ವಂತೆ, ನಮ್ಮ ಸೂಕ್ಷ್ಮ ಭಾವನೆಯಿಂದ ದೇಹವಾದ ಮೇಲೆ ದೇಹ ಬೆಳೆಯುತ್ತಾ ಹೋಗುವುದು. ಒಂದು ವಸ್ತು ಸೂಕ್ಷ್ಮವಾಗಿದ್ದಷ್ಟೂ ಬಹಳಕಾಲ ಬಾಳುವುದು. ಇದನ್ನು ನಾವು ಯಾವಾಗಲೂ ನೋಡು ತ್ತೇವೆ. ಸ್ಥೂಲವಾದಷ್ಟೂ ಬಹಳ ಕಾಲ ಬಾಳುವುದಿಲ್ಲ. ಹೀಗೆ, ಅಭಿ ವ್ಯಕ್ತವಾಗುವ ಚಿಂತನೆ ಎಂಬ ಏಕೈಕ ಶಕ್ತಿಯಲ್ಲಿ ಯಾವುದು ಸ್ಥೂಲ ತರವಾದದ್ದೋ, ಅದು ರೂಪ, ಸೂಕ್ಷ್ಮತರವಾದದ್ದು ನಾಮ. ಆದರೆ ಈ ಮೂರು ಒಂದೆ. ಇದೊಂದು ಐಕ್ಯ, ತ್ರಿಪುಟಿ, ಒಂದೇ ವಸ್ತುವಿನ ಮೂರು ಸ್ಥಿತಿಗಳು. ತರತಮವಿರುವುದು ಸೂಕ್ಷ್ಮತೆಯಲ್ಲಿ. ಎಲ್ಲಿ ಒಂದು ಇದ್ದರೆ ಅಲ್ಲಿ ಉಳಿದವೂ ಇದ್ದೇ ಇರುವುವು. ಹೆಸರು ಎಲ್ಲಿದೆ ಅಲ್ಲಿ ಆಕಾರ ಮತ್ತು ಆಲೋಚನೆ ಇದ್ದೇ ಇರುವುವು.

''ಓಂ'' ಎಂಬ ಅಕ್ಷರವು ಒಟ್ಟು ಸೃಷ್ಟಿಯ ಅಥವಾ ದೇವರ ಹೆಸರಿನ ಸಂಕೇತ. ಬಾಹ್ಯಪ್ರಪಂಚ ಮತ್ತು ದೇವರು ಇವುಗಳ ಮಧ್ಯೆ ನಿಂತಿರುವುದರಿಂದ ಅದು ಎರಡಕ್ಕೂ ಪ್ರತಿನಿಯಾಗಿರುವುದು. ಆದರೆ ನಾವು ಈ ಜಗತ್ತಿನ ಅನುಭವವನ್ನು, ಭಾಗಶಃ, ಸ್ಪರ್ಶ, ಬಣ್ಣ, ರುಚಿ ಮುಂತಾಗಿ, ಬೇರೆ ಬೇರೆ ಇಂದ್ರಿಯಗಳ ಮೂಲಕ ಪಡೆಯು ತ್ತೇವೆ. ಪ್ರತಿಯೊಂದು ಪ್ರಸಂಗದಲ್ಲಿಯೂ ದೃಷ್ಟಿ ಬದಲಾವಣೆಯಿಂದ, ಒಂದು ಪ್ರಪಂಚವನ್ನು ಕೋಟ್ಯಂತರ ಪ್ರಪಂಚಗಳನ್ನಾಗಿ ಮಾಡ ಬಹುದು. ಪ್ರತಿಯೊಂದೂ ತನಗೆತಾನೆ ಒಂದು ಪ್ರಪಂಚವಾಗುವುದು. ಪ್ರತಿಯೊಂದಕ್ಕೂ ಒಂದು ಹೆಸರು, ಆಕಾರ, ಮತ್ತು ಅದರ ಹಿಂದೆ ಚಿಂತನೆ ಇದ್ದೇ ಇರುವುದು. ಇವುಗಳ ಹಿಂದೆ ಇರುವ ಚಿಂತನೆಗಳೇ ಪ್ರತೀಕಗಳು. ಅವುಗಳಲ್ಲಿ ಪ್ರತಿಯೊಂದಕ್ಕೂ ಬೇರೆ ಬೇರೆ ಹೆಸರು ಇರುವುದು. ಇಂತಹ ಪವಿತ್ರ ಚಿಹ್ನೆಗಳ ಹೆಸರನ್ನೇ ಭಕ್ತಿಯೋಗದಲ್ಲಿ ಉಪಯೋಗಿಸುವುದು. ಅವಕ್ಕೆ ಹೆಚ್ಚು ಕಡಿಮೆ ಅನಂತವಾದ ಶಕ್ತಿ ಯಿದೆ. ಇಂತಹ ಪವಿತ್ರ ಶಬ್ದವನ್ನು ಉಚ್ಚರಿಸಿದ ಮಾತ್ರದಿಂದಲೇ ಬೇಕಾದುದನ್ನು ನಾವು ಪಡೆಯಬಹುದು. ಮೋಕ್ಷವನ್ನು ಕೂಡ ನಾವು ಪಡೆಯಬಹುದು. ಆದರೆ ಎರಡು ವಿಷಯ ಆತ್ಯಾವಶ್ಯಕ: **''ಆಶ್ಚರ್ಯೋವಕ್ತಾ,ಕುಶಲೋಽಸ್ಯ ಲಬ್ಧಾ''**–''ಹೇಳುವವನು ಅದ್ಭುತವಾಗಿರಬೇಕು, ಕೇಳುವವನೂ ಅದ್ಭುತವಾಗಿರಬೇಕು''. ಗುರುಪರಂಪರೆಯಿಂದ ಅಂತಹ ಮಂತ್ರವನ್ನು ಪಡೆದವನಿಂದ ಅದು ಬಂದಿರಬೇಕು.ಹಿಂದಿನಿಂದಲೂ,ಗುರುವಿನಿಂದ ಶಿಷ್ಯನಿಗೆ ಆಧ್ಯಾತ್ಮಿಕ ಪ್ರವಾಹದ ಶಕ್ತಿ ಬಂದಿರಬೇಕು. ಯಾರಿಂದ ಇಂತಹ ಮಂತ್ರವು ಬರುವುದೋ ಅವನು ಗುರು. ಯಾರಿಗೆ ಈ ಮಂತ್ರವು ಕೊಡಲ್ಪಡು ವುದೋ, ಅವನು ಶಿಷ್ಯ. ಶಾಸ್ತ್ರೀಯವಾಗಿ ಇಂತಹ ಮಂತ್ರವನ್ನು

ಸ್ವೀಕರಿಸಿ ಅದನ್ನು ಅನುಷ್ಠಾನ ಮಾಡಿದ ಮೇಲೆ, ಭಕ್ತಿಯೋಗದಲ್ಲಿ ಬಹಳ ಮುಂದುವರಿದು ಹೋದಂತೆ, ಆ ಮಂತ್ರವನ್ನು ಉಚ್ಚರಿಸಿದ ಮಾತ್ರಕ್ಕೆ ಅತಿ ಪವಿತ್ರವಾದ ಭಕ್ತಿ ಸ್ಥಿತಿಯು ಬರುವುದು. ''ನಿನಗೆ ಅನಂತ ನಾಮಗಳಿವೆ. ಅದರ ಅರ್ಥ ನಿನಗೆ ಗೊತ್ತಿದೆ. ಈ ಹೆಸರೆಲ್ಲ ನಿನ್ನವು. ಪ್ರತಿಯೊಂದು ಹೆಸರಿನಲ್ಲಿಯೂ ನಿನ್ನ ಅನಂತ ಶಕ್ತಿ ಇದೆ. ಈ ನಾಮೋಚ್ಚಾರಣೆಗೆ ದೇಶ ಅಥವಾ ಕಾಲದ ನಿಯಮವಿಲ್ಲ. ಎಲ್ಲಾ ಕಾಲವೂ ಎಲ್ಲಾ ದೇಶವೂ ಪವಿತ್ರವಾದುವೆ. ನೀನು ಎಷ್ಟು ಸುಲಭ, ಎಷ್ಟು ದಯಾಪರನು! ಆದರೂ ನಿನ್ನ ಮೇಲೆ ನನಗೆ ಪ್ರೀತಿ ಇಲ್ಲ. ಎಂತಹ ನಿರ್ಭಾಗ್ಯ ನಾನು.'' *(ಕೃತಿಶ್ರೇಣಿ, ಭಾಗ ೧, ಪು.೧೭೧-೭೪)*

ಬ್ರಹ್ಮಾ, ಹಿರಣ್ಯಗರ್ಭ ಅಥವಾ ಮಹತ್ ಆದಿಯಲ್ಲಿ ಮೊದಲು ನಾಮದಂತೆ ವ್ಯಕ್ತವಾಗಿ ಅನಂತರ ವಿಶ್ವದ ರೂಪ ಧರಿಸಿ ದನು. ವ್ಯಕ್ತವಾಗಿರುವ ಇಂದ್ರಿಯವೇದ್ಯವಾದ ಪ್ರಪಂಚವೆಲ್ಲ ರೂಪ. ಅದರ ಹಿಂದೆ ಸನಾತನ ಅವ್ಯಕ್ತ ಸ್ಫೋಟ ಅಥವಾ ಅದನ್ನು ಹೊರಗೆಡುಹುವ ಶಬ್ದಬ್ರಹ್ಮವಿದೆ. ನಿತ್ಯವಾದ ಸ್ಫೋಟವೆ ಎಲ್ಲ ನಾಮಗಳ ಮುಖ್ಯವಾದ ಅಂತ್ಯವಿಲ್ಲದ ಮೂಲವಸ್ತು. ಈ ಶಕ್ತಿಯ ಮೂಲಕವಾಗಿಯೆ ಈಶ್ವರನು ಪ್ರಪಂಚವನ್ನು ಸೃಷ್ಟಿಸುತ್ತಾನೆ. ಹಾಗಲ್ಲ, ಮೊದಲು ಈಶ್ವರನೇ ಸ್ಫೋಟವಾಗಿ ಉಪಾಧಿಗೆ ಒಳಗಾಗಿ ಅನಂತರ ಮತ್ತೂ ಸ್ಥೂಲವಾದ ಇಂದ್ರಿಯಗಳಿಗೆ ಗೋಚರವಾದ ವಿಶ್ವದಂತೆ ವಿಕಾಸ ಹೊಂದುವನು. ಸ್ಫೋಟಕ್ಕೆ ಒಂದೇ ಒಂದು ಶಬ್ದ ಚಿಹ್ನೆ ಇದೆ. ಅದೇ ''ಓಂ.'' ಶಬ್ದವನ್ನು ಅದಕ್ಕೆ ಸಂಬಂಧಪಟ್ಟ ಭಾವನೆಯಿಂದ ಯಾವ ರೀತಿಯಾಗಿಯೂ ಬೇರ್ಪಡಿಸಲು ಅಸಾಧ್ಯವಾಗಿರುವಂತೆಯೆ ''ಓಂ'' ಮತ್ತು ಸ್ಫೋಟವನ್ನು ಕೂಡ ನಾವು ಬೇರ್ಪಡಿಸಲಾರೆವು. ಆದಕಾರಣ ಇಂಥ ಪವಿತ್ರತಮವಾದ ಮಂತ್ರದಿಂದ, ಎಲ್ಲ ನಾಮರೂಪಗಳ ಜನನಿಯಂತಿರುವ ಸನಾತನವಾದ ''ಓಂ'' ಎಂಬ ಪದದಿಂದ ಸೃಷ್ಟಿಯೆಲ್ಲ ರಚಿತವಾಗಿದೆ ಎಂದು ಊಹಿಸಬೇಕಾಗಿದೆ. ಭಾವನೆ ಮತ್ತು ಶಬ್ದವನ್ನು ನಾವು ಬೇರ್ಪಡಿಸಲು ಸಾಧ್ಯವಿಲ್ಲದೆ ಇದ್ದರೂ ಒಂದೇ ಭಾವನೆಯನ್ನು ಸೂಚಿಸುವುದಕ್ಕೆ ಹಲವು ಶಬ್ದಗಳು ಇರ ಬಹುದು. ಇದರಂತೆಯೆ ಯಾವುದರ ಮೂಲಕ ವಿಶ್ವ ವ್ಯಕ್ತ ವಾಗಿದೆಯೊ ಅದನ್ನು ಸೂಚಿಸುವ ಶಬ್ದ 'ಓಂ' ಎಂಬುದೇ ಆಗಿರ ಬೇಕಾಗಿಲ್ಲ ಎನ್ನಬಹುದು. ಈ ಆಕ್ಷೇಪಣೆಗೆ ನಮ್ಮ ಉತ್ತರ ಇದು : ''ಓಂ'' ಮಂತ್ರ ಪ್ರಪಂಚವನ್ನೆಲ್ಲಾ ವ್ಯಾಪಿಸುವಂತಹ ಶಬ್ದ ಚಿಹ್ನೆ, ಮತ್ತಾವುದೂ ಅದಕ್ಕೆ ಸಮಾನವಲ್ಲ. ಸ್ಫೋಟವೇ ಎಲ್ಲ ಪದಗಳ ಮೂಲವಸ್ತು. ಆದರೂ ಅದನ್ನು ಸ್ಪಷ್ಟವಾದ ಒಂದು ನಿರ್ದಿಷ್ಟ ಪದ ಎಂದು ಹೇಳಲಾರೆವು. ಒಂದು ಶಬ್ದವನ್ನು ಮತ್ತೊಂದು ಶಬ್ದದಿಂದ ಬೇರ್ಪಡಿಸುವ ವ್ಯತ್ಯಾಸಗಳನ್ನೆಲ್ಲಾ ತೆಗೆದು ಹಾಕಿದರೆ ಕೊನೆಗೆ ಉಳಿಯುವುದೆ ಸ್ಫೋಟ. ಆದಕಾರಣವೆ ಈ ಸ್ಫೋಟವನ್ನು ನಾದಬ್ರಹ್ಮ ಎನ್ನುವುದು.

ನಿರ್ದಿಷ್ಟವಾಗಿ ಇದು ಹೀಗೆ ಎಂದು ಹೇಳುವುದಕ್ಕೆ ಆಗದ ಈ ಸ್ಫೋಟಕ್ಕೆ ಯಾವ ಶಬ್ದವನ್ನು ವಾಚಕವಾಗಿ ಇಟ್ಟುಕೊಂಡರೂ ಅದರಲ್ಲಿ ಯಾವುದಾದರೊಂದು ವಿಶೇಷವನ್ನು ಕಲ್ಪಿಸಿದಂತೆ ಆಗುವುದರಿಂದ ಅದು ಸ್ಫೋಟವಲ್ಲದೆ ಹೋಗುವುದು.

ಆದಕಾರಣ ಯಾವ ಶಬ್ದ ಆದಷ್ಟು ಕಡಿಮೆ ವಿಶೇಷವನ್ನು ಕಲ್ಪಿಸುವುದೊ ಮತ್ತು ಅದರ ಸ್ವರೂಪವನ್ನು ಆದಷ್ಟು ಮಟ್ಟಿಗೆ ವ್ಯಕ್ತಪಡಿಸುವುದೋ ಅದೇ ಈ ಸ್ಫೋಟಕ್ಕೆ ಉತ್ತಮ ವಾಚಕವೆಂದು ಹೇಳಬೇಕಾಗುವುದು. ಇದೇ ಓಂಕಾರ, ಓಂಕಾರವೊಂದೇ ಇದು. ''ಅ, ಉ, ಮ,'' ಎಂಬ ಅಕ್ಷರಗಳನ್ನು ನಾವು ಒಟ್ಟಿಗೆ ಓಂಕಾರದಂತೆ ಉಚ್ಚಾರ ಮಾಡಿದರೆ ಇದೇ ಸಾಧ್ಯವಾದ ಎಲ್ಲ ಶಬ್ದಗಳಿಗೂ ಚಿಹ್ನೆಯಾಗುವುದು.

'ಅ'ಕಾರದಲ್ಲಿ ಎಲ್ಲಕ್ಕಿಂತ ಕಡಿಮೆ ವಿಶೇಷಣವಿದೆ. ಆದಕಾರಣವೆ ಶ್ರೀಕೃಷ್ಣ ಗೀತೆಯಲ್ಲಿ ಅಕ್ಷರಗಳಲ್ಲಿ 'ಅ'ಕಾರ ನಾನು ಎಂದಿರುವನು. ಉಚ್ಚರಿಸುವುದಕ್ಕೆ ಸಾಧ್ಯವಾದ ಶಬ್ದವೆಲ್ಲಾ ನಾಲಿಗೆಯ ಆದಿಯಿಂದ ಹಿಡಿದು ತುಟಿಯ ಕೊನೆಯವರೆಗೆ ಇರುವ ಅಂತರದಲ್ಲಿ ಜನಿಸುತ್ತವೆ. 'ಅ'ಕಾರ ಗಂಟಲಿನ ಒಳಗಿನಿಂದ ಬರುವುದು, 'ಮ'ಕಾರ ಕೊನೆಗೆ ತುಟಿಯ ಮೂಲಕ ಬರುವುದು. ನಾಲಿಗೆಯ ಆದಿಯಲ್ಲಿ ಪ್ರಾರಂಭವಾಗಿ ತುಟಿಯಲ್ಲಿ ಕೊನೆಗೊಳ್ಳುವವರೆಗೆ ಮುಂದೆ ಸಾಗುವ ಶಬ್ದ ಸ್ಪಂದನವೇ 'ಉ'ಕಾರ. ಸರಿಯಾಗಿ ಉಚ್ಚರಿಸಿದರೆ ಓಂಕಾರದಲ್ಲಿ ವರ್ಣೋತ್ಪತ್ತಿಯ ಸ್ವರವೆಲ್ಲ ಅಡಕವಾಗಿದೆ. ಮತ್ತಾವ ಶಬ್ದವೂ ಇದನ್ನು ಮಾಡಲಾರದು. ಆದಕಾರಣ ಇದೊಂದೆ ಸ್ಫೋಟಕ್ಕೆ ಅತಿ ಯೋಗ್ಯವಾದ ಚಿಹ್ನೆ. ಇದೇ ಓಂಕಾರದ ನಿಜವಾದ ಅರ್ಥ. ವಾಚಕವನ್ನು ವಾಚ್ಯದಿಂದ ನಾವು ಹೇಗೆ ಬೇರ್ಪಡಿಸಲಾರೆವೊ ಹಾಗೆ ಓಂಕಾರ ಮತ್ತು ಸ್ಫೋಟ ಕೂಡ ಒಂದೇ ಎಂದು ಭಾವಿಸಬೇಕು. ಸ್ಫೋಟ ವ್ಯಕ್ತ ಪ್ರಪಂಚದ ಸೂಕ್ಷ್ಮ ಸ್ಥಿತಿಯಾಗಿರುವುದರಿಂದ ಅದು ಈಶ್ವರನಿಗೆ ಸಮೀಪದಲ್ಲಿದೆ. ಇದೇ ಈಶ್ವರನ ಪ್ರಥಮ ಅಭಿವ್ಯಕ್ತಿ. ಓಂಕಾರ ನಿಜವಾಗಿ ಈಶ್ವರನ ಚಿಹ್ನೆ ಎಂದೇ ಆಯಿತು. ಅಖಂಡ ಸಚ್ಚಿದಾನಂದ ಸ್ವರೂಪನಾಗಿಯೂ ಅದ್ವಿತೀಯನಾಗಿಯೂ ಇರುವ ಪರಬ್ರಹ್ಮನನ್ನು ಅಪೂರ್ಣಜೀವಿಗಳು, ಯಾವುದಾದರೂ ದೃಷ್ಟಿಕೋನದ ಮೂಲಕ, ಕೆಲವು ಗುಣಗಳ ಮೂಲಕ ಮಾತ್ರ ಭಾವಿಸಲು ಸಾಧ್ಯವಾಗಿರುವಂತೆ, ಅವನ ದೇಹದಂತೆ ಇರುವ ಈ ವಿಶ್ವವನ್ನು ಕೂಡ ಪ್ರತಿಯೊಬ್ಬರೂ ತಮ್ಮ ಸ್ಥಿತಿಗೆ ಅನುಸಾರವಾಗಿಯೆ ಅರಿಯಬೇಕಾಗಿರುವುದು.

ಉಪಾಸಕರ ಮನಸ್ಥಿತಿ ಅವರಲ್ಲಿ ಪ್ರಧಾನವಾಗಿರುವ ಗುಣ ವಿಶೇಷಗಳನ್ನು ಅವಲಂಬಿಸಿದೆ. ಅದರ ಪರಿಣಾಮವಾಗಿಯೇ ಒಂದೇ ದೇವರು ಹಲವು ಬಗೆಯಲ್ಲಿ ಗೋಚರಿಸುತ್ತಾನೆ, ಒಂದೊಂದು ರೂಪಿನಲ್ಲಿ ಒಂದೊಂದು ಗುಣ ಪ್ರಧಾನವಾಗಿರುವಂತೆ ಕಾಣುತ್ತಾನೆ. ಇದರಂತೆಯೇ ಒಂದೇ ಪ್ರಪಂಚ ಹಲವರಿಗೆ ಹಲವು ರೀತಿ ಕಾಣುತ್ತದೆ. ಇದರಂತೆಯೆ ಅತ್ಯಲ್ಪ ವಿಶೇಷಣಕ್ಕೆ ಒಳಗಾದ, ಸರ್ವಸಾಮಾನ್ಯವಾದ ಓಂಕಾರ ಚಿಹ್ನೆಯಲ್ಲಿ ಶಬ್ದ ಮತ್ತು ಅದರ ಅರ್ಥ ಬೇರ್ಪಡಿಸುವುದಕ್ಕೆ ಅಸಾಧ್ಯವಾಗಿರುವಂತೆ, ಈ ಅವಿಭಾಜ್ಯ ನಿಯಮವು ಈಶ್ವರನ ಮತ್ತು ವಿಶ್ವದ ವಿವಿಧ ದೃಷ್ಟಿಕೋನಗಳಿಗೂ ಅನ್ವಯಿಸುತ್ತದೆ. ಅವುಗಳಲ್ಲಿ ಪ್ರತಿಯೊಂದಕ್ಕೂ ಅದನ್ನು ವ್ಯಕ್ತಪಡಿಸುವ ಒಂದು ವಾಚಕವೂ ಇದ್ದೇ ತೀರಬೇಕು. ಮಂತ್ರಗಳು ಋಷಿಗಳ ಗಾಢ ಧ್ಯಾನಾಂತರಾಳದಿಂದ ಹೊರಹೊಮ್ಮಿದವುಗಳು, ಸಾಧ್ಯವಾದಷ್ಟು ತೃಪ್ತಿಕರವಾಗಿ ಆಯಾ ದೃಷ್ಟಿಯಿಂದ ಭಗವಂತನನ್ನು ಮತ್ತು ಪ್ರಪಂಚವನ್ನು ವಿವರಿಸುವ ವಾಚಕಗಳಾಗಿವೆ ಅವು. ಓಂಕಾರವು ಅಖಂಡ ಬ್ರಹ್ಮನನ್ನು ಸೂಚಿಸುವಂತೆ, ಇತರ ಮಂತ್ರಗಳು ಖಂಡ ಬ್ರಹ್ಮದ ಸೂಚಕಗಳಾಗಿವೆ. ಇವೆಲ್ಲ ಭಗವದ್ ಧ್ಯಾನಕ್ಕೆ ಮತ್ತು ಜ್ಞಾನ ಸಂಪಾದನೆಗೆ ಸಹಕಾರಿಗಳು. *(ಕೃತಿಶ್ರೇಣಿ, ಭಾಗ ೧, ಪು.೨೦೯-೧೧)*



# ಮಂತ್ರಶಕ್ತಿ

ಸ್ವಾಮಿ ಭಜನಾನಂದ



ಆಧ್ಯಾತ್ಮಿಕ ಸಾಧನೆಯಲ್ಲಿ ಅತ್ಯಂತ ಮಹತ್ವದ ಒಂದು ಅಂಗವಾಗಿರುವ ನಾಮಜಪ ಹಾಗೂ ಮಂತ್ರಸಾಧನೆಗೆ ಮಂತ್ರಶಾಸ್ತ್ರದ ಹಿನ್ನೆಲೆ ಇದೆ. ಈ ವಿಷಯವನ್ನು ವಿದ್ವತ್ಪೂರ್ಣವಾಗಿ, ಆಳವಾಗಿ ಬಣ್ಣಿಸಿರುವ ಸ್ವಾಮೀಜಿಯವರು ರಾಮಕೃಷ್ಣ ಮಹಾಸಂಘದ ಸಹಕಾರ್ಯದರ್ಶಿಗಳು. ಇವರು ತಮ್ಮ ಆಳವಾದ ವಿದ್ವತ್ತು ಮತ್ತು ಆಧ್ಯಾತ್ಮಿಕ ಸುಸಂಪನ್ನತೆಗಳಿಗೆ ಪ್ರಸಿದ್ಧರಾಗಿದ್ದಾರೆ. ಪೂಜ್ಯರು ಆಧ್ಯಾತ್ಮಿಕ ಸಾಧಕರ ಅನುಕೂಲಕ್ಕಾಗಿ ತಯಾರಿಸಿರುವ ಟಿಪ್ಪಣಿಗಳಿಂದ ಆರಿಸಿದ ಭಾಗಗಳ ಕನ್ನಡ ಅವತರಣಿಕೆ ಇದು.

ಮಂತ್ರವು ಆಧ್ಯಾತ್ಮಿಕ ಶಕ್ತಿಯನ್ನು ಹೇಗೆ ಸಂವಹನ ಮಾಡುವುದು? ಹೇಗೆ ಅದು ಆಧ್ಯಾತ್ಮಿಕ ಜಾಗೃತಿಯನ್ನುಂಟುಮಾಡುವುದು? ಇದಕ್ಕೆ ಉತ್ತರ ಕಂಡುಕೊಳ್ಳುವ ಮುನ್ನ ನಮ್ಮನ್ನು ಕುರಿತು ನಾವು ಕೆಲವು ವಿಷಯಗಳನ್ನು ತಿಳಿದುಕೊಳ್ಳಬೇಕು.

**ಮಾನವನ ನೈಜ ಸ್ವಭಾವ :** ಮಾನವನ ನೈಜ ಸ್ವಭಾವ ಚಿತ್ ಅಥವಾ ಪ್ರಜ್ಞೆ ಎಂದು ವೇದಾಂತ ಹೇಳುತ್ತದೆ. ಆದರೆ ಮನಸ್ಸಿನ ವೈಯಕ್ತಿಕ ಪ್ರಜ್ಞೆಯು ಭಗವಂತನ ಅನಂತ ಪ್ರಜ್ಞೆಯ ಒಂದು ಅಂಶವಾಗಿದೆ. ಅದನ್ನೇ ಜೀವಾತ್ಮ ಹಾಗೂ ಪರಮಾತ್ಮ ಎನ್ನಲಾಗಿದೆ. ಈ ಅನಂತ ಪ್ರಜ್ಞೆಯನ್ನು ಸಾಮಾನ್ಯ ಮನಸ್ಸಿನಿಂದ ಅರಿಯಲಾಗದು. ಅದಕ್ಕೆ ಗೀತೆಯಲ್ಲಿ ಹೇಳಿರುವ '**ದಿವ್ಯಚಕ್ಷು**' ಬೇಕು; '**ಬುದ್ಧಿ**' ಎಂದು ಕರೆಯಲಾಗುವ ಸೂಕ್ಷ್ಮ ಮನಸ್ಸು ಬೇಕು. ಇದನ್ನೇ '**ಹೃದಯ**', '**ಧೀ**' ಎಂದೂ ಹೇಳಲಾಗಿದೆ. ಇದೇ ವಿಚಾರ *ಮಹಾನಾರಾಯಣೋಪನಿಷತ್ತಿನಲ್ಲೂ*, *ಶ್ವೇತಾಶ್ವತರ*ಹಾಗೂ *ಕಠೋಪನಿಷತ್ತಿನಲ್ಲೂ* ಬರುತ್ತದೆ. *(೨.೩.೯)*

**ಉನ್ನತ ಸ್ತರದ ಆವಶ್ಯಕತೆ :** ನಮ್ಮ ಇಷ್ಟದೇವತೆಯ ಸಾಕ್ಷಾತ್ಕಾರವು ತಾನೇತಾನಾಗಿ ನಡೆದ ಕೆಲವೇ ಕೆಲವು ವಿರಳ ಉದಾಹರಣೆಗಳು ಮಾತ್ರ ಕಂಡುಬರುತ್ತವೆ. ಇದಲ್ಲದೆ ಎಲ್ಲ ಬಗೆಯ ಆಧ್ಯಾತ್ಮಿಕ ಅನುಭವಗಳೂ ನಮ್ಮಲ್ಲಿರುವ ಉನ್ನತ ಸ್ತರದ ಸಹಾಯದಿಂದಲೇ ಉಂಟಾಗುತ್ತವೆ. ಹೃದಯವು ಪರಿಶುದ್ಧವಾದಾಗ ಒಬ್ಬ ವ್ಯಕ್ತಿ ಭಗವಂತನನ್ನು ತಿಳಿದುಕೊಳ್ಳಬಲ್ಲ. ಈ ಪರಿಶುದ್ಧಗೊಂಡ ಹೃದಯವನ್ನೇ '**ಬುದ್ಧಿ**' ಅಥವಾ '**ಧೀ**' ಎನ್ನುತ್ತೇವೆ. ಹೃದಯದಲ್ಲಿರುವ ಈ ಆಧ್ಯಾತ್ಮಿಕ ಕೇಂದ್ರವು ಜಾಗೃತವಾದಲ್ಲದೆ ಆಧ್ಯಾತ್ಮಿಕ ಅನುಭವ ದೂರದ ಮಾತು. ಆದ್ದರಿಂದ ಹೃದಯದ ಕೇಂದ್ರ ಅಥವಾ ಉನ್ನತ ಸ್ತರದ ಪ್ರಜ್ಞೆಯನ್ನು ಜಾಗೃತಗೊಳಿಸುವುದೇ ಆಧ್ಯಾತ್ಮಿಕ ಜೀವನದ ಪ್ರಧಾನ ಕಾರ್ಯ. ಈ ಉನ್ನತ ಸ್ತರದ ಮನಸ್ಸು, ಅಥವಾ '**ಬುದ್ಧಿ**' ('**ದಿವ್ಯಚಕ್ಷು**') ನಮ್ಮೆಲ್ಲರಲ್ಲೂ ಸುಪ್ತವಾಗಿರುತ್ತದೆ. ಇದನ್ನು ಮಂತ್ರಶಾಸ್ತ್ರ ಅಥವಾ ಮಂತ್ರಯೋಗದಲ್ಲಿ '**ಆನಂದ ಕಂದ**', ಎಂದರೆ ಎಂಟು ದಳಗಳಿರುವ ಕೆಂದಾವರೆ ಎನ್ನಲಾಗಿದೆ.

**ಆಧ್ಯಾತ್ಮಿಕ ಹೃದಯ ಅಥವಾ 'ಧೀ' (ಬುದ್ಧಿ)ಯನ್ನು ಜಾಗೃತ ಗೊಳಿಸುವುದು ಹೇಗೆ? :** ಸಾಮಾನ್ಯ ಪ್ರಯತ್ನದಿಂದ ಇದನ್ನು ಜಾಗೃತಗೊಳಿಸಲಾಗದು. ಆಧ್ಯಾತ್ಮಿಕ ಹೃದಯ ಹೇಗೆ ಜಾಗೃತವಾಗುವುದು ಎಂಬುದನ್ನರಿಯಲು ಮಾನವನ ಮನೋವ್ಯಾಪಾರವನ್ನು ತಿಳಿಯಬೇಕು. ಆಗ ಮಾತ್ರ ನಮಗೆ '**ಬುದ್ಧಿ**' ಜಾಗೃತವಾಗಿದೆಯೇ ಎಂದು ತಿಳಿಯಲು ಸಾಧ್ಯ.

ತಂತ್ರಗಳ ಪ್ರಕಾರ ಮಾನಸಿಕ ಶಕ್ತಿಗಳ ಮೊತ್ತವನ್ನು 'ಕುಂಡಲಿನಿ' ಎನ್ನಲಾಗುತ್ತದೆ. ಇದು ಬೆನ್ನೆಲುಬಿನ ಕೆಳತುದಿಯಲ್ಲಿ ಸುರುಳಿಯಾಗಿ ಸುತ್ತಿ ಮಲಗಿರುತ್ತದೆ. ಅದು ಸುತ್ತಿಕೊಂಡಿರುವುದರಿಂದ ಅದನ್ನು '**ಕುಂಡಲಿನಿ**' ಎನ್ನಲಾಗಿದೆ. ಅಲ್ಲಿ ಎಲ್ಲ ಮಾನಸಿಕ ಶಕ್ತಿಗಳೂ ಅವ್ಯಕ್ತ ರೂಪದಿಂದ ಅಡಗಿರುತ್ತವೆ. ಸಾಂಕೇತಿಕವಾಗಿ ಇದನ್ನು ಹಾವಿನಂತೆ ಎಂದಿದ್ದರೂ, ಅದಕ್ಕೂ ನಿಜವಾದ ಹಾವಿಗೂ ಯಾವುದೇ ಸಂಬಂಧವಿಲ್ಲ. ಹಾವಿನಂತೆ ಸುರುಳಿಯಾಗಿ ಸುತ್ತಿಕೊಂಡಿರುತ್ತದೆ, ಅವ್ಯಕ್ತವಾಗಿರುತ್ತದೆ ಎಂದಷ್ಟೇ ಇದರರ್ಥ.

ಸಾಮಾನ್ಯವಾಗಿ ಈ ಮಾನಸಿಕ ಶಕ್ತಿ ಅಥವಾ ಕುಂಡಲಿನಿ ನಮ್ಮ ಎಲ್ಲ ಮಾನಸಿಕ ಚಟುವಟಿಕೆಗಳನ್ನು ಪ್ರಭಾವಗೊಳಿಸುತ್ತದೆ. ನಮ್ಮ ಆಲೋಚನೆ, ಭಾವನೆಗಳು ಈ ಮಾನಸಿಕ ಶಕ್ತಿಯಿಂದ ನಿಯಂತ್ರಿತವಾಗುತ್ತವೆ; ಆದರೆ ಈ ಶಕ್ತಿಯ ಅತ್ಯಲ್ಪ ಭಾಗ ಮಾತ್ರ ಬೆನ್ನೆಲುಬಿನ ಮೂಲಕ ಎದ್ದುಬರುತ್ತದೆ. ಬಹುಪಾಲು ಜನರಲ್ಲಿ ಈ ಶಕ್ತಿಯು ಅಕ್ಕಪಕ್ಕದಲ್ಲಿರುವ ಎರಡು ನಾಡಿಗಳ ಮೂಲಕ ಹರಿದು ಮನಸ್ಸನ್ನು ಪ್ರವೇಶಿಸುವುದು– ಆ ನಾಡಿಗಳೇ **ಇಡಾ** ಮತ್ತು **ಪಿಂಗಳಾ.** ನಮ್ಮೆಲ್ಲ ಮಾನಸಿಕ ಚಟುವಟಿಕೆಗಳು ಈ ಮಾನಸಿಕ ಶಕ್ತಿಯಿಂದಲೇ ಉಂಟಾಗುವುದು. ಇಡಾ, ಪಿಂಗಳಾ ನಾಡಿಗಳಲ್ಲದೆ, ಅವುಗಳ ಮಧ್ಯದಲ್ಲಿ ಇನ್ನೊಂದು ನಾಡಿಯಿದೆ– **ಸುಷುಮ್ನಾ ನಾಡಿ** ಎಂದು ಅದನ್ನು ಕರೆಯುತ್ತಾರೆ. ಇದರ ಮೂಲಕ ಎಲ್ಲ ಮಾನಸಿಕ ಶಕ್ತಿ ಹರಿಯಬಲ್ಲುದು. ಆದರೆ ಇಡಾ, ಪಿಂಗಳಾ ನಾಡಿಗಳ ಮೂಲಕ ಅಲ್ಪ ಪ್ರಮಾಣದ ಮಾನಸಿಕ ಶಕ್ತಿ ಮಾತ್ರ ಹರಿಯುವುದು. ದುರದೃಷ್ಟವಶಾತ್ ಬಹುಪಾಲು ಜನರಲ್ಲಿ ಸುಷುಮ್ನಾನಾಡಿ ಮುಚ್ಚಲ್ಪಟ್ಟಿರುವುದು. ಮಾನಸಿಕ ಶಕ್ತಿಯು ಸುಷುಮ್ನಾ ನಾಡಿಯ ಮೂಲಕ ಹರಿಯದೆ, ಉಳಿದೆರಡು ನಾಡಿಗಳ ಮೂಲಕ ಹರಿಯುವುದರಿಂದ ಮನಸ್ಸು ಚಂಚಲಗೊಳ್ಳುವುದು.

ಇಚ್ಛೆಯ ಮೂಲಕ ಗುರು ನೀಡಿದ ಮಂತ್ರದ ಲಯಬದ್ಧ ಉಚ್ಚಾರಣೆ ಮಾಡುವುದರಿಂದ ಏನಾಗುವುದರೆಂದರೆ, ಇಡಾ ಮತ್ತು ಪಿಂಗಳಾ ನಾಡಿಗಳ ಕ್ರಿಯೆ ನಿಲ್ಲುವುದು; ಮಾನಸಿಕ ಪ್ರಯತ್ನವು ಸುಷುಮ್ನಾ ನಾಡಿಯ ಬುಡದ ಮೇಲೆ ಒತ್ತಡ ಹಾಕುವುದು. ಸ್ವಲ್ಪ ಹೊತ್ತು ಹೀಗೆ ಮುಂದುವರಿದಾಗ, ಹಾಕಿರುವ ಒತ್ತಡದ ಫಲವಾಗಿ ಸುಷುಮ್ನಾ ನಾಡಿ ತೆರೆಯಲ್ಪಟ್ಟು, ಅದರ ಮೂಲಕ ಮಾನಸಿಕ ಶಕ್ತಿ ಹರಿಯತೊಡಗುವುದು. ಸುಷುಮ್ನಾ ನಾಡಿಯು ಹೃದಯದ ಕೇಂದ್ರ ವನ್ನು ಬಡಿದು ಎಚ್ಚರಿಸುವುದು. ಹೃದಯದ ಕೇಂದ್ರ ತೆರೆಯುವುದು ಹೀಗೆ. ಮಾನಸಿಕ ಹೃದಯದ ಕೇಂದ್ರವನ್ನು ಬಡಿದು ಎಚ್ಚರಿಸಿದಾಗ, ಸಾಮಾನ್ಯವಾಗಿ ಕೆಳಮುಖವಾಗಿ ವಾಲಿರುವ ತಾವರೆಯ ಮೊಗ್ಗಿನಂತೆ ಚಿತ್ರಿಸಲಾಗುವ ಹೃದಯಕಮಲವು ಮೇಲ್ಮುಖವಾಗಿ ನಿಂತು ಅರಳ ತೊಡಗುವುದು. ಈ ಅನುಭವ ವಾದಾಗ ಅತೀಂದ್ರಿಯ ಜ್ಯೋತಿ ಕಾಣಿಸುವುದು. ಅದೇ **'ಪ್ರಜ್ಞೆಯ ಬೆಳಕು'**, **'ಬುದ್ಧಿ'** ಅಥವಾ **'ಧೀ'**ಯ ಬೆಳಕು. ಈ ಜಾಗೃತಿ ಉಂಟಾದಾಗಲೇ ನಿಜವಾದ ಆಧ್ಯಾತ್ಮಿಕ ಜೀವನ ಆರಂಭವಾಗುವುದು.

ಭಗವಂತನು ಜೀವನೊಂದಿಗೆ ನಿಕಟ ಸಂಬಂಧ ಹೊಂದಿರು ತ್ತಾನೆ. ಇದೇ ಆಧ್ಯಾತ್ಮಿಕ ಅನುಭವಕ್ಕೆ ಬಾಗಿಲು. ಎಲ್ಲರಿಗೂ ಲಭ್ಯ ವಿರುವ ನೇರ ಅನುಭವ ಯಾವುದು? ಅದೇ, ಹೃದಯಕೇಂದ್ರದ ಜಾಗೃತಿ.

**ಜಪ :** ಮಂತ್ರದ ಲಯಬದ್ಧವಾದ ಉಚ್ಚಾರಣೆಯನ್ನೇ ಜಪವೆಂದು ಕರೆಯುತ್ತೇವೆ. ಅದು ಹೃದಯದ ಪ್ರಜ್ಞಾಕೇಂದ್ರವನ್ನು ಜಾಗೃತ ಗೊಳಿಸುವುದು. ಜಪವೆಂದರೆ ಅನಿಯತವಾದ, ಮನಸ್ಸೇ ಇಲ್ಲದ, ಅರೆಬರೆ ನಿದ್ರಾವಸ್ಥೆಯಲ್ಲಿ ಮಾಡುವ ಪುನರಾವರ್ತನೆಯಲ್ಲ. ಹೀಗೆ ಮಾಡುವವರಿಗೆ ಜಪ ಮಾಡುವ ಅರ್ಹತೆಯೇ ಇಲ್ಲವೆನ್ನಬಹುದು. ಜಪವೆಂದರೆ ಅದು ಅತ್ಯಂತ ಕ್ರಮಬದ್ಧವಾಗಿ ಮಾಡುವ ಒಂದು ಕ್ರಿಯೆ. ಬೆಳಿಗ್ಗೆ ಅಥವಾ ಸಾಯಂಕಾಲ, ಒಂದೆಡೆ ಸರಿಯಾದ ಭಂಗಿಯಲ್ಲಿ ಕುಳಿತು ಅತ್ಯಂತ ಪ್ರಾಮಾಣಿಕವಾಗಿ ಮಂತ್ರವನ್ನು ಪುನ ರುಚ್ಚರಿಸಬೇಕು. ಕಾರಂಜಿಯು ನೆಲದಿಂದ ಮೇಲಕ್ಕೆ ಚಿಮ್ಮುವುದನ್ನು, ಅನಂತರ ಕೆಳಕ್ಕೆ ಬೀಳುವುದನ್ನು ಕಲ್ಪಿಸಿಕೊಳ್ಳಿ. ಅದೇರೀತಿ ಮಂತ್ರ ನಿಮ್ಮೊಳಗಿನಿಂದ ಮೇಲಕ್ಕೇಳುವಂತೆ ಕಲ್ಪಿಸಿಕೊಳ್ಳಬೇಕು. ಮಂತ್ರದಿಂದ ನಮ್ಮನ್ನು ನಾವು ಆವರಿಸಿಕೊಳ್ಳಬೇಕು. ಮಂತ್ರದ ನಿರಂತರ ಉಚ್ಚಾರಣೆಯಲ್ಲಿ ನಮ್ಮ ದೇಹ, ಮನಸ್ಸುಗಳು ಮುಳುಗಿ ಹೋಗಲಿ. ಜಪವೆಂದರೆ ಇದೇ. ಹೀಗೆ ಕೆಲವು ಕಾಲ ಅಭ್ಯಾಸ ಮಾಡಿದರೆ ಖಂಡಿತ ಕೆಲವು ಉನ್ನತ ಆಧ್ಯಾತ್ಮಿಕ ಅನುಭವಗಳು ಆಗಲೇಬೇಕು.

**ಸರಳವಾದ ಬಲದಿಂದ ಮಹತ್ತರ ಬಲದ ಸಂಪಾದನೆ :** ಸರಳವಾದ ಬಲದಿಂದ ನಾವು ಮಹತ್ತಾದ ಬಲವನ್ನು ಗಳಿಸಬಲ್ಲೆವು. ಈ ಸಂಬಂಧವಾಗಿ ಸ್ವಾಮಿ ವಿವೇಕಾನಂದರು 'ರಾಜಯೋಗ'ದಲ್ಲಿ ಹೇಳಿರುವ ಕಥೆ ನಿಮಗೆ ತಿಳಿದಿರಬಹುದು. ಅಲ್ಲಿ ಅದನ್ನು ಹೇಳಿರುವ ಸಂದರ್ಭ ಬೇರೆ, ನಿಜ. ಆದರೆ ಅದನ್ನು ಜಪಕ್ಕೂ ಅನ್ವಯಿಸ ಬಹುದು. ಆ ಉದಾಹರಣೆ ಯಾವುದು? ಒಬ್ಬ ರಾಜನಿದ್ದ. ಅವನಿಗೆ ಒಂದು ಸಲ ತನ್ನ ಮಂತ್ರಿಯ ಮೇಲೆ ಭಾರೀ ಕೋಪ ಬಂತು. ಅವನನ್ನು ಒಂದು ದೊಡ್ಡ ಗೋಪುರದ ತುದಿಯಲ್ಲಿ ಬಂಧನದಲ್ಲಿಟ್ಟ. ಆ ಗೋಪುರ ಅತ್ಯಂತ ಎತ್ತರವಾಗಿತ್ತು; ಅಲ್ಲಿ ಮೇಲ್ಭಾಗದಲ್ಲಿ ಒಂದು ಕಿಟಿಕಿ ಮಾತ್ರ ಇತ್ತು. ಯಾವ ರೀತಿಯಿಂದಲೂ ತಪ್ಪಿಸಿಕೊಳ್ಳು ವಂತಿರಲಿಲ್ಲ. ರಾತ್ರಿ ಅಲ್ಲಿಗೆ ಬಂದ ಅವನ ಪತ್ನಿ ಗೋಪುರದ ಕೆಳಗಿ ನಿಂದ ಅವನನ್ನು ಕೂಗಿ ಕರೆದಳು. ಮಂತ್ರಿ ಕಿಟಿಕಿಯನ್ನು ತೆರೆದು, ತನ್ನ ಪತ್ನಿಗೆ ಕೆಲವು ವಸ್ತುಗಳನ್ನು ತರುವಂತೆ ಹೇಳಿದ: ಒಂದು ಕೀಟ, ಜೇನು, ತೆಳುವಾದ ರೇಷ್ಮೆ ದಾರ, ಹತ್ತಿಯ ದಾರ ಹಾಗೂ ದೊಡ್ಡ ಹಗ್ಗ. ಅವನ ಪತ್ನಿ ರಾತ್ರಿ ಅದೆಲ್ಲವನ್ನೂ ಸಂಪಾದಿಸಿ ತಂದಳು. ಕೀಟದ ನಡುವಿಗೆ ರೇಷ್ಮೆ ದಾರವನ್ನು ಕಟ್ಟಿ, ಅದರ ಕೋಡುಗಳಿಗೆ ಜೇನನ್ನು ಸವರಿ, ಮೇಲೆ ಹಾರಲು ಬಿಡುವಂತೆ ಮಂತ್ರಿ ಅವಳಿಗೆ ಹೇಳಿದ. ಕೀಟದ ಕೋಡುಗಳು ಮುಂದಕ್ಕೆ ಬಾಗಿರುತ್ತವೆ; ಅದಕ್ಕೆ ಜೇನನ್ನು ಸವರಿದಾಗ ಅದು ಭಾವಿಸುತ್ತದೆ, ಜೇನು ತನ್ನ ಮುಂದೆಯೇ ಇದೆ ಯೆಂದು; ಅದು ಜೇನನ್ನು ಹೀರಲು ಮುಂದಕ್ಕೆ ಮುಂದಕ್ಕೆ ಸಾಗು ತ್ತದೆ, ಆದರೆ ಅದಕ್ಕೆ ಜೇನು ಸಿಗುವುದಿಲ್ಲ. ಹೀಗೆ ಕೀಟ ಮೇಲಕ್ಕೆ ಹಾರಿ ಬಂತು. ತನ್ನ ಕಿಟಿಕಿಯ ಬಳಿಗೆ ಕೀಟ ಸಮೀಪಿಸಿದಾಗ ಮಂತ್ರಿ ಅದನ್ನು ಹಿಡಿದುಕೊಂಡ; ಅನಂತರ ರೇಷ್ಮೆ ದಾರವನ್ನು ಎಳೆದುಕೊಂಡ. ರೇಷ್ಮೆದಾರದ ಇನ್ನೊಂದು ತುದಿಗೆ ಹತ್ತಿಯ ದಾರವನ್ನು ಜೋಡಿಸ ಲಾಗಿತ್ತು. ರೇಷ್ಮೆ ದಾರವನ್ನೆಲ್ಲ ಎಳೆದುಕೊಂಡು, ಕೊನೆಗೆ ಹತ್ತಿಯ ದಾರವನ್ನೂ ಎಳೆದುಕೊಂಡ. ಹತ್ತಿಯ ದಾರದ ಇನ್ನೊಂದು ತುದಿಗೆ ಹುರಿ ಹಗ್ಗವನ್ನು ಕಟ್ಟಲಾಗಿತ್ತು; ಹತ್ತಿಯ ದಾರದ ಮೂಲಕ ಹುರಿ ಹಗ್ಗವನ್ನು ಮಂತ್ರಿ ಎಳೆದುಕೊಂಡ. ಕೊನೆಗೆ ಮಂತ್ರಿ ಹುರಿ ಹಗ್ಗವನ್ನು ಕಿಟಿಕಿಯ ಸರಳುಗಳಿಗೆ ಬಂಧಿಸಿ, ಅದರ ಮೂಲಕ ಗೋಪುರದ ಕೆಳಗಿಳಿದು ಬಂದು ತಪ್ಪಿಸಿಕೊಂಡ. ಸಣ್ಣ ಬಲಗಳ ಸಹಾಯದಿಂದ ಉನ್ನತವಾದ ಬಲಗಳನ್ನು ವಶಪಡಿಸಿಕೊಳ್ಳು ವುದು ಹೇಗೆ ಎಂಬು ದನ್ನು ಈ ಕಥೆ ತಿಳಿಸಿಕೊಡುತ್ತದೆ.

ಸಾಮಾನ್ಯವಾದ ಶಬ್ದಗಳಿಗೆ ಯಾವುದೇ ಶಕ್ತಿಯಿರುವಂತೆ ಕಂಡು ಬರುವುದಿಲ್ಲ. ನಾವು ಅನೇಕ ಗಂಟೆಗಳ ಕಾಲ ಮಾತನಾಡಬಹುದು. ಆದರೆ ನಮಗೆ ಶಬ್ದಗಳ ಶಕ್ತಿಯ ಅರಿವು ಇರುವುದಿಲ್ಲ. ಆದರೆ ಅಂತರಂಗದ ಆಳಕ್ಕೆ ಇಳಿದು ಮುಳುಗಿದಾಗ ನಾವು ಸೂಕ್ಷ್ಮವಾದ, ಹೆಚ್ಚು ಬಲಿಷ್ಠವಾದ ಮಹತ್ತರ ಶಕ್ತಿಯ ಸಂಪರ್ಕಕ್ಕೆ ಬಂದಿರುವುದನ್ನು ಗಮನಿಸುತ್ತೇವೆ. ನಮ್ಮ ಮನಸ್ಸಿನಲ್ಲಿ ಏಳುವ ಎಲ್ಲ ಆಲೋಚನೆಗಳಿಗೂ ನಾಲ್ಕು ಹಂತಗಳಿರುತ್ತವೆ ಎಂದು **ಮಂತ್ರಶಾಸ್ತ್ರ** ಹೇಳುತ್ತದೆ.

**ಆಲೋಚನೆಯ ನಾಲ್ಕು ಹಂತಗಳು :** ***ವೈಖರೀ:*** ನಾವು ಯಾರೊಂದಿ ಗಾದರೂ ಮಾತನಾಡುವಾಗ ಅಥವಾ ಅವರ ಮಾತನ್ನು ಆಲಿಸುವಾಗ ನಾವು ಕೇಳುವುದು ಆಲೋಚನೆಯ ಹಾಗೂ ನಾದದ ಕೊನೆಯ ಹಂತವನ್ನು ಮಾತ್ರ. ಈ ಹಂತವನ್ನು **ವೈಖರೀ** ಎನ್ನಲಾಗುತ್ತದೆ. ಕಂಠದಲ್ಲಿರುವ ನಾದಸಂಪುಟದಲ್ಲಾಗುವ ಘರ್ಷಣೆಯಿಂದ ಈ ವೈಖರೀ ಶಬ್ದ ಉತ್ಪನ್ನವಾಗುವುದು. **ವೈಖರೀ** ಅಥವಾ ಉಚ್ಚರಿಸಲ್ಪಟ್ಟ ಶಬ್ದದ ಹಿಂದೆ ಆಲೋಚನೆ ಇರುವುದು.

***ಮಧ್ಯಮಾ:*** ಆಲೋಚನೆ ಅಥವಾ ಶಬ್ದದ ಈ ಪ್ರಕಟಗೊಳ್ಳದ ಆಯಾಮವೇ ಮಧ್ಯಮಾ ಹಂತ.

***ಪಶ್ಯಂತೀ:*** ಇನ್ನೂ ಆಳಕ್ಕೆ ಹೋದರೆ ಮುಂದಿನ ಹಂತವಿದೆ; ಅದೇ **ಪಶ್ಯಂತೀ** ಹಂತ. ಬೀಜವು ಪಶ್ಯಂತೀ ಹಂತವನ್ನು ಪ್ರತಿನಿಧಿಸುತ್ತದೆ. ಇದು ಇಷ್ಟದೇವತೆಯ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಮೊಳಕೆಯ ಮೊದಲ ಎರಡು ದಳಗಳಂತೆ ನಾಮ, ರೂಪಗಳು ಪ್ರತ್ಯೇಕವಾಗಿರು

ವಂತೆ ಕಂಡರೂ, ನಿಜವಾಗಿ ಅವು ಒಂದೇ. ಈ ಹಂತದಲ್ಲಿ ನಮ್ಮ ಆಲೋಚನೆ ನಾಮ, ರೂಪಗಳಾಗಿ ಎರಡಾಗುತ್ತವೆ. ಅವೇ ಶಬ್ದ ಮತ್ತು ಅರ್ಥ. ಪ್ರತಿಯೊಂದು ಆಲೋಚನೆಯೂ ಶಬ್ದ ಮತ್ತು ಅರ್ಥಗಳ ಮೇಲೆ ನಿಂತಿವೆ.

ದೇವತೆ ಮತ್ತು ಮಂತ್ರ, ನಾಮ ಮತ್ತು ರೂಪ – ಇವು ಯಾವಾಗಲೂ ಜೊತೆಜೊತೆಗೇ ಇರುತ್ತವೆ. ನಾಮ, ರೂಪಗಳ ಸಂಯೋಜನೆಯನ್ನೇ ಆಲೋಚನೆಯೆನ್ನುತ್ತೇವೆ. ಮಂತ್ರವನ್ನು ಉಚ್ಚರಿಸುತ್ತ ಇಷ್ಟದೇವತೆಯ ಧ್ಯಾನ ಮಾಡುವಾಗ ಮೊದಲಿಗೆ ಅವೆರಡೂ ಬೇರೆಬೇರೆಯೆಂಬಂತೆ ಕಂಡುಬರುತ್ತವೆ. ನಾಮ ಬೇರೆ, ರೂಪ ಬೇರೆ ಎಂದು ಎರಡನ್ನೂ ಬೇರ್ಪಡಿಸಬಹುದು ಎಂಬಂತೆ ಕಾಣಿಸುತ್ತವೆ. ಮಂತ್ರವನ್ನು ಉಚ್ಚರಿಸಲೇಬೇಕೆಂದಿಲ್ಲ; ರೂಪವನ್ನು ಸುಲಭವಾಗಿ ಭಾವಿಸಿಕೊಳ್ಳಬಹುದು. ಅಥವಾ, ದೇವತೆಯನ್ನು ಭಾವಿಸಿಕೊಳ್ಳದೆ ಮಂತ್ರವನ್ನು ಉಚ್ಚರಿಸಬಹುದು. ಹೀಗೆ ಇವೆರಡೂ ಬೇರೆ ಬೇರೆ, ನಿಮಗೆ ತಿಳಿದಿದೆ. ಏಕಾಗ್ರತೆ ಆಳವಾಗುತ್ತ ಹೋದಂತೆ, ಮನಸ್ಸಿನ ಆಳಕ್ಕೆ ನೀವು ಇಳಿದಂತೆ ನಾಮ, ರೂಪಗಳು ಪ್ರಜ್ಞೆಯಲ್ಲಿ ಮುಳುಗುತ್ತವೆ. ನಾಮ, ರೂಪಗಳು ಒಂದಾಗಿರುವುದನ್ನು ಅರಿತು ಕೊಳ್ಳಬಲ್ಲಿರಿ ಎಂದಾದರೆ, ನೀವು ಮೂರನೇ ಹಂತವಾದ ವೈಖರೀ ಯನ್ನು ತಲುಪುವಿರಿ. **ಪಶ್ಯಂತೀ**ಯು ಸಾಧಾರಣ ಬೇಳೆಯಂತೆ ಅಥವಾ ತೊಗರಿಬೇಳೆಯಂತಿರುತ್ತದೆ. ಬಂಗಾಳದ ತೊಗರಿ ಅಥವಾ ಕೆಂಪು ತೊಗರಿಯಲ್ಲಿ ಎರಡು ಭಾಗಗಳಿದ್ದರೂ ಅವು ಒಂದಾಗಿದ್ದು ಕೊಂಡು ಒಂದೇ ಬೀಜವಾಗಿರುತ್ತದೆ. ಅದೇ ರೀತಿ **ಪಶ್ಯಂತೀ** ಹಂತದಲ್ಲಿ ನಾಮ, ರೂಪಗಳು ಬೇರೆಯಾಗಿರುವಂತೆ ಕಂಡರೂ, ನಿಜವಾಗಿ ಅವು ಒಂದಾಗಿರುತ್ತವೆ.

***ಪರಾ :*** ಇನ್ನಷ್ಟು ಆಳವಾಗಿ ಹೋದಂತೆ, ಕೊನೆಯದಾದ '**ಪರಾ**' ಎಂಬ ಒಂದು ಹಂತವಿರುವುದನ್ನು ಗಮನಿಸಬಹುದು. ಇದನ್ನು '**ಓಂ**' ಪ್ರತಿನಿಧಿಸುತ್ತದೆ. ಇದು ಈಶ್ವರನ ಶಕ್ತಿಯ ಪ್ರತಿರೂಪವಾಗಿದೆ.

ಸುಪ್ತಪ್ರಜ್ಞೆಯ ಸ್ಥಿತಿಯಲ್ಲಿ ದಿವ್ಯ ಮಂತ್ರದ ಬೀಜವನ್ನು ಬಿತ್ತಿದಾಗ ಅದು ಸಂಸ್ಕಾರಗಳನ್ನು ನಿಯಂತ್ರಿಸಿ ಮನಸ್ಸನ್ನು ಶುದ್ಧೀ ಕರಿಸುತ್ತದೆ. ಲಯಬದ್ಧವಾದ ಮಂತ್ರಜಪವು ಕುಂಡಲಿನಿಯನ್ನು ಜಾಗೃತಗೊಳಿಸುತ್ತದೆ. ಇದನ್ನು ವಾಚಿಕ ಪ್ರಾಣಾಯಾಮವೆನ್ನ ಬಹುದು. ಸಾಧಾರಣ ಪ್ರಾಣಾಯಾಮವು ಮನಸ್ಸನ್ನು ಶುದ್ಧೀಕರಿಸು ವುದಿಲ್ಲ. ಅದು ಸಂಸ್ಕಾರಗಳನ್ನು ಶಮನಗೊಳಿಸುವುದು, ಅಷ್ಟೆ.

ಪ್ರತಿಯೊಂದು ಆಲೋಚನೆಯ ಮೂಲ ಅದರ **ಪರಾ** ಹಂತ ದಲ್ಲಿದೆ. ಒಳ್ಳೆಯದಿರಲಿ, ಕೆಟ್ಟದಿರಲಿ, ಒಂದು ಆಲೋಚನೆಯನ್ನು ಬಿತ್ತಿದರೆ ಅದು ಮನಸ್ಸಿನ ಆಳದಲ್ಲಿ ಮುಳುಗಿಹೋಗುವುದು, ಅಲ್ಲೇ ಅದು ನೆಲೆಸುವುದು. ಅದು ನೀರಿನ ಆಳದಲ್ಲಿ ಹೇಗೆ ಕೆಲಸ ಮಾಡು ವುದು ಎಂಬುದನ್ನು ನೀವು ಅರಿಯಲಾರಿರಿ. ನೀರಿಗೆ ಕಲ್ಲೆಸೆದರೆ ಅದು ಕೆಲವು ಅಲೆಗಳನ್ನು ಎಬ್ಬಿಸಿ ನೀರಿನಲ್ಲಿ ಮುಳುಗುವುದು; ಆದರೆ ಅದು ಮಾಯವಾಗುವುದಿಲ್ಲ. ಅಂತೆಯೇ ಆಧ್ಯಾತ್ಮಿಕ ಆಲೋಚನೆ ಕೂಡ ಸುಪ್ತಪ್ರಜ್ಞೆಯ ಆಳದಲ್ಲಿ ಮುಳುಗುವುದು; ಅದು ಅಲ್ಲೇ ಕೆಲಸ ಮಾಡುವುದು. ಜಪದ ಮೂಲಕ ಇದನ್ನು ಪುನರಾವರ್ತನೆ ಮಾಡಿದರೆ **ಪರಾ** ಹಂತದಲ್ಲಿ ಅದು ಸುಪ್ತ ಪ್ರಜ್ಞೆಯಲ್ಲಿ ಕೆಲಸ ಮಾಡುತ್ತದೆ.

ಆದರೆ ಪ್ರಜ್ಞಾಪೂರ್ವಕವಾಗಿ ಜಪ ಮಾಡಿದಾಗ ಮಾತ್ರ ಹೀಗಾಗುವುದು. ಅಪ್ರಜ್ಞಾಪೂರ್ವಕ ಜಪ ಹಳೆಯ ಸಂಸ್ಕಾರಗಳು ಮರುಕಳಿಸುವುದರ ಫಲ. ಪ್ರಜ್ಞಾಪೂರ್ವಕ ಜಪ ಪ್ರತಿ ಬಾರಿಯೂ ಹೊಸ ಸಂಸ್ಕಾರವನ್ನು ಸೃಷ್ಟಿ ಮಾಡುತ್ತದೆ. ಪರಿಣಾಮವಾಗಿ ಆಧ್ಯಾತ್ಮಿಕ ಸಂಸ್ಕಾರಗಳ ಒಟ್ಟು ಪ್ರಮಾಣ ಹೆಚ್ಚಾಗುವುದು.

ಮನಸ್ಸು ದೇವತೆಯ ಸ್ಪಂದನದೊಂದಿಗೆ ಶ್ರುತಿಬದ್ಧವಾಗಿ ಸ್ಪಂದಿಸಬೇಕು. ಅಂತಹ ಮಾನಸಿಕ ಅನುರಣನೆ ಸ್ಥಾಪಿತವಾದಾಗ ದೇವರ ಕೃಪೆ ನಮ್ಮ ಮೇಲೆ ಹರಿಯುವುದು. ಇದು **ಶಾಬ್ದಿಕ ಪ್ರಾಣಾಯಾಮ**ದೊಂದಿಗೆ ಸೇರಿಕೊಂಡಾಗ ದೇವತೆಯ ದರ್ಶನ ವಾಗುವುದು.

**ಜಪದ ನಿಯಮ :** ಜೀವ ಮತ್ತು ದೇವರ ನಡುವೆ ಉಂಟಾಗುವ ಆಧ್ಯಾತ್ಮಿಕ ಅನುರಣನೆಯೇ ಜಪದ ಪ್ರಧಾನ ನಿಯಮ. ಇದು **ಶಾಬ್ದಿಕ ಪ್ರಾಣಾಯಾಮ**ದಿಂದ ಅಥವಾ ಅತ್ಯಂತ ವ್ಯಾಕುಲತೆಯಿಂದ ಕೂಡಿದ **ಪ್ರಾರ್ಥನೆ**, ಆರಾಧನೆಯಿಂದ ಸಾಧ್ಯವಾಗಬೇಕು.

**ಪರಾ** ಹಂತವು ಕುಂಡಲಿನಿಗೆ ಸಮಾನ ಸ್ತರದಲ್ಲಿದೆ. ಪ್ರತಿ ಯೊಂದು ಆಲೋಚನೆಯೂ ಮೂಲತಃ ಕುಂಡಲಿನಿಯಿಂದಲೇ ಏಳುವುದು. ನಾವು ಆಲೋಚಿಸುವಾಗ ಕುಂಡಲಿನೀ ಶಕ್ತಿಯ ಸಣ್ಣ ಒಂದು ಪ್ರಮಾಣ ವ್ಯಯವಾಗುವುದು ಎಂದು ನಮ್ಮ ಅರಿವಿಗೆ ಬರುವುದೇ ಇಲ್ಲ. ಇಷ್ಟದೇವತೆಯ ಮೇಲೆ ಮನಸ್ಸನ್ನು ಏಕಾಗ್ರ ಗೊಳಿಸಿದಾಗ, ಅಥವಾ ಲಯಬದ್ಧವಾಗಿ ಮಂತ್ರಜಪ ಮಾಡಿದಾಗ ಈ ಮಾನಸಿಕ ಶಕ್ತಿಯನ್ನು ದೊಡ್ಡ ಪ್ರಮಾಣದಲ್ಲಿ ಸೆಳೆಯುತ್ತೇವೆ. ಲಯಬದ್ಧವಾದ ಮಂತ್ರೋಚ್ಚಾರಣೆಯ ರಹಸ್ಯಾರ್ಥ ಇದು. ಯಾವುದೇ ಮಂತ್ರ ಇದನ್ನು ಮಾಡಬಲ್ಲುದು. '**ಓಂ**' ಕಾರವನ್ನು ನಿರಂತರ ಲಯಬದ್ಧವಾಗಿ ಉಚ್ಚರಿಸಿದರೆ ಈ ಶಕ್ತಿ ಜಾಗೃತವಾಗು ವುದು. ಓಂಕಾರ ಜಪವು ಭಾರತದಲ್ಲಿ ಅತ್ಯಂತ ಪ್ರಾಚೀನವಾದ, ಸಾರ್ವತ್ರಿಕವಾಗಿ ಸ್ವೀಕೃತವಾದ ಮಂತ್ರ .

ಒಂದು ಮಂತ್ರವನ್ನು ಜಪಿಸುವಾಗ ನಾವು ಆ ಮಂತ್ರದ ಸ್ಪಂದನದೊಂದಿಗೆ ಶ್ರುತಿ ಸೇರಿಸುತ್ತೇವೆ. ಇದನ್ನೇ ಅನುರಣನೆ ಎನ್ನುತ್ತೇವೆ. ಇಷ್ಟದೇವತೆಯ ಈ ಒಂದು ಸ್ಪಂದನವನ್ನೇ ಬೀಜ, ಬೀಜಮಂತ್ರ ಎನ್ನುತ್ತೇವೆ. ಪ್ರತಿಯೊಂದು ದೇವತೆಗೂ ಅದರದ್ದೇ ಆದ ಸ್ಪಂದನವಿದೆ; ಅದರದ್ದೇ ಆದ ಬೀಜಮಂತ್ರವಿದೆ. ಬೀಜ ಮಂತ್ರದೊಂದಿಗೆ ಕೂಡಿದ ಮಂತ್ರವನ್ನು ಉಚ್ಚರಿಸಿದಾಗ ನಮ್ಮ ಮಾನಸಿಕ ಸ್ಪಂದನವು ಆ ದೇವತೆಯ ಸ್ಪಂದನದೊಂದಿಗೆ ಅನು ರಣಿಸುವುದು. ಹೆಚ್ಚಿನ ಮಂತ್ರಗಳಲ್ಲಿ, ವಿಶೇಷವಾಗಿ ರಾಮಕೃಷ್ಣ ಮಠದಲ್ಲಿ ನೀಡಲಾಗುವ ಮಂತ್ರದೀಕ್ಷೆಯ ಮಂತ್ರಗಳಲ್ಲಿ ಬೀಜ ಮಂತ್ರಗಳಿರುತ್ತವೆ.

**ಪಂಚಾಕ್ಷರಿ, ಅಷ್ಟಾಕ್ಷರಿ, ಓಂ ನಮೋ ನಾರಾಯಣಾಯ** ಮೊದಲಾದ ಪ್ರಸಿದ್ಧ ಮಂತ್ರಗಳಲ್ಲಿ ಬೀಜಮಂತ್ರಗಳಿಲ್ಲ ಎಂದು ನೀವು ಕೇಳಬಹುದು. ಅದು ಇರಬೇಕಾಗಿಲ್ಲ. ಅದು ರೇಡಿಯೋ ಯಂತ್ರದಂತೆ. ನಿಮಗೆ ಒಂದು ತರಂಗಾಂತರ ಗೊತ್ತಿದೆ. ಅದಕ್ಕೆ ನಿಮ್ಮ ರೇಡಿಯೋವನ್ನು ಹೊಂದಿಸಿಕೊಂಡಾಗ ಒಂದು ಆಕಾಶವಾಣಿ ಕೇಂದ್ರ ನಿಮಗೆ ಸಿಗುತ್ತದೆ. ನಿಮಗೆ ರೇಡಿಯೋದಲ್ಲಿ ಆ ಕೇಂದ್ರದ ತರಂಗಾಂತರ ಯಾವುದೆಂದು ತಿಳಿದಿರಬೇಕಿಲ್ಲ. ತರಂಗಾಂತರವನ್ನು

ನೀವು ಅನುಭವದಿಂದ ಅಥವಾ ಪ್ರಯೋಗ ಮಾಡಿ ಹೊಂದಿಸಿಕೊಳ್ಳಬಹುದು. ತರಂಗಾಂತರ ಯಾವುದೆಂದು ಗೊತ್ತಿದ್ದರೆ ನಿಖರವಾಗಿ ಅದನ್ನೇ ಗುರುತಿಸಿ ತಕ್ಷಣ ಹೊಂದಿಸಿಕೊಳ್ಳಬಹುದು ಅಷ್ಟೆ. ಇದೇ ರೀತಿ, ಬೀಜಮಂತ್ರವು ದೇವತೆಯೊಂದಿಗೆ ತಕ್ಷಣ ಸಂಪರ್ಕ ಕಲ್ಪಿಸುವುದು.

**ಮಂತ್ರದ ಭಾಗಗಳು:** ಪ್ರತಿಯೊಂದು ಮಂತ್ರಕ್ಕೂ ನಾಲ್ಕು ಭಾಗಗಳಿವೆ. ಮೊದಲಿಗೆ 'ಓಂ'ಕಾರವಿದೆ. ಅದು ಅಖಂಡ ಸಚ್ಚಿದಾನಂದವೂ ಅನಂತವೂ ಆಗಿರುವ ಬ್ರಹ್ಮನ ಸಂಕೇತವಾಗಿದೆ. ಎಲ್ಲ ದೇವತೆಗಳೂ ಅದರ ಅಂಶಗಳು. ಇದಕ್ಕೆ ಶ್ರೀರಾಮಕೃಷ್ಣರು ಸಮುದ್ರ ಹಾಗೂ ಮಂಜುಗಡ್ಡೆಯ ಸುಂದರ ಉಪಮೆಯನ್ನು ನೀಡುತ್ತಿದ್ದರು. ಸಚ್ಚಿದಾನಂದ ಸಾಗರವು ಅನಂತವಾದುದು; ಆದರೆ ಭಕ್ತನ ಭಕ್ತಿಯ ಶೈತ್ಯದ ಪರಿಣಾಮದಿಂದಾಗಿ ಅದು ಅಲ್ಲಲ್ಲಿ ಹಲವು ರೂಪಗಳನ್ನು ಧರಿಸುವುದು. ಹೀಗಾಗಿ ದಿವ್ಯತೆಗೆ ಎರಡು ಆಯಾಮಗಳಿವೆ: ಅಖಂಡ ಮತ್ತು ಖಂಡ. ಓಂಕಾರವು ಅಖಂಡವನ್ನು ಪ್ರತಿನಿಧಿಸುತ್ತದೆ. ಖಂಡವು ಕೃಷ್ಣ, ಶಿವ ಮೊದಲಾದ ದೇವರ ಹೆಸರುಗಳಿಂದ ಪ್ರತಿನಿಧಿಸಲ್ಪಡುತ್ತದೆ. ಅಖಂಡ ಹಾಗೂ ಖಂಡ-ಇವುಗಳನ್ನು ಒಂದುಗೂಡಿಸುವ ಸೇತುವೇ ಬೀಜ. ಬೀಜವು ಒಂದು ಕ್ರಿಯಾಶಕ್ತಿಯ ಸೂಚಕವಾಗಿದೆ. ಅದು ದೇವತೆಯ ಶಕ್ತಿಯನ್ನು ಸೂಚಿಸುತ್ತದೆ. ಒಂದು ಮಂತ್ರದ ವಿಶೇಷ ಶಕ್ತಿಯಾಗಿರುವ ಬೀಜವು ಆ ದೇವತೆಯ ವಿಭೂತಿಯಾಗಿದೆ. ಅದರ ಒಂದು ಭಾಗ ನಮ್ಮಲ್ಲಿಯೂ ಇದೆ. ಬೀಜಮಂತ್ರವನ್ನು ಉಚ್ಚರಿಸಿದಾಗ ನಮ್ಮಲ್ಲಿರುವ ಆ ಶಕ್ತಿ ಜಾಗೃತಗೊಳ್ಳುವುದು; ದೇವತೆಯನ್ನು ಸ್ವೀಕರಿಸಲು ನಮ್ಮ ಮನಸ್ಸು ಸಿದ್ಧಗೊಳ್ಳುವುದು.

ಒಂದೊಂದು ಬೀಜಮಂತ್ರವು ಒಂದು ಶಕ್ತಿಯನ್ನು ಪ್ರತಿನಿಧಿಸುತ್ತದೆ. ಅದೇ ಶಕ್ತಿ ವಿವಿಧ ಮಾನವ ರೂಪಗಳನ್ನು ಧರಿಸಬಹುದು. ಉದಾಹರಣೆಗೆ: ಶಿವ - ಪಶುಪತಿ, ವೀರೇಶ್ವರ, ನಟರಾಜ, ಸಾಂಬಶಿವ ಇತ್ಯಾದಿ. ವಿಷ್ಣು - ಕೃಷ್ಣ, ರಾಮ, ವೆಂಕಟೇಶ್ವರ, ವರದರಾಜ, ರಂಗನಾಥ ಇತ್ಯಾದಿ. ದೇವಿ - ದುರ್ಗಾ, ಜಯದುರ್ಗಾ, ವನದುರ್ಗಾ, ಕಾಳಿ, ಲಕ್ಷ್ಮಿ, ಸರಸ್ವತಿ ಇತ್ಯಾದಿ.

'ಓಂ' ಕಾರ, ಬೀಜಮಂತ್ರ ಹಾಗೂ ದೇವತೆಯ ಹೆಸರು - ಇವು ಸೇರಿ ಮಂತ್ರದ ಮೂರು ಭಾಗಗಳಾದವು. ನಾಲ್ಕನೇ ಭಾಗ ಸಾಧಕನ ಮನೋಭಾವವನ್ನು ಸೂಚಿಸುತ್ತದೆ - ದೇವತೆಯಲ್ಲಿ ತಾನು ಶರಣಾಗತನಾಗಿರುವ ಭಾವವನ್ನು ತೋರಿಸುತ್ತದೆ. ಹೀಗೆ ಮಂತ್ರದಲ್ಲಿ ನಾಲ್ಕು ಭಾಗಗಳಿರುತ್ತವೆ: ೧) 'ಓಂ' ೨) ಬೀಜಮಂತ್ರ ೩.)ದೇವತೆಯ ಹೆಸರು, ಹಾಗೂ ೪) ಆ ದೇವತೆಯೊಂದಿಗೆ ನಮ್ಮ ಸಂಬಂಧ.

ಒಂದು ಸಣ್ಣ ಮಗು ಅಥವಾ ಮೂಕ ತನ್ನ ಭಾವನೆಯನ್ನು ಹೇಗೆ ವ್ಯಕ್ತಪಡಿಸುತ್ತಾನೆ? ಒಂದು ಹೂವನ್ನು ನೋಡಿದಾಗ ಅದು ಬೇಕೆನಿಸುವುದು; ಆ ಭಾವನೆಯನ್ನು ಆತ ವ್ಯಕ್ತಪಡಿಸುವನು. **ಅರ್ಥ** ಮತ್ತು **ಜ್ಞಾನ.** ಸಂಬಂಧವನ್ನು ವ್ಯಕ್ತಪಡಿಸಲು ಮೂರನೆಯ ಅಂಶವೊಂದು ಅಗತ್ಯ - ಅದೇ **ಶಬ್ದ**. ಹೀಗೆ ಭಾಷೆಯೆಂಬುದು ಸಂಬಂಧದ ಅಭಿವ್ಯಕ್ತಿ. ವಾಕ್ಯವೊಂದು ಭಾಷೆಯ ಘಟಕವಾಗಿದೆ. (ಜನ ವಿವಿಧ ಭಾಷೆಗಳನ್ನು ಆಡುತ್ತಾರೆ. ಅವರು ಅಂಗಡಿಗೆ ಹೋಗಿ ವಸ್ತ್ರವನ್ನು ವಿವಿಧ ಭಾಷೆಗಳ ಮೂಲಕ ಕೇಳುವರು. ವಿವಿಧ ಸಂಕೇತಗಳು ಒಂದೇ ಅರ್ಥವನ್ನು ಸೂಚಿಸುವುದು.)

ಮಂತ್ರ ಕೂಡ ಒಂದು ರೀತಿಯ ಭಾಷೆ. ಅದು ಜೀವಾತ್ಮ ಹಾಗೂ ಪರಮಾತ್ಮನ ನಡುವೆ ಸಂಬಂಧವನ್ನು ಸೂಚಿಸುವುದು. (**ನಮಃ** ಎಂದರೆ, 'ನಿನಗೆ ನಮಸ್ಕರಿಸುತ್ತೇನೆ' ಅಥವಾ 'ನಿನಗೆ ಅರ್ಪಿಸುತ್ತೇನೆ.' ಇದು ಪೂರ್ಣವಾಕ್ಯ.)

ಮಂತ್ರವು ಬೆಳಕಿನಿಂದ ತುಂಬಿದ ಕೋಣೆಯನ್ನು ತೆರೆಯುವ ಕೀಲಿಕೈ. ಮಂತ್ರದ ಅರ್ಥವು ಪ್ರಜ್ಞೆಯಲ್ಲಿರುತ್ತದೆ. ಹಾಗಾದರೆ, ಪ್ರಜ್ಞೆಯನ್ನು ತಲುಪುವುದು ಹೇಗೆ? ಮಂತ್ರವೇ ಈ ಕಲಸವನ್ನು ಮಾಡುವುದು.

**ಮಂತ್ರಗಳು ಕೃತಕವಾಗಿ ರಚಿತವಾಗಿಲ್ಲ :** ಮಂತ್ರಗಳು ನಿಜವಾಗಿಯೂ ಪ್ರತ್ಯಕ್ಷ ದರ್ಶನವನ್ನು ಪಡೆದ ಋಷಿಗಳ ಅನುಭವವನ್ನು ವ್ಯಕ್ತಪಡಿಸುತ್ತವೆ. ಅವು ಸಮಷ್ಟಿ ಮನಸ್ಸಿನಲ್ಲಿ ಅಥವಾ ಮಹತ್ (ಹಿರಣ್ಯಗರ್ಭ) ನಲ್ಲಿ ನೆಲೆಸಿರುವ ಸಾಂಕೇತಿಕ ಅರ್ಥಗಳಾಗಿವೆ. ಆಳವಾದ ಧ್ಯಾನದ ನಡುವೆ ಋಷಿಗಳ ಪವಿತ್ರ ಹೃದಯದಲ್ಲಿ ಈ ಮಂತ್ರಗಳು ಮಿಂಚಿ ವ್ಯಕ್ತವಾದವು.

ಸ್ವಲ್ಪ ಮಟ್ಟಿಗಾದರೂ ಮನಶ್ಶುದ್ಧಿಯನ್ನು ಹೊಂದಿ ಅತ್ಯಂತ ವ್ಯಾಕುಲತೆಯಿಂದ ನಿರಂತರ ಮಂತ್ರೋಚ್ಚಾರಣೆ ಮಾಡಿದಾಗಲೇ **ದೇವತಾ ಸಂಪ್ರಾಪ್ತಿ** (ಭಗವಂತನನ್ನು ಪಡೆಯುವುದು) ಉಂಟಾಗುವುದು. ಮನಸ್ಸು ಸಾಕಷ್ಟು ಶುದ್ಧವಾದಾಗ, ವ್ಯಾಕುಲತೆಯಿಂದ ಮಂತ್ರವನ್ನು ಪುನರುಚ್ಚಾರ ಮಾಡಿದಾಗ ಅದು ಲಯಬದ್ಧವಾಗುವುದು. ಆಗ ನಾವು ಇಷ್ಟದೇವತೆಯ ಉನ್ನತ ಸ್ಪಂದನದೊಂದಿಗೆ ಸಮಾನ ಶ್ರುತಿಯಲ್ಲಿರುತ್ತೇವೆ. ಹೀಗಾಗದಿದ್ದರೆ ನಮ್ಮ ಜೀವನವೆಲ್ಲ ಮಂತ್ರವನ್ನು ಹೇಗೆಹೇಗೋ ಉಚ್ಚರಿಸುತ್ತೇವೆ; ಏನನ್ನೂ ಸಾಧಿಸುವುದಿಲ್ಲ.

ಮಹಾನ್ ಧಾರ್ಮಿಕ ಸಂಸ್ಥೆಗಳ ಸಂಸ್ಥಾಪಕರು ಕಂಡುಹಿಡಿದ ಮಂತ್ರಗಳು **ಗುರುಪರಂಪರೆ**ಯ ಮೂಲಕ ಮುಂದಿನ ತಲೆಮಾರಿಗೆ ಹರಿದುಬಂದವು. ಅವುಗಳ ಅಧಿದೇವತೆಯ ಶಕ್ತಿಯು ಮಂತ್ರದ ಮೂಲಕ ಲೆಕ್ಕವಿಲ್ಲದಷ್ಟು ಮಂದಿ ಸಾಧಕರ ಅಂತರಂಗದಲ್ಲಿ ಕೆಲಸ ಮಾಡುವುದು. ಮೂಲಪುರುಷನ ಸಂಶೋಧನೆಯಲ್ಲಿ ಕಾಣಿಸಿಕೊಂಡ ಶಕ್ತಿ ಪ್ರತಿಯೊಂದು ಮಂತ್ರದಲ್ಲೂ ತುಂಬಿಕೊಂಡಿರುವುದು. ಗುರುಪರಂಪರೆಯು ಈ ಶಕ್ತಿಯನ್ನು ಕಾಪಾಡಿಕೊಂಡು ಬರುವುದು. ಶಿಷ್ಯಂದಿರು ಹಾಗೂ ದೀಕ್ಷೆ ಪಡೆದವರು ಮಂತ್ರವನ್ನು ಉಚ್ಚರಿಸುವಾಗ ಈ ಶಕ್ತಿ ಅವರಲ್ಲಿ ಕೆಲಸ ಮಾಡುವುದೆಂದು ಭಾವಿಸಿಕೊಳ್ಳಬೇಕು. ಹೀಗೆ ಮಂತ್ರವು ಸಾಧಕನನ್ನು ಇಷ್ಟದೇವತೆಯ ಸಂಪರ್ಕದಲ್ಲಿ ಜೀವಂತವಾಗಿರುವಂತೆ ಮಾಡುತ್ತದೆ.

ಗುರುಶಕ್ತಿಯು ಮಂತ್ರದ ಮೂಲಕ ಶಿಷ್ಯನಲ್ಲಿ ಕೆಲಸ ಮಾಡುವುದು. ಯಾರಲ್ಲಿ ಪಾವಿತ್ರ್ಯ ಹಾಗೂ ವಿಶೇಷ ವ್ಯಾಕುಲತೆಯಿರುವುದೋ ಅವರಲ್ಲಿ ಮಾತ್ರ ಈ ಶಕ್ತಿ ವ್ಯಕ್ತವಾಗುವುದು.

ಗುರುವಿನ ಮೂರನೇ ಕಾರ್ಯವೇ **ಗುರುಪರಂಪರೆಯೊಂದಿಗೆ ಶಿಷ್ಯನ ಸಂಬಂಧವನ್ನು ಕಲ್ಪಿಸಿಕೊಡುವುದು.** ಗುರು ಕೇವಲ ಮಂತ್ರವನ್ನಷ್ಟೇ ನೀಡುವುದಿಲ್ಲ; ಗುರುಪರಂಪರೆಯ ವಲಯದೊಂದಿಗೆ ಅವನು ಶಿಷ್ಯನನ್ನು ಸಂಬಂಧಿಸುವನು.

ಗುರುವಿನ ನಾಲ್ಕನೇ ಕಾರ್ಯವೇ, **ಶಿಷ್ಯನ ಅಹಂಕಾರವನ್ನು ಅವನು ನಾಶಮಾಡುವುದು.** ಗುರುವಿನ ಸೇವೆ ಮಾಡುವುದರಿಂದ ಶಿಷ್ಯನ ಅಹಂಕಾರ ನಾಶವಾಗುವುದು. ನಿಜವಾದ ಗುರುವಿನ ಸೇವೆ ಮಾಡುವವನಿಗೆ ಮಾತ್ರ ಇದು ತಿಳಿಯುವುದು.

**ಸಮಾಪ್ತಿ :** ದೇವತೆಯೆಂದರೆ ಅಗೋಚರವಾದ ಸತ್ಯವಾಗಿದೆ. ಅದನ್ನು ಇಂದ್ರಿಯಾತೀತವಾದ ನಾಮ, ರೂಪಗಳಿಂದ ವ್ಯಕ್ತಗೊಳಿಸಲಾಗುವುದು. ಸಾಮಾನ್ಯ ನಾಮ, ರೂಪಗಳಂತಲ್ಲದೆ, **ದೇವತಾರೂಪವು** ನಮಗೆ ಪರೋಕ್ಷ ಜ್ಞಾನವನ್ನು ಮಾತ್ರ ನೀಡುವುದು. ದೇವತೆಯ ನಾಮ ಮಂತ್ರದಲ್ಲಿರುವ ಶಬ್ದಗಳ ಸಂಗ್ರಹರೂಪವಲ್ಲ; ಅದನ್ನು ಮೂರ್ತೀಕರಿಸುವುದೂ ಸಾಧ್ಯವಿಲ್ಲ. ಅದರಲ್ಲಿ ಒಂದು ಅಜ್ಞಾತವಾದ ಅಂಶ ಉಳಿದಿರುವುದು. ಈಗ ಪ್ರಶ್ನೆ: ''ಮಂತ್ರಜಪವು ಅಜ್ಞಾತವಾಗಿರುವ ದೇವತೆಯ ಪ್ರತ್ಯಕ್ಷ ಅನುಭವವನ್ನು ಹೇಗೆ ಮಾಡಿಸುವುದು?''

ಮನಸ್ಸು ದೇವತೆಯ ಸ್ಪಂದನದೊಂದಿಗೆ ಸಮಾನವಾಗಿ ಸ್ಪಂದಿಸಬೇಕು. ಅಂಥ ಮಾನಸಿಕ ಸಹಸ್ಪಂದನೆಯು ನಮ್ಮ-ದೇವತೆಯ ನಡುವೆ ಉಂಟಾದಾಗ ದೇವತೆಯ ಕೃಪೆ ನಮ್ಮ ಮೇಲೆ ಹರಿದು ಬರುವುದು. ದೇವರ ಸ್ಪಂದನೆಯೊಂದಿಗೆ ಅಂಥ ಸಹಸ್ಪಂದನೆ, ಹೊಂದಾಣಿಕೆ ಉಂಟಾಗದಿದ್ದರೆ ನಾವು ಏಕಾಕಿಯಾಗುತ್ತೇವೆ, ದುಖಿತರಾಗುತ್ತೇವೆ. ಪಾವಿತ್ರ್ಯ, ವ್ಯಾಕುಲತೆಗಳಿಂದ ನಾವು ಮಂತ್ರ ಜಪ ಮಾಡಬೇಕು; ಮನಸ್ಸು ಅದರೊಂದಿಗೆ ಸ್ಪಂದಿಸುವಂತೆ ಮಾಡಬೇಕು.

ಇಂಥ ಆಧ್ಯಾತ್ಮಿಕ ಸಹಸ್ಪಂದನೆಯೊಂದಿಗೆ ಕುಂಡಲಿನಿಯು ಜಾಗೃತವಾದಾಗ ದೇವತೆಯ ದರ್ಶನವಾಗುವುದು. ಕೇವಲ ಜಾಗೃತಿಯಿಂದ ನಮಗೆ ನಮ್ಮ ಸ್ವರೂಪದ ಅರಿವಷ್ಟೇ ಉಂಟಾಗುವುದು. ❖

**''ಜಪ ಮಾಡುವುದಕ್ಕೆ ಶ್ರದ್ಧೆ ಅತಿ ಮುಖ್ಯ. ಪ್ರಾರಂಭದಲ್ಲಿ ಜಪ ಸ್ವಲ್ಪ ಯಾಂತ್ರಿಕವಾದರೂ ತೊಂದರೆಯಿಲ್ಲ. ಆದರೆ ಮಂತ್ರದಲ್ಲಿ ಶ್ರದ್ಧೆ ಇರಲೇಬೇಕು. ಪ್ರಾರಂಭಿಕರಲ್ಲಿ ಪ್ರಜ್ಞಾಕೇಂದ್ರವು ಮೇಲೆ ಕೆಳಗೆ ಬದಲಾಗುತ್ತಿರುತ್ತದೆ. ಇದರಿಂದ ಎಲ್ಲ ಸಾಧಕ ರಿಗೂ ತುಂಬ ಕಷ್ಟವಾಗುವುದು. ಅಪಾರ ತಾಳ್ಮೆಯಿಂದ ಪರಿ ಣಾಮ ಏನೇ ಆಗಲಿ ಲೆಕ್ಕಿಸದೆ ಸಾಧಕನು ಜಪ ಮಾಡುತ್ತ ಹೋಗ ಬೇಕು. ಯಶಸ್ಸನ್ನು ಪಡೆಯಲು ಇದೊಂದೇ ಮಾರ್ಗ.''**

**''ದಿವ್ಯನಾಮವು ಮನಸ್ಸಿಗೆ ಒಂದು ಆಸರೆಯನ್ನು ನೀಡುತ್ತದೆ. ಏನಾದರೂ ದೊಡ್ಡ ಕಷ್ಟ ಬಂದಾಗ ಶಾಂತವಾಗಿ ಕುಳಿತು ವಿಚಾರ ಮಾಡಬೇಕು ಮತ್ತು ಹೃತ್ಪೂರ್ವಕವಾಗಿ ಭಗವಂತನನ್ನು ಪ್ರಾರ್ಥಿಸಬೇಕು. ಭಗವಂತ ಎಂದರೆ ನಮ್ಮ ಆತ್ಮದ ಆತ್ಮವಾಗಿ ನಮ್ಮೊಳಗೆ ನೆಲೆಸಿರುವ ಪರಮ ಚೈತನ್ಯ. ಜಪವು ಒಂದು ಉತ್ತಮ ರೂಪದ ಸ್ವಾವಲಂಬನೆ. ಅದು ನಮ್ಮನ್ನು ಭಗವಂತನ ಹತ್ತಿರ ಹತ್ತಿರ ಕರೆದುಕೊಂಡು ಹೋಗುತ್ತದೆ.''**

*-ಸ್ವಾಮಿ ಯತೀಶ್ವರಾನಂದ, (ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ' ಗ್ರಂಥದಲ್ಲಿ)*


With Best Compliments From :

Dr. N. Chandrashekhar
Managing Partner

AADITHYA ADHIKARI HOSPITAL

Contour Road, Gokulam, Mysore – 570002
Tele : 2512532, 2513532, Mobile : 9900451766

50 beded Multi-Speciality hospital extends the following specialised services Round the clock

+ Cardiology, Diabetology + General Medicine, General Surgery + ENT, Opthalmology, Dental + Obstetrics & Gynaecology, Pediatrics + Labour Theatre, Neonatal Care Unit + Orthopaedics, Urology, Nephrology, Neurology + Nutrition & Dietics, Physiotheraphy, Radiology + Well Equipped Minor & Major O.T. + C-ARM & Laparscopic Surgeries + ICU, ICCU, Ventilator + Ultrasound Scanning, ECG, G.I. Endoscopy + Pulmonary Function Test available + 24 hours X-ray, Pathology, Pharmacy, Ambulance Service & Canteen services are available.

# ಭಾರತೀಯ ಆಧ್ಯಾತ್ಮಿಕತೆಯಲ್ಲಿ ನಾಮಜಪ ಮತ್ತು ನಾಮಮಹಿಮೆ

ಸ್ವಾಮಿ ಹರ್ಷಾನಂದ

**ಭಾರತೀಯ ಆಧ್ಯಾತ್ಮಿಕ ಪರಂಪರೆಯಲ್ಲಿ ನಾಮಜಪ, ನಾಮಮಹಿಮೆಗೆ ವಿಶಿಷ್ಟ ಸ್ಥಾನವಿದೆ. ಚಾರಿತ್ರಿಕವಾಗಿ ಈ ವಿಷಯವನ್ನು ಕುರಿತು ವಿದ್ವತ್ಪೂರ್ಣವಾಗಿ ವಿವರಿಸಿರುವ ಪರಮಪೂಜ್ಯ ಸ್ವಾಮೀಜಿಯವರು ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರು. ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಅಪಾರ ವಿದ್ವತ್ತನ್ನು ಹೊಂದಿರುವ ಸ್ವಾಮೀಜಿಯವರ ಹಲವಾರು ಪುಸ್ತಕಗಳು ಅತ್ಯಂತ ಪ್ರಸಿದ್ಧವಾಗಿವೆ. ಇವರು ಉತ್ತಮ ವಾಗ್ಮಿಗಳು ಮತ್ತು ಸಂಗೀತಗಾರರು ಕೂಡ ಹೌದು.**

ಸ್ವಾಮಿ ವಿವೇಕಾನದರು ಒಮ್ಮೆ ಘಂಟಾಘೋಷವಾಗಿ ಸಾರಿದರು, ''ಧರ್ಮವು ಭಾರತದ ಜೀವಾಳ. ಎಂದು ಅದು ಧರ್ಮವನ್ನು ತ್ಯಜಿಸುವುದೋ ಅಂದೇ ಅದು ನಾಶವಾಗುವುದು!''

ಇಲ್ಲಿ ಧರ್ಮಶಬ್ದದ ಅರ್ಥ ಆಧ್ಯಾತ್ಮಿಕತೆ. ಭಾರತದ ಮೂಲ ಆಧಾರ ಹಿಂದೂಧರ್ಮ, ಸನಾತನಧರ್ಮ. ಈ ಧರ್ಮವು ಪ್ರತಿಯೊಬ್ಬ ಮಾನವನ ಎದುರಿಗೆ ನಾಲ್ಕು ಪುರುಷಾರ್ಥಗಳನ್ನು - ಬಯಸಿ ಪಡೆಯಲು ಪ್ರಯತ್ನಿಸಬೇಕಾದ ಗುರಿಗಳನ್ನು - ಇಟ್ಟಿದೆ. ಅವೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ. ಇವುಗಳ ಅರ್ಥ: ಪ್ರಾಪಂಚಿಕ ಸುಖಭೋಗಗಳನ್ನು ಧರ್ಮದ ಎಲ್ಲೆಕಟ್ಟಿನಲ್ಲಿ ಅನುಭವಿಸು. ಆದರೆ ಜೀವನದ ಚರಮಲಕ್ಷ್ಯ ಮೋಕ್ಷ; ಪುನರ್ಜನ್ಮವನ್ನು ಪಡೆಯದೆ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದು.

ಈ ಮೋಕ್ಷವನ್ನು ಪಡೆಯಲು ಹಿಂದೂಧರ್ಮವು ಪ್ರಧಾನವಾಗಿ ಎರಡು ಸಾಧನಾಪಥಗಳನ್ನು ನಮ್ಮ ಮುಂದೆ ಇಟ್ಟಿದೆ : ಜ್ಞಾನಮಾರ್ಗ ಮತ್ತು ಭಕ್ತಿಮಾರ್ಗ.

ಜ್ಞಾನಮಾರ್ಗವು ಉಪನಿಷತ್ತುಗಳಲ್ಲಿ ಮುಖ್ಯವಾಗಿ ಉಪದೇಶಿಸಿರುವ ಸಾಧನಾಪಥ. ನಾವು ನಿಜವಾಗಿ ದೇಹೇಂದ್ರಿಯ ಮನ-ಆದಿಗಳನ್ನು ಮೀರಿರುವ ಸಚ್ಚಿದಾನಂದ. ಆದುದರಿಂದ ಅದಕ್ಕಾಗಿ ಗುರೂಪಸದನ ಶ್ರವಣಾದಿ ತ್ರಿತಯ ಸಾಧನೆಗಳ ಮೂಲಕ ಶ್ರಮಿಸಿ ಆ ಅನುಭವವನ್ನು ಪಡೆಯಬೇಕು.

ಆದರೆ ಇದು ಅತ್ಯಂತ ಕಠಿಣವಾದ ಮಾರ್ಗ.

ಇದಕ್ಕೆ ಪರ್ಯಾಯವಾಗಿರುವ ಮತ್ತೊಂದು ಮಾರ್ಗವೇ ಭಕ್ತಿಮಾರ್ಗ.

ಭಕ್ತಿಮಾರ್ಗವನ್ನು ಅರ್ಥಮಾಡಿಕೊಳ್ಳುವುದಕ್ಕೆ ಮುಂಚೆ ಕೆಲವು ಮೂಲಭೂತ-ತತ್ತ್ವಗಳನ್ನರಿಯಬೇಕು.

ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳು ಯಾವ ಪರವಸ್ತುವಿನಿಂದ ಆಗಿದೆಯೋ, ಯಾವ ಪರವಸ್ತುವು ಇವನ್ನು ಮೀರಿ ಸ್ವತಂತ್ರವಾಗಿಯೂ ಇರಬಲ್ಲದೋ ಅದನ್ನೇ ಬ್ರಹ್ಮ ಎಂದು ಶಾಸ್ತ್ರಗಳು ಕರೆದಿವೆ. ಸಚ್ಚಿದಾನಂದತ್ವವೇ ಅದರ ಸ್ವರೂಪ. ಆ ಬ್ರಹ್ಮಕ್ಕೆ ನಿರಾಕಾರ-ನಿರ್ಗುಣ ಮತ್ತು ಸಾಕಾರ-ಸಗುಣ ಎಂಬ ಎರಡು ರೂಪಗಳು ಅಥವಾ ಅಭಿವ್ಯಕ್ತಿಗಳು ಇವೆ.

ಜ್ಞಾನಮಾರ್ಗಕ್ಕೆ ಮೊದಲನೆಯದು ಆಧಾರವಾದರೆ ಭಕ್ತಿಮಾರ್ಗದ ಸಾರಸರ್ವಸ್ವ ಎರಡನೆಯದು.

ಈ ಸಾಕಾರ-ಸಗುಣ ತತ್ತ್ವವನ್ನು ಈಶ್ವರ, ಪರಮೇಶ್ವರ, ಪರಮಾತ್ಮ, ಭಗವಂತ ಇತ್ಯಾದಿ ಅನೇಕ ಹೆಸರುಗಳಿಂದ ಕರೆದಿದೆ. ಇತಿಹಾಸವೆನಿಸಿದ ರಾಮಾಯಣ-ಮಹಾಭಾರತಗಳಲ್ಲಿ , ವಿಶೇಷವಾಗಿ ಪುರಾಣಗಳಲ್ಲಿ, ಈ ಪರಮೇಶ್ವರನ ಹಲವಾರು ನಾಮಗಳನ್ನೂ, ರೂಪಗಳನ್ನೂ, ಅವತಾರಗಳನ್ನೂ ವಿಸ್ತಾರವಾಗಿ ವರ್ಣಿಸಿದೆ. ಈ ನಾಮ-ರೂಪಗಳು ಬೇರೆಬೇರೆಯಾಗಿ ಕಂಡರೂ ಆ ವಸ್ತು ಮಾತ್ರ ಒಂದೇ, ಪರಬ್ರಹ್ಮ ಅಥವಾ ಪರಮೇಶ್ವರ.

ಸಾಧಕನು ಈ ಪರಮೇಶ್ವರನ ಮೇಲಿಡುವ ಅತ್ಯಂತ ಹೆಚ್ಚಿನ ಪ್ರೇಮವೇ ಭಕ್ತಿ.

ಎಣ್ಣೆಯನ್ನು ಒಂದು ಪಾತ್ರೆಯಿಂದ ಮತ್ತೊಂದಕ್ಕೆ ಸುರಿಯುವಾಗ ಹೇಗೆ ಧಾರಾಕಾರವಾಗಿ ಹರಿಯುತ್ತದೆಯೋ, ಹಾಗೆಯೇ ಭಕ್ತಿಪೂರಿತ ಮನಸ್ಸು ಭಗವಂತನ ಕಡೆಗೆ ಹರಿದು - ನದಿಯು ಸಮುದ್ರದಲ್ಲಿ ಐಕ್ಯವಾಗುವಂತೆ - ಅವನಲ್ಲಿ ಒಂದಾದಾಗ ಅದನ್ನೇ ಸಮಾಧಿ ಎಂದೂ, ಸಾಕ್ಷಾತ್ಕಾರ ಎಂದೂ ಕರೆಯುತ್ತಾರೆ. ಇದರ ಫಲವೇ ಮೋಕ್ಷ ಅಥವಾ ಮುಕ್ತಿ.

ಈ ಭಕ್ತಿಯು ಇತ್ತೀಚಿನ ಭಾವನೆಯಲ್ಲ ಮತ್ತು ನೆನ್ನೆ ಮೊನ್ನೆಯ ಮತಧರ್ಮಗಳಿಂದ ಎರವಲು ಪಡೆದದ್ದೂ ಅಲ್ಲ. ಋಗ್ವೇದ

ದಲ್ಲಿಯೇ (ಕ್ರಿ. ಪೂ. ೬೦೦೦)*(೧.೧೫೬.೨ ಮತ್ತು ೮.೧.೬)* ಭಗವಂತನ ನಾಮಶ್ರವಣದ ಮತ್ತು ಶರಣಾಗತಿಯ ಬಗ್ಗೆ ಉಲ್ಲೇಖ ವಿದೆ. ಹಾಗೆಯೇ ಕೆಲವು ಉಪನಿಷತ್ತುಗಳಲ್ಲಿಯೂ (*ಕಠ ೨.೨೩; ಶ್ವೇತಾಶ್ವತರ ೬.೧೮, ೬.೨೩)* ಭಕ್ತಿಭಾವನೆಯನ್ನು ಕಾಣುತ್ತೇವೆ. *ಭಗವದ್ಗೀತೆ* ಯಲ್ಲಂತೂ (ಕ್ರಿ. ಪೂ. ೩೧೦೨) ಭಗವದ್ಭಕ್ತಿ, ಉಪಾಸನೆಗಳ ಪ್ರಾಚುರ್ಯವನ್ನೇ ನೋಡಬಹುದು.

ಭಕ್ತಿಶಾಸ್ತ್ರದ ಕೋಶವೆಂದೇ ಭಾವಿಸಲ್ಪಟ್ಟಿರುವ ಭಾಗವತದಲ್ಲಂತೂ ಭಕ್ತಿಯ ಪ್ರವಾಹವೇ ಹರಿದಿದೆಯೆನ್ನಬಹುದು. ಅದರಲ್ಲಿ ಬರುವ ಪ್ರಹ್ಲಾದನ ಕಥೆಯಲ್ಲಿ *(೭.೫, ೨೩, ೨೪)* ನವವಿಧ ಭಕ್ತಿಯನ್ನು ವಿವರಿಸಿದೆ. ಅವಾವುವೆಂದರೆ: ಶ್ರವಣ, ಕೀರ್ತನ, ವಿಷ್ಣುವಿನ ಸ್ಮರಣ ಮತ್ತು ಪಾದಸೇವನ, ಅರ್ಚನ, ವಂದನ, ದಾಸ್ಯಭಾವ, ಸಖ್ಯಭಾವ ಮತ್ತು ಆತ್ಮಸಮರ್ಪಣ. ಇದರಲ್ಲಿ ಹರಿನಾಮದ ಪಾತ್ರ ಮಹತ್ತರವಾದುದು.

*ಅಧ್ಯಾತ್ಮರಾಮಾಯಣ*ದ (೧೪ನೆಯ ಶತಮಾನ) ಅರಣ್ಯಕಾಂಡದಲ್ಲಿಯೂ *(೧೦.೨೨–೨೭)* ಮತ್ತೊಂದು ರೀತಿಯ ನವವಿಧ ಭಕ್ತಿಯನ್ನು ವಿವರಿಸಿದೆ. ಇದರಲ್ಲಿ ಏಳನೆಯದೇ ಮಂತ್ರೋಪಾಸನೆ.

ಭಕ್ತಿಶಾಸ್ತ್ರದ ಇನ್ನೊಂದು ಜನಪ್ರಿಯಗ್ರಂಥವೆಂದರೆ ನಾರದ ಭಕ್ತಿಸೂತ್ರಗಳು. ಇದರ ೮೨ನೆಯ ಸೂತ್ರದಲ್ಲಿ ಭಕ್ತಿಯ ಹನ್ನೊಂದು ಪ್ರಕಾರಗಳನ್ನು ಹೇಳಿದೆ. ಇದರಲ್ಲಿ ಬರುವ ನಾಲ್ಕನೆಯ ಬಗೆಯ ಭಕ್ತಿಯೇ ಸ್ಮರಣಾಸಕ್ತಿ. ನಾಮಜಪ ಇದರ ಪ್ರಧಾನಾಂಶ.

ಈ ಪ್ರಪಂಚದಲ್ಲಿ ಪ್ರತಿಯೊಬ್ಬ ಮಾನವವ್ಯಕ್ತಿಗೆ ಒಂದು ಹೆಸರಿರುತ್ತದೆ. ಅದನ್ನು ಹೆತ್ತವರಾಗಲಿ ಅಥವಾ ಸಾಕಿದವರಾಗಲಿ ಕೊಟ್ಟಿರಬಹುದು ಅಥವಾ ಅವನೇ ತನಗಿಷ್ಟಬಂದಂತೆ ಬದಲಾಯಿಸಿಕೊಳ್ಳಬಹುದು.

ನಾವು ಯಾರದ್ದಾದರೂ ಹೆಸರನ್ನು ಹಿಡಿದು ಕರೆದರೆ ಅವರು ಓಗೊಡುತ್ತಾರೆ, ಬರುತ್ತಾರೆ. ವ್ಯಕ್ತಿ ಇಲ್ಲದಿದ್ದಾಗ ಅವರ ಚಿತ್ರ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ.

ಆದರೆ ಆ ಹೆಸರಿಗೂ, ಆ ವ್ಯಕ್ತಿಗೂ ಇರುವ ಸಂಬಂಧವು ಶಾಶ್ವತವಲ್ಲ. ಆ ವ್ಯಕ್ತಿಯೇ ಅದನ್ನು ಬದಲಾಯಿಸಿಕೊಳ್ಳಬಹುದು. ಇತರರೂ ಅದೇ ಹೆಸರನ್ನಿಟ್ಟುಕೊಳ್ಳಬಹುದು.

ಆದರೆ ನಮ್ಮ ಸನಾತನಧರ್ಮದ ದೇವದೇವಿಯರ ಅಥವಾ ದೇವತೆಗಳ ವಿಷಯದಲ್ಲಿ ಹಾಗಲ್ಲ. ಪ್ರತಿಯೊಂದು ದೇವತೆಯ ರೂಪಕ್ಕೂ ಅದರ ನಾಮಕ್ಕೂ ಅವಿನಾಭಾವ ಸಂಬಂಧವಿರುತ್ತದೆ.

ಕೆಲವು ಸಲ ಒಂದೇ ದೇವತೆಗೆ ಹಲವು ನಾಮಗಳಿರಬಹುದು. ಉದಾಹರಣೆಗೆ – ವಿಷ್ಣುವಿಗೆ ನಾರಾಯಣ, ಶ್ರೀಹರಿ, ಕೇಶವ, ಪದ್ಮನಾಭ ಇತ್ಯಾದಿ.

ಇನ್ನು ಕೆಲವು ಸಲ ಒಂದೇ ಹೆಸರು ಬೇರೆಬೇರೆ ದೇವತೆಗಳಿಗೂ ಆಗಬಹುದು. ಉದಾಹರಣೆಗೆ – ಶರ್ವ, ಶಿವ, ಈಶ್ವರ ಇವು ಹರಿಹರರಿಬ್ಬರಿಗೂ ಅನ್ವಯಿಸುತ್ತವೆ.

ಏನೇ ಇರಲಿ, ಅದನ್ನು ನಿರ್ಣಯಿಸುವವರು ನಾವಲ್ಲ , ನಮ್ಮ ಶಾಸ್ತ್ರಗ್ರಂಥಗಳು.

ಭಕ್ತಿಮಾರ್ಗದ ಗ್ರಂಥಗಳು ವಿಧಿಸಿರುವ ಪ್ರಕಾರ ಮೋಕ್ಷವನ್ನು ಪಡೆಯಲಿಚ್ಛಿಸುವ ಸಾಧಕನು ತನಗಿಷ್ಟವಾದ ದೇವತೆಯೊಂದನ್ನು (ಇದನ್ನು 'ಇಷ್ಟದೇವತೆ' ಎಂದು ಕರೆಯುತ್ತಾರೆ) ಉಪಾಸನೆಗಾಗಿ ಆರಿಸಿಕೊಂಡು ಆ ದೇವತೆಯ ನಾಮವನ್ನು (ಇದನ್ನು 'ಮಂತ್ರ' ಎಂದು ಕರೆಯುತ್ತಾರೆ)ಯೋಗ್ಯ ಗುರುವಿನಿಂದ ದೀಕ್ಷೆಯನ್ನು ಪಡೆದು ಸಾಧನೆಯನ್ನು ಮಾಡಬೇಕು.

ಯಾವ ದೇವತೆಯ ಯಾವ ನಾಮದ ಮೂಲಕ ಸಾಧನೆ ಮಾಡಿದರೂ ಕೊನೆಗೆ ಸಿಗುವ ಅನುಭವ ಮಾತ್ರ ಒಂದೇ ಸಚ್ಚಿದಾನಂದ ಅಥವಾ ಬ್ರಹ್ಮಾನಂದ; ಏಕೆಂದರೆ ಈ ಎಲ್ಲ ದೇವತೆಗಳೂ ಒಂದೇ ಪರಬ್ರಹ್ಮವಸ್ತುವಿನ ವಿವಿಧ ಮುಖಗಳು. ನಾಲ್ಕಾರು ಬಾಗಿಲುಗಳಿರುವ ಕೋಣೆಯೊಂದನ್ನು ನಾವು ಯಾವ ಬಾಗಿಲಿನಿಂದ ಪ್ರವೇಶಿಸಿದರೂ ಅದರ ಮಧ್ಯಕ್ಕೆ ಹೋಗುವುದಿಲ್ಲವೇ, ಹಾಗೆಯೇ.

ಸಾಕಾರ–ಸಗುಣೋಪಾಸನೆಯಲ್ಲಿ ಹಲವು ಸಂಪ್ರದಾಯಗಳಿದ್ದರೂ, ಹೃದಯಪ್ರದೇಶದಲ್ಲಿ ಕೆಂಪುಬಣ್ಣದ ಅಷ್ಟದಲಪದ್ಮವಿದೆಯೆಂದೂ ಅದರ ಮೇಲೆ ಇಷ್ಟದೇವತೆಯು ಆಸೀನವಾಗಿರುವುದೆಂದೂ ಭಾವಿಸಿ ಧ್ಯಾನ ಮಾಡುವ ಕ್ರಮವು ಹೆಚ್ಚು ಪ್ರಚಾರದಲ್ಲಿದೆ ಎನ್ನಬಹುದು.

ಗುರುವಿನಿಂದ ದೀಕ್ಷೆಯಲ್ಲಿ ಸ್ವೀಕರಿಸುವ ನಾಮವು ಮಂತ್ರವೆನ್ನಿಸಿಕೊಳ್ಳಲು ಕೆಲವು ಸಾಮಾನ್ಯ ಲಕ್ಷಣಗಳಿರಬೇಕು. ಪ್ರಾರಂಭದಲ್ಲಿ ಪ್ರಣವ, ಅನಂತರದಲ್ಲಿ ಚತುರ್ಥೀ ವಿಭಕ್ತಿಯಲ್ಲಿ ದೇವತೆಯ ನಾಮ, ಕೊನೆಯಲ್ಲಿ 'ನಮಃ' ಎಂಬ ಪದ. ಉದಾಹರಣೆಗೆ – **ಓಂ ಶಿವಾಯ ನಮಃ; ಓಂ ಗಣೇಶಾಯ ನಮಃ.**

ಇದು ವೈದಿಕಮಂತ್ರಗಳ ರೀತಿ. ತಾಂತ್ರಿಕಮಂತ್ರಗಳಲ್ಲಿ ಕೆಲವು ವಿಶೇಷ ಅಕ್ಷರಗಳನ್ನು ಸೇರಿಸುವುದಲ್ಲದೆ ಕೊನೆಯಲ್ಲಿ ಸ್ವಾಹಾ, ಸ್ವಧಾ, ವಷಟ್, ವೌಷಟ್ ಇತ್ಯಾದಿಗಳನ್ನು – ನಮಃ ಎಂಬುದರ ಬದಲು – ಸೇರಿಸುವುದುಂಟು.

ಈ ವಿಶೇಷ ಅಕ್ಷರಗಳಿಗೆ ಬೀಜಾಕ್ಷರಗಳೆಂದು ಹೆಸರು. ಅವುಗಳಲ್ಲಿ ಆಯಾ ದೇವತೆಯ ಶಕ್ತಿ ಅಡಗಿರುವುದೆಂತಲೂ, ಅವುಗಳ ಜಪದಿಂದ – ಬೀಜದಿಂದ ಗಿಡ ಬರುವ ಹಾಗೆ – ಅದರ ಆವಿರ್ಭಾವವಾಗುವುದೆಂತಲೂ ತಂತ್ರಗ್ರಂಥಗಳು ಸಾರುತ್ತವೆ. ಉದಾಹರಣೆಗೆ – **ಗಂ ಗಣೇಶಾಯ ನಮಃ**. ಇಲ್ಲಿ **ಗಂ** ಎಂಬುದು ಗಣಪತಿದೇವತೆಯ ಬೀಜಾಕ್ಷರ. ಸಾಮಾನ್ಯವಾಗಿ ಒಂದು ದೇವತೆಯ ಹೆಸರಿನ ಮೊದಲನೆಯ ಅಕ್ಷರಕ್ಕೆ ಅನುಸ್ವಾರವನ್ನು ಸೇರಿಸಿದರೆ ಅದು ಆ ದೇವತೆಯ ಬೀಜಾಕ್ಷರವಾಗುತ್ತದೆ. ಉದಾಹರಣೆಗೆ ದುರ್ಗೆಗೆ **ದುಂ**, ಧನ್ವಂತರಿಗೆ **ಧಮ್.**

ಇದಲ್ಲದೆ ಬೇರೆ ಬೇರೆ ದೇವತೆಗಳಿಗೆ ಬೇರೆ ಬೇರೆ ಬೀಜಾಕ್ಷರಗಳಿರುತ್ತವೆ. ಮತ್ತು ಒಂದೇ ಬೀಜಾಕ್ಷರವು ಅನೇಕ ದೇವತೆಗಳನ್ನು ಪ್ರತಿನಿಧಿಸಲೂ ಬಹುದು. ಉದಾಹರಣೆಗೆ – **ಗ** ಎಂಬ ಬೀಜಾಕ್ಷರವು ಗೌರಿ, ಗಂಗಾ, ಗಣೇಶ, ಸರಸ್ವತೀ ಮುಂತಾದ ೩೩ ದೇವತೆಗಳ ಬೀಜವಾಗಬಹುದು.

ಮಂತ್ರವೊಂದನ್ನು ದೀಕ್ಷೆಯಲ್ಲಿ ಸ್ವೀಕರಿಸಿದಮೇಲೆ ಅದನ್ನು ಸುಮ್ಮನೆ ನೇರವಾಗಿ ಜಪಿಸುವಂತಿಲ್ಲ. ಅದಕ್ಕೂ ಒಂದು ಕ್ರಮವುಂಟು. ಸಾಮಾನ್ಯವಾಗಿ ಆ ಕ್ರಮವು ಹೀಗಿರುತ್ತದೆ:

೧. **ಋಷ್ಯಾದಿನ್ಯಾಸ :** ಇದರಲ್ಲಿ ಆ ಮಂತ್ರವು ಯಾವ ಋಷಿಯಿಂದ ಮೊದಲಬಾರಿಗೆ ಪ್ರಚಲಿತವಾಯಿತು, ಅದು ಯಾವ ಛಂದಸ್ಸಿನಲ್ಲಿದೆ, ಅದರ ದೇವತೆ ಯಾವುದು ಮತ್ತು ಅದರ ವಿನಿಯೋಗ (ಏತಕ್ಕಾಗಿ ಅದರ ಜಪ)– ಇವನ್ನು ಹೇಳಲಾಗುತ್ತದೆ.

೨. **ಕರನ್ಯಾಸ ಮತ್ತು ಷಡಂಗನ್ಯಾಸ :** ಇದರಲ್ಲಿ ಮಂತ್ರದ ಬೀಜಾಕ್ಷರ ವನ್ನೋ ಅಥವಾ ಮಂತ್ರದ ಭಾಗಗಳನ್ನೋ ಉಪಯೋಗಿಸಿಕೊಂಡು ಕೈಬೆರಳುಗಳನ್ನೂ ಮತ್ತು ಹೃದಯ, ತಲೆ ಮೊದಲಾದ ಆರು ಅಂಗ ಗಳನ್ನು ಶುದ್ಧೀಕರಿಸಬೇಕು.

೩. **ಧ್ಯಾನ :** ಈಗ ಆ ದೇವತೆಯ ರೂಪವನ್ನು ವಿವರಿಸುವ ಧ್ಯಾನ ಶ್ಲೋಕವನ್ನು ಪಠಿಸಬೇಕು. ಜೊತೆಯಲ್ಲಿಯೇ ಆ ದೇವತೆಯ ರೂಪ ವನ್ನು ನೆನೆಸಿಕೊಳ್ಳಬೇಕು.

೪. **ಮಂತ್ರಜಪ :** ಅನಂತರ ಮಂತ್ರವನ್ನು ಜಪಿಸಬೇಕು. ಜಪದ ಸಂಖ್ಯೆ ಒಂದು ಮಾಲೆ (೧೦೮) ಗಿಂತ ಕಡಮೆಯಿರಬಾರದು. ಮೊದಲೇ ನಿಗದಿಮಾಡಿಕೊಂಡ ಸಂಖ್ಯೆಯಷ್ಟು ಇರಬೇಕು. ಇದು ೧೦೮ರ ಅಪವರ್ತವಾಗಿರಬೇಕು (೧ ಮಾಲೆ, ೫ ಮಾಲೆ ಇತ್ಯಾದಿ).

೫. **ಫಲಸಮರ್ಪಣೆ :** ಇದನ್ನು ಅದಕ್ಕಾಗಿ ಸಂಪ್ರದಾಯದಲ್ಲಿ ಪ್ರಚಲಿತವಾಗಿರುವ ಶ್ಲೋಕದ ಮೂಲಕ ಮಾಡಬಹುದು. ಅಥವಾ ಕೇವಲ ಮಾನಸಿಕವಾಗಿಯೂ ಮಾಡಬಹುದು.

ಮಂತ್ರಜಪದಲ್ಲಿ ಮೂರು ವಿಧ: **ವಾಚಿಕ** (ಗಟ್ಟಿಯಾಗಿ ಹೇಳುವುದು), **ಉಪಾಂಶು** (ಪಿಸುಮಾತಿನಲ್ಲಿ ಉಚ್ಚರಿಸುವುದು) ಮತ್ತು **ಮಾನಸಿಕ** (ಮನಸ್ಸಿನಲ್ಲೇ ಅನುಸಂಧಾನ ಮಾಡುವುದು).

ಈ ಮೂರರಲ್ಲಿ **ಮಾನಸಿಕ ಜಪ**ವೇ ಅತ್ಯುತ್ತಮ.

ಮಂತ್ರಗಳ ಬಗ್ಗೆ ಇನ್ನೂ ಕೆಲವು ವಿಷಯಗಳನ್ನು ಇಲ್ಲಿ ಉಲ್ಲೇಖಿಸ ಬಹುದು. ಮಂತ್ರಗಳಲ್ಲಿ ಅಕ್ಷರಸಂಖ್ಯೆಯು ಒಂದರಿಂದ ಪ್ರಾರಂಭಿಸಿ ಬಹುಸಂಖ್ಯೆಯವರೆಗೂ ಹೋಗಬಹುದು. ಇವನ್ನು **ಮಾಲಾಮಂತ್ರ** ಗಳೆಂದು ಕರೆಯುತ್ತಾರೆ.

ವಿಶೇಷ ಐಹಿಕ ಫಲಗಳನ್ನು ಪಡೆಯಲೋಸುಗವೇ ಕೆಲವು ಮಂತ್ರಗಳಿರುತ್ತವೆ. ಇಂತಹ ಮಂತ್ರಗಳನ್ನು ಪ್ರಯೋಗಿಸಬೇಕಾದರೆ ಪುರಶ್ಚರಣವೆಂಬ ಐದು ಅಂಗಗಳುಳ್ಳ ಕ್ರಮವನ್ನು ಅನುಸರಿಸಬೇಕಾ ಗುವುದು. ಇದನ್ನೂ ಗುರುವಿನಿಂದ ಅಥವಾ ಬಲ್ಲವರಿಂದ ಕಲಿಯ ಬೇಕು. ಆದರೆ ಸಾಧಕನು ತನಗೆ ಗುರುವಿತ್ತಿರುವ ಮಂತ್ರವನ್ನೇ ಆವಶ್ಯಕತೆಯಿರುವಾಗ ಸಕಾಮ ದೃಷ್ಟಿಯಿಂದಲೂ ಜಪಿಸಬಹುದು.

ಭಗವನ್ನಾಮದಲ್ಲಿ ತುಂಬ ಮಹಿಮೆಯಿದೆ ಎಂದು ಸಂತರು ಮಹಾತ್ಮರು ಸಾರಿ ಹೇಳಿದ್ದಾರೆ. **ನಾಮ** (ಮಂತ್ರ) ಮತ್ತು **ನಾಮಿ** (ಮಂತ್ರದಿಂದ ನಿರ್ದಿಷ್ಟವಾದ ದೇವತೆ) ಒಂದೇ ಎಂದು ಶ್ರೀರಾಮ ಕೃಷ್ಣ ಪರಮಹಂಸರೆಂದಿರುತ್ತಾರೆ. ಎಂದರೆ ಶ್ರದ್ಧಾಭಕ್ತಿಗಳಿಂದ ನಾಮ ಜಪವನ್ನು ಮಾಡಿದರೆ ಅದರ ಮೂಲಕ ಭಗವಂತನನ್ನು ಸಾಕ್ಷಾತ್ಕರಿಸಿ ಕೊಳ್ಳಬಹುದು, ಎಂದಾಯಿತು.

ಪುರಂದರದಾಸರಂತೂ ತಮ್ಮ **'ನೀನ್ಯಾಕೋ ನಿನ್ನ ಹಂಗ್ಯಾಕೋ'** ಎಂಬ ಸೊಗಸಾದ ಹಾಡಿನಲ್ಲಿ ಗಜೇಂದ್ರ, ಧ್ರುವ, ಪ್ರಹ್ಲಾದ, ದ್ರೌಪದೀ ಮೊದಲಾದವರ ದೃಷ್ಟಾಂತಗಳಿಂದ ಇದನ್ನು ಸಾಧಿಸಿ ತೋರಿಸಿದ್ದಾರೆ.

ಚಾರಿತ್ರಿಕ ಯುಗದಲ್ಲೂ ತುಳಸೀದಾಸ, ಶ್ರೀಕೃಷ್ಣಚೈತನ್ಯ, ಸಮರ್ಥ ರಾಮದಾಸರು, ಇತ್ತೀಚಿನ ಬ್ರಹ್ಮಚೈತನ್ಯ ಮಹಾರಾಜರು, ಪರಮಹಂಸರ ಶಿಷ್ಯೆ ಅಘೋರಮಣೀದೇವೀ ಮೊದಲಾದವರು ಕೇವಲ ನಾಮಜಪದಿಂದಲೇ ಸರ್ವವನ್ನೂ ಪಡೆದುಕೊಂಡರು.

ಭಗವಂತನು ಗೀತೆಯಲ್ಲಿ *(೧೦.೨೫)* **'ಯಜ್ಞಾನಾಂ ಜಪ ಯಜ್ಞೋಽಸ್ಮಿ'** ಎಂದು ಹೇಳಿರುತ್ತಾನೆ. ಅದನ್ನು ಸಮರ್ಥಿಸು ವಂತೆಯೋ ಏನೋ ಇಂದಿಗೂ ಕೂಡ ಸಹಸ್ರಾರು ಸಂಖ್ಯೆಯಲ್ಲಿ ಭಕ್ತರು, ವಿಶೇಷವಾಗಿ, ರಾಮನಾಮಜಪದಲ್ಲಿ ಲಿಖಿತ ರಾಮನಾಮ ಜಪಯಜ್ಞದಲ್ಲಿ ಭಾಗವಹಿಸುತ್ತಿದ್ದಾರೆ. ಇಂತಹ ಲಿಖಿತ ಜಪಯಜ್ಞಕ್ಕೆ ಶಾಸ್ತ್ರಾಧಾರವೂ ಇದೆ.

**ನಾಮ** ಮತ್ತು **ನಾಮಿ** ಒಂದೇ. ಎಂದರೆ, ಒಂದು ದೇವತೆಯ ನಾಮದಲ್ಲಿ ಆ ದೇವತೆಯ ರೂಪವು ಸೂಕ್ಷ್ಮರೂಪದಲ್ಲಿ ಅಡಗಿದೆ ಎಂದಾಯಿತು. ಹಾಗಾದಮೇಲೆ ಆ ನಾಮದ ಜಪವನ್ನು ಮಾಡುತ್ತಾ ಹೋದ ಹಾಗೆಲ್ಲ ಆ ಸಚೇತನ ರೂಪವು ಹೃದಯಾಕಾಶದಲ್ಲಿ ಪ್ರಕಟ ವಾಗುತ್ತದೆ. ಇದು ಹೇಗಾಗುತ್ತದೆ ಎಂಬುದನ್ನು ವಿವರಿಸಲು ಪ್ರಯತ್ನಿಸಬಹುದು.

*ತೈತ್ತಿರೀಯ ಉಪನಿಷತ್ತಿ*ನ ಪ್ರಕಾರ *(೨.೧)* ಆತ್ಮವಸ್ತುವಿನಿಂದ ಜಗತ್ತು ಅಭಿವ್ಯಕ್ತವಾಗುವಾಗ ಬರುವ ಮೊಟ್ಟಮೊದಲ ಭೌತಿಕ ವಸ್ತುವೇ ಆಕಾಶ ಎಂಬ ತನ್ಮಾತ್ರ ಅಥವಾ ಸೂಕ್ಷ್ಮಭೂತ. ಇದರ ಮೂಲಭೂತ ಗುಣವೇ ಶಬ್ದ ಅಥವಾ ಸ್ಪಂದನ. ಎಂದರೆ ಅತ್ಯಂತ ಸೂಕ್ಷ್ಮವಾದ ಅಣುವಂತಿರುವ ಈ ಆಕಾಶತತ್ತ್ವವು ಸದಾ ಚಾಲನೆಗೆ ಅವಕಾಶವೀಯುತ್ತದೆ. (ಆಕಾಶವೆಂದರೆ ಇಲ್ಲಿ ಖಾಲಿಜಾಗವೆಂದು ಅರ್ಥವಲ್ಲ. ಅದು ಪಂಚಭೂತಗಳಲ್ಲಿ ಮೊದಲನೆಯ ವಸ್ತು.)

ಸಾಧಕನು ತನ್ನ ಹೃದಯದಲ್ಲಿ ತನ್ನ ಕಲ್ಪನೆಗನುಸಾರವಾಗಿ ಇಷ್ಟ ದೇವತೆಯನ್ನು ಭಾವಿಸಿಕೊಂಡು ನಾಮಮಂತ್ರವನ್ನು ಜಪಿಸುತ್ತಿರು ವಾಗ ಅದರಿಂದುಂಟಾದ ಸ್ಪಂದನವು ಹೃದಯಾಕಾಶ ತತ್ತ್ವದ ಮೇಲೆ ಪ್ರಭಾವ ಬೀರಿ ಅದು ಕ್ರಮೇಣ ನಾಮದ ನಿರ್ದಿಷ್ಟವಾದ ರೂಪವನ್ನು ಪಡೆಯುತ್ತದೆ. ಜಪವು ಪೂರ್ಣರೂಪದಲ್ಲಿ ಪ್ರಭಾವಶಾಲಿಯಾದಾಗ ದೇವತೆಯ ಸಾಕ್ಷಾತ್ಕಾರವಾಗುತ್ತದೆ ಎನ್ನಬಹುದು.

ಕಳೆದ ಇಪ್ಪತ್ತು ವರ್ಷಗಳಲ್ಲಿ ಭಾರತದ ವಿಜ್ಞಾನ–ತಂತ್ರಜ್ಞಾನಗಳ ಅಭೂತಪೂರ್ವ ಬೆಳವಣಿಗೆಯ ಫಲವಾಗಿ ಜನ ಸಾಮಾನ್ಯರ ಜೀವನ ಅಸ್ತವ್ಯಸ್ತವಾಗಿದೆ. ''ಸಾಯುವುದಕ್ಕೂ ಪುರುಸೊತ್ತಿಲ್ಲ'' ಎನ್ನುವಂತೆ ಸತತ ಕ್ರಿಯಾಶೀಲರಾದ ಜನರಿಗೆ ಇಂದು ಅತ್ಯಂತ ಆವಶ್ಯಕವಾಗಿರು ವುದು ಮನಶ್ಶಾಂತಿ. ಇದನ್ನು ಪಡೆಯಲು ಅವರು ಉತ್ಸುಕರಾಗಿದ್ದರೂ ಯೋಗ ಧಾರ್ಮಿಕ ಕ್ರಿಯಾಕಲಾಪಗಳೇ ಮೊದಲಾದ ಸಾಧನಗಳನ್ನು ಅನುಸರಿಸಲು ಸಮಯವಾಗಲಿ ಸಮಾಧಾನವಾಗಲಿ ಅವರಲ್ಲಿಲ್ಲ.

ಇಂಥವರಿಗೆ ಇರುವ ಏಕೈಕ, ಆದರೂ ಅತ್ಯಂತ ಪರಿಣಾಮಕಾರಿ ಯಾದ, ಮಾರ್ಗವೆಂದರೆ ಭಗವನ್ನಾಮಜಪ. ಇದು Instant pill ಅಥವಾ injection ನಂತೆ ಕೂಡಲೇ ಕೆಲಸ ಮಾಡುತ್ತದೆ. ಆದುದ ರಿಂದಲೇ ಮಠಗಳು ಮತ್ತು ಹಿಂದೂ ಧಾರ್ಮಿಕ ಸಂಸ್ಥೆಗಳು ಭಗವನ್ನಾಮ ಸಂಕೀರ್ತನೆ, ಜಪಯಜ್ಞಗಳಂತಹ ಕಾರ್ಯಕ್ರಮಗಳನ್ನು ಹೆಚ್ಚು ಹೆಚ್ಚಾಗಿ– ಆದರೆ ಪರಿಣಾಮಕಾರಿಯಾಗಿ– ನಡೆಸುವುದೊಳ್ಳೆಯದು. ❖



# ಮಂತ್ರದೀಕ್ಷೆ ಹಾಗೂ ಆಧ್ಯಾತ್ಮಿಕ ಸಾಧನೆಯಲ್ಲಿ ನಾಮದ ಮಹಿಮೆ

**ಸ್ವಾಮಿ ರಾಘವೇಶಾನಂದ**

**ಮಂತ್ರದೀಕ್ಷೆ**
**ಎಲ್ಲ ಆಧ್ಯಾತ್ಮಿಕ ಸಾಧನೆಗಳಿಗೆ ಅತ್ಯಂತ ಅಗತ್ಯವಾದ ಒಂದು ಆಚರಣೆ. ಇದರ ಮಹತ್ವ, ಹಿನ್ನೆಲೆ, ಹಾಗೂ ಪರಂಪರೆ ಈ ಕುರಿತು ಸಂಕ್ಷಿಪ್ತ ಪರಿಚಯ ಮಾಡಿ ಕೊಟ್ಟಿರುವ ಪೂಜ್ಯ ಸ್ವಾಮೀಜಿಯವರು ಉದಕಮಂಡಲ ರಾಮಕೃಷ್ಣ ಮಠದ ಮುಖ್ಯಸ್ಥರು. ಉತ್ತಮ ವಾಗ್ಮಿಗಳು ಮತ್ತು ಸಂಘಟಕರಾಗಿರುವ ಸ್ವಾಮೀಜಿಯವರು ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ.**

**ಮೊ**ದಲು ನಾವು ಮಂತ್ರ ಎಂದರೇನು ಎಂದು ತಿಳಿಯಬೇಕು. **'ಮನನಾತ್ ತ್ರಾಯತೇ ಇತಿ ಮಂತ್ರಃ'** ಎಂದರೆ ಗುರುವು ಯಾವುದನ್ನು ಮಂತ್ರ ಎಂದು ಕೊಡುತ್ತಾನೋ, ಅದನ್ನು ಸತತವಾಗಿ ಮನನ ಮಾಡುವುದರಿಂದ ಅದು ನಮ್ಮನ್ನು ಎಲ್ಲ ಆಪತ್ತುಗಳಿಂದಲೂ ರಕ್ಷಿಸುತ್ತದೆ ಎಂದರ್ಥ. ಮಂತ್ರೋಪದೇಶ ಪಡೆದ ಮೇಲೆ ಶಿಷ್ಯನು ಆ ಮಂತ್ರವನ್ನು ತನ್ನ ಗುರುವನ್ನು ಬಿಟ್ಟು ಬೇರಾರಿಗೂ ಯಾವ ಕಾರಣಕ್ಕೂ ಹೇಳಬಾರದು. ಅಲ್ಲದೆ, ಪ್ರತಿಯೊಂದು ಮಂತ್ರಕ್ಕೂ ಅದ್ಭುತವಾದ ಶಕ್ತಿಯಿರುತ್ತದೆ. ಅದು ಆಲದ ಮರದ ಬೀಜದಂತೆ. ಅದು ಅತ್ಯಂತ ಚಿಕ್ಕದು. ಆದರೆ ಅದನ್ನು ಭೂಮಿಯಲ್ಲಿ ಹಾಕಿ, ನೀರು ಗೊಬ್ಬರ ಹಾಕಿ ಬೆಳೆಸಿದರೆ ಅದಕ್ಕೆ ದೊಡ್ಡ ವೃಕ್ಷವಾಗುವ ಸಾಮರ್ಥ್ಯವಿರುತ್ತದೆ. ಹಾಗೆಯೇ ಮಂತ್ರಕ್ಕೂ ಸೂಕ್ಷ್ಮ ಶಕ್ತಿಯುಂಟು. ಅದನ್ನು ಸತತವಾಗಿ ಜಪ ಮಾಡುವುದರಿಂದ ಅದರ ಶಕ್ತಿ ಅಭಿವ್ಯಕ್ತವಾಗುತ್ತದೆ.

ಗುರುವಿನಿಂದ ಉಪದೇಶಿಸಲ್ಪಟ್ಟ ಮಂತ್ರವು ಬೀಜಾಕ್ಷರದಿಂದ ಆವೃತವಾಗಿರುತ್ತದೆ. ಅಕ್ಷರಮಾಲೆಯಲ್ಲಿ ಬೀಜಾಕ್ಷರ ಅತಿ ಶ್ರೇಷ್ಠ ವಾದುದು.

ಮಂತ್ರದ ಬಗ್ಗೆ ನಾವು ಈ ಎರಡು ವಿಷಯಗಳನ್ನು ಖಚಿತವಾಗಿ ತಿಳಿಯಬೇಕು:

೧. ಮಂತ್ರಕ್ಕೆ ಅರ್ಥವಿದೆ ಶಕ್ತಿಯಿದೆ.

೨. ಶ್ರದ್ಧೆಯಿಂದ ನಾವು ಅದನ್ನು ಉಚ್ಚರಿಸುತ್ತಾ ಹೋದಂತೆ ಅದನ್ನು ಜಾಗೃತಗೊಳಿಸಬಹುದು.

ಏಕಾಗ್ರಗೊಂಡ ಮನಸ್ಸಿನಿಂದ ಮಂತ್ರವನ್ನು ಪುನರುಚ್ಚಾರ ಮಾಡುತ್ತಾ ಬರುವುದಕ್ಕೆ ಜಪ ಎಂದು ಹೆಸರು. ಒಬ್ಬ ಗುರುವಿನಿಂದ ಮಂತ್ರವನ್ನು ಪಡೆಯುವುದಕ್ಕೆ ಮಂತ್ರದೀಕ್ಷೆ ಎನ್ನುತ್ತಾರೆ. ಜೀವನದಲ್ಲಿ ಇದು

ಒಂದು ಪವಿತ್ರವಾದ ಕಾರ್ಯ. ಇದು ದೇವರನ್ನು ಸಾಕ್ಷಾತ್ಕರಿಸಿ ಕೊಳ್ಳಲು ಹೊರಟಿರುವ ಸಾಧಕನು ಇಡಬೇಕಾದ ಮೊದಲ ಹೆಜ್ಜೆ.

ರಸಾಯನಶಾಸ್ತ್ರ, ಕಂಪ್ಯೂಟರ್ ವಿಜ್ಞಾನ, ಸಮಾಜಶಾಸ್ತ್ರ, ಅರ್ಥ ಶಾಸ್ತ್ರ, ಮುಂತಾದ ವಿಜ್ಞಾನಗಳನ್ನು ಕಲಿಯಲು ನೈತಿಕ ಮೌಲ್ಯಗಳ ಆವಶ್ಯಕತೆಯಿಲ್ಲ. ಕಾರಣ, ಅವುಗಳಿಗೆ ಅವನ ಬುದ್ಧಿವಂತಿಕೆ ಮಾತ್ರ ಸಾಕು. ಆದರೆ ಆಧ್ಯಾತ್ಮಿಕ ವಿದ್ಯೆಗೆ ಬಂದಾಗ, ಆತ್ಮಜ್ಞಾನ ಪಡೆಯ ಬೇಕಾದರೆ ಬರೀ ಬುದ್ಧಿವಂತಿಕೆ ಮಾತ್ರ ಸಾಲದು; ಅದರೊಂದಿಗೆ ಅವನು ಶುದ್ಧ ಮನಸ್ಸಿನವನಾಗಿರಬೇಕು, ಪಾಪರಹಿತನಾಗಿರಬೇಕು ಹಾಗೂ ಅವನಲ್ಲಿ ಇಂದ್ರಿಯಭೋಗಗಳ ಆಸೆ ಇರಬಾರದು. ಇದು ಗುರು ಹಾಗೂ ಶಿಷ್ಯ ಇಬ್ಬರಿಗೂ ಅನ್ವಯಿಸುತ್ತದೆ. ಇದರ ಬಗ್ಗೆ ಬೆಳಕು ಚೆಲ್ಲುತ್ತಾ ಸ್ವಾಮಿ ವಿವೇಕಾನಂದರು ಹೇಳುತ್ತಾರೆ, ''ಈ ಪ್ರೇರಣೆ ಯನ್ನು ಕೊಡಬೇಕಾದರೆ ಯಾರಿಂದ ಈ ಪ್ರೇರಣೆ ಬರುವುದೋ.. ಆತನಿಗೆ ಅದನ್ನು ಮತ್ತೊಬ್ಬರಿಗೆ ಕೊಡುವ ಶಕ್ತಿ ಇರಬೇಕು. ಎರಡನೆ ಯದಾಗಿ, ಅದನ್ನು ಸ್ವೀಕರಿಸುವವನು ಸಿದ್ಧನಾಗಿರಬೇಕು. ಬೀಜ ಸಜೀವವಾಗಿರಬೇಕು, ಕ್ಷೇತ್ರ ಚೆನ್ನಾಗಿ ಉತ್ತು ಹದವಾಗಿರಬೇಕು. ಈ ಎರಡು ಲಕ್ಷಣಗಳೂ ಚೆನ್ನಾಗಿರುವಾಗ ಅತ್ಯದ್ಭುತ ಧಾರ್ಮಿಕ ಅಭಿ ವೃದ್ಧಿ ಉಂಟಾಗುವುದು. ಧರ್ಮವನ್ನು ಬೋಧಿಸುವವನು ಅದ್ಭುತ ವ್ಯಕ್ತಿಯಾಗಿರಬೇಕು. ಇವರಿಬ್ಬರೂ ಅಸಾಧಾರಣವಾಗಿ ಅದ್ಭುತ ವಾಗಿದ್ದಾಗ ಮಾತ್ರ ಸುಂದರ ಆಧ್ಯಾತ್ಮಿಕ ಜೀವನ ವಿಕಾಸವಾಗುವುದು. ಇಲ್ಲದೆ ಇದ್ದರೆ ಇಲ್ಲ.'' *(ಕೃತಿಶ್ರೇಣಿ ೧-೧೪೬)*

ಆದುದರಿಂದ ಹಿಂದೂ ಸಂಪ್ರದಾಯದಲ್ಲಿ ಮಂತ್ರದೀಕ್ಷೆಗೆ ಬಹಳ ಮಹತ್ವವನ್ನು ಕೊಡಲಾಗಿದೆ. ಸಾಧಕನಿಗೆ ಒಳ್ಳೆಯ ಗುರುವನ್ನು ಆರಿಸಿಕೊಳ್ಳುವಂತೆ ಸಲಹೆ ನೀಡಲಾಗುತ್ತದೆ. ದೀಕ್ಷೆಯ ಸಮಯದಲ್ಲಿ ಗುರು ಶಿಷ್ಯನಿಗೆ ಆಧ್ಯಾತ್ಮಿಕ ಶಕ್ತಿಯನ್ನು ಧಾರೆ ಎರೆಯುತ್ತಾನೆ. ಆದರೆ ಈ ಶಕ್ತಿ ಬೀಜರೂಪದಲ್ಲಿರುತ್ತದೆ. ಸತತವಾಗಿ ಜಪಿಸುವುದರಿಂದ ಅದನ್ನು ಹೆಮ್ಮರವಾಗಿ ಬೆಳೆಸಬಹುದು.

ಪ್ರತಿದಿನವೂ ಗುರು ಹೇಳಿಕೊಟ್ಟಂತೆ ಜಪ ಮಾಡುವುದು ಸಾಧಕನ ಆದ್ಯಕರ್ತವ್ಯ. ಇದರಿಂದ ಮಾತ್ರ ಅವನು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರೆಯುತ್ತಾನೆ. ಬಹಳಷ್ಟು ಜನ ಬಹಳ ಉತ್ಸಾಹದಿಂದ ಗುರುವಿನಿಂದ ಮಂತ್ರ ಪಡೆಯುತ್ತಾರೆ. ಆದರೆ ಸ್ವಲ್ಪ ದಿನಗಳ ನಂತರ ಜಪಮಾಡುವುದನ್ನೇ ನಿಲ್ಲಿಸುತ್ತಾರೆ. ಮಾಡಿದರೂ ಶ್ರದ್ಧೆಯಿಂದ ಮಾಡುವುದಿಲ್ಲ. ನಿಯಮಿತ ಕಾಲ, ನಿಯಮಿತ ಸಂಖ್ಯೆಯ ಜಪ ಮಾಡುವುದಿಲ್ಲ. ಜಪಸಾಧನೆಯಿಲ್ಲದೆ ಮಂತ್ರವು ಹೇಗೆ ಫಲಕೊಡಲು ಸಾಧ್ಯ?

ಹಾರ್ವರ್ಡ್ ವಿಶ್ವವಿದ್ಯಾಲಯವು ಹಲವು ಕ್ಷೇತ್ರಗಳಲ್ಲಿ ಪ್ರಖ್ಯಾತ ರಾದ ವ್ಯಕ್ತಿಗಳ ದಿನಚರಿ ಹಾಗೂ ತಮ್ಮ ಕಾರ್ಯದಲ್ಲಿ ಅವರು ಮಾಡಿದ ಪ್ರಯತ್ನವನ್ನು ಅಧ್ಯಯನ ಮಾಡಿತು. ಅಂತಹವರು ಗುರಿ ಮುಟ್ಟಲು ೫೦೦೦ದಿಂದ ೧೦,೦೦೦ ಘಂಟೆಗಳ ಕಾಲ ತಮ್ಮ ಜೀವನ ದಲ್ಲಿ ಶ್ರಮಿಸಿರುವುದನ್ನು ಗುರುತಿಸಿದರು. ಒಬ್ಬ ಯಶಸ್ಸು ಪಡೆದ ಕ್ರಿಕೆಟ್ ಆಟಗಾರನು ಆ ಸ್ಥಾನ ತಲುಪಲು ೫,೦೦೦ ದಿಂದ ೧೦,೦೦೦ ಘಂಟೆಗಳವರೆಗೆ ಕ್ರಿಕೆಟ್ ಅಭ್ಯಾಸದಲ್ಲೇ ತೊಡಗಿರುತ್ತಾನೆ. ಪ್ರಾಪಂ ಚಿಕ ಜೀವನದಲ್ಲೇ ಗುರಿಮುಟ್ಟಲು ಅಷ್ಟು ಶ್ರಮ ಪಡಬೇಕಾಗಿರು ವಾಗ ಇನ್ನು ಆಧ್ಯಾತ್ಮಿಕ ಜೀವನದ ಬಗ್ಗೆ ಏನು ಹೇಳೋಣ?

ಶ್ರೀಮಾತೆಯವರಿಂದ ದೀಕ್ಷೆ ಪಡೆದ ಶಿಷ್ಯನು ಒಮ್ಮೆ, 'ನಾನು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರೆಯುತ್ತಿಲ್ಲ' ಎಂದು ಗೋಣ ಗಾಡುವ ಪತ್ರವೊಂದನ್ನು ಬರೆದನು. ಅದನ್ನು ಶ್ರೀಮಾತೆಯವರಿಗೆ ಒಬ್ಬಾಕೆ ಭಕ್ತೆ ಓದಿ ಹೇಳಿದಳು. ಶ್ರೀಮಾತೆ ಕೋಪದಿಂದ, ''ಏನೂ ಮಾಡದಿದ್ದರೆ ಏನಾಗುತ್ತದೆ? ದಿನಕ್ಕೆ ೨೦,೦೦೦ ಜಪ ಮಾಡಲು ತಿಳಿಸು. ಕೆಲವು ದಿನ ಹಾಗೆ ಮಾಡಿದ ಮೇಲೆ ಅರ್ಥವಾಗುತ್ತದೆ, ಏನಾ ದರೂ ಮುಂದುವರೆಯುತ್ತಾನೋ ಇಲ್ಲವೋ ಎಂದು'' ಎಂದರು.

ಆದ್ದರಿಂದ ಜೀವನದಲ್ಲಿ ಏನನ್ನಾದರೂ ಸಾಧಿಸಬೇಕಾದರೆ ೫,೦೦೦ ಘಂಟೆಗಳ ಕಾಲವಾದರೂ ಜಪ ಮಾಡಬೇಡವೆ? ಕಾಲವನ್ನು ಎಣಿಸುವುದಕ್ಕಿಂತ ಜಪದ ಎಣಿಕೆಯನ್ನು ಇಟ್ಟರೂ ಸಾಕು. ಒಂದು ಘಂಟೆಗೆ ಸುಮಾರು ೨,೦೦೦ ಜಪ ಮಾಡಬಹುದು. ಆದುದರಿಂದ ಒಂದು ಕೋಟಿ ಜಪವನ್ನು ಗುರಿಯಾಗಿ ಇಟ್ಟುಕೊಂಡು ಶ್ರದ್ಧೆಯಿಂದ ಪ್ರತಿದಿನ ಜಪಮಾಡುತ್ತಾ ಬಂದರೆ, ಐದು ವರ್ಷಗಳಲ್ಲಿ ಖಂಡಿತ ವಾಗಿ ನಾವೂ ಆಧ್ಯಾತ್ಮಿಕವಾಗಿ ಮುನ್ನಡೆಯಬಹುದು, ಸದಾ ಆನಂದ ದಿಂದಿರಬಹುದು.

ಏಕಾಗ್ರತೆಯಿಲ್ಲದೆ ಘಂಟೆಗಟ್ಟಳೆ ಕುಳಿತು ಜಪ ಮಾಡುವುದರಲ್ಲಿ ಏನೂ ಪ್ರಯೋಜನವಿಲ್ಲವೆಂದು ಸಾಧಕರಿಗೆ ಆಗಾಗ ಸಂದೇಹ ತಲೆ ಎತ್ತುವುದು. ಇದಕ್ಕೂ ಶ್ರೀಮಾತೆಯವರೇ ಉತ್ತರಿಸುತ್ತಾರೆ, ''ಒಬ್ಬ ಸ್ವೇಚ್ಛೆಯಿಂದ ಸ್ನಾನ ಮಾಡಲು ನೀರಿಗಿಳಿದರೂ, ಮತ್ತೊಬ್ಬನನ್ನು ಯಾರಾದರೂ ಬಲವಂತವಾಗಿ ನೀರಿಗೆ ತಳ್ಳಿದರೂ ಇಬ್ಬರ ದೇಹವೂ ಒದ್ದೆಯಂತೂ ಆಗಿಯೇ ಆಗುತ್ತದೆ. ಯಾಂತ್ರಿಕವಾಗಿ ನಾವು ಶುರು ಮಾಡಿದರೂ, ಕ್ರಮೇಣ ಅಭ್ಯಾಸದಿಂದ ಏಕಾಗ್ರತೆ ಉಂಟಾಗುತ್ತದೆ.'' ಭಗವದ್ಗೀತೆಯಲ್ಲಿ ಅರ್ಜುನನು ಮನಸ್ಸು ಗಾಳಿಗಿಂತಲೂ ವೇಗವಾದುದು; ಅದನ್ನು ನಿಗ್ರಹಿಸುವುದು ಅತಿ ಕಷ್ಟ ಎಂದು ಹೇಳಿದಾಗ, ಶ್ರೀಕೃಷ್ಣನು 'ಅಭ್ಯಾಸದಿಂದಲೂ, ವೈರಾಗ್ಯದಿಂದಲೂ ಮನಸ್ಸನ್ನು ನಿಗ್ರಹಿಸಬಹುದು' ಎಂದು ಉತ್ತರಿಸುತ್ತಾನೆ. ಪತಂಜಲಿ ಮಹರ್ಷಿ ಗಳು ಕೂಡ ತಮ್ಮ ಯೋಗಶಾಸ್ತ್ರದಲ್ಲಿ '**ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ**' ಎಂದು ಹೇಳಿದ್ದಾರೆ. ಅಂದರೆ ಮನಸ್ಸನ್ನು ಅಭ್ಯಾಸ ಮತ್ತು ವೈರಾಗ್ಯಗಳಿಂದ ನಿರೋಧಸ್ಥಿತಿಗೆ ತರಬಹುದು ಎಂದರ್ಥ.

ಭಕ್ತಿಶಾಸ್ತ್ರವಾದ ***ಶ್ರೀಮದ್ಭಾಗವತ*** ವು ಕೂಡ ಹಲವು ಉದಾ ಹರಣೆಗಳ ಮೂಲಕ ಭಕ್ತಿಯಿಂದಲೋ, ಯಾಂತ್ರಿಕವಾಗಿಯೋ ಭಗ ವಂತನ ನಾಮಸ್ಮರಣೆಯನ್ನು ಮಾಡುತ್ತಿದ್ದರೆ ಖಂಡಿತ ಫಲ ದೊರೆ ಯುತ್ತದೆ ಎಂದು ತಿಳಿಸುತ್ತದೆ.

ಯಾವುದೇ ಒಂದು ಗುರಿಯನ್ನು ತಲುಪಲು ಅಭ್ಯಾಸ ಆವಶ್ಯಕ. ಉದಾಹರಣೆಗೆ, ನಾವು ನಮ್ಮ ದೇಹವನ್ನು ಚೆನ್ನಾಗಿಟ್ಟುಕೊಳ್ಳಬೇಕಾ ದರೆ ಪ್ರತಿನಿತ್ಯ ಮೂವತ್ತು ನಿಮಿಷವಾದರೂ ವ್ಯಾಯಾಮ ಮಾಡ ಬೇಕು. ಐದು ವರ್ಷ ಹೀಗೆ ನಿಯಮಿತವಾಗಿ ಮಾಡುವುದರಿಂದ ದೇಹದಲ್ಲಿ ಸುಧಾರಣೆಯನ್ನು ಗಮನಿಸಬಹುದು. ಅದೇ ರೀತಿ ನಿಯಮಿತವಾಗಿ ಐದು ವರ್ಷಗಳ ಕಾಲ ಭಗವಂತನ ನಾಮಸ್ಮರಣೆ ಯನ್ನು ಪ್ರತಿದಿನ ಮೂವತ್ತು ನಿಮಿಷಗಳಂತೆ ಮಾಡುವುದರಿಂದ ಅದರ ಫಲವನ್ನು ಪಡೆಯಬಹುದು. ಆದರೆ ನಮ್ಮ ಸೋಮಾರಿತನ ದಿಂದ ನಿಯಮಿತವಾಗಿ ಭಗವಂತನ ನಾಮಸ್ಮರಣೆಯನ್ನು ಮಾಡುವು

ದನ್ನು ಮುಂದೂಡುತ್ತಾ ಬರುತ್ತೇವೆ. ಒಳ್ಳೆಯ ಸಂಕಲ್ಪವನ್ನೇನೋ ಮಾಡುತ್ತೇವೆ; ಆದರೆ ಆರಂಭಿಸುವುದನ್ನು ಮುಂದೂಡುತ್ತಾ ಜೀವನವನ್ನೇ ವ್ಯರ್ಥವಾಗಿ ಕಳೆದುಬಿಡುತ್ತೇವೆ. ರಾಮಾಯಣದಲ್ಲಿ ಒಂದು ಘಟನೆಯಿದೆ. ರಾಮ-ರಾವಣರ ಯುದ್ಧವಾದ ಮೇಲೆ ರಾವಣ ಮರಣಶಯ್ಯೆಯಲ್ಲಿದ್ದಾನೆ. ಆಗ ಶ್ರೀರಾಮ ಲಕ್ಷ್ಮಣನಿಗೆ ರಾವಣನ ಬಳಿ ಹೋಗಿ ಒಳ್ಳೆಯ ರೀತಿಯಲ್ಲಿ ರಾಜ್ಯವಾಳುವುದರ ಬಗ್ಗೆ ಜ್ಞಾನ ಪಡೆಯಲು ತಿಳಿಸುತ್ತಾನೆ. ಲಕ್ಷ್ಮಣ ಅರ್ಧಮನಸ್ಸಿನಿಂದ ಅವನ ಬಳಿ ಹೋಗುತ್ತಾನೆ. ರಾವಣ ಅವನಿಗೆ ಕೊಟ್ಟ ಹಲವು ಉಪದೇಶಗಳಲ್ಲಿ ಒಂದು, ಒಳ್ಳೆಯ ಕೆಲಸ ಮಾಡಬೇಕೆಂದು ಸಂಕಲ್ಪ ಮಾಡಿದಾಗ ಅದನ್ನು ತಕ್ಷಣ ಕಾರ್ಯರೂಪಕ್ಕೆ ತರಬೇಕು, ಮುಂದೂಡಬಾರದು. ನಾವು ಕೂಡ ನಾಮಸ್ಮರಣೆಯನ್ನು ಮಾಡುವ ವಿಷಯದಲ್ಲಿ, 'ನಿವೃತ್ತರಾದಾಗ ಬಹಳ ಸಮಯವಿರುತ್ತದೆ, ಆಗ ಮಾಡೋಣ' ಎಂದು ಮುಂದೂಡುತ್ತೇವೆ; ಎಂದಿಗೂ ಮಾಡುವುದೇ ಇಲ್ಲ.

ಪ್ರಾರಬ್ಧಕರ್ಮವನ್ನು ಅನುಭವಿಸಲೇಬೇಕು. ಯಾರೂ ಅದರಿಂದ ಪಾರಾಗುವಂತಿಲ್ಲ. ಆದರೆ ಭಗವನ್ನಾಮ ಜಪದಿಂದ ಅದರ ತೀವ್ರತೆ ಕಡಿಮೆಯಾಗುತ್ತದೆ. ಕರ್ಮದ ಪರಿಣಾಮವಾಗಿ ಒಬ್ಬ ತನ್ನ ಕಾಲನ್ನೇ ಕಳೆದುಕೊಳ್ಳಬೇಕಾಗಿದ್ದರೆ, ಅದರ ಬದಲು ಕೇವಲ ಒಂದು ಮುಳ್ಳು ಚುಚ್ಚುವುದರಲ್ಲೇ ಅದು ಮುಗಿದುಹೋಗುವುದು.

ಶ್ರೀರಾಮಕೃಷ್ಣರು ಇದನ್ನೇ ಹೇಳುತ್ತಾರೆ: ಪ್ರಾರಬ್ಧ ಕರ್ಮವನ್ನು ಅನುಭವಿಸಲೇಬೇಕು. ಆದರೆ ಪ್ರಾರ್ಥನೆಯಿಂದ, ಭಗವಂತನ ನಾಮಸ್ಮರಣೆಯಿಂದ ಅದರ ತೀವ್ರತೆ ಕಡಿಮೆಯಾಗುವುದು.

ಸ್ವಾಮಿ ವಿವೇಕಾನಂದರು ನಾಮಸ್ಮರಣೆಯ ಮಹಿಮೆಯನ್ನು 'ಭಕ್ತಿಯೋಗ'ದಲ್ಲಿ ಬಹಳ ವೈಜ್ಞಾನಿಕವಾಗಿ ವಿವರಿಸುತ್ತಾರೆ. ನಿರಂತರವಾಗಿ ಭಗವಂತನ ನಾಮಸ್ಮರಣೆಯನ್ನು ಮಾಡುವುದು ಗೌಣೀ ಭಕ್ತಿ. ಇದರ ಮುಖ್ಯ ಉದ್ದೇಶವೇ ದೇಹ ಮತ್ತು ಮನಸ್ಸನ್ನು ಶುದ್ಧಿ ಮಾಡಿಕೊಳ್ಳುವುದು. ಭಗವನ್ನಾಮ ಸ್ಮರಣೆಯಿಂದ ಮನಸ್ಸು ಪೂರ್ಣ ಶುದ್ಧಿಯಾದಾಗ ಅವನು ಪರಾಭಕ್ತಿಯ ವಲಯವನ್ನು ಪ್ರವೇಶಿಸುತ್ತಾನೆ, ಅದರಿಂದ ಭಗವತ್ ಸಾಕ್ಷಾತ್ಕಾರವಾಗುತ್ತದೆ.

ಈ ಕಲಿಯುಗದಲ್ಲಿ ಜಪ ಅಥವಾ ಭಗವನ್ನಾಮ ಸಂಕೀರ್ತನೆ ಅತಿಸುಲಭವಾದ, ಹಾಗೂ ಶ್ರೇಷ್ಠವಾದ ಮಾರ್ಗ. ಈ ನಾಮಸ್ಮರಣೆಗೆ ನಮ್ಮ ಶಾಸ್ತ್ರಗಳೂ, ಅವತಾರಪುರುಷರೂ, ಸಂತರೂ ಅತ್ಯಂತ ಮಹತ್ವವನ್ನು ನೀಡಿದ್ದಾರೆ. *ಭಾಗವತ*ದಲ್ಲಿ ಹೀಗೆ ಹೇಳಿದೆ:

**ಕೃತೇ ಯತ್ ಧ್ಯಾಯತೋ ವಿಷ್ಣುಃ ತ್ರೇತಾಯಾಂ ಯಜತೋ ಮಖೈಃ।**
**ದ್ವಾಪರೇ ಪರಿಚರ್ಯಾಯಾಂ ಕಲೌ ತದ್ಧರಿಕೀರ್ತನಾತ್ ॥**

ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಾಗದಿಂದಲೂ, ದ್ವಾಪರಯುಗದಲ್ಲಿ ಪೂಜೆಯಿಂದಲೂ, ಯಾವುದನ್ನು ಪಡೆಯಬಹುದೋ ಅದನ್ನು ಕಲಿಯುಗದಲ್ಲಿ ಭಗವನ್ನಾಮದಿಂದ ಪಡೆಯಬಹುದು.

ಅಲ್ಲದೆ ಭಗವನ್ನಾಮ ಜಪದಿಂದ ಬಹಳ ಶ್ರೇಷ್ಠ ಫಲವನ್ನು ಪಡೆಯಬಹುದೆಂದು ಅವತಾರಪುರುಷರೂ, ಸಂತರೂ ಹೇಳುತ್ತಾರೆ. ಶ್ರೀಮಾತೆಯವರು ಹೇಳುತ್ತಾರೆ: ''ನಿರಂತರ ಜಪದಿಂದ ಕುಂಡಲಿನೀ ಶಕ್ತಿಯನ್ನು ಜಾಗೃತಗೊಳಿಸಿ ಸಹಸ್ರಾರದವರೆಗೂ ತರಬಹುದು.''

ಇದನ್ನೇ ಅನುಮೋದಿಸುತ್ತಾ ಶ್ರೀರಾಮಕೃಷ್ಣರ ಶಿಷ್ಯರಾದ ಸ್ವಾಮಿ ಬ್ರಹ್ಮಾನಂದರು ಹೇಳುತ್ತಾರೆ, ''ಕುಂಡಲಿನೀ ಶಕ್ತಿಯನ್ನು ಜಾಗೃತಗೊಳಿಸಲು ಯೋಗಾಸನವೇ ಮೊದಲಾದ ಅಭ್ಯಾಸಗಳನ್ನು ಮಾಡಬೇಕೆಂದು ಕೆಲವರು ಹೇಳುವರು. ಆದರೆ ಜಪದಿಂದಲೇ ಕುಂಡಲಿನೀ ಶಕ್ತಿಯ ಜಾಗೃತಿ ಸಾಧ್ಯವೆಂಬುದು ನನ್ನ ಅನುಭವ.''

ನಿರಂತರವಾಗಿ ಜಪಮಾಡುವುದರಿಂದ, ಉಸಿರಾಟ ಸೂಕ್ಷ್ಮವಾಗುತ್ತಾ ಹೋಗುವುದು. ದೇಹ-ಮನಸ್ಸು ಎರಡೂ ಶಾಂತವಾಗಿಬಿಡುವುದು. ಆಗ ಅನಾಹತ ಧ್ವನಿಯು – ಅಂದರೆ ಓಂಕಾರವು ಶಂಖಧ್ವನಿಯಂತೆ ನಮ್ಮ ಕಿವಿಯಲ್ಲಿ ಕೇಳುವುದು.

ನಾವು ನಿಷ್ಠೆಯಿಂದ ಗುರುವಿನಿಂದ ಮಂತ್ರವನ್ನು ಸ್ವೀಕರಿಸಿ, ಆ ಮಂತ್ರದ ಜಪವನ್ನು ಮಾಡುವುದರಿಂದ ಅದು ನಮ್ಮ ದೇಹ ಹಾಗೂ ಮನಸ್ಸಿನ ಮೇಲೆ ಅದ್ಭುತ ಪರಿಣಾಮವನ್ನುಂಟುಮಾಡುವುದು. ಆದುದರಿಂದಲೇ ಶ್ರೀರಾಮಕೃಷ್ಣರು ಅದಕ್ಕೆ ಅತ್ಯಂತ ಮಹತ್ವವನ್ನು ಕೊಡುತ್ತಿದ್ದರು. ಒಂದು ದಿನ ಶ್ರೀರಾಮಕೃಷ್ಣರು ನರೇಂದ್ರನಿಗೆ ರಾಮಮಂತ್ರವನ್ನು ಉಪದೇಶಿಸಿದರು. ಇದು ಅವನಲ್ಲಿ ಅದ್ಭುತ ಪರಿಣಾಮವನ್ನುಂಟುಮಾಡಿತು. ಮನೆಯಲ್ಲಿ ಅವನು ರಾಮನಾಮವನ್ನು ಜಪಿಸಲಾರಂಭಿಸಿದನು. ಭಾವಪರವಶನಾಗಿ ರಾಮನಾಮವನ್ನು ಜಪಿಸುತ್ತಾ ಮನೆಯ ಸುತ್ತ ತಿರುಗಾಡಲಾರಂಭಿಸಿದನು. ಆಗ ಅವನಿಗೆ ಬಾಹ್ಯಪ್ರಜ್ಞೆಯೇ ಇರಲಿಲ್ಲ. ಇಡೀ ರಾತ್ರಿ ಆ ಸ್ಥಿತಿಯಲ್ಲಿಯೇ ಕಳೆದನು. ಶ್ರೀರಾಮಕೃಷ್ಣರಿಗೆ ಯಾರೋ ಬಂದು ಈ ವಿಷಯವನ್ನು ತಿಳಿಸಿದರು. ಅದಕ್ಕೆ ಅವರು, ''ಅವನು ಹಾಗೆಯೇ ಇರಲಿ. ಸ್ವಲ್ಪ ಸಮಯದ ನಂತರ ಸಹಜ ಸ್ಥಿತಿಗೆ ಬರುವನು'' ಎಂದರು. ಕೆಲವು ಘಂಟೆಗಳ ನಂತರ ಅವನು ಸಹಜಸ್ಥಿತಿಗೆ ಬಂದನು. ಅವನು ಅನಂತರ ''ಆಗ ನಾನು ಅವರ್ಣನೀಯವಾದ ಆನಂದವನ್ನು ಅನುಭವಿಸಿದೆ'' ಎಂದು ತಿಳಿಸಿದನು.

ಹೀಗೆ ನಾವು ಜಪದ ಮಹಿಮೆಯನ್ನು ಅರ್ಥಮಾಡಿಕೊಂಡು, ನಿರಂತರ ಜಪದಲ್ಲಿ ತೊಡಗಿ ಅದರ ಫಲವನ್ನು ಅನುಭವಿಸಬೇಕು.

ಜಪ ಕಾರಣಶರೀರಕ್ಕೆ ಆಹಾರವಾಗುತ್ತದೆ. ಮನುಷ್ಯನಲ್ಲಿ ಮೂರು ವಿಧವಾದ ಶರೀರಗಳಿವೆ: ಸ್ಥೂಲಶರೀರ, ಸೂಕ್ಷ್ಮಶರೀರ ಮತ್ತು ಕಾರಣಶರೀರ. ಪ್ರಾಣಿಗಳು ಕೇವಲ ಸ್ಥೂಲಶರೀರಕ್ಕೆ ಮಾತ್ರ ಆಹಾರ ಒದಗಿಸಬಲ್ಲವು. ಆದರೆ ಮನುಷ್ಯ ಮೂರೂ ವಿಧದ ಶರೀರಗಳಿಗೆ ಆಹಾರ ಒದಗಿಸಬಲ್ಲ; ಒದಗಿಸಬೇಕು. ನಾವು ನಿತ್ಯವೂ ಸ್ವೀಕರಿಸುವ ಭೌತಿಕ ಆಹಾರವು ಶರೀರವನ್ನು ಪೋಷಿಸುತ್ತದೆ. ಚಿಂತನೆ, ಆಲೋಚನೆ ಇತ್ಯಾದಿ ಭೌತಿಕಕ್ರಿಯೆಗಳು ಸೂಕ್ಷ್ಮಶರೀರಕ್ಕೆ ಆಹಾರವಾಗುತ್ತವೆ. ಪೂಜೆ, ಭಕ್ತಿ, ಜಪ, ಧ್ಯಾನಗಳು ಕಾರಣಶರೀರವನ್ನು ಪುಷ್ಟಿಗೊಳಿಸುತ್ತವೆ.

ಸ್ಥೂಲಶರೀರಕ್ಕೆ ಕೊಟ್ಟ ಆಹಾರದ ಪ್ರಭಾವ ಸ್ವಲ್ಪ ಸಮಯ ಮಾತ್ರ ಉಳಿದಿರುತ್ತದೆ. ಸೂಕ್ಷ್ಮಶರೀರಕ್ಕೆ ಒದಗಿಸುವ ಆಹಾರ ಈ ಜನ್ಮಕ್ಕೆ ಮಾತ್ರ ಉಳಿಯುವುದು. ಆದರೆ ಕಾರಣಶರೀರಕ್ಕೆ ನಾವು ಒದಗಿಸುವ ಆಹಾರ ಜನ್ಮಜನ್ಮಾಂತರಗಳಿಗೂ ಮುಂದುವರೆದು, ಕಾರಣಶರೀರ ಪರಮಾತ್ಮನಲ್ಲಿ ಒಂದಾಗುವವರೆಗೂ ಅದು ಜೊತೆಯಾಗಿರುತ್ತದೆ. ಜಪದ ಸಾರ ಕಾರಣಶರೀರದೊಂದಿಗೆ ಇದ್ದು,

ಜೀವಾತ್ಮನೊಂದಿಗೆ ಜನ್ಮಜನ್ಮಾಂತರಗಳಲ್ಲಿ ಮುಂದುವರೆದು, ಜೀವಾತ್ಮನನ್ನು ಪರಿಪೂರ್ಣತೆಗೆ ಕೊಂಡೊಯ್ಯುತ್ತದೆ.

ಜಪ ಎನ್ನುವುದು ಕುರುಡರಿಗೆ ಊರುಗೋಲು. ಭಗವಂತನ ನಾಮ ಅವನ ರೂಪಕ್ಕಿಂತ ಭಿನ್ನವಲ್ಲ. ಭಗವಂತನ ಹೆಸರನ್ನು ಮನಸ್ಸಿನಲ್ಲಿ ನೆನೆದರೆ ಅವನ ರೂಪವೂ ತಾನಾಗಿ ಮನಸ್ಸಿಗೆ ಬರುತ್ತದೆ. ಉದಾಹರಣೆಗೆ, ನೀವು ನಿಮ್ಮ ಮಗನ ಹೆಸರನ್ನು ನೆನಪಿಸಿ ಕೊಂಡಾಗಲೆಲ್ಲಾ ಅವನ ರೂಪ ನಿಮ್ಮ ಕಣ್ಣಮುಂದೆ ಬರುತ್ತದೆ. ಅಂದರೆ, ಒಂದು ವಿಧದಲ್ಲಿ ಜಪ ಮತ್ತು ಧ್ಯಾನ ಒಟ್ಟಾಗಿ ನಡೆಯುತ್ತದೆ. ಗುರು ಕೊಟ್ಟಿರುವ ಮಂತ್ರ ದೇವರ ವಿಶೇಷವಾದ ಹೆಸರಿಲ್ಲದೆ ಬೇರೇನಲ್ಲ. ಮಂತ್ರದಲ್ಲಿ ಸಾಧಾರಣವಾಗಿ ಆರು ಅಂಶಗಳಿರುತ್ತವೆ. ಮೊದಲನೆಯದಾಗಿ **ಋಷಿ.** ಅಂದರೆ ಯಾವ ಋಷಿಯು ಆ ಮಂತ್ರವನ್ನು ಮೊದಲು ಸಾಕ್ಷಾತ್ಕಾರ ಮಾಡಿಕೊಂಡನೋ ಅವನು. ಅವನನ್ನು ಮಂತ್ರದ್ರಷ್ಟಾರ ಎಂದು ಹೇಳುತ್ತೇವೆ. ದ್ರಷ್ಟಾ ಎಂದರೆ ದರ್ಶಿಸಿದವನು ಎಂದರ್ಥ. ಎರಡನೆಯದಾಗಿ ಆ ಮಂತ್ರಕ್ಕೆ ಒಂದು **ಛಂದಸ್ಸಿ**ದೆ. ಅಂದರೆ ಅದನ್ನು ಉಚ್ಚಾರಣೆ ಮಾಡಬೇಕಾದ ವಿಧಾನ. ಮೂರನೆಯದಾಗಿ **ದೇವತೆ.** ಅಂದರೆ ಆ ಮಂತ್ರ ಯಾವ ದೇವತೆಯನ್ನು ನಿರ್ದೇಸುತ್ತದೆಯೋ ಆ ದೇವತೆ. ನಾಲ್ಕನೆಯದಾಗಿ ಆ ಮಂತ್ರಕ್ಕೆ **ಬೀಜಾಕ್ಷರ**ವಿರುತ್ತದೆ. ಅದು ಮಂತ್ರಕ್ಕೆ ವಿಶೇಷ ಶಕ್ತಿಯನ್ನು ಕೊಡುತ್ತದೆ. ಇದು ಮಂತ್ರದ ಸಾರ ಕೂಡ. ಐದನೆಯದಾಗಿ ಪ್ರತಿ ಮಂತ್ರಕ್ಕೂ ಒಂದು ವಿಶೇಷ **ಶಕ್ತಿ**ಯಿದೆ. ಆ ಮಂತ್ರವನ್ನು ಉಚ್ಚರಿಸಿದಾಗ ಅದು ಒಂದು ವಿಶೇಷ ಶಬ್ದತರಂಗವನ್ನು ಉತ್ಪಾದಿಸುತ್ತದೆ. ಈ ಶಬ್ದತರಂಗವು ಸಾಧಕನಿಗೂ ಮಂತ್ರದ ದೇವತೆಗೂ ಸಂಪರ್ಕವನ್ನುಂಟುಮಾಡುತ್ತದೆ. ಮಂತ್ರಕ್ಕೆ **ಕೀಲಕ**ವಿರುತ್ತದೆ. ಕೀಲಕ ಅಂದರೆ ಆಧಾರ. ಈ ಆಧಾರದ ಸಹಾಯದಿಂದ ಸಾಧಕನಿಗೆ ದೇವತೆಯ ದರ್ಶನವಾಗುತ್ತದೆ.

ನಾವು ಭಗವಂತನ ನಾಮವನ್ನು ಉಚ್ಚಾರ ಮಾಡಿದಾಗ ಅದು ಶಬ್ದತರಂಗಗಳನ್ನು ಉಂಟುಮಾಡುತ್ತದೆ. ಆ ತರಂಗಗಳಿಗನುಸಾರವಾಗಿ ಭಗವಂತನ ಆಕಾರ ಉದ್ಭವವಾಗುತ್ತದೆ. ಉದಾಹರಣೆಗೆ ಪಂಚಾಕ್ಷರೀ ಮಂತ್ರವಾದ '**ಓಂ ನಮಃ ಶಿವಾಯ**' ಎಂಬುದನ್ನು ಉಚ್ಚಾರ ಮಾಡಿದಾಗ ಆ ಶಬ್ದದಿಂದ ಬಂದ ತರಂಗಗಳು ಶಿವನ ಆಕಾರವನ್ನು ಉತ್ಪಾದಿಸುತ್ತದೆ. ಯಾವುದಾದರೂ ಮಂತ್ರವನ್ನು ಸರಿಯಾದ ರೀತಿಯಲ್ಲಿ ಉಚ್ಚಾರ ಮಾಡಿದಾಗ, ಆ ಶಬ್ದದಿಂದ ಬಂದ ತರಂಗಗಳು ಆಯಾ ದೇವತೆ ಉದ್ಭವವಾಗುವಂತೆ ಮಾಡುತ್ತದೆ.

ಮಂತ್ರವನ್ನು ಜಪಿಸುವುದರಲ್ಲಿ ಹಲವು ವಿಧಗಳಿವೆ. ನಾವು ಅದನ್ನು ಮನಸ್ಸಿನಲ್ಲಿ ಮಾತ್ರ ಹೇಳಿಕೊಂಡರೆ ಅದು **ಮಾನಸಿಕ ಜಪ**ವಾಗುತ್ತದೆ. ಇದು ಶ್ರೇಷ್ಠವಾದ ಕ್ರಮ. ಬಹಳ ಜೋರಾಗಿ ಬಾಯಿಬಿಟ್ಟು ಎಲ್ಲರಿಗೂ ಕೇಳುವ ಹಾಗೆ ಹೇಳಿದರೆ ಅದಕ್ಕೆ **ವೈಖರೀ ಜಪ** ಎನ್ನುತ್ತಾರೆ. ಪಿಸುಗುಟ್ಟುವಂತೆ ಹೇಳಿಕೊಳ್ಳುತ್ತಿದ್ದರೆ ಅದಕ್ಕೆ **ಉಪಾಂಶು ಜಪ** ಎನ್ನುತ್ತಾರೆ. ನೀವು ತಿರುಪತಿಗೆ ಹೋದರೆ ಅಲ್ಲಿ '**ಓಂ ನಮೋ ಭಗವತೇ ವಾಸುದೇವಾಯ**' ಎಂದು ಜೋರಾಗಿ ರೆಕಾರ್ಡರ್ ಮೂಲಕ ಸತತವಾಗಿ ಕೇಳುವಿರಿ. ಇದು ವೈಖರೀ ಜಪ. ಮಾನಸಿಕ ಜಪವೇ ಅತ್ಯಂತ ಶ್ರೇಷ್ಠವಾದುದು.

ಮತ್ತೊಂದು ರೀತಿಯ ಜಪವೇ ಲಿಖಿತ ಜಪ. ಇದು ಒಂದೆಡೆ ಕುಳಿತು ಒಂದು ಪುಸ್ತಕದಲ್ಲಿ ೧೦೮ ಅಥವಾ ೧೦೦೮ ಬಾರಿ, ಅಥವಾ ಸಾಧ್ಯವಾದಷ್ಟು ಮಂತ್ರವನ್ನು ಅಥವಾ ಬರಿಯ ದೇವರ ಹೆಸರನ್ನು ಬರೆಯುವುದು. ಮಂತ್ರವನ್ನು ಬರೆದಲ್ಲಿ, ಅದನ್ನು ಬೇರೆ ಯಾರಿಗೂ ಸಿಗದಂತೆ ಇರಿಸಬೇಕು. ಕಾರಣ, ಮಂತ್ರವು ರಹಸ್ಯವಾದದ್ದು. ನಾವು ಬರೆಯುವ ಮಂತ್ರ ಬೇರೆಯವರಿಗೆ ತಿಳಿದಲ್ಲಿ ಅದರ ಶಕ್ತಿ ಕಡಿಮೆಯಾಗುವುದು.

ಜಪಸಾಧನೆಗೆ ಈ ಕೆಲವು ಸಲಹೆಗಳನ್ನು ಕೊಡಬಹುದು:

೧. ಗುರುವಿನಿಂದ ನಿಮ್ಮ ಇಷ್ಟದೇವತೆಯ ಮಂತ್ರವನ್ನು ಪಡೆಯಿರಿ.

೨. ಈ ಗುರುಮಂತ್ರವನ್ನು ರಹಸ್ಯವಾಗಿಟ್ಟುಕೊಳ್ಳಿ. ಯಾವ ಕಾರಣಕ್ಕೂ ಇದನ್ನು ಬೇರೆಯವರಿಗೆ ಹೇಳಬೇಡಿ.

೩. ಮಂತ್ರದೀಕ್ಷೆಯನ್ನು ಒಂದು ಬಾರಿ ಮಾತ್ರ ಪಡೆಯಬೇಕು. ಯಾವ ಕಾರಣಕ್ಕೂ ಗುರುವನ್ನಾಗಲೀ ಮಂತ್ರವನ್ನಾಗಲೀ, ಗುರುವಿನ ಅನುಮತಿಯಿಲ್ಲದೆ ಬದಲಾಯಿಸಬಾರದು.

೪. ಬೆಳಗ್ಗೆ ಸಾಧ್ಯವಾದಷ್ಟೂ ಬೇಗನೆ ಎದ್ದು, ಸ್ನಾನ ಮಾಡಿ ಅಥವಾ ಚೆನ್ನಾಗಿ ಕೈಕಾಲು ತೊಳೆದುಕೊಂಡು ಗುರು ಹೇಳಿಕೊಟ್ಟಿರುವ ವಿಧಾನದಿಂದ ಜಪ ಮಾಡಿ. ಇದಲ್ಲದೆ ಸಮಯ ಸಿಕ್ಕಾಗಲೆಲ್ಲಾ ಜಪ ಮಾಡಿ. ದಿನಕ್ಕೆ ಮೂರು ಬಾರಿಯಾದರೂ ಜಪ ಮಾಡುವ ಅಭ್ಯಾಸವಿಟ್ಟುಕೊಳ್ಳಿ.

ಮಂತ್ರಜಪದಲ್ಲಿ ಮುಖ್ಯವಾದ ಅಂಶವೆಂದರೆ ನಾವು ಯಾವ ಕೆಲಸದಲ್ಲಿ ತೊಡಗಿದ್ದರೂ ಆಂತರಿಕವಾಗಿ ಮಂತ್ರವನ್ನು ಜಪಿಸುತ್ತಿರಬೇಕು. ಹೀಗೆ ಮಾಡುವವರಿಗೆ ಆಗುವ ಪ್ರಯೋಜನವೆಂದರೆ, ಎಷ್ಟೇ ಕಠಿಣವಾದ ಕೆಲಸದಲ್ಲಿ ತೊಡಗಿದ್ದರೂ ಮನಸ್ಸಿಗೆ ಒತ್ತಡವಿರುವುದಿಲ್ಲ. ಈಗಿನ ಜೀವನದಲ್ಲಿ ಪ್ರತಿಯೊಬ್ಬರೂ ಬಹಳಷ್ಟು ಸ್ಟ್ರೆಸ್ ಮತ್ತು ಸ್ಟ್ರೇನ್‌ನಿಂದ ನರಳುತ್ತಿದ್ದಾರೆ. ಮಾನಸಿಕ ಜಪ ಮಾಡುವ ಮೂಲಕ ಈ ಒತ್ತಡದಿಂದ ಪಾರಾಗಬಹುದು, ಸದಾ ಶಾಂತತೆಯಿಂದಿರಬಹುದು.

ಮಂತ್ರೋಚ್ಚಾರಣೆ ಮನಸ್ಸಿಗೆ ಒಂದು ಆಶ್ರಯವನ್ನು ನೀಡುತ್ತದೆ, ಆನಂದ ನೀಡುತ್ತದೆ. ವಿಷಯವಸ್ತುಗಳತ್ತ ಮನಸ್ಸಿನ ಆಕರ್ಷಣೆ ಕಡಿಮೆಯಾಗುತ್ತದೆ. ನಕರಾತ್ಮಕ ಆಲೋಚನೆಗಳು ಕಡಿಮೆಯಾಗಿ, ಸಕರಾತ್ಮಕ ಚಿಂತನೆಗಳು ಹೆಚ್ಚಾಗುತ್ತವೆ, ಮನಸ್ಸಿಗೆ ಧೈರ್ಯವನ್ನು ಕೊಡುತ್ತದೆ. ನಮ್ಮ ಸಂಸ್ಕಾರಗಳಲ್ಲಿರುವ ನಕಾರಾತ್ಮಕ ಆಲೋಚನೆಗಳು ಕೂಡ ನಿಧಾನವಾಗಿ ಕ್ಷೀಣವಾಗುತ್ತವೆ. ಮಂತ್ರ ಮನಸ್ಸಿಗೆ ಪ್ರಿಯವಾದ ಸ್ನೇಹಿತನಂತಾಗುತ್ತದೆ.

ಶ್ರೀರಾಮಕೃಷ್ಣರು ಭಗವಂತನ ಸಾಕ್ಷಾತ್ಕಾರಕ್ಕೆ ಮೂರು ನಿಯಮಗಳನ್ನು ವಿಧಿಸಿದ್ದಾರೆ. ೧. ಭಗವಂತನ ನಾಮಸ್ಮರಣೆ ೨. ಏಕಾಂತವಾಸ, ಹಾಗೂ ೩. ಸತ್ಸಂಗ.

**ಜಪ ಮಾಡುವಾಗ ಪ್ರೀತಿಯಿಂದ, ಪ್ರಾಮಾಣಿಕತೆಯಿಂದ ಹಾಗೂ ಶರಣಾಗತಿಯ ಭಾವದಿಂದ ದೇವರ ನಾಮವನ್ನು ಉಚ್ಚರಿಸು.**

**ಮಂತ್ರವು ದೇಹವನ್ನು ಪರಿಶುದ್ಧವಾಗಿಸುತ್ತದೆ. ಭಗವಂತನ ನಾಮಜಪ ಮಾಡುವುದರಿಂದ ಮನುಷ್ಯನು ಪರಿಶುದ್ಧನಾಗುತ್ತಾನೆ. ಆದ್ದರಿಂದ ಯಾವಾಗಲೂ ಅವನ ನಾಮಜಪವನ್ನು ಮಾಡು.**

***–ಶ್ರೀ ಶಾರದಾದೇವಿ***

# ತಜ್ಜಪಸ್ತದರ್ಥಭಾವನಮ್

**ಸ್ವಾಮಿ ನಿತ್ಯಸ್ಥಾನಂದ**



ಹಿಂದೂ ಸಂಪ್ರದಾಯದಲ್ಲಿ ಆಧ್ಯಾತ್ಮಿಕ ಸಾಧನೆಯನ್ನು ಉಪಾಸನೆ ಎಂದೂ ಕರೆಯಲಾಗಿದೆ. ಉಪಾಸನೆ ಎಂದರೆ ಭಗವಂತನ ಸಮೀಪದಲ್ಲಿ ಇರುವುದು ಎಂದರ್ಥ. ಭಗವತ್ ಸಾಮೀಪ್ಯವನ್ನು ಭಾವಿಸುವುದಕ್ಕೆ ಹಲವು ಉಪಾಯಗಳಿವೆ. ಅರ್ಚನೆ, ಕೀರ್ತನೆ, ಭಜನೆ, ವಂದನೆ, ಭಾವನೆ ಮುಂತಾದ ಅನೇಕ ಉಪಾಯಗಳ ಮೂಲಕ ಭಗವತ್ ಸಮೀಪದಲ್ಲಿ ಇರಲು ನಾವು ಪ್ರಯತ್ನಿಸಬಹುದು. ಇದು ಬಾಹ್ಯಪೂಜೆಯಿಂದ ಪ್ರಾರಂಭವಾಗುತ್ತದೆ. ಇದು ಹಲವು ಕ್ರಿಯೆ, ಮಂತ್ರ, ಮುದ್ರೆ ಮುಂತಾದವುಗಳಿಂದಲೂ, ಹಲವು ಪರಿಕರಗಳಿಂದಲೂ ಕೂಡಿರುತ್ತದೆ. ಹಾಗೆಯೇ ಬಹುದೇವತೆಗಳನ್ನೂ ಪೂಜಿಸಲಾಗುತ್ತದೆ. ಮುಂದೆ ಇದು ಏಕನಿಷ್ಠೆಯಾಗಿ ಪರಿಣತಿ ಹೊಂದುತ್ತದೆ – ಒಂದೇ ದೇವತೆ, ಒಂದೇ ನಾಮ. ಒಂದೇ ದೇವತೆಗೆ ಸಂಬಂಧಪಟ್ಟ ಒಂದೇ ಮಂತ್ರವನ್ನು ಉಚ್ಚರಿಸುತ್ತ ಈ ಜಪಸಾಧನೆ ಮುಂದುವರಿಯುತ್ತದೆ. ಈ ಮಂತ್ರವೂ ಹಲವು ಅಕ್ಷರಗಳಿಂದ, ಹಲವು ಧ್ವನಿಗಳಿಂದ ಕೂಡಿರುತ್ತದೆ. ಮುಂದೆ ಇದು ಒಂದೇ ಅಕ್ಷರ, ಒಂದೇ ಧ್ವನಿಯಲ್ಲಿ ಪರ್ಯವಸಾನಗೊಳ್ಳುತ್ತದೆ. ಮುಂದೆ ಈ ಧ್ವನಿಯೂ ಅಡಗಿ, ಏಕಮಾತ್ರ ಸತ್ಯವೊಂದೇ ಉಳಿಯುತ್ತದೆ. ಶ್ರೀರಾಮಕೃಷ್ಣರು ಇದನ್ನು ತಮ್ಮ ಅನುಭವವಾಣಿಯಿಂದ ಈ ರೀತಿ ವ್ಯಕ್ತಪಡಿಸುತ್ತಿದ್ದರು: ''ಸಂಧ್ಯೆಯು ಗಾಯತ್ರಿಯಲ್ಲಿ ಲಯಗೊಳ್ಳುತ್ತದೆ, ಗಾಯತ್ರಿಯು ಓಂಕಾರದಲ್ಲಿ ಲಯಗೊಳ್ಳುತ್ತದೆ, ಮತ್ತು ಓಂಕಾರವು ಪರಬ್ರಹ್ಮದಲ್ಲಿ ಲಯಗೊಳ್ಳುತ್ತದೆ.''

**ಆಧ್ಯಾತ್ಮಿಕ ಸಾಧನೆಗೆ ಸಂಬಂಧಿಸಿದಂತೆ ಎಲ್ಲ ಪರಂಪರೆಗಳಲ್ಲೂ ಸ್ವೀಕೃತವಾಗಿರುವ ಕೃತಿ ಪಾತಂಜಲ ಯೋಗದರ್ಶನ. ಇದರಲ್ಲಿ ಜಪಸಾಧನೆಯನ್ನು ಕುರಿತು ಹೇಳಿರುವ ವಿಚಾರಗಳ ಬಗ್ಗೆ ವಿಶ್ಲೇಷಣಾತ್ಮಕವಾಗಿ ಬರೆದಿರುವ ಪೂಜ್ಯ ಸ್ವಾಮೀಜಿಯವರು ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರವಾದ ಬೇಲೂರು ಮಠದಲ್ಲಿರುವ ಬ್ರಹ್ಮಚಾರಿಗಳ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. 'ವಿವೇಕಪ್ರಭ' ಪತ್ರಿಕೆಯ ಪ್ರಥಮ ಸಂಪಾದಕರಾಗಿದ್ದ ಇವರು, ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರೂ ಆಗಿದ್ದರು. ಕನ್ನಡದಲ್ಲಿ ಹಲವಾರು ಕೃತಿಗಳನ್ನು ರಚಿಸಿರುವ ಸ್ವಾಮೀಜಿಯವರು ಪ್ರಬುದ್ಧ ಚಿಂತಕರು ಮತ್ತು ಉತ್ತಮ ವಾಗ್ಮಿಗಳು.**

ಈ ಜಪಸಾಧನೆಯಲ್ಲಿ ಎರಡು ಅತಿಮುಖ್ಯ ಅಂಶಗಳನ್ನು ನಾವು ಗಮನಿಸಬೇಕು. ಒಂದು ಭಗವನ್ನಾಮೋಚ್ಚಾರಣೆ, ಇನ್ನೊಂದು ಭಗವದ್ರೂಪ ಚಿಂತನೆ. ಅಂದರೆ ಇದು ಎರಡು ಬಗೆಯ ಉಪಾಸನೆ. ನಮ್ಮ ಆಲೋಚನಾ ವೃತ್ತಿಗಳನ್ನು ವಿಶ್ಲೇಷಿಸಿ ನೋಡಿದಾಗ ಮುಖ್ಯವಾಗಿ ಎರಡು ಬಗೆಯ ವೃತ್ತಿಗಳು ನಮ್ಮ ಗಮನಕ್ಕೆ ಬರುತ್ತವೆ. ಒಂದು ಬಗೆಯ ವೃತ್ತಿಗಳು ವಿವಿಧ ಆಕಾರಗಳಿಗೆ ಸಂಬಂಧಪಟ್ಟವು ಮತ್ತು ಇನ್ನೊಂದು ವಿವಿಧ ಶಬ್ದಗಳಿಗೆ ಸಂಬಂಧಪಟ್ಟವು. ನಮ್ಮ ಮನಸ್ಸಿನಲ್ಲಿ ಪುಸ್ತಕ, ಟೇಬಲ್ ಮುಂತಾದ ವಿವಿಧ ವಸ್ತುಗಳ, ವಿವಿಧ ವ್ಯಕ್ತಿಗಳ, ಪ್ರಾಣಿಗಳ ಹಾಗೂ ಸಸ್ಯಗಳ ಆಕಾರಗಳು ಅಥವಾ ರೂಪಗಳು ನಿರಂತರವಾಗಿ ಬರುತ್ತಿರುತ್ತವೆ. ಹಾಗೆಯೇ ಈ ರೂಪಗಳಿಗೆ ಸಂಬಂಧಪಟ್ಟ ವಿವಿಧ ಶಬ್ದಗಳು, ಮತ್ತು ಈ ಶಬ್ದಗಳಿಗೆ ಸಂಬಂಧಪಟ್ಟ ಹಲವು ಶಬ್ದಗಳೂ ಮನಸ್ಸಿನಲ್ಲಿ ಏಳುತ್ತಿರುತ್ತವೆ. ಯಾವುದಾದರೂ ಒಂದು ಭಾಷೆಯ ಶಬ್ದಜಾಲವೇ ನಮ್ಮ ಮನಸ್ಸನ್ನು ಆವರಿಸಿರುತ್ತದೆ. ಆಲೋಚಿಸುವುದೆಂದರೆ ಹಲವು ರೂಪಗಳನ್ನು ಚಿಂತಿಸುವುದು ಮತ್ತು ಶಬ್ದಗಳನ್ನು ಮನಸ್ಸಿನಲ್ಲಿ ಉಚ್ಚರಿಸುವುದು ಎಂದೇ ಅರ್ಥ. ಈ ಎಲ್ಲ ಶಬ್ದಗಳನ್ನು ನಾಮಗಳೆಂದು ಪರಿಗಣಿಸಬಹುದು. ಆದ್ದರಿಂದ 'ರೂಪ ವೃತ್ತಿ' ಮತ್ತು 'ನಾಮವೃತ್ತಿ' ಎಂಬ ಎರಡು ಬಗೆಯ ವೃತ್ತಿಗಳು ನಮ್ಮ ಮನಸ್ಸಿನಲ್ಲಿ ಏಳುತ್ತವೆ ಎಂದು ಹೇಳಬಹುದು.

ಆಧ್ಯಾತ್ಮಿಕ ಸಾಧನೆಯೆಂದರೆ ಬಹುಬಗೆಯ ವೃತ್ತಿಗಳನ್ನು ಹಂತಹಂತವಾಗಿ ಏಕಬಗೆಯ ವೃತ್ತಿಯನ್ನಾಗಿ ಪರಿವರ್ತಿಸುವುದು. ಇದನ್ನೇ ಏಕಾಗ್ರತೆ ಎಂದು ಕರೆಯುವುದು. ಹಲವು ರೂಪವೃತ್ತಿಗಳ ಬದಲು ಒಂದೇ ರೂಪವೃತ್ತಿಯನ್ನೂ, ಹಲವು ನಾಮವೃತ್ತಿಗಳ ಬದಲು ಒಂದೇ ನಾಮವೃತ್ತಿಯನ್ನೂ ಮನಸ್ಸಿನಲ್ಲಿ ಉಳಿಸಿಕೊಳ್ಳುವುದು. ಭಗವಂತನ ಒಂದೇ ರೂಪವನ್ನು ಚಿಂತಿಸುತ್ತ, ಆ ರೂಪಕ್ಕೆ ಸಂಬಂಧಪಟ್ಟ ಒಂದೇ ನಾಮವನ್ನು ಉಚ್ಚರಿಸುವುದನ್ನು ಜಪಸಾಧನೆ ಎಂದು ಕರೆಯಬಹುದು. ಈ ವಿಚಾರವನ್ನೇ **ತಜ್ಜಪಸ್ತದರ್ಥ ಭಾವನಮ್** ಎಂದು ಪತಂಜಲಿ ಮಹರ್ಷಿಗಳು ಸೂತ್ರೀಕರಿಸಿದ್ದಾರೆ.

ಈ ಸೂತ್ರವನ್ನು ನಾವು ಅರ್ಥಮಾಡಿಕೊಳ್ಳಬೇಕಾದರೆ ಇದರ ಹಿಂದಿನ ಸೂತ್ರವನ್ನೂ ನಾವು ಪರಿಗಣಿಸಬೇಕಾಗುತ್ತದೆ. ಈಶ್ವರನನ್ನು ಕುರಿತು ವಿವರಣೆಯನ್ನು ನೀಡುತ್ತ ಪತಂಜಲಿ ಹೇಳುತ್ತಾರೆ: ''ಈಶ್ವರನನ್ನು ಪ್ರತಿನಿಧಿಸುವ ಸಂಕೇತಾಕ್ಷರವೇ ಪ್ರಣವ ಅಥವಾ ಓಂಕಾರ'' **(ತಸ್ಯ ವಾಚಕಃ ಪ್ರಣವಃ)**. ವಿವಿಧ ವಸ್ತುಗಳನ್ನು ಪ್ರತಿನಿಧಿಸುವ ವಿವಿಧ ಶಬ್ದಸಂಕೇತಗಳು ಇರುತ್ತವೆ. ಒಂದೇ ಭಾಷೆಯಲ್ಲಿ ವಸ್ತುವನ್ನು ಪ್ರತಿನಿಧಿಸುವ ವಿವಿಧ ಪದಗಳು ಇರುವುದು ಮಾತ್ರವಲ್ಲದೆ, ವಿವಿಧ ಭಾಷೆಗಳಲ್ಲಿ ವಿವಿಧ ಪದಗಳು ಇರುತ್ತವೆ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಇಂತಹ ಎಷ್ಟೋ ಪದಗಳು ರೂಢಿಯಿಂದ ಬಂದಿರುತ್ತವೆ. ಕಾಲಾಂತರದಲ್ಲಿ ಈ ರೂಢಿಯು ಬದಲಾಗಬಹುದು. ಹಿಂದಿನ ಶಬ್ದಗಳು ಈಗ ಬಳಕೆಯಲ್ಲಿ ಇಲ್ಲದೇ ಇರಬಹುದು, ಅಥವಾ ಇದ್ದರೂ ಅದು ಬೇರೊಂದು ವಸ್ತುವನ್ನು ಪ್ರತಿನಿಧಿಸಬಹುದು.

ಆದರೆ ಈಶ್ವರ ಮತ್ತು ಓಂಕಾರಗಳಿಗಿರುವ ಸಂಬಂಧ ಶಾಶ್ವತವಾದುದು ಎಂದು ಭಾಷ್ಯಕಾರರು ಹೇಳುತ್ತಾರೆ. ಪ್ರತಿ ಯುಗ ಮತ್ತು ಪ್ರತಿ ಕಲ್ಪಗಳಲ್ಲಿಯೂ ಈ ಸಂಬಂಧ ಇದ್ದೇ ಇರುತ್ತದೆ. ಈಶ್ವರನಿಗೆ ಬೇರೆ ಶಬ್ದಸಂಕೇತಗಳು ಇರಬಹುದು (ಉದಾ: ಅಲ್ಲಾಹ್). ಆದರೆ ಅತ್ಯಂತ ನಿಕಟವಾಗಿ ಈಶ್ವರನನ್ನು ಪ್ರತಿನಿಧಿಸುವ ಶಬ್ದಸಂಕೇತವೆಂದರೆ ಓಂಕಾರವೇ. ಇದನ್ನು ಸ್ವಾಮಿ ವಿವೇಕಾನಂದರು ತುಂಬ ಅರ್ಥಪೂರ್ಣವಾಗಿ ವಿವರಿಸಿದ್ದಾರೆ:

''ದೇವರೆಂಬ ಭಾವನೆಗೆ ನೂರಾರು ಪದಗಳು ಇರುತ್ತವೆ. ಒಂದು ಆಲೋಚನೆಯು ಸಾವಿರಾರು ಪದಗಳೊಂದಿಗೆ ಸಂಬಂಧವನ್ನು ಪಡೆದಿರುತ್ತದೆ. ದೇವರೆಂಬ ಭಾವನೆಯು ನೂರಾರು ಪದಗಳೊಡನೆ ಸಂಬಂಧವನ್ನು ಪಡೆದಿರುತ್ತದೆ, ಮತ್ತು ಅವುಗಳಲ್ಲಿ ಪ್ರತಿಯೊಂದೂ ಭಗವಂತನಿಗೆ ಸಂಕೇತವಾಗಿರಬಹುದು. ಅದೇನೂ ಒಳ್ಳೆಯದು. ಆದರೆ ಈ ಪದಗಳೆಲ್ಲಕ್ಕೂ ಒಂದು ಸಾಮಾನ್ಯತೆ ಇರಬೇಕು. ಈ ಎಲ್ಲ ಸಂಕೇತಗಳಿಗೂ ಒಂದು ಸಾಮಾನ್ಯ ನೆಲೆ ಅಥವಾ ಅಧಿಕರಣ ಇರಬೇಕು. ಯಾವುದು ಸರ್ವಸಾಮಾನ್ಯವಾದ ಸಂಕೇತವಾಗಿದೆಯೋ ಅದೇ ಉತ್ತಮೋತ್ತಮವಾದುದು, ಅದೇ ಉಳಿದುದುಕ್ಕೆಲ್ಲ ಪ್ರತಿನಿಧಿಯಾಗಬಲ್ಲದು. ಶಬ್ದವನ್ನು ಉಚ್ಚರಿಸುವಾಗ ಕಂಠನಾಳ ಮತ್ತು ನಾಲಗೆಯನ್ನು ಧ್ವನಿಯು ಹೊರಮ್ಮುವುದಕ್ಕೆ ಸಹಕಾರಿಯಾದ ಫಲಕವನ್ನಾಗಿ ಮಾಡುತ್ತೇವೆ. ಎಲ್ಲ ಶಬ್ದಗಳಿಗೂ ಕೂಡ ಸಾಮಾನ್ಯ ಮೂಲವಾಗಿ, ಅತಿ ಸಹಜವಾಗಿರುವ ಯಾವುದಾದರೊಂದು ಶಬ್ದ ವಿದೆಯೆ? ''ಓಂ'' ಎಂಬುದು ಅಂತಹ ಶಬ್ದ. ಅದೇ ಎಲ್ಲ ಶಬ್ದಗಳಿಗೂ ಮೂಲ. ಮೊದಲನೆಯ ಅಕ್ಷರವಾದ 'ಅ' ಎಂಬುದೇ (ಅ + ಉ + ಮ = ಓಂ) ಶಬ್ದಮೂಲ. ನಾಲಗೆಯ ಮತ್ತು ಗಂಟಲಿನ ಯಾವ ಭಾಗವನ್ನೂ ಮುಟ್ಟದೆ ಇದನ್ನು ಉಚ್ಚರಿಸುತ್ತೇವೆ. 'ಮ' ಎಂಬುದು ಶಬ್ದದ ಕೊನೆ. ಇದನ್ನು ತುಟಿಯನ್ನು ಮುಚ್ಚಿ ಉಚ್ಚರಿಸುತ್ತೇವೆ. 'ಉ' ಎಂಬ ಮಧ್ಯಾಕ್ಷರವು ಮೊದಲಿನಿಂದ ಹಿಡಿದು ಬಾಯಿಯ ಕೊನೆಯವರೆಗೂ ಸಂಚರಿಸುತ್ತದೆ. ಆದಕಾರಣ 'ಓಂ' ಎಂಬುದು ಎಲ್ಲ ಶಬ್ದೋಚ್ಚಾರಣ ಕ್ರಿಯೆಗೂ ಮೂಲವಾಗಿದೆ. ಹೀಗಾಗಿ ಅದೇ ಸಹಜವಾದ ಸಂಜ್ಞೆಯಾಗಿರಬೇಕು ಮತ್ತು ಉಳಿದ ಎಲ್ಲ ಶಬ್ದಗಳಿಗೂ ಮೂಲವಾಗಿರಬೇಕು.'' *(ಕೃತಿಶ್ರೇಣಿ, ೨.೩೯೮).* ಎಲ್ಲ ಶಬ್ದಗಳ ಸಾರವೇ ಓಂಕಾರವೆಂದು ನಾವು ಒಪ್ಪಿಕೊಂಡರೆ, ಭಗವಂತನಿಗೆ ಸಂಬಂಧಪಟ್ಟ ಎಲ್ಲ ಶಬ್ದಗಳನ್ನೂ ಅದು ಪ್ರತಿನಿಧಿಸುವುದರಿಂದ ಅದೇ ಭಗವಂತನ ಅತ್ಯುತ್ತಮ ಸಂಕೇತ ಎಂದು ಪರಿಗಣಿಸುವುದರಲ್ಲಿ ತಪ್ಪೇನಿಲ್ಲ. ಈ ಸೂತ್ರಕ್ಕೆ ಬರೆದಿರುವ *ಭೋಜವೃತ್ತಿ*ಯಲ್ಲಿ ಪ್ರಣವದ ವಿವರಣೆ ಈ ರೀತಿ ಇದೆ : **ಪ್ರಕರ್ಷೇಣ ನೂಯತೇ ಸ್ತೂಯತೇ ಅನೇನ ಇತಿ ನೌತಿ ಸ್ತೌತಿ ಇತಿ ವಾ ಪ್ರಣವಃ ಓಂಕಾರಃ** – ಅಂದರೆ ಅತ್ಯಂತವಾಗಿ ಈಶ್ವರನನ್ನು ಸ್ತುತಿಸುವುದರಿಂದ ಓಂಕಾರವನ್ನು ಪ್ರಣವ ಎಂದು ಕರೆಯಲಾಗಿದೆ. ಇದು ಸಹ ಪ್ರಣವದ ಹಿರಿಮೆಯನ್ನು ಪ್ರತಿಬಿಂಬಿಸುತ್ತದೆ.

ಸ್ವಾಮಿ ವಿವೇಕಾನಂದರು ಇನ್ನೊಂದು ಮುಖ್ಯ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಭಾರತದಲ್ಲಿರುವ ಎಲ್ಲ ಧರ್ಮದವರಿಗೂ ಓಂಕಾರವು ಪರಮಪವಿತ್ರ ಮಂತ್ರ. ಹಿಂದೂಧರ್ಮದ ಎಲ್ಲ ಪಂಥದವರು ಮಾತ್ರವಲ್ಲದೆ ವೇದಬಾಹಿರ ಧರ್ಮಗಳಾದ ಬೌದ್ಧ, ಜೈನ, ಸಿಖ್ ಮುಂತಾದ ಧರ್ಮಾನುಯಾಯಿಗಳೂ ಓಂಕಾರವನ್ನು ಸ್ವೀಕರಿಸುತ್ತಾರೆ. ಈ ಶಬ್ದವು ಭಾರತೀಯರ ಧಾರ್ಮಿಕ ಆಶೋತ್ತರಗಳನ್ನೆಲ್ಲ ತನ್ನೊಳಗೆ ತುಂಬಿಕೊಂಡಿದೆ. ಭಾರತೀಯ ಧಾರ್ಮಿಕ ವಾತಾವರಣದ ಎಲ್ಲೆಡೆಯೂ ಓಂಕಾರವನ್ನು ಸ್ವೀಕರಿಸುತ್ತಿರುವುದನ್ನು ನೋಡುತ್ತೇವೆ. ಅಮೇರಿಕದಲ್ಲಿ ಲಕ್ಷಾಂತರ ಜನರು ಓಂಕಾರೋಪಾಸನೆಯನ್ನು ಮಾಡುತ್ತಿರುವುದಾಗಿ ಕೇಳುತ್ತೇವೆ.

ಭಾಷ್ಯಕಾರರಾದ ವ್ಯಾಸರು ಎರಡು ಬಗೆಯ ಸಂಕೇತಗಳನ್ನು ಸೂಚಿಸುತ್ತಾರೆ – ವಸ್ತುಸೂಚಕ ಮತ್ತು ಸಂಬಂಧಸೂಚಕ. ಪ್ರತಿಯೊಂದು ವಸ್ತುವಿಗೂ ಶಬ್ದ ಸಂಕೇತಗಳಿರುತ್ತವೆ, ಆದರೆ ಅವು ಅವಿಭಾಜ್ಯವಲ್ಲ. ಸಂಕೇತಗಳಿಲ್ಲದೆಯೂ ನಾವು ವಸ್ತುವನ್ನು ಭಾವಿಸಬಹುದು. ಒಬ್ಬ ವ್ಯಕ್ತಿಯ ಹೆಸರು ಮರೆತುಹೋಗಿದ್ದರೂ ಆ ವ್ಯಕ್ತಿಯನ್ನು ನೆನೆಸಿಕೊಳ್ಳಲು ಸಾಧ್ಯ. ಆದರೆ ಸಂಬಂಧಸೂಚಕ ಸಂಕೇತಗಳು ಹಾಗಲ್ಲ – ಸಂಕೇತಗಳಿಲ್ಲದೆ ಸಂಬಂಧವನ್ನು ಭಾವಿಸಲಾಗುವುದಿಲ್ಲ. ಉದಾಹರಣೆಗೆ ಪೆದ್ದನು ದಡ್ಡನ ಶಿಷ್ಯ ಎಂದು ಹೇಳುವಾಗ 'ಶಿಷ್ಯ' ಪದವು ಒಂದು ಸಂಬಂಧ ಸೂಚಕ. ಈ ಪದದ ಅಥವಾ ಅದೇ ಅರ್ಥಸೂಚಕ ಇನ್ನಾವುದಾದರೂ ಪದದ ಹೊರತಾಗಿ ಈ ಸಂಬಂಧವನ್ನು ಭಾವಿಸಲಾಗುವುದಿಲ್ಲ. ಏಕೆಂದರೆ ಸಂಬಂಧವೆನ್ನುವುದು ಒಂದು ಅಮೂರ್ತ ಭಾವನೆ. ಹಾಗೆಯೇ ದೇವರು ಒಂದು ಅಮೂರ್ತ ಸತ್ಯ. ಯಾವುದಾದರೂ ಸಂಕೇತದ ಮೂಲಕ ಮಾತ್ರ ಅವನನ್ನು ಕಲ್ಪಿಸಿಕೊಳ್ಳಲು ಸಾಧ್ಯ. ಮೇಲೆ ವಿವರಿಸಿರುವಂತೆ ಪ್ರಣವವು ದೇವರನ್ನು ಸೂಚಿಸುವ ಅತ್ಯಂತ ಶ್ರೇಷ್ಠವೂ, ನಿಕಟವೂ, ವ್ಯಾಪಕವೂ ಆದ ಸಂಕೇತ.

*ಮಾಂಡೂಕ್ಯ ಉಪನಿಷತ್ತಿನ* ಮೊದಲನೆಯ ಮಂತ್ರವೇ ಓಂಕಾರದ ಮಹಿಮೆಯನ್ನು ಈ ರೀತಿ ಕೊಂಡಾಡುತ್ತದೆ : **ಓಮಿತ್ಯೇಕಾಕ್ಷರಮಿದಂ ಸರ್ವಂ ತಸ್ಯ ಉಪಾಖ್ಯಾನಂ ಭೂತಂ ಭವದ್ ಭವಿಷ್ಯದಿತಿ ಸರ್ವಂ ಓಂಕಾರ ಏವ । ಯಚ್ಚಾನ್ಯತ್ ತ್ರಿಕಾಲಾತೀತಂ ತದಪ್ಯೋಂ ಕಾರ ಏವ ॥** –''ಓಂ ಎಂಬ ಈ ಅಕ್ಷರವೇ ಇದೆಲ್ಲವೂ. ಇದರ ಉಪಾಖ್ಯಾನವು (ನಿಕಟ ವಿಸ್ಪಷ್ಟ ವಿವರಣೆ) ಈ ರೀತಿ : ಹಿಂದೆ ಆಗಿ ಹೋಗಿರುವುದು, ಈಗ ಇರುವುದು, ಮುಂದೆ ಆಗುವುದು – ಇದೆಲ್ಲವೂ ಓಂಕಾರವೇ. ಮೂರುಕಾಲವನ್ನೂ ಮೀರಿದ ಸತ್ಯವಾವುದಿದೆಯೋ ಅದು ಓಂಕಾರವೇ.'' *ಮುಂಡಕೋಪನಿಷತ್ತಿ*ನಲ್ಲಿ ಓಂಕಾರ ಧ್ಯಾನವನ್ನು ಒಂದು ರೂಪಕದ ಮೂಲಕ ವಿವರಿಸಲಾಗಿದೆ :

**ಪ್ರಣವೋ ಧನುಃ ಶಿರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ ತನ್ಮಯೋ ಭವೇತ್ ॥**

''ಪ್ರಣವವೇ ಬಿಲ್ಲು , ಜೀವಾತ್ಮವೇ ಬಾಣ ಮತ್ತು ಗುರಿಯೇ ಪರ ಬ್ರಹ್ಮ. ಅತ್ಯಂತ ಜಾಗರೂಕತೆಯಿಂದ ಬಾಣವನ್ನು ಬಿಡಬೇಕು (ಧ್ಯಾನ ಮಾಡಬೇಕು). ಬಾಣಕ್ಕೆ ಹೊಡೆಯಬೇಕಾದ ವಸ್ತುವೊಂದೇ ಗುರಿಯಾಗಿರುವಂತೆ ಮನಸ್ಸು ಬ್ರಹ್ಮದಲ್ಲಿ ತನ್ಮಯವಾಗಿರಬೇಕು.'' ಓಂಕಾರವನ್ನು ಉಚ್ಚರಿಸುತ್ತ ಅದರರ್ಥವಾದ ಭಗವಂತನನ್ನೇ ಭಾವಿಸಬೇಕು. ಇದೇ **'ತಜ್ಜಪಃ ತದರ್ಥಭಾವನಮ್'** ಎಂಬ ಸೂತ್ರದ ಅರ್ಥ.

ಈ ರೀತಿ ಓಂಕಾರ ಜಪ ಮತ್ತು ಅದರ ಅರ್ಥಭಾವನೆಯಿಂದ ಮನಸ್ಸು ಏಕಾಗ್ರಗೊಳ್ಳುತ್ತದೆ ಎಂದು ವ್ಯಾಸರು ಹೇಳುತ್ತಾರೆ. ಅವರು ಈ ಸಂದರ್ಭದಲ್ಲಿ ಒಂದು ಶ್ಲೋಕವನ್ನು ಉದ್ಧರಿಸುತ್ತಾರೆ:

**ಸ್ವಾಧ್ಯಾಯಾದ್ಯೋಗಮಾಸೀತ ಯೋಗಾತ್‌ಸ್ವಾಧ್ಯಾಯಮಾಮನೇತ್।
ಸ್ವಾಧ್ಯಾಯಯೋಗ ಸಂಪತ್ತ್ಯಾ ಪರಮಾತ್ಮಾ ಪ್ರಕಾಶತೇ ॥**

ಧ್ಯಾನಯುಕ್ತ ಮಂತ್ರೋಚ್ಚಾರಣೆಯ ಮೂಲಕ ಯೋಗಸ್ಥಿತಿಯನ್ನು ಮುಟ್ಟಬೇಕು. ಯೋಗದ ಮೂಲಕ ಮಂತ್ರೋಚ್ಚಾರಣೆಯು (ಸ್ವಾಧ್ಯಾಯ) ಉತ್ತಮಗೊಳ್ಳುತ್ತದೆ. ಸ್ವಾಧ್ಯಾಯ ಮತ್ತು ಯೋಗ ಈ ಎರಡರ ಐಸಿರಿಯಿಂದ ಪರಮಾತ್ಮನು ಪ್ರಕಾಶಗೊಳ್ಳುತ್ತಾನೆ. ಮಂತ್ರ ಜಪದಿಂದ ಏಕಾಗ್ರತೆಯುಂಟಾಗುತ್ತದೆ, ಏಕಾಗ್ರತೆಯು ಹೆಚ್ಚಿದಂತೆಲ್ಲ ಮನಸ್ಸು ಸೂಕ್ಷ್ಮವಾಗಿ ಮಂತ್ರದ ಒಳಾರ್ಥವು ಮನಸ್ಸಿಗೆ ಹೊಳೆಯುತ್ತದೆ. ಇದರಿಂದ ಮಂತ್ರಜಪವು ಇನ್ನೂ ಪರಿಣಾಮಕಾರಿಯಾಗಿ ಏಕಾಗ್ರತೆಯೂ ಅಧಿಕವಾಗುತ್ತದೆ. ಹೀಗೆ ಯೋಗ ಮತ್ತು ಸ್ವಾಧ್ಯಾಯ ಪರಸ್ಪರ ಪೂರಕಗಳು.

ಓಂಕಾರದ ಇನ್ನೊಂದು ವೈಶಿಷ್ಟ್ಯವೇನೆಂದರೆ ಅದು ಸ್ವರಪ್ರಧಾನವಾದುದು. ಸ್ವರವನ್ನು ನಾವು ಎಳೆದು ಉಚ್ಚರಿಸಬಹುದು, ವ್ಯಂಜನಾಕ್ಷರವನ್ನು ಸ್ವರವನ್ನು ಸೇರಿಸದೆ ಆ ರೀತಿ ಎಳೆಯಲಾಗುವುದಿಲ್ಲ. ಈ ರೀತಿ ಎಳೆದು ಉಚ್ಚರಿಸುವಾಗ ಅದು ನಮ್ಮೊಳಗೆ ಒಂದು ಸ್ಪಂದನವನ್ನು ಸೃಷ್ಟಿಸುತ್ತದೆ. ಈ ಸ್ಪಂದನವು ಕ್ರಮೇಣ ಇಡಿ ವ್ಯಕ್ತಿತ್ವವನ್ನು ಆವರಿಸಿ ಅಲ್ಲಿ ಲಯಬದ್ಧತೆಯನ್ನೂ ಸಾಮರಸ್ಯವನ್ನೂ ಉಂಟುಮಾಡುತ್ತದೆ. ಇದು ಮನಸ್ಸಿನ ಮೇಲೆ ಮಾತ್ರವಲ್ಲದೆ ದೇಹದ ಮೇಲೆಯೂ ಸತ್ಪರಿಣಾಮವನ್ನು ಉಂಟುಮಾಡುತ್ತದೆ. ನರಮಂಡಲದ ಮೇಲೆ, ರಕ್ತ ಚಲನೆಯ ಮೇಲೆ ಮತ್ತು ಪ್ರಾಣಕ್ರಿಯೆಗಳ ಮೇಲೆ, ಸರ್ವಾಂಗಗಳ ಮೇಲೂ ಸತ್ಪರಿಣಾಮವನ್ನು ಉಂಟುಮಾಡುತ್ತದೆ. ಈ ಸಾಧನೆಯಿಂದ ಕ್ರಮೇಣ ವ್ಯಕ್ತಿತ್ವದಲ್ಲಿ ಪರಿವರ್ತನೆ ಉಂಟಾಗುವುದು ನಿಶ್ಚಿತ.

ಅನುಭಾವಿಗಳಾದ ಸ್ವಾಮಿ ಯತೀಶ್ವರಾನಂದರು ಜಪಶಕ್ತಿಯ ಬಗ್ಗೆ ಹೀಗೆ ಹೇಳುತ್ತಾರೆ: ''ಪ್ರತಿಯೊಂದು ಪದವೂ ಯಾವುದೋ ಒಂದು ಭಾವನೆಯ ಅಥವಾ ನಮ್ಮೊಳಗಿನ ಆಸೆಯ ಅಭಿವ್ಯಕ್ತಿ. ಮಂತ್ರಗಳು ಮನುಷ್ಯನ ಆಧ್ಯಾತ್ಮಿಕ ಪ್ರಚೋದನೆಯನ್ನು ಸೂಚಿಸುತ್ತವೆ. ಸಾಮಾನ್ಯ ಪದವನ್ನು ಕೇಳಿದಾಗ ಅಥವಾ ಉಚ್ಚರಿಸಿದಾಗ ಅದು ಯಾವುದೋ ಭಾವನೆಯನ್ನೋ ಅಥವಾ ಆಸೆಯನ್ನೋ ಪ್ರಚೋದಿಸುವಂತೆ, ಮಂತ್ರವೂ ಕೂಡ ನಮ್ಮಲ್ಲಿ ಹುದುಗಿರುವ ಆಧ್ಯಾತ್ಮಿಕ ಪ್ರವೃತ್ತಿಯನ್ನು ಜಾಗ್ರತಗೊಳಿಸುತ್ತದೆ... ಈ ಮಂತ್ರಗಳು ಸರಿಯಾಗಿ ಉಚ್ಚರಿಸಲ್ಪಟ್ಟಾಗ ಆಧ್ಯಾತ್ಮಿಕ ಜಾಗ್ರತಿಯನ್ನು ಉಂಟುಮಾಡುವುವು. ಜಪದ ಉದ್ದೇಶವು ಮರೆತುಹೋದ ಆಧ್ಯಾತ್ಮಿಕ ಪ್ರವೃತ್ತಿಯನ್ನು ಜಾಗೃತಗೊಳಿಸುವುದು.'' *(ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ, ಪು.೩೯೭, ೨೦೦೨)*

ಭಕ್ತರೊಬ್ಬರು ಸ್ವಾಮಿ ಅದ್ಭುತಾನಂದರನ್ನು (ಲಾಟು ಮಹಾರಾಜ್) ಕೇಳುತ್ತಾರೆ: ''ಮಹಾರಾಜ್, ಯಾರನ್ನು ನಾವು ನೋಡಿಲ್ಲವೊ ಅವನನ್ನು ಅವಲಂಬಿಸುವ ಬಗೆ ಹೇಗೆ?''

ಲಾಟು ಮಹಾರಾಜ್: ''ದೇವರು ನಿನಗೆ ತಿಳಿಯನು ಎನ್ನುವೆ. ಹಾಗಾದರೆ ಅವನ ಹೆಸರಾದರೂ ಗೊತ್ತು ತಾನೆ! ಆ ನಾಮವನ್ನೇ ಹಿಡಿದು ಮುಂದುವರಿ. ಮೊದಲು ಹೆಸರನ್ನು ಅರಿತು ತಾನೆ ನೀವು ಸಾಹೇಬರಿಗೆ ಅರ್ಜಿ ಕಳಿಸುವುದು! ಅದಾದ ಮೇಲೆ ತಾನೆ ನೀವು ಸಾಹೇಬರನ್ನು ಸಂಧಿಸುವುದು! ಅರ್ಜಿಯಲ್ಲಿ ಏನು ಬರೆಯುತ್ತೀರಿ? 'ನೀವು ನನಗೊಂದು ಕೆಲಸ ಕೊಡಿ. ನಿಮ್ಮ ಎಲ್ಲ ಮಾತುಗಳನ್ನೂ ಗೌರವಿಸುತ್ತೇನೆ. ನಿಮ್ಮ ಎಲ್ಲ ಕೆಲಸಗಳನ್ನೂ ಮಾಡುತ್ತೇನೆ. ನೀವು ಏನು ಹೇಳುತ್ತೀರೊ ಅದನ್ನು ಕೇಳುತ್ತೇನೆ' – ಇವುಗಳನ್ನೇ ಸಾಹೇಬರನ್ನು ನೋಡುವುದಕ್ಕೆ ಮುಂಚೆ ಬರೆಯುತ್ತೀರಲ್ಲವೆ? ಹೌದುತಾನೆ?'' ಭಕ್ತರು ಹೌದೆಂದರು. ಲಾಟು ಮಹಾರಾಜರು ಮುಂದುವರಿಸಿದರು: ''ಹಾಗೆಯೇ ಭಗವಂತನಿಗೂ ಇದೇ ರೀತಿ ಅರ್ಜಿ ಕಳಿಸು. ಆದರೆ ಈ ಅರ್ಜಿಯನ್ನು ಕಾಗದದ ಮೇಲೆ ಬರೆದು ಕಳಿಸಬೇಕಾಗಿಲ್ಲ. ಸ್ವಂತ ಮನಸ್ಸಿನ ಪತ್ರದಲ್ಲಿ ಬರೆದು ದೇವರಿಗೆ ತಿಳಿಸಬೇಕು. ಮನಸ್ಸಿನ ಪತ್ರದಲ್ಲಿ ನಾಮದ ಒಂದು ಕರಡುಪ್ರತಿಯನ್ನು (draft) ಮಾಡಬೇಕು. ಆ ಕರಡುಪ್ರತಿಯಲ್ಲಿ ತಪ್ಪಿದ್ದರೆ ಅದು ಭಗವಂತನಿಗೆ ತಲುಪುವುದಿಲ್ಲ, ಗೊತ್ತಾಯಿತೆ? ಅದರಲ್ಲಿ ಈ ಪ್ರಕಾರ ಬರೆ: ''ಹೇ ಭಗವಂತನೇ, ನಿನ್ನ ಹೆಸರನ್ನು ನಾನು ಮರೆಯದಂತಾಗಲಿ. ನಾನು ನಿನಗೆ ಶರಣಾಗಿರುವೆ. ನಿನ್ನ ಕಾರ್ಯದಲ್ಲಿ ನನ್ನನ್ನು ತೊಡಗಿಸು. ನನ್ನ ಎಲ್ಲ ವಿಘ್ನಗಳನ್ನೂ ದೂರಮಾಡು. ಎಲ್ಲ ಸಂಶಯಗಳನ್ನೂ ನಾಶಗೊಳಿಸು. ನೀನೇ ನನ್ನ ಸ್ವಾಮಿ, ನನ್ನ ಗುರು, ನನ್ನ ತಂದೆತಾಯಿ. ನನ್ನ ಸರ್ವಸ್ವವೂ ನೀನೇ. ನಾನು ನಿನ್ನ ಮಗು. ನನಗೆ ಯಾವುದು ಒಳ್ಳೆಯದೋ ಆ ಮಾರ್ಗದಲ್ಲಿ ನನ್ನನ್ನು ನಡೆಸಿಕೊಂಡುಹೋಗು. ನನ್ನ ಮೂಲಕ ನಿನ್ನ ಎಲ್ಲ ಕೆಲಸಗಳನ್ನೂ ಮಾಡಿಸಿಕೊ. ಆದರೆ ನಿನ್ನ ಮಾಯೆಯಿಂದ ನನ್ನನ್ನು ಮುಗ್ಧಗೊಳಿಸಬೇಡ. ಪ್ರಭು! ನಾನಾದರೂ ನಿನ್ನನ್ನು ನೋಡಿಲ್ಲ. ನಿನ್ನ ಹೆಸರನ್ನು ಮಾತ್ರ ಕೇಳಿರುವೆ. ನನ್ನ ಮೇಲೆ ದಯೆತೋರಿ ನನ್ನನ್ನು ನಿನ್ನವನನ್ನಾಗಿ ಮಾಡಿಕೊ.'' ಈ ರೀತಿ ಪ್ರತಿದಿನ ಹೇಳಬೇಕು. ಹೀಗೆ ಹೇಳುತ್ತ ಹೋದರೆ ಒಂದು ದಿನ ಅವನ ದಯಾದೃಷ್ಟಿ ಬೀಳುತ್ತದೆ. ಅವನ ದಯಾದೃಷ್ಟಿ ಬಿದ್ದರೆ ಸಾಕು, ಮತ್ತೇನೂ ಭಯವಿಲ್ಲ. ಆಗ ಅವನೇ ನಿನ್ನನ್ನು ನಡೆಸುತ್ತಾನೆ. ಯಾವ ಕೆಲಸ ಮಾಡಬೇಕು ಯಾವುದು ಬೇಡ ಇವೆಲ್ಲವನ್ನು ತಿಳಿಸಿಕೊಡುತ್ತಾನೆ.''

*(ಅದ್ಭುತವಾಣಿ, ಪು.೭೪–೭೫).*

ಓಂಕಾರ ಜಪಸಾಧನೆಯ ಫಲವನ್ನು ಪತಂಜಲಿ ಮುಂದಿನ ಸೂತ್ರದಲ್ಲಿ ವಿವರಿಸುತ್ತಾರೆ: **ತತಃ ಪ್ರತ್ಯಕ್ಚೇತನಾಧಿಗಮೋಽಪ್ಯಂತರಾಯಾಭಾವಶ್ಚ ॥** – ''ಅದರಿಂದ ಅಂತರಾತ್ಮನ ಅರಿವುಂಟಾಗುತ್ತದೆ ಮತ್ತು ಯೋಗಮಾರ್ಗಕ್ಕಿರುವ ಅಡಚಣೆಗಳೆಲ್ಲ ನಿವಾರಣೆಯಾಗುತ್ತದೆ.''

ನಾವು ನಮ್ಮ ಹೃದಯದಲ್ಲಿ ಭಗವಂತನನ್ನು ಧ್ಯಾನಿಸುತ್ತ ಓಂಕಾರವನ್ನು ಉಚ್ಚರಿಸುತ್ತೇವೆ. ಈ ರೀತಿ ಮಾಡುವುದರಿಂದ ನಾವು ಅಂತ

ಮೂರ್ಖಿಗಳಾಗುತ್ತೇವೆ. ಆಗ ಮೊದಲು ನಮ್ಮನ್ನೇ ನಾವು ಕಂಡುಕೊಳ್ಳುತ್ತೇವೆ, ನಮ್ಮ ನೆಲೆಗೇ ನಾವು ಬಂದು ತಲುಪುತ್ತೇವೆ. ಭಾಷ್ಯಕಾರರು ಹೇಳುವಂತೆ, ಈಶ್ವರನು ಶುದ್ಧನೂ ಪ್ರಸನ್ನನೂ ಮುಕ್ತನೂ ಹುಟ್ಟುಸಾವುರಹಿತನೂ ಆಗಿರುವಂತೆ ಬುದ್ಧಿಯೊಂದಿಗೆ ಕೂಡಿಕೊಂಡಿರುವ ಪುರುಷನೂ ಅದೇ ಸ್ವಭಾವದವನು ಎಂಬ ಅನುಭವಾತ್ಮಕ ಜ್ಞಾನವುಂಟಾಗುತ್ತದೆ. ಅಂದರೆ ಸಾಧಕನು ತನ್ನ ನಿಜಸ್ವರೂಪವನ್ನು ಅರಿಯುತ್ತಾನೆ. ಆದರೆ ಇದು ಆತ್ಯಂತಿಕ ಅನುಭವವಲ್ಲ. ದೇಹೇಂದ್ರಿಯ ಮನಸ್ಸುಗಳಿಗಿಂತ ತಾನು ಬೇರೆ ಎಂಬ ಒಳನೋಟ ಉಂಟಾಗುತ್ತದೆ. ಇದು ಬೌದ್ಧಿಕ ಜ್ಞಾನಕ್ಕಿಂತ ತುಂಬ ಮಿಗಿಲಾದುದು. ಇದು ಕನ್ನಡಿಯಲ್ಲಿ ಒಬ್ಬನು ತನ್ನ ಮುಖವನ್ನೇ ನೋಡಿಕೊಂಡಂತೆ. ಮನಸ್ಸು ಪರಿಶುದ್ಧವಾಗಿ ಈಶ್ವರ ಸಂಬಂಧವಾದ ಚಿತ್ತವೃತ್ತಿಯೆಂಬ ಕನ್ನಡಿಯಲ್ಲಿ ಸಾಧಕನು ತನ್ನ ಅಂತರಾತ್ಮನ ಸ್ವರೂಪವನ್ನೇ ಕಂಡುಕೊಳ್ಳುತ್ತಾನೆ. ನಾವು ಒಂದು ಅಮೂಲ್ಯ ವಸ್ತುವನ್ನು ಕಳೆದುಕೊಂಡಿರುತ್ತೇವೆ. ಕೆಲ ಕಾಲದ ನಂತರ ಅದನ್ನು ಮರೆತೇಬಿಡುತ್ತೇವೆ. ಮುಂದೆ ಇನ್ನಾವುದೊ ವಸ್ತುವನ್ನು ಹುಡುಕಿಕೊಂಡು ಹೋದಾಗ ಆ ವಸ್ತು ಸಿಕ್ಕಿಬಿಡುತ್ತದೆ.

ಈ ಸಾಧನೆಯಿಂದ ಅಡಚಣೆಗಳ ನಿವಾರಣೆಯಾಗುತ್ತದೆ ಎಂದು ಸೂತ್ರಕಾರರು ಹೇಳುತ್ತಾರೆ. ಅಡಚಣೆಗಳಾವುವೆಂದರೆ: ವ್ಯಾಧಿ, ಸ್ತ್ಯಾನ, ಸಂಶಯ, ಪ್ರಮಾದ, ಆಲಸ್ಯ, ಅವಿರತಿ, ಭ್ರಾಂತಿದರ್ಶನ, ಅಲಬ್ಧಭೂಮಿಕತ್ವ ಮತ್ತು ಅನವಸ್ಥಿತತ್ವ. ವ್ಯಾಧಿಯೆಂದರೆ ದೈಹಿಕ ಕಾಯಿಲೆ. ಓಂಕಾರೋಪಾಸನೆಯಿಂದ ದೈಹಿಕಕ್ರಿಯೆಯಲ್ಲಿ, ಪ್ರಾಣಕ್ರಿಯೆಯಲ್ಲಿ ಸಾಮರಸ್ಯವುಂಟಾಗಿ ಅದು ದೇಹಾರೋಗ್ಯವನ್ನು ಉತ್ತಮಗೊಳಿಸುತ್ತದೆ. ಸ್ತ್ಯಾನವೆಂದರೆ ಮಾನಸಿಕ ಜಾಡ್ಯತೆ – ನಿರುತ್ಸಾಹ. ಇದು ತಮಸ್ಸಿನ ಪ್ರಭಾವ. ಈ ಉಪಾಸನೆಯಿಂದ ಮನಸ್ಸು ಸತ್ವಪ್ರಧಾನವಾಗುತ್ತದೆ. ಸಾಧನೆಯಲ್ಲಿ ಮುಂದುವರಿದಂತೆ ಮನಶ್ಶಾಂತಿಯೂ ಆಂತರಿಕ ತೃಪ್ತಿಯೂ ಲಭ್ಯವಾಗುತ್ತದೆ ಮತ್ತು ಹೊಸ ಅನುಭವಗಳು ಉಂಟಾಗುತ್ತದೆ. ಇವು ಯೋಗಸಾಧನೆಯ ಮತ್ತು ಆಧ್ಯಾತ್ಮಿಕ ವಿಷಯದಲ್ಲಿರುವ ಸಂಶಯಗಳನ್ನು ನಿವಾರಿಸುತ್ತವೆ. ಪ್ರಮಾದವೆಂದರೆ ಅಜಾಗರೂಕತೆ, ಅಸಡ್ಡೆ, ಯಾವುದನ್ನೂ ಗಂಭೀರವಾಗಿ ಸ್ವೀಕರಿಸದಿರುವುದು. ಈ ಸಾಧನೆಯಿಂದ ಮನಸ್ಸು ಹೆಚ್ಚು ಜಾಗ್ರತವಾಗುತ್ತದೆ, ಯಾಂತ್ರಿಕತೆ ಕಡಮೆಯಾಗುತ್ತದೆ. ಅದರಿಂದಾಗಿ ಪ್ರಮಾದಕ್ಕೆ ಹೆಚ್ಚು ಅವಕಾಶವಿರುವುದಿಲ್ಲ. ಆಧ್ಯಾತ್ಮಿಕ ಸಾಧನೆಯನ್ನು ಗಂಭೀರವಾಗಿ ಸ್ವೀಕರಿಸುವುದರಿಂದ ದೈಹಿಕ ಆಲಸ್ಯವೂ ದೂರವಾಗುತ್ತದೆ. ಅವಿರತಿಯೆಂದರೆ ವಿಷಯಾಸಕ್ತಿ ಇನ್ನೂ ಉಳಿದುಕೊಂಡಿರುವುದು. ಓಂಕಾರೋಪಾಸನೆಯ ಮೂಲಕ ಆಂತರಿಕ ತೃಪ್ತಿ, ಆನಂದ, ಸಾರ್ಥಕತೆ ಲಭಿಸುವುದರಿಂದ ವಿಷಯಾಸಕ್ತಿಯು ದೂರವಾಗುತ್ತ ಬರುತ್ತದೆ. ಈ ಸಾಧನೆಯಲ್ಲಿ ಮುಂದುವರಿದಂತೆಲ್ಲ ಬುದ್ಧಿ ಸೂಕ್ಷ್ಮವಾಗುತ್ತದೆ, ವಿವೇಕಶಕ್ತಿ ಹೆಚ್ಚುತ್ತದೆ. ಇಂತಹ ಸ್ಥಿತಿಯಲ್ಲಿ ಭ್ರಾಂತಿಗೆ ಅವಕಾಶವೆಲ್ಲಿ? ಇಷ್ಟೆಲ್ಲ ಸಾಧನೆ ಮಾಡಿದರೂ ಏನನ್ನೂ ಸಾಧಿಸಿದಂತಾಗಲಿಲ್ಲ, ಏನನ್ನೂ ಪಡೆದಂತಾಗಲಿಲ್ಲ ಎಂಬ ಆಂತರಿಕ ಕೊರತೆಯೇ ಅಲಬ್ಧಭೂಮಿಕತ್ವ. ಆದರೆ ಸಾರ್ಥಕತೆಯ ಭಾವದಿಂದ ಮನಸ್ಸು ತುಂಬಿಕೊಂಡಿದ್ದರೆ ಇಂತಹ ಕೊರತೆಯ ಭಾವಕ್ಕೆ ಅವಕಾಶವಿರುವುದಿಲ್ಲ. ಆಧ್ಯಾತ್ಮಿಕ ಸಾಧನೆಯಲ್ಲಿ ಒಂದು ಸ್ಥಿತಿಯನ್ನು ಮುಟ್ಟಿ ಆ ಸ್ಥಿತಿಯಲ್ಲಿ ಮುಂದುವರಿಯಲಾಗದೇ ಇರುವುದು ಅನವಸ್ಥಿತತ್ವ. ಇದು ಮನಸ್ಸಿಗೆ ಖೇದವನ್ನು ಉಂಟುಮಾಡುತ್ತದೆ. ಈ ಪರಿಸ್ಥಿತಿಗೆ ಕಾರಣ ಮನಸ್ಸಿನ ಚಂಚಲತೆ. ಆದರೆ ದೀರ್ಘ ಸಾಧನೆಯ ಮೂಲಕ ಮನಸ್ಸು ಸ್ಥಿರವಾಗುತ್ತದೆ, ಏಕಾಗ್ರತೆಯೂ ದೃಢವಾಗುತ್ತದೆ. ಆಗ ಸಾಧಕನು ತಾನು ತಲುಪಿದ ಹಂತವನ್ನು ಉಳಿಸಿಕೊಳ್ಳಬಹುದು. ಹೀಗೆ ಅಂತರಾಯಗಳ ನಿವಾರಣೆಯಾಗುತ್ತದೆ.

ಸ್ವಾಮಿ ಯತೀಶ್ವರಾನಂದರ ಮಾತಿನೊಂದಿಗೆ ಈ ಲೇಖನವನ್ನು ಸಮಾಪ್ತಿಗೊಳಿಸುತ್ತೇವೆ:

''ಆಧ್ಯಾತ್ಮಿಕ ಜೀವನದ ಪ್ರಾರಂಭದಲ್ಲಿ ನೀವು ನಿಜವಾದ ಧ್ಯಾನದ ಬಗ್ಗೆ ತಲೆಕೆಡಿಸಿಕೊಳ್ಳಬೇಕಾಗಿಲ್ಲ. ಜಪ ಮಾಡಿ ಮತ್ತು ನಿಮ್ಮ ಇಷ್ಟದೇವತೆಯನ್ನು ಸ್ಮರಿಸಿ. ಮುಂದೊಂದು ಕಾಲದಲ್ಲಿ ಜಪ ಧ್ಯಾನದಲ್ಲಿ ಪರ್ಯವಸಾನಗೊಳ್ಳುತ್ತದೆ. ಜಪದ ಮೂಲಕ ದಿವ್ಯಚೈತನ್ಯವು ಜಗತ್ತಿಗಿಂತ ಹೆಚ್ಚು ಸತ್ಯವೆಂದು ತೋರಿಬರುತ್ತದೆ. ಆಗಲೇ ನಿಜವಾದ ಧ್ಯಾನ ಸಾಧ್ಯವಾಗುವುದು. ಮೊದಲು ಮಾಡಬೇಕಾದುದನ್ನು ಮೊದಲು ಮಾಡಿ, ಮುಂದಿನದು ತಾನಾಗಿಯೇ ಬರುತ್ತದೆ. ನಿಮ್ಮದೇ ಆದ ರೀತಿಯಲ್ಲಿ ಜಪ ಮಾಡಲು ಪ್ರಾರಂಭಿಸಿ. ಶ್ರಾವ್ಯ ಓಂಕಾರಕ್ಕೆ ಸಾಧಕನು ತನ್ನನ್ನು ಶ್ರುತಿಗೂಡಿಸುವುದರಿಂದ ಕ್ರಮೇಣ ಅದು ಹೆಚ್ಚು ನಿಶ್ಶಬ್ದವಾಗಿ ಶಬ್ದಬ್ರಹ್ಮನ ಸಂಪರ್ಕ ಉಂಟಾಗುತ್ತದೆ.'' *(ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ, ಪು. ೩೫೫)*

❖

## ಮಧುರ ನಾಮದ ಮಹಿಮೆ



ದೇವರ ಮಧುರ ನಾಮದ ಜಪಕ್ಕೆ ಒಂದು ಕ್ರಮವಿದೆ. ಅದು ನಿನಗೆ ಸಂತೋಷವನ್ನು ಕೊಡಬಲ್ಲುದು. ನಿನ್ನನ್ನು ಸಂತೋಷದ ಮೂರ್ತಿಯನ್ನಾಗಿ ಮಾಡಬಲ್ಲುದು.

ಅವನ ನಾಮವು ತನ್ನ ಸಾಮರ್ಥ್ಯದಲ್ಲಿ ತೀರ ಅದ್ಭುತವಾದುದು. ಅದು ನಿನ್ನನ್ನು ಆದ್ಯಂತವಾಗಿ ಪರಿಶುದ್ಧಗೊಳಿಸ ಬಲ್ಲುದು, ಮೇಲೇರಿಸಬಲ್ಲುದು ಮತ್ತು ಪ್ರಬುದ್ಧಗೊಳಿಸಬಲ್ಲುದು. ಪೂರ್ಣಶ್ರದ್ಧೆಯಿಂದ ನಿರಂತರವಾಗಿ ನಾಮವನ್ನು ಜಪಿಸು. ಅದರ ಶಕ್ತಿಯನ್ನು ಪ್ರಾಪಂಚಿಕ ಉದ್ದೇಶಗಳಿಗಾಗಿ ಉಪಯೋಗಿಸಬೇಡ.

ಅವನ ನಾಮವು ಅವನ ಹತ್ತಿರಕ್ಕೆ ಕರೆದೊಯ್ಯುವ ಮಾರ್ಗವನ್ನು ಬೆಳಗಿಸುವ ದೀಪದಂತೆ ಸಹಾಯ ಮಾಡುವುದು. ನಿಮ್ಮ ತಾಯಿಯನ್ನು ಕರೆಯುವಂತೆ ನೀನು ಅವನನ್ನು ಕರೆ. ನಿನ್ನ ಹೃದಯದ ಅತ್ಯಂತ ಪರಿಶುದ್ಧವೂ, ಗಾಢವೂ ಆದ ಭಾವನೆಗಳು ನಿನ್ನ ಕರೆಯಲ್ಲಿ ಕೇಂದ್ರೀಕೃತವಾಗಿರಲಿ. ನಾಮದ ಮಹಿಮೆ ಕೆಲವರಿಗೆ ಮಾತ್ರ ಗೊತ್ತು. ಸಾಧು ಸಂತರು ಅದರ ವೈಭವವನ್ನು ಆನಂದ ಪರವಶತೆಯ ಮಾತುಗಳಲ್ಲಿ ಹಾಡಿರುವರು.

*–ಸ್ವಾಮಿ ರಾಮದಾಸ್*

# ನಾಮಜಪದ ಆಧ್ಯಾತ್ಮಿಕ ಔಚಿತ್ಯ ಮತ್ತು ಅದರ ಮಾನಸಿಕ ಪರಿಣಾಮ

**ಸ್ವಾಮಿ ಮುಕ್ತಿದಾನಂದ**



**ನಾಮಸ್ಮರಣೆ ಮತ್ತು ಮನಸ್ಸು :** ಭಗವಂತನ ನಾಮಸ್ಮರಣೆಯು ನಮ್ಮ ಮನಸ್ಸನ್ನು ಪರಿಶುದ್ಧಗೊಳಿಸಿ ಭಗವತ್ಪ್ರಾಪ್ತಿಗೆ ಸಹಾಯಕವಾಗುವುದೆಂದು ಭಕ್ತಿಸಂಪ್ರದಾಯದ ಸಂತರು ನಾಮಜಪದ ಮಹತ್ವವನ್ನು ಕುರಿತು ಹೇಳಿದ್ದಾರೆ. ನಾಮ ಮತ್ತು ನಾಮಿ (ಅಂದರೆ ನಾಮವನ್ನು ಸೂಚಿಸುತ್ತಿರುವ ಭಗವತ್ ಸ್ವರೂಪ) ಅಭೇದ. ಅಂದರೆ ಅವರೆಡೂ ಒಂದೇ. ನಾಮವು ಭಗವಂತನ ಶಬ್ದ ಸಂಜ್ಞೆಯಾದರೆ, ಅದರ ಅರ್ಥ ಮತ್ತು ಆಕಾರಸಂಜ್ಞೆ ಆ ಭಗವತ್ ಸ್ವರೂಪ. ಅವು ಒಂದೇ ನಾಣ್ಯದ ಎರಡು ಮುಖಗಳಂತೆ ಪರಸ್ಪರ ಅನ್ಯೋನ್ಯ ಮಾತ್ರವಲ್ಲ, ಅವು ಏಕಮೂಲವಾಗಿ ಇರುವಂಥವು.

ಹಿಂದೂಧರ್ಮದ ಆಧ್ಯಾತ್ಮಿಕ ಸಾಧನೆಯ ಪ್ರಣಾಳಿಯಲ್ಲಿ ಸಾರ್ವತ್ರಿಕವಾಗಿ ನಾಮಸ್ಮರಣೆ ಅಥವಾ ಮಂತ್ರಜಪದ ಶಬ್ದ ಸಂಜ್ಞೆಗೆ ಪ್ರಾಥಮಿಕ ಸ್ಥಾನವನ್ನು ಕೊಡಲಾಗಿದೆ. ಆದ್ದರಿಂದ ಗುರು ಆಧ್ಯಾತ್ಮಿಕ ಜೀವನವನ್ನು ಕ್ರಮಬದ್ಧವಾಗಿ ಪ್ರಾರಂಭ ಮಾಡುವವರಿಗೆ ಸಾಧನೆಗೆ ನಿರ್ದೇಶನವನ್ನು ನೀಡುವ ಮೊದಲು ಮಂತ್ರದೀಕ್ಷೆಯನ್ನು ಕೊಟ್ಟು, ಸಾಧಕನು ತನ್ನ ಸಾಧನೆಯನ್ನು ಪ್ರಾರಂಭಿಸುವಂತೆ ಪ್ರೇರೇಪಿಸುವುದನ್ನು ಕಾಣಬಹುದು. ಮಂತ್ರದೀಕ್ಷೆಯಲ್ಲಿ ಸಾಮಾನ್ಯವಾಗಿ ಮಂತ್ರವನ್ನು ಅಥವಾ ದೇವರ ಹೆಸರನ್ನು ಗುರು ಉಪದೇಶಿಸುತ್ತಾನೆ. ಶ್ರದ್ಧೆಯಿಂದ ಮತ್ತು ಭಕ್ತಿಯಿಂದ ಸತತವಾಗಿ ನಾಮಸ್ಮರಣೆ ಅಥವಾ ಮಂತ್ರಜಪವನ್ನು ಮಾಡಿದರೆ ಅದರಿಂದ ಪವಿತ್ರವಾದ ಶಬ್ದ ತರಂಗಗಳು ನಮ್ಮ ಮನಸ್ಸಿನಲ್ಲಿ ಉದ್ಭವಿಸಿ, ಆಧ್ಯಾತ್ಮಿಕ ಸಂಸ್ಕಾರವನ್ನು ನಮ್ಮ ಚಿತ್ತದಲ್ಲಿ ನಿರ್ಮಾಣವಾಗುವಂತೆ ಮಾಡುತ್ತವೆ. ಹೀಗೆ ನಿರ್ಮಾಣವಾದ ಆಧ್ಯಾತ್ಮಿಕ ಸಂಸ್ಕಾರ ಅಂದರೆ ಬೀಜರೂಪದ (Seed impressions) ಪ್ರಭಾವಗಳು ಸೂಕ್ಷ್ಮ ಆಧ್ಯಾತ್ಮಿಕ ಜಾಗೃತಿಯ ಮೂಲಕೇಂದ್ರಗಳಾಗಿ ನಮ್ಮ ಸ್ಮೃತಿಪಟಲವನ್ನು ಆವರಿಸುತ್ತವೆ; ಮನಸ್ಸಿನ ಮೇಲೆ ಸತ್ಪರಿಣಾಮವನ್ನು ಬೀರುತ್ತವೆ. ಆದುದರಿಂದ ನಾಮಜಪ ಮಾಡುತ್ತ ಹೋದಂತೆ ಭಗವಂತನ ದಿವ್ಯನಾಮದ ಮಂತ್ರಶಕ್ತಿಯು ಸತ್ ಸಂಸ್ಕಾರಗಳನ್ನು ಮೂಡಿಸುತ್ತದೆ. ಕ್ರಮೇಣ ಚಿತ್ತಶುದ್ಧಿಯಾಗಿ ಮನಸ್ಸನ್ನು ಊರ್ಧ್ವಮುಖಿಗೊಳಿಸಿ, ಅದನ್ನು ಭಗವತ್‌ಕೇಂದ್ರಿತವನ್ನಾಗಿ ಮಾಡುತ್ತದೆ.

**ಮೆದುಳಿನ ಮೇಲೆ ನಾಮಜಪದ ಪರಿಣಾಮ:** ಮನುಷ್ಯನ ಮೆದುಳಿನಲ್ಲಿ ಜೀವವಿಕಾಸದ ನಿಯಮಕ್ಕನುಸಾರವಾಗಿ ಮುಖ್ಯವಾಗಿ ಮೂರು ಸ್ತರಗಳಿವೆ. ಮೊದಲನೆಯದು ಜೈವಿಕವಾದ ಪ್ರಕ್ರಿಯೆಗಳನ್ನು ನಿಯಂತ್ರಿಸುವ, ಪ್ರಾಣಿಗಳ ಸ್ವಭಾವ ನಿರ್ಮಾಣ ಮಾಡುವ ಒಳ ಮೆದುಳು (Limbic system). ಅದರ ಮೇಲೆ ಮೆದುಳಿನ ಮಧ್ಯ ಭಾಗದಲ್ಲಿ (Mid brain) ಮನುಷ್ಯ ಸ್ವಭಾವದ ಸಾಮಾನ್ಯ ಬುದ್ಧಿಶಕ್ತಿಯನ್ನು ಅಭಿವ್ಯಕ್ತಿಗೊಳಿಸುವ ಮಧ್ಯಭಾಗದ ಮೆದುಳಿನ ಸ್ತರ. ಅದರ ನಂತರದ, ಮೇಲಿನ ಸ್ತರದಲ್ಲಿ ಸೃಜನಶೀಲತೆ, ವೈಜ್ಞಾನಿಕ ಸಂಶೋಧನೆ ಮತ್ತು ಆಧ್ಯಾತ್ಮಿಕ ಪ್ರಜ್ಞೆಯನ್ನು ಜಾಗೃತಗೊಳಿಸುವ, ಇವುಗಳ ನೆಲೆಯಾದ ಇಂದ್ರಿಯಾತೀತವಾದ ವಿಷಯವನ್ನು ಗ್ರಹಿಸಲು ಸಾಧ್ಯವಾಗುವ ಉತ್ಕೃಷ್ಟವಾದ ಮೆದುಳಿನ ಮೇಲ್ಪದರವಿರುವುದು. Cortex ಎಂದು ಕರೆಯಲ್ಪಡುವ ಇದು ಮನಸ್ಸಿನ ಆಧ್ಯಾತ್ಮಿಕ ಶಕ್ತಿಯ ಉನ್ನತ ಹೊರವಲಯ.

ನಮ್ಮ ಮೆದುಳಿಗೆ ಹೇಗೆ ಸುದ್ದಿಗಳು ತಲುಪುತ್ತವೆ ಹಾಗೂ ಮೆದುಳು ಹೇಗೆ ಆದೇಶವನ್ನು ರವಾನಿಸುತ್ತದೆ ಎಂಬುದನ್ನು ಯೋಗ ಮತ್ತು ತಂತ್ರಶಾಸ್ತ್ರಗಳು ವಿವರಿಸುತ್ತವೆ. ಅವು ಮನುಷ್ಯನ

**ನಾಮಜಪವು ಕೇವಲ ಬಾಹ್ಯಕ್ರಿಯೆಯಾಗಿರದೆ, ಅದು ಮನುಷ್ಯನ ಮಾನಸಿಕ, ಆಧ್ಯಾತ್ಮಿಕ ಆಯಾಮಗಳಲ್ಲಿ ಮಹತ್ತರ ಬದಲಾವಣೆಗಳನ್ನು ಉಂಟುಮಾಡುವುದರಿಂದ ಅದು ಒಂದು ಆಂತರಿಕ ಕ್ರಿಯೆಯೂ ಆಗಿದೆ. ನಮ್ಮ ಪ್ರಾಚೀನ ದರ್ಶನಗಳ ಹಾಗೂ ಆಧುನಿಕ ವಿಜ್ಞಾನದ ಹಿನ್ನೆಲೆಯಲ್ಲಿ ಈ ವಿಷಯವನ್ನು ವಿಶ್ಲೇಷಿಸಿರುವ ಪೂಜ್ಯ ಸ್ವಾಮೀಜಿಯವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರು. ರಾಮಕೃಷ್ಣ ಮಹಾಸಂಘದ ವಿಶ್ವಸ್ತ ಮಂಡಲಿಯ ಸದಸ್ಯರಾಗಿರುವ ಅವರು ಉತ್ತಮ ಚಿಂತಕರೂ, ಪ್ರವಚನಕಾರರೂ, ಲೇಖಕರೂ ಆಗಿದ್ದಾರೆ.**




ಬೆನ್ನುಮೂಳೆಯಲ್ಲಿ ಇಡಾ ಮತ್ತು ಪಿಂಗಳಾ ಎಂಬ ಎರಡು ನರಗಳ ಪ್ರವಾಹವನ್ನು ಗುರುತಿಸುತ್ತವೆ. ಅವುಗಳ ಮಧ್ಯದಲ್ಲಿ ಹರಿಯುವ ಟೊಳ್ಳು ನಾಳವೇ ಸುಷುಮ್ನಾ. ಇಡಾ ನಾಡಿಯು ಸುದ್ದಿಯನ್ನು ಮೆದುಳಿಗೆ ಒಯ್ಯುವುದು. ಪಿಂಗಳಾ ನಾಡಿಯು ಮೆದುಳಿನಿಂದ ಆಯಾ ಭಾಗಗಳಿಗೆ ಸುದ್ದಿಯನ್ನು ತರುವುದು. ಒಂದು ಜ್ಞಾನೇಂದ್ರಿಯ, ಇನ್ನೊಂದು ಕರ್ಮೇಂದ್ರಿಯ. ಒಂದು ಕೇಂದ್ರಾಕರ್ಷಕ, ಇನ್ನೊಂದು ಕೇಂದ್ರಾಪಕರ್ಷಕ. ಈ ರೀತಿ ಎಲ್ಲ ಚಲನೆಗಳೂ ಮತ್ತು ಅವುಗಳ ಸಂವೇದನೆಗಳೂ ಈ ನರತಂತುಗಳ ಮೂಲಕ ಮೆದುಳಿಗೆ ಹೋಗುತ್ತವೆ ಮತ್ತು ಮೆದುಳಿನಿಂದ ಹೊರಬರುತ್ತವೆ. ಇವುಗಳ ಮಧ್ಯೆ ಸುಷುಮ್ನಾ ಕಾಲುವೆ ಇದೆ. ಈ ಕಾಲುವೆಯ ಮೂಲಕ ಮಾನಸಿಕ ಶಕ್ತಿ ಹರಿದರೆ, ಯಾವುದೇ ನರತಂತುಗಳ ಆವಶ್ಯಕತೆ ಇಲ್ಲದೆ, ಎಲ್ಲ ಜ್ಞಾನವೂ ಒದಗಿ ಬರುವುದು. ಮಿದುಳ ಬಳ್ಳಿಯ ಅಂದರೆ ಸುಷುಮ್ನಾ ಕಾಲುವೆಯ ಉದ್ದಕ್ಕೂ ಇರುವ ಅನೇಕ ನರ ಗ್ರಂಥಿಗಳು ಸಾಧಕನು ತನ್ನ ಅನುಭವಕ್ಕೆ ತಂದುಕೊಳ್ಳುವ ಚಕ್ರಗಳನ್ನು ಸೂಚಿಸುತ್ತವೆ. ಅವುಗಳಲ್ಲಿ ಅತ್ಯಂತ ಕೆಳಗಿರುವುದು ಮೂಲಾಧಾರ; ಅತ್ಯಂತ ಮೇಲಿರುವುದು ಮಿದುಳಿನಲ್ಲಿರುವ ಸಹಸ್ರಾರ. ಹೊಕ್ಕಳಿನ ಸಮೀಪ ಇರುವ ಚಕ್ರವನ್ನು ಮಣಿಪುರ ಎಂದು ಕರೆಯುತ್ತಾರೆ. ದೀರ್ಘಕಾಲದ ಅಭ್ಯಾಸ ಮತ್ತು ನಿರಂತರ ಏಕಾಗ್ರತೆಯ ಮೂಲಕ ಮೂಲಾಧಾರವಿರುವ ಭಾಗ ಜಾಗೃತಗೊಳ್ಳುತ್ತದೆ. ಆಗ ಅಲ್ಲಿ ಸುಪ್ತವಾಗಿರುವ ಶಕ್ತಿಯು ಕಾರ್ಯೋನ್ಮುಖವಾಗಿ ಕ್ರಮವಾಗಿ ಮೇಲ್ಮುಖವಾಗಿರುವ ಒಂದು ಚಕ್ರದಿಂದ ಇನ್ನೊಂದು ಚಕ್ರಕ್ಕೆ ಸಾಗುತ್ತ ಪ್ರಚಂಡ ಪ್ರತಿಕ್ರಿಯೆಯನ್ನು ಉಂಟುಮಾಡುವುದು. ಭಗವಂತನ ಮೇಲಿನ ಭಕ್ತಿ, ವಿಶೇಷವಾಗಿ ಏಕಾಗ್ರತೆಯಿಂದ ಮಾಡಲ್ಪಡುವ ನಾಮಜಪ ಅಥವಾ ಮಂತ್ರಜಪದ ಮೂಲಕ ಈ ಶಕ್ತಿ ಜಾಗೃತವಾಗಬಹುದು. ಒಮ್ಮೊಮ್ಮೆ ಸಿದ್ಧಪುರುಷರ ಕೃಪೆಯಿಂದಲೂ ಈ ಶಕ್ತಿ ಜಾಗೃತ ವಾಗುತ್ತದೆ. ಇದನ್ನೇ ತಂತ್ರಶಾಸ್ತ್ರದಲ್ಲಿ 'ಕುಂಡಲಿನೀ ಶಕ್ತಿ' ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ನಾಮ ಅಥವಾ ಮಂತ್ರಜಪದ ಸಾಧನೆ ಧರ್ಮದ ಒಂದು ವಿಜ್ಞಾನಶಾಸ್ತ್ರ ಎನ್ನುವುದು ಗೋಚರವಾಗುತ್ತದೆ.

ಸಾಮಾನ್ಯ ಶಬ್ದಗಳು ಲೌಕಿಕವಾದ, ಇಂದ್ರಿಯಗೋಚರವಾದ ಪ್ರಪಂಚವನ್ನು ಸೂಚಿಸುವ, ಸಾಮಾನ್ಯ ಬುದ್ಧಿಶಕ್ತಿ ಮತ್ತು ಮೆದುಳನ್ನು ಪ್ರಚೋದಿಸುವ ಅರ್ಥವುಳ್ಳವುಗಳು. ಅಂದರೆ ವಿವಿಧ ವಸ್ತುಗಳ, ನೆಲ, ಜಲ, ಇತ್ಯಾದಿ ಮನುಷ್ಯನ ಮಾನಸಿಕ ಪ್ರಕ್ರಿಯೆಗಳಿಗೆ ಸಂಬಂಧಿಸಿದ ಅರ್ಥವುಳ್ಳವುಗಳು. ಆದರೆ ಭಗವಂತನ ದಿವ್ಯನಾಮ, ಅಂದರೆ ರಾಮ, ಕೃಷ್ಣ, ಶಿವ, ಓಂ ಮುಂತಾದುವು ದೈವೀಸ್ವರೂಪದ ಸಂಜ್ಞೆಗಳು. ಇವು ಇಂದ್ರಿಯಗೋಚರ ಪ್ರಪಂಚಕ್ಕೆ ಅತೀತವಾದ ದೈವೀಸಂಜ್ಞೆಗಳು. ಮನಸ್ಸಿನ ಉನ್ನತಸ್ತರದಲ್ಲಿರುವ ಈ ಆಧ್ಯಾತ್ಮಿಕವಲಯದಲ್ಲಿ (ವಿಜ್ಞಾನಮಯ ಕೋಶ) ನಮ್ಮ ಆಧ್ಯಾತ್ಮಿಕ ಜ್ಞಾನ, ಭಾವನೆ, ಅನುಭವಗಳು ನಿಗೂಢವಾಗಿವೆ.

ನಾಮಜಪ ಅಥವಾ ಮಂತ್ರಜಪ ನಮ್ಮ ಮೆದುಳಿನ ಮೇಲ್ಪದರಲ್ಲಿ ಸುಪ್ತವಾಗಿರುವ ಉತ್ಕೃಷ್ಟವಾದ ಆಧ್ಯಾತ್ಮಿಕ ಕೇಂದ್ರಗಳನ್ನು ಜಾಗೃತಗೊಳಿಸಿ, ನಮಗೆ ದೈವೀಭಾವ, ಜ್ಞಾನ, ಭಗವದ್ ದರ್ಶನ ಪ್ರಾಪ್ತವಾಗುವಂತೆ ಮಾಡುತ್ತದೆ. ಇದನ್ನು ಪಾತಂಜಲ ಯೋಗಸೂತ್ರದಲ್ಲಿ ಸಂಪ್ರಜ್ಞಾತ ಸ್ಥಿತಿ ಎಂದು ಹೇಳಲಾಗಿದೆ. ಈ ಸ್ಥಿತಿಯಲ್ಲಿ ಬೇರೆ ಬೇರೆ ಪ್ರಕಾರದ ಆಧ್ಯಾತ್ಮಿಕ ಅನುಭವಗಳು ಸಾಧಕನಿಗೆ ಪ್ರಾಪ್ತವಾಗುತ್ತವೆ. ಇದೇ ನಾಮ ಜಪದ ಪ್ರಭಾವ, ಹಾಗೂ ಜಪದ ಮಾಹಾತ್ಮ್ಯ. ಸಂತರು ಹಾಗೂ ಶಾಸ್ತ್ರಗಳು ಈ ಅರ್ಥದಲ್ಲಿ '**ಜಪಾತ್ ಸಿದ್ಧಿಃ**' ಎಂದು ಘೋಷಿಸಿವೆ.

**ಪ್ರಾರ್ಥನೆ ಮತ್ತು ಜಪ :** ಭಗವದ್ಗೀತೆಯ ವಿಭೂತಿಯೋಗವೆಂಬ ಅಧ್ಯಾಯದಲ್ಲಿ ಶ್ರೀಕೃಷ್ಣ '**ಯಜ್ಞಾನಾಂ ಜಪಯಜ್ಞೋಽಸ್ಮಿ**' ಎನ್ನುತ್ತಾ ನಾಮಜಪದ ಮಹತ್ವವನ್ನು ತಿಳಿಸಿರುತ್ತಾನೆ. ನಿತ್ಯಾನುಷ್ಠಾನದ ಜಪ ಸಾಧನೆಯನ್ನು ಪ್ರಾರಂಭಿಸುವ ಮೊದಲು ಸ್ವಲ್ಪ ಸಮಯ ಭಗವಂತನ ದಿವ್ಯರೂಪವನ್ನು ಭಾವಿಸಿಕೊಂಡು ಪ್ರಾರ್ಥನೆಯಲ್ಲಿ ತೊಡಗುವುದು ಬಹಳ ಪರಿಣಾಮಕಾರಿ. ಪ್ರಾರ್ಥನೆಯು ನಾವು ಭಗವಂತನೊಡನೆ ಒಂದು ಸಂಬಂಧವನ್ನು ಕಲ್ಪಿಸಿಕೊಳ್ಳಲು ನೆರವಾಗುತ್ತದೆ. ಮನಸ್ಸನ್ನು ಜಾಗೃತವಾಗಿಡಲೂ ಅದು ಸಹಾಯಮಾಡುವುದು. ಯೋಗಸೂತ್ರದಲ್ಲಿ '**ತಜ್ಜಪಸ್ತದರ್ಥಭಾವನಮ್**' ಎಂದರೆ ಜಪವನ್ನು ರೂಪಸ್ಮರಣೆಯೊಂದಿಗೆ ಮಾಡಬೇಕೆಂದು ಹೇಳಲಾಗಿದೆ. 'ತದರ್ಥಭಾವನಮ್'– ಎಂದರೆ ನಾಮಸ್ಮರಣೆ ಮತ್ತು ರೂಪಸ್ಮರಣೆಯನ್ನು ಪೂರ್ಣ ಅರಿವಿನಿಂದ, ಭಕ್ತಿಯಿಂದ, ಸತತವಾಗಿ (ಸಾಧ್ಯವಾದಷ್ಟು ಏಕಾಗ್ರತೆಯಿಂದ) ಮಾಡಿದಾಗ ನಮ್ಮಲ್ಲಿ ಪವಿತ್ರ ಭಾವನೆಗಳು ಜಾಗೃತಗೊಳ್ಳುತ್ತವೆ. ಅದನ್ನು ಆಧ್ಯಾತ್ಮಿಕ ಉದ್ದೇಶದಿಂದ ಅಂದರೆ ಭಗವಂತನ ಪ್ರೀತ್ಯರ್ಥವಾಗಿ ಮಾಡತಕ್ಕದ್ದು.

ಭಗವಂತನ ನಾಮದಲ್ಲಿ ಅವನ ಶಕ್ತಿಯು ಸೂಕ್ಷ್ಮರೂಪದಲ್ಲಿ ಹಾಗೂ ಸುಪ್ತವಾಗಿ ಅಡಕವಾಗಿರುವುದರಿಂದ, ನಾಮೋಪಾಸನೆಯನ್ನು ಶ್ರದ್ಧಾಭಕ್ತಿಯಿಂದ ಮಾಡಿದರೆ ಸುಪ್ತವಾಗಿರುವ ಆ ಮಂತ್ರಶಕ್ತಿ ಕ್ರಮೇಣ ವ್ಯಕ್ತವಾಗುವುದು. ಅದರಿಂದ ಚಿತ್ತಶುದ್ಧಿ ಸಾಧಿತವಾಗಿ ಭಗವಂತನ ದರ್ಶನ ಪ್ರಾಪ್ತವಾಗುವುದು. ಉದಾಹರಣೆಗೆ, '**ರಾಮಾಯ ನಮಃ**' – 'ರಾಮನಿಗೆ ನಮಸ್ಕಾರ' ಎಂಬ ಮಂತ್ರದಲ್ಲಿ ಜೀವಾತ್ಮನ ಸ್ವರೂಪವನ್ನು (ಅಂದರೆ ನನ್ನ ನೈಜ ಸ್ವರೂಪವನ್ನು) ತೋರಿಸುವ ಪರಮಾತ್ಮಸ್ವರೂಪನಾದ ಶ್ರೀರಾಮನ ದರ್ಶನಕಾಂಕ್ಷಿಯಾಗಿ, ಅವನ ಅನುಸಂಧಾನ ಮಾಡುತ್ತೇನೆ ಎಂದು ಅರ್ಥ. ಅನುಸಂಧಾನ ತೀವ್ರವಾಗಿ ಗಾಢವಾದಂತೆ ಮನಸ್ಸು ಪರಮಾತ್ಮನಲ್ಲಿ ತಲ್ಲೀನವಾಗುತ್ತದೆ, ಕ್ರಮೇಣ ತಾದಾತ್ಮ್ಯವೂ ಸಾಧಿಸಲ್ಪಡುತ್ತದೆ. ಹೀಗೆ ನಾಮಜಪವು ಜೀವಾತ್ಮ–ಪರಮಾತ್ಮನ ಅನುಸಂಧಾನ, ಐಕ್ಯತೆಯನ್ನು ಸೂಚಿಸುತ್ತದೆ.

**ಸಾಧಕರಿಗೆ ಸಲಹೆಗಳು :**

- ನಾಮಸ್ಮರಣೆ ಅಥವಾ ಮಂತ್ರಜಪವನ್ನು ನಿರ್ದಿಷ್ಟವಾದ, ಪವಿತ್ರ ಮತ್ತು ಅನುಕೂಲ ಸ್ಥಾನದಲ್ಲಿ ಪ್ರತಿದಿನ ನಿಗದಿತ ಸಮಯದಲ್ಲಿ ಅಂದರೆ ಬೆಳಗ್ಗೆ ಸ್ನಾನದ ನಂತರ, ಸಂಧ್ಯಾಕಾಲದಲ್ಲಿ ಮಾಡಬಹುದು.

- ಗುರುವಿನ ನಿರ್ದೇಶದಂತೆ ಜಪಮಾಲೆಯನ್ನು ಉಪಯೋಗಿಸಿ, ಅಥವಾ ಬೆರಳೆಣಿಕೆಯಲ್ಲಿ ನಿರ್ದಿಷ್ಟಕಾಲ, ನಿರ್ದಿಷ್ಟ ಸಂಖ್ಯೆಯ ಜಪವನ್ನು ಮಾಡಬಹುದು.

- ಜಪವನ್ನು ಬೆಳಿಗ್ಗೆ ಎದ್ದ ತಕ್ಷಣ ಮನಸ್ಸನ್ನು ತಮಸ್ಸಿನಿಂದ ನಿವಾರಿಸಿ, ನಿದ್ದೆಯ ನಂತರ ನಾನು ಎಂಬ ಭಾವ ಉಂಟಾದ ಕೂಡಲೆ, ನಮ್ಮನ್ನು ನಾವು ಭಗವಂತನಿಗೆ ಅರ್ಪಿಸಿ, ಹಾಸಿಗೆಯಲ್ಲೆ ಕುಳಿತು ಅಂದರೆ ಒಂದೆರಡು ನಿಮಿಷವಾದರೂ ಜಪ ಮಾಡಿ, ಭಗವಂತನಲ್ಲಿ ಪ್ರಾರ್ಥಿಸಿ, ನಮ್ಮ ಹೊಸದಿನವನ್ನು ದೇವರ ಸ್ಮರಣೆಯಿಂದ ಪ್ರಾರಂಭಿಸುವುದು ಅತ್ಯಂತ ಪರಿಣಾಮಕಾರಿ.

- ದಿನನಿತ್ಯದ ವ್ಯವಹಾರಗಳಲ್ಲಿ ತೊಡಗಿರುವಾಗ, ಯಾವುದೇ ಕೆಲಸವನ್ನು ಪ್ರಾರಂಭಿಸುವ ಮೊದಲು, ಕೆಲಸದ ಮಧ್ಯೆ ಹಾಗೂ ಕೆಲಸದ ನಂತರ, ಕೆಲವು ಕ್ಷಣ ನಾಮಸ್ಮರಣೆಯನ್ನು ಅಭ್ಯಾಸ ಮಾಡುವುದರಿಂದ, ಕೆಲಸವನ್ನು ಕೂಡಾ ಭಗವತ್ ಕೇಂದ್ರಿತವನ್ನಾಗಿ, ಅಂದರೆ ಅವನ ಪ್ರೀತ್ಯರ್ಥವಾಗಿ ಮಾಡಲು ಸಾಧ್ಯವಾಗುತ್ತದೆ.

- ಕೊನೆಯದಾಗಿ ಮಲಗುವ ಮೊದಲು, ನಿದ್ದೆಯು ನಮ್ಮಿಂದ ಪ್ರಪಂಚವನ್ನು ಮರೆಸುವ ಮೊದಲು, ಕೊನೆಯಪಕ್ಷ ಎರಡು ಮೂರು ನಿಮಿಷವಾದರೂ ಪ್ರಯತ್ನಪೂರ್ವಕವಾಗಿ ದೇವರ ನಾಮಸ್ಮರಣೆಯನ್ನು ರೂಪಸ್ಮರಣೆಯೊಂದಿಗೆ ಮಾಡುತ್ತಾ, ಅವನ ಪಾದಾರವಿಂದಗಳಿಗೆ ನಮ್ಮನ್ನು ನಾವು ಅರ್ಪಿಸಿಕೊಳ್ಳಬೇಕು. ಭಗವಂತನ ದಿವ್ಯಸ್ಮೃತಿಯನ್ನು ಹೃದಯದಲ್ಲಿ ಜಾಗೃತಗೊಳಿಸಿಕೊಂಡು, ತಲೆದಿಂಬೇ ಅವನ ಪಾದಾರವಿಂದ ಎಂದು ಭಾವಿಸಿ, ನಿದ್ದೆಗೆ ಹೋಗುವ ಅಭ್ಯಾಸ ಮಾಡಿದರೆ, ನಮ್ಮ ನಿದ್ದೆಯ ಕ್ರಮವೇ ಯೋಗನಿದ್ರೆಯಾಗುವುದು. ನಿದ್ರಾಲೋಕ ದೇವಲೋಕವಾಗುವುದು. ಹೀಗೆ ಮಾಡಿದರೆ ದಿವ್ಯಸ್ವಪ್ನಗಳನ್ನು ಪಡೆಯುವ ಸಂಭವವಿರುತ್ತದೆ.

- ಭಗವಂತನ ನಾಮಕ್ಕೆ ಅಪಾರ ಶಕ್ತಿ ಇದೆ ಎಂಬುದು ಅನೇಕ ಸಂತರ, ಮಹಾತ್ಮರ ಅನುಭವ. ಅದನ್ನು ನಾವು ಸತತವಾಗಿ, ಪೂರ್ಣ ಅರಿವಿನಿಂದ, ಶ್ರದ್ಧಾಭಕ್ತಿಗಳಿಂದ ಅಭ್ಯಾಸ ಮಾಡಿದರೆ ಚಿತ್ತಶುದ್ಧಿ ಸಾಧಿತವಾಗಿ ನಮ್ಮ ಅಂತರಂಗದ ಪರಿವರ್ತನೆಯಾಗುತ್ತದೆ. 


One of the leading Urban Co-operative Banks in Karnataka State.
Total Business Mix Exceeds ₹.1947 Crores
Eleven fully computerized Branches under Core Banking spread all over Bangalore City.
Total Working Capital Exceeds ₹1,315 Crores
Total Deposits Exceeds ₹.1204 Crores
BOARD OF MANAGEMENT
SIR M. VISVESVARAYA CO-OPERATIVE BANK LIMITED
Corporate Office: #109, Shankar Mutt Road, Shankarapuram, Bangalore-560 004. Ph: 080-2661 1141
E-mail: corporate@vcb.co.in website : www.vcb.com
BRANCHES : Kumara Park West : Ph. 22956401/402 - Shankar Mutt Road : Ph. 22956403/404 - Rajajinagar : Ph. 22956406/407
J.P. Nagar : Ph. 22956409/410 - BSK III Stage : Ph. 22956411/412 - Vijayanagar : Ph. 22956413/414 - Kengeri : Ph. 22956415
Mathikere:Ph. 22956416 - BTM Layout : Ph. 22956417/418 - Rajarajeshwarinagar : Ph. 22956421 - Konanakunte : Ph. 22956422

# ಬೀಜಮಂತ್ರಗಳ ಮಹತ್ವ

ಸ್ವಾಮಿ ಆತ್ಮಜ್ಞಾನಂದ



**ನಾಮಜಪ, ಮಂತ್ರಜಪ ಹಾಗೂ ಮಂತ್ರದೀಕ್ಷೆಯ ಹಿಂದಿರುವ ತಾತ್ತ್ವಿಕ ಅರ್ಥಕ್ಕೆ ಒಂದು ಮೂರ್ತರೂಪವನ್ನು ಒದಗಿಸುವುದೇ ಬೀಜಮಂತ್ರಗಳು. ಈ ಕುರಿತು ಶಾಸ್ತ್ರ ಹಾಗೂ ಪರಂಪರೆಯ ದೃಷ್ಟಿಕೋನಗಳನ್ನು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ವಿವರಿಸಿರುವ ಪೂಜ್ಯ ಸ್ವಾಮೀಜಿಯವರು 'ವಿವೇಕಪ್ರಭ' ದ ಸಂಪಾದಕರಾಗಿದ್ದರು. ಪ್ರಸ್ತುತ ಅವರು ಚೆನ್ನೈ ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

**ವೇ**ದಗಳ ಕಾಲದಿಂದಲೂ ಹಿಂದೂಧರ್ಮವು ಮಂತ್ರಗಳನ್ನು ಬಳಸುತ್ತಿದ್ದು ಇತರ ಧರ್ಮಗಳಿಗೆ ಹೋಲಿಸಿದರೆ, ಈ ಧರ್ಮವು ಮಂತ್ರಶಾಸ್ತ್ರಕ್ಕೆ ಬಹಳಷ್ಟು ಪ್ರಾಶಸ್ತ್ಯವನ್ನು ಕೊಟ್ಟಿರುವುದು ಕಂಡುಬರುತ್ತದೆ. ವೇದಗಳ ಪ್ರಥಮ ಭಾಗವನ್ನು ಮಂತ್ರವೆಂದು ಕರೆಯುತ್ತಾರೆ. ಇವು ವಿಭಿನ್ನ ದೇವತೆಗಳನ್ನು ಕುರಿತು ಮಾಡಿರುವ ಪ್ರಾರ್ಥನೆಗಳು ಎಂದು ಹೇಳಬಹುದು. ನಮಗೆಲ್ಲರಿಗೂ ಸುಪರಿಚಿತವಾಗಿರುವ ಗಾಯತ್ರೀ ಮಂತ್ರವೂ ಕೂಡ ವೈದಿಕ ಮಂತ್ರ; 'ಧೀ' ಅಥವಾ ಬುದ್ಧಿಯನ್ನು ಪ್ರಚೋದಿಸು ಎಂದು ಕೇಳಿಕೊಳ್ಳುವ ಪ್ರಾರ್ಥನೆ. ವೇದದಲ್ಲಿ ಬರುವ ಮಂತ್ರಗಳನ್ನು ಯಾಗಯಜ್ಞಗಳಲ್ಲಿ ಬಳಸುತ್ತಿದ್ದರು. ಮಂತ್ರಗಳ ಉಚ್ಚಾರಣೆ ಸರಿಯಾಗಿದ್ದು, ಅದನ್ನು ಸರಿಯಾದ ಸಮಯದಲ್ಲಿ ಬಳಸಿದ್ದೇ ಆದರೆ ಆಯಾ ದೇವತೆಗೆ ನೀಡುವ ಆಹುತಿ ಅಗ್ನಿಯ ಮೂಲಕ ತಲುಪುವುದು ಎಂದು ವೇದಗಳಲ್ಲಿ ಹೇಳಿದೆ. ಮಂತ್ರಗಳಲ್ಲಿ ಹಲವು ವಿಧ. ಆದರೆ ಈ ಎಲ್ಲ ಮಂತ್ರಗಳಿಗೂ ತನ್ನದೇ ಆದ ಶಕ್ತಿಯಿದೆ; ಅಸಾಧ್ಯವಾದ ಶಕ್ತಿ, ಬಲ, ಸಾಮರ್ಥ್ಯ, ಯಶಸ್ಸುಗಳನ್ನು ಮಂತ್ರಗಳ ಮೂಲಕ ಗಳಿಸಬಹುದು ಎಂದು ಶಾಸ್ತ್ರಗಳಲ್ಲಿ ಹೇಳಿದೆ.

ಮಂತ್ರಗಳ ಅರ್ಥವನ್ನು ತಿಳಿದು ಶ್ರದ್ಧೆಯಿಂದ ಅವುಗಳನ್ನು ಉಚ್ಚರಿಸಿದರೆ ಅದರ ಫಲ ನಿಶ್ಚಿತ ಎಂದು ಪೂಜಾವಿಧಿಯಲ್ಲಿ ಹೇಳಿದೆ. ಕ್ರಿಯೆಯೊಂದಿಗೆ ಅದರ ಹಿನ್ನೆಲೆಯಲ್ಲಿರುವ ಅರ್ಥವನ್ನು ತಿಳಿಯುವುದು ಆ ಕ್ರಿಯೆಯ ಒಂದು ಅಂಗವಾಗಿದ್ದು, ಅರ್ಥವನ್ನು ತಿಳಿಯದೆ ಮಾಡುವ ಕ್ರಿಯೆಯು ಸಂಪೂರ್ಣವಾಗಲಾರದು. (**ಅರ್ಥಜ್ಞಾನಸ್ಯ ಕರ್ಮಾನುಷ್ಠಾನಾಙ್ಗತ್ವಂ, ನ ಹಿ ಅರ್ಥಜ್ಞಾನಮನ್ತರೇಣ ಅನುಷ್ಠಾನಂ ಸಂಭವತಿ।**) ಆಯಾ ದೇವತೆಯಿಂದ ತಾನು ಏನನ್ನು ಬಯಸುತ್ತಿದ್ದೇನೆ ಎಂದು ತಿಳಿದಿರುವುದು ಅನಿವಾರ್ಯ. ಆಗ ಮಾತ್ರ ಆ ಕ್ರಿಯೆಯಲ್ಲಿ ಶ್ರದ್ಧೆ ಮೂಡುತ್ತದೆ ಹಾಗೂ ಮಂತ್ರಶಕ್ತಿಯು ಕ್ರಿಯಾಶೀಲವಾಗುತ್ತದೆ. ಸಾಧಕನು ಪೂಜೆಯಲ್ಲಿ ಯಾವ ಭಾವನೆಯನ್ನು ಹೊಂದಿರಬೇಕೆಂದು ಶ್ರೀರಾಮಕೃಷ್ಣರ ಜೀವನದಿಂದ ಕಲಿಯಬಹುದು. ಪೂಜೆಯ ಸಂದರ್ಭದಲ್ಲಿ ಅವರು ಎಷ್ಟೊಂದು ತನ್ಮಯರಾಗಿರುತ್ತಿದ್ದರೆಂದರೆ ಆ ಸಮಯದಲ್ಲಿ ಯಾರಾದರೂ ಅಲ್ಲಿಗೆ ಹೋದರೆ, ಮಾತನಾಡಿದರೆ ಅದೊಂದೂ ಅವರಿಗೆ ತಿಳಿಯುತ್ತಿರಲಿಲ್ಲ. ಕರನ್ಯಾಸ ಅಂಗನ್ಯಾಸಾದಿ ಪೂಜಾವಿಧಿಗಳನ್ನು ಆಚರಿಸುವಾಗ ಉಜ್ವಲವಾಗಿ ಬೆಳಗುವ ಮಂತ್ರಾಕ್ಷರಗಳು ತಮ್ಮ ದೇಹದಲ್ಲಿ ಸ್ಥಾಪಿತ ವಾಗುವುದು ತಮಗೆ ಕಾಣುತ್ತಿತ್ತೆಂದು ಅವರೇ ಹೇಳುತ್ತಿದ್ದರು. ಕುಂಡಲಿನೀ ಶಕ್ತಿಯು ಸುಷುಮ್ನಾ ನಾಡಿಯ ಮೂಲಕ ಮೇಲೇರಿ ಸಹಸ್ರಾರವನ್ನು ತಲುಪುವುದನ್ನು ಅವರು ಪ್ರತ್ಯಕ್ಷವಾಗಿ ಕಾಣುತ್ತಿದ್ದರಂತೆ ... ಅವರು **ರಂ** ಮಂತ್ರವನ್ನು ಉಚ್ಚರಿಸಿ, ಸುತ್ತಲೂ ನೀರನ್ನು ಎರಚಿ, ಅಗ್ನಿಪ್ರಾಕಾರವನ್ನು ಚಿಂತಿಸಿದಾಗ ನಿಜವಾಗಿಯೂ ಅವರ ಸುತ್ತ ಒಂದು ಅಗ್ನಿಯ ವರ್ತುಲವನ್ನು ಅವರು ಕಾಣುತ್ತಿದ್ದರು *(ಶ್ರೀರಾಮಕೃಷ್ಣ ಲೀಲಾಪ್ರಸಂಗ, ಭಾಗ-೧, ಪು. ೧೩೮).* ಶ್ರೀರಾಮಕೃಷ್ಣರ ಅನುಭವಗಳಿಂದ ಮಂತ್ರಶಾಸ್ತ್ರದ ಸೂಕ್ಷ್ಮ ತತ್ತ್ವಗಳ ಬಗ್ಗೆ ನಾವು ನಂಬಿಕೆಯನ್ನು ಹೊಂದುತ್ತೇವೆ. ಇವೆಲ್ಲ ಹಿಂದಿನ ಕಾಲದ ಕಥೆಗಳು, ಇಂದಿನ ದಿನಗಳಿಗೆ ಸಂಬಂಧಿಸುವುದಿಲ್ಲ ಎಂದು ವಾದಿಸುವವರನ್ನು ಶ್ರೀರಾಮಕೃಷ್ಣರ ಜೀವನ ಸಮರ್ಪಕವಾಗಿ ಎದುರಿಸುತ್ತದೆ.

ಚಿಹ್ನೆಗಳ ಮೂಲಕ, ಸಂಕೇತಗಳ ಮೂಲಕ ಮಾನವನು ಅವ್ಯಕ್ತವನ್ನು, ಇಂದ್ರಿಯಗಳಿಗೆ ನಿಲುಕದ ಸತ್ಯವನ್ನು ವ್ಯಕ್ತಪಡಿಸಲು ಪ್ರಯತ್ನಿಸುತ್ತಾನೆ. ನಾವು ಬಳಸುವ ಭಾಷೆ ಕೂಡ ಇಂತಹ ಒಂದು ಪ್ರಯಾಸವೇ. ಒಂದು ಪದ ಅಥವಾ ಶಬ್ದಕ್ಕೆ ಇರುವ ಅರ್ಥಕ್ಕಿಂತ ಅದರೊಂದಿಗೆ ಹೊಂದಿಕೊಂಡಿರುವ ಭಾವನೆಗಳು ಆ ಪದ ಅಥವಾ ಶಬ್ದಕ್ಕೆ ಹೆಚ್ಚಿನ ಅರ್ಥವನ್ನು ಕಲ್ಪಿಸುತ್ತದೆ. ಉದಾಹರಣೆಗೆ ತಾಯಿ ಎಂಬ ಪದ. ಪ್ರತಿಯೊಬ್ಬ ವ್ಯಕ್ತಿಯೂ ಇದನ್ನು

ಕೇಳಿದಾಗ ತನ್ನದೇ ಆದ ರೀತಿಯಲ್ಲಿ ಸ್ಪಂದಿಸುತ್ತಾನೆ. ಪದದ ರೂಢಾರ್ಥ ಅಥವಾ ನಿಘಂಟಿನಲ್ಲಿರುವ ಅರ್ಥದೊಂದಿಗೆ ಆಯಾ ವ್ಯಕ್ತಿಯ ವೈಯಕ್ತಿಕ ಭಾವನೆಗಳೂ ಸೇರಿಕೊಳ್ಳುತ್ತವೆ. ಮಾನವನು ತನ್ನ ಪ್ರತಿಯೊಂದು ಕ್ರಿಯೆಯ ಮೂಲಕ ಅವ್ಯಕ್ತವನ್ನು ವ್ಯಕ್ತಗೊಳಿಸುತ್ತಿದ್ದಾನೆ; ಅದೇ ಎಲ್ಲ ಶಿಕ್ಷಣ, ಕಲೆಯ ಗುರಿ ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಈ ಸೃಷ್ಟಿಯ ಹಿನ್ನೆಲೆಯಲ್ಲಿರುವ ಏಕಮೇವ ಅದ್ವಿತೀಯ ಸತ್ಯವನ್ನು, ಪರಬ್ರಹ್ಮ ವಸ್ತುವನ್ನು ಹಲವು ಸಂಕೇತಗಳ ಮೂಲಕ ತಿಳಿಯಲು ಮಾನವನು ಪ್ರಯತ್ನಿಸುತ್ತಾನೆ.

ಸಂಕೇತಗಳಲ್ಲಿ ಎರಡು ವಿಧ. ಕಣ್ಣಿಗೆ ಕಾಣುವ ಅಥವಾ ರೂಪದ ಮೂಲಕ ಒಂದು ಮಹತ್ತತ್ತ್ವವನ್ನು ವ್ಯಕ್ತಪಡಿಸುವುದು ಒಂದು ವಿಧವಾದ ಸಂಕೇತ. ನಾವು ಕಾಣುವ ದೇವತೆಗಳ ವಿಗ್ರಹಗಳು, ಚಿತ್ರಗಳು, ದೇವಸ್ಥಾನಗಳು ಈ ರೂಪ ಸಂಕೇತ. ಕಿವಿಯಿಂದ ಕೇಳುವ ಸಂಕೇತಗಳು ಎರಡನೆಯ ವಿಧ. ಮಂತ್ರಗಳು ಈ ಶಬ್ದ ಸಂಕೇತಕ್ಕೆ ಸೇರುತ್ತವೆ. **'ಓಂ ನಮಃ ಶಿವಾಯ'** ಎಂಬ ಮಂತ್ರವನ್ನು ಕೇಳಿದಾಗ, ಹೇಳಿದಾಗ ಪರಶಿವನ ರೂಪ ಹಾಗೂ ಗುಣಗಳು ನಮ್ಮ ಮನಸ್ಸಿನಲ್ಲಿ ಮೂಡುತ್ತವೆ. ದೇವತೆಗಳ ರೂಪಗಳಾಗಲಿ ಕಪೋಲಕಲ್ಪಿತವಲ್ಲ ಎಂಬುದನ್ನು ನೆನೆಪಿನಲ್ಲಿಡಬೇಕು. ಆಯಾ ದೇವತೆಯ ಧ್ಯಾನದ ಶ್ಲೋಕದಂತೆ ಆ ದೇವತೆಯ ವಿಗ್ರಹವನ್ನು ರೂಪಿಸಲಾಗುತ್ತದೆ. ಅಂತೆಯೇ ಆಯಾ ದೇವತೆಯನ್ನು ಪೂಜಿಸುವಾಗ ಬೇಕಾಗುವ ಮಂತ್ರಗಳನ್ನು ಹಲವಾರು ಸಾಧಕರು ತಮ್ಮ ದರ್ಶನಗಳಲ್ಲಿ ಕಂಡು ಸಿದ್ಧಿಯನ್ನು ಪಡೆದಿದ್ದಾರೆ. ಅಂತೆಯೇ ಈ ರೂಪಗಳ ಹಾಗೂ ಮಂತ್ರಗಳ ಉಪಾಸನೆಯಿಂದ ಇಂದಿಗೂ ಅದೇ ಫಲಗಳನ್ನು ಪಡೆಯಬಹುದು. ಇದಕ್ಕೆ ಶ್ರೀರಾಮಕೃಷ್ಣರ, ಶ್ರೀಮಾತೆ ಶಾರದಾದೇವಿಯ ಹಾಗೂ ಬ್ರಹ್ಮಾನಂದಾದಿ ನೇರ ಶಿಷ್ಯರ ಜೀವನ ಅನುಭಾವಗಳೇ ಸಾಕ್ಷಿ. ಬೇರೆ ಬೇರೆ ಸಂಪ್ರದಾಯಗಳಲ್ಲೂ ಅನೇಕ ಸಾಧಕರು ಈ ರೀತಿಯಲ್ಲಿ ಸಮಾನಾತ್ಮಕ ಅನುಭವಗಳನ್ನು ಹೊಂದಿರುವುದು ಕಂಡುಬರುತ್ತದೆ. ಮೂರ್ತಿಗಳು ಹಾಗೂ ಮಂತ್ರಗಳು ಚೈತನ್ಯದ ಸ್ವರೂಪಗಳು ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಮಣ್ಣಿನಿಂದ, ಕಲ್ಲಿನಿಂದ ಅಥವಾ ಧಾತುವಿನಿಂದ ತಯಾರಾದ ಮೂರ್ತಿಯಾದರೂ ಪ್ರಾಣಪ್ರತಿಷ್ಠೆಯಾದಾಗ ಅದರಲ್ಲಿ ಚೈತನ್ಯಗೂಡಿ ಆಯಾ ದೇವತೆಯೊಂದಿಗೆ ಸಂಭಾಷಿಸಬಹುದು, ಸಂಪರ್ಕವನ್ನು ಗಳಿಸಬಹುದು ಎಂದು ಶ್ರೀರಾಮಕೃಷ್ಣರು ತೋರಿಸಿಕೊಟ್ಟರು. ಮಂತ್ರಶಾಸ್ತ್ರದ ಪ್ರಕಾರ ಪ್ರತಿಯೊಂದು ರೂಪಕ್ಕೂ ಒಂದು ಶಬ್ದವಿದೆ ಹಾಗೂ ಪ್ರತಿಯೊಂದು ಶಬ್ದಕ್ಕೂ ರೂಪವಿದೆ.

ಹಿಂದೂ ಸಂಪ್ರದಾಯದಲ್ಲಿ ಓಂಕಾರಕ್ಕೆ ಅಥವಾ ಪ್ರಣವಕ್ಕೆ ಬಹಳ ಪ್ರಾಶಸ್ತ್ಯವನ್ನು ನೀಡಲಾಗಿದೆ. ಸಚ್ಚಿದಾನಂದ ಪರಬ್ರಹ್ಮದ ಏಕೈಕ ಪ್ರತೀಕ **ಓಂ**; ಎಲ್ಲ ಶಬ್ದಗಳ, ಎಲ್ಲ ಸೃಷ್ಟಿಯ ಮೂಲ **ಓಂ** ಎಂದು ಉಪನಿಷತ್ತುಗಳು ಸಾರುತ್ತವೆ. ಎಲ್ಲ ಮಂತ್ರಗಳ ಮೂಲವೂ **ಓಂ** ಎಂದು ಮಂತ್ರಶಾಸ್ತ್ರ ಹೇಳುತ್ತದೆ. ವೇದಗಳಲ್ಲಿ ಹಾಗೂ ಅವುಗಳ ಉತ್ಕೃಷ್ಟ ಭಾಗವಾದ ಉಪನಿಷತ್ತುಗಳಲ್ಲಿ ಓಂಕಾರದ ಮಹತ್ತ್ವವನ್ನು ಅನೇಕ ಕಡೆಗಳಲ್ಲಿ ಹೇಳಲಾಗಿದೆ. ಆಗಿನ ಕಾಲದಲ್ಲಿ ಓಂಕಾರದ ಉಪಾಸನೆ ಹಾಗೂ ಗಾಯತ್ರೀ ಮಂತ್ರದ ಉಪಾಸನೆಯೇ ಪ್ರಮುಖವಾಗಿತ್ತು ಎಂದು ತಿಳಿದು ಬರುತ್ತದೆ. ಬ್ರಾಹ್ಮಣೇತರ ವರ್ಗಗಳಿಗೆ ಶಾಸ್ತ್ರಗಳ, ಅದರಲ್ಲೂ ವೇದ ಉಪನಿಷತ್ತುಗಳ ಅಧ್ಯಯನವನ್ನು ನಿರಾಕರಿಸಿದಾಗ ತಂತ್ರ ಶಾಸ್ತ್ರವು ಬೆಳೆಯಿತು. ವೇದಗಳ ಯಾಗಯಜ್ಞಗಳನ್ನು ಪೂಜೆ ಹಾಗೂ ಇನ್ನಿತರ ತಾಂತ್ರಿಕ ಕ್ರಿಯೆಗಳಾಗಿ ಪರಿವರ್ತಿಸಿ ಅಷ್ಟೇ ಫಲವನ್ನು ಪಡೆಯುವಂತಹ ಮಾರ್ಗಗಳನ್ನು ಕಂಡುಕೊಳ್ಳಲಾಯಿತು. ದೇವ-ದೇವಿಯರ ಶರೀರಗಳು ಮಾತೃಕಾವರ್ಣಗಳಿಂದ - ಸೂಕ್ಷ್ಮ ಶಬ್ದಗಳಿಂದ ತಯಾರಾಗಿದ್ದು ವಾಗೀಶ್ವರೀ ದೇವಿಯೇ ಎಲ್ಲ ಶಬ್ದಗಳಿಗೂ ಮೂಲವೆಂದು ತಂತ್ರಶಾಸ್ತ್ರದಲ್ಲಿ ಹೇಳಿದೆ. ಸಂಸ್ಕೃತದ ಕೆಲವು ಅಕ್ಷರಗಳನ್ನು ಒಂದುಗೂಡಿಸಿ ಬೀಜ ಮಂತ್ರಗಳನ್ನು ತಂತ್ರಶಾಸ್ತ್ರದಲ್ಲಿ ಮಾಡಲಾಗಿದೆ. **ಹ್ರೀಂ, ಕ್ಲೀಂ, ಐಂ** ಎಂಬಂತಹ ಬೀಜಮಂತ್ರಗಳಲ್ಲಿ ಎರಡು ಅಥವಾ ಮೂರು ಅಕ್ಷರಗಳನ್ನು ಸೇರಿಸಲಾಗಿದೆ. ಪ್ರತಿಯೊಂದು ಬೀಜಮಂತ್ರವೂ ಒಂದು ದೇವತೆಯ ಸೂಕ್ಷ್ಮರೂಪವಾಗಿದ್ದು ಆಯಾ ದೇವತೆಯ ಉಪಾಸನೆಯಲ್ಲಿ ಬಳಸಲ್ಪಡುತ್ತದೆ. ಈ ಮಂತ್ರಗಳಲ್ಲಿರುವ ಸೂಕ್ಷ್ಮ ಶಕ್ತಿಯಿಂದ ಸಾಧಕನಲ್ಲಿ ಸುಪ್ತವಾಗಿರುವ ದೈವಶಕ್ತಿ ಅಥವಾ ಕುಂಡಲಿನೀ ಶಕ್ತಿಯು ಜಾಗೃತವಾಗುತ್ತದೆ ಎಂದು ತಂತ್ರಶಾಸ್ತ್ರ ಹೇಳುತ್ತದೆ.

ಅಕ್ಷರವೆಂದರೆ ನಾಶವಿಲ್ಲದ್ದು ಎಂದರ್ಥ. ಪ್ರಣವವೆಂದರೆ ಎಂದೆಂದಿಗೂ ನವ ಅಥವಾ ಹೊಸದಾಗಿರುವಂತಹುದು ಎಂದೂ ಅರ್ಥ. ಓಂಕಾರವು ನಿತ್ಯನೂತನ ಹಾಗೂ ಅದರಿಂದ ಹೊರ ಹೊಮ್ಮುವ ತರಂಗಗಳು ನಿರಂತರವಾಗಿ ಹೊಸ ಹೊಸ ಆಧ್ಯಾತ್ಮಿಕ ಭಾವನೆಗಳನ್ನು ಮೂಡಿಸುತ್ತವೆ ಎಂದು ಹೇಳಬಹುದು. ಸಂಗೀತ ಶಾಸ್ತ್ರದಲ್ಲಿ ಎಲ್ಲ ರಾಗಗಳಿಗೂ ಮೂಲ ಓಂಕಾರವೆಂದು ಹೇಳಿದೆ. ಸಪ್ತಸ್ವರಗಳ ಉಗಮ ಓಂಕಾರದಲ್ಲಿ. ಅ,ಉ, ಹಾಗೂ ಮ ಸೇರಿದಾಗ **ಓಂ** ಆಗುತ್ತದೆ. ಅಂತೆಯೇ ದೇವತೆಗಳ ಬೀಜ ಮಂತ್ರಗಳಲ್ಲೂ ಅನುನಾಸಿಕವಿರುತ್ತದೆ. ದೇವತೆಗಳ ಸ್ವರೂಪಕ್ಕನುಗುಣವಾಗಿ ಬೀಜಮಂತ್ರಗಳನ್ನು ಹೇಳಲಾಗಿದೆ. ಉದಾ: ಸಾತ್ತ್ವಿಕ ದೇವತೆಗಳಿಗೆ **ಐಂ.** ಆಯಾ ದೇವತೆಯ ಹೆಸರಿನ ಪ್ರಥಮ ಅಕ್ಷರವನ್ನು ತೆಗೆದುಕೊಂಡು ಅದರೊಂದಿಗೆ ಅನುನಾಸಿಕವನ್ನು ಸೇರಿಸಿ ಬೀಜಮಂತ್ರವನ್ನು ತಯಾರಿಸುವ ಪದ್ಧತಿಯೂ ಇದೆ. ಉದಾ: ರಾಮನಿಗೆ **ರಾಂ,** ಗಣೇಶನಿಗೆ **ಗಂ** ಇತ್ಯಾದಿ. ತಂತ್ರಶಾಸ್ತ್ರದಲ್ಲಿ ಕೆಲವು ಮಂತ್ರಗಳನ್ನು ಬದ್ಧಮಂತ್ರಗಳೆಂದು ಹೇಳಿದೆ. ಉದಾ: ಸರಸ್ವತಿಗೆ **ಐಂ,** ಕಾಳೀದೇವಿಗೆ **ಕ್ರೀಂ,** ದುರ್ಗಾದೇವಿಗೆ **ಹ್ರೀಂ** ಇತ್ಯಾದಿ.

ಬೀಜಮಂತ್ರಗಳ ಅರ್ಥವೇನು, ಅವುಗಳ ಜಪದಿಂದ ಫಲವೇನು? ಛಾಂದೋಗ್ಯ ಉಪನಿಷತ್ತಿನಲ್ಲಿ ಒಂದು ಉದಾಹರಣೆಯನ್ನು ಬಳಸಿದೆ. ವಿಶಾಲವಾದ ಆಲದ ಮರದ ಬೀಜ ಬಹಳ ಸಣ್ಣದು. ಅಷ್ಟು ಸಣ್ಣ ಬೀಜದೊಳಗೆ ಆ ವಿಶಾಲ ವಟವೃಕ್ಷದ ಶಕ್ತಿ-ಸಾಮರ್ಥ್ಯ ಅಡಗಿದೆ. ಸೂಕ್ಷ್ಮವಾದ ವಾತಾವರಣ, ಬೆಳಕು

ನೀರು ದೊರೆತಾಗ ಆ ಬೀಜವು ಮೊಳಕೆಯೊಡೆದು ವಿಶಾಲವಾದ ವೃಕ್ಷ ವಾಗುತ್ತದೆ. ಆ ಬೀಜವನ್ನು ನೋಡಿದಾಗ ಅಂತಹ ಸಾಧ್ಯತೆ ಅದರಲ್ಲಿದೆ ಎಂದು ಯಾರಿಗೂ ತೋರುವುದಿಲ್ಲ. ಅಂತೆಯೇ ಮಂತ್ರದ ಉಚ್ಚಾರಣೆಯಿಂದ ಗಣನೀಯ ಬದಲಾವಣೆ ಕಂಡು ಬರದಿದ್ದರೂ ನಿರಂತರ ಅಭ್ಯಾಸದಿಂದ ಆ ಮಂತ್ರವು ಮನಸ್ಸಿನ ಸೂಕ್ಷ್ಮಸ್ತರಗಳಲ್ಲಿ ಕೆಲಸ ಮಾಡಿ ಆಳವಾಗಿ ಬೇರುಬಿಟ್ಟು ಶುದ್ಧ ಗೊಳಿಸುತ್ತದೆ. '**ಮನನಾತ್ ತ್ರಾಯತೇ ಇತಿ ಮಂತ್ರಃ**' ಮಂತ್ರ ವೆಂದರೆ ಯಾವುದು ಮತ್ತೆ ಮತ್ತೆ ಸ್ಮರಿಸುವುದರಿಂದ ಕಾಪಾಡು ವುದೋ, ಅದು.

ತಂತ್ರಶಾಸ್ತ್ರದಲ್ಲಿ ಶಕ್ತಿ ಅಥವಾ ತಾಯಿಗೆ ಮೂರು ರೂಪಗಳನ್ನು ಹೇಳಿದೆ:

೧. 'ಪರಾ' – ಇಂದ್ರಿಯಾತೀತವಾದ, ಯಾರಿಗೂ ತಿಳಿಯದ ನಿರ್ಗುಣ, ನಿರಾಕಾರರೂಪ. ಪರಬ್ರಹ್ಮನೊಂದಿಗೆ ಹಾಲಿನ ಬಿಳಿವರ್ಣದಂತೆ ಒಂದಾಗಿರುವ ಸ್ಥಿತಿ ಎಂದು *ವಿಷ್ಣು ಯಾಮಲ* ದಲ್ಲಿ ಹೇಳಿದೆ.

೨. 'ಸೂಕ್ಷ್ಮ' – ಮಂತ್ರದಲ್ಲಿ ವ್ಯಕ್ತವಾದ ಸೂಕ್ಷ್ಮರೂಪ.

೩. 'ಸ್ಥೂಲ' – ವಿಗ್ರಹಗಳ ಮೂಲಕ ಭಕ್ತನಿಗೆ ಧ್ಯಾನ ಪೂಜೆಗಳಲ್ಲಿ ಕೃಪೆಮಾಡಲು ದೇವಿಯು ಧರಿಸುವ ರೂಪಗಳು.

ದೇವಿಗೆ ವಿಭಿನ್ನ ರೂಪಗಳಿದ್ದರೂ ಕರುಣಾಮಯಿ ತಾಯಿ ಯಾಗಿ ಆಕೆ ಭಕ್ತರಿಗೆ ಅತ್ಯಂತ ಪ್ರಿಯಳು. ತಂತ್ರಗಳಲ್ಲಿ ಸಾಧನೆಗಳ ಬಗ್ಗೆ, ಸಿದ್ಧಿಗಳ ಬಗ್ಗೆ ಹಾಗೂ ತಾಂತ್ರಿಕ ಸಾಧನೆಯ ತತ್ತ್ವಗಳ ಬಗ್ಗೆ ತಿಳಿಸಿದೆ ಯಾದರೂ ಮೂಲತಃ ತಂತ್ರಗಳು ಸಾಧನಾಶಾಸ್ತ್ರ ; ಕ್ರಿಯೆಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡುವವು. ವೇದ-ಉಪನಿಷತ್ತು ಗಳಲ್ಲಿ ಹೇಳಿರುವ ಅದ್ವೈತ ಸಾಧನೆಯನ್ನು ತಂತ್ರಗಳು ಅತ್ಯಂತ ಸರಳ ರೀತಿಯಲ್ಲಿ ಜನಸಾಮಾನ್ಯರಿಗೆ ನಿಲುಕುವಂತೆ ತಿಳಿಸುತ್ತವೆ. *ಕುಲಾರ್ಣವ ತಂತ್ರ*ದಲ್ಲಿ (IX.41) ಹೇಳಿದೆ, ''**ದೇಹೋ ದೇವಾ ಲಯಃ ಪ್ರೋಕ್ತಃ ಜೀವೋ ದೇವಃ ಸದಾಶಿವಃ। ತ್ಯಜೇತ್ ಅಜ್ಞಾನ ನಿರ್ಮಾಲ್ಯಂ ಸೋಽಹಂ ಭಾವೇನ ಪೂಜಯೇತ್॥**'' ದೇಹವೇ ದೇವಾಲಯವೆಂದು ಭಾವಿಸಿ ಜೀವನೇ ಸದಾಶಿವನೆಂದು ತಿಳಿ. ಪೂಜೆಯಾದ ನಂತರ ನಿರ್ಮಾಲ್ಯವನ್ನು ಬಿಸಾಡುವಂತೆ ಅಜ್ಞಾನ ವನ್ನು ತ್ಯಜಿಸಿ ಸೋಽಹಂ – ನಾನು ಅದೇ ಪರಶಿವ ಎಂಬ ಭಾವನೆ ಯೊಂದಿಗೆ ಅರ್ಚಿಸು. ಉಪನಿಷತ್ತುಗಳಲ್ಲಿ ಹೇಳಿರುವ ಜ್ಞಾನೋ ಪಾಸನೆಯನ್ನೇ ತಂತ್ರಗಳು ಮತ್ತೊಂದು ವಿಧದಲ್ಲಿ ಹೇಳಿರುವುದು ಕಂಡುಬರುತ್ತದೆ. ಇದೇ ಭಾವನೆಗಳನ್ನು ವಚನಗಳಲ್ಲಿ, ದಾಸರ ಪದಗಳಲ್ಲಿ ಕಾಣುತ್ತೇವೆ. ಜನಸಾಮಾನ್ಯರೂ ಕೂಡ ಈ ಉನ್ನತ ವಿಚಾರಗಳನ್ನು ತಮ್ಮ ತಮ್ಮ ದೈನಂದಿನ ಆಚರಣೆಗೆ ತರಬೇಕು ಎಂಬುದೇ ತಂತ್ರಾದಿಗಳ ಉದ್ದೇಶ. ಕಲಿಯುಗದಲ್ಲಿ ತಂತ್ರಗಳೇ ಅತ್ಯಂತ ಫಲಕಾರಿ ಎಂದು ಶಾಕ್ತರು ನಂಬುತ್ತಾರೆ. 'ಕೃತಯುಗದಲ್ಲಿ ಶ್ರುತಿಗಳಂತೆ ಆಚರಣೆಯಿರಬೇಕು, ತ್ರೇತಾಯುಗದಲ್ಲಿ ಸ್ಮೃತಿ ಗಳಂತೆ, ದ್ವಾಪರಯುಗದಲ್ಲಿ ಪುರಾಣಗಳಂತೆ ಹಾಗೂ ಕಲಿ ಯುಗದಲ್ಲಿ ಆಗಮಗಳಂತೆ' ಎಂದು *ಕುಲಾರ್ಣವ ತಂತ್ರ* ಹೇಳುತ್ತದೆ. *ನಿಗಮ ಕಲ್ಪತರುವಿನಲ್ಲಿ*, 'ವರ್ಣಗಳಲ್ಲಿ ಬ್ರಾಹ್ಮಣರು ಹೇಗೆ ಶ್ರೇಷ್ಠರೋ ಅಂತೆಯೇ ಸಾಧಕರಲ್ಲಿ ಶಾಕ್ತರು ಪ್ರಮುಖರು' ಎಂದು ಹೇಳಿದೆ. ಶಕ್ತಿಯ ಕೃಪೆಯಿಲ್ಲದಿದ್ದರೆ, ಶಕ್ತಿಯನ್ನು ತಿಳಿ ಯದೆ ಮುಕ್ತಿಯಿಲ್ಲ ಎಂದು *ನಿರುತ್ತರ ತಂತ್ರ* ಹೇಳುತ್ತದೆ. ಶ್ರೀರಾಮಕೃಷ್ಣರೂ ತಂತ್ರಸಾಧನೆಗೆ, ಶಕ್ತಿಯುಪಾಸನೆಗೆ ಪ್ರಾಶಸ್ತ್ಯ ನೀಡಿದರು. ತೋತಾಪುರಿಯು ಬ್ರಹ್ಮಜ್ಞಾನಿಯಾಗಿದ್ದರೂ ಶಕ್ತಿ ಯನ್ನು ಒಪ್ಪಲಿಲ್ಲವಾದ್ದರಿಂದ ಉದರಬೇನೆಯಿಂದ ನರಳಿದರು. ಶಕ್ತಿಯನ್ನು ಒಪ್ಪಿ ಕೊಂಡಾಗ ಅವರ ಜ್ಞಾನವು ಸಂಪೂರ್ಣವಾಗಿ, ಅವರು ಗುಣಹೊಂದಿದರು ಎಂದು ಶ್ರೀರಾಮಕೃಷ್ಣರೇ ಹೇಳಿ ದ್ದಾರೆ. ನರೇಂದ್ರ ನಿಗೂ ಶ್ರೀರಾಮಕೃಷ್ಣರು ಆಗಾಗ್ಗೆ ಹೇಳುತ್ತಿದ್ದರು, 'ನೀನು ಕಾಳಿಯನ್ನು ಒಪ್ಪುವುದಿಲ್ಲ. ಅದಕ್ಕೇ ನಿನಗೆ ಈ ಎಲ್ಲ ಸಮಸ್ಯೆಗಳು. ಆಕೆಗೆ ಪ್ರಾರ್ಥನೆ ಸಲ್ಲಿಸು. ಎಲ್ಲವೂ ಸರಿ ಹೋಗುವುದು.' ನರೇಂದ್ರನು ಕಾಳಿಯ ದೇವಸ್ಥಾನಕ್ಕೆ ಮತ್ತೆ ಮತ್ತೆ ಹೋಗಿ ತಾಯಿಯ ಸಾನ್ನಿಧ್ಯವನ್ನು ಅನುಭವಿಸಿ ಜ್ಞಾನ, ಭಕ್ತಿ-ವೈರಾಗ್ಯಗಳಿಗೆ ಪ್ರಾರ್ಥಿಸಿದಾಗ ಶ್ರೀರಾಮಕೃಷ್ಣರಿಗೆ ಎಲ್ಲಿಲ್ಲದ ಆನಂದವಾಯಿತು. ಎಲ್ಲರಿಗೂ, ಹಲವಾರು ದಿನಗಳ ಕಾಲ, ಬಹಳ ಸಂಭ್ರಮದಿಂದ, 'ನರೇನ್ ಕಾಳಿಯನ್ನು ಒಪ್ಪಿಕೊಂಡಿದ್ದಾನೆ' ಎಂದು ಹೇಳಿ ತಮ್ಮ ಶಿಷ್ಯನು ಪೂರ್ಣತೆಯನ್ನು ಪಡೆದು ಕೊಂಡುದರ ಸುದ್ದಿಯನ್ನು ತನ್ಮೂಲಕ ವ್ಯಕ್ತಪಡಿಸಿದರು.

ನಾಲ್ಕು ಶಾಕ್ತ ಸಂಪ್ರದಾಯಗಳಿವೆ: ಕೇರಳ, ಕಾಶ್ಮೀರ, ಗೌಡ ಹಾಗೂ ವಿಲಾಸ. ಸಾಧಕರಲ್ಲಿರುವ ಸತ್ತ್ವ, ರಜಸ್ಸು ಹಾಗೂ ತಾಮಸ ಗುಣಗಳಿಗೆ ಅನುಸಾರವಾಗಿ ಈ ನಾಲ್ಕು ಸಂಪ್ರದಾಯ ಗಳಲ್ಲಿ ಶುದ್ಧ, ಗುಪ್ತ ಹಾಗೂ ಉಗ್ರ ಎಂಬ ಪ್ರಭೇದಗಳಿದ್ದು ಸಾಧಕರನ್ನು ದಿವ್ಯ, ವೀರ ಹಾಗೂ ಪಶು ಎಂದು ವಿಂಗಡಿಸಲಾಗಿದೆ. ಶ್ರೀರಾಮಕೃಷ್ಣರು ಶುದ್ಧ ಸಂಪ್ರದಾಯದಂತೆ, ದಿವ್ಯಭಾವದಲ್ಲಿ ತಂತ್ರಸಾಧನೆಯನ್ನು ಮಾಡಿದ್ದರು. ತಂತ್ರದ ಆಚರಣೆಗಳಲ್ಲಿ ಏಳು ಹಂತಗಳನ್ನು ಪ್ರಧಾನವಾಗಿ ಹೇಳಿದೆ: ವೈದಿಕ, ವೈಷ್ಣವ, ಶೈವ, ದಕ್ಷಿಣ, ವಾಮ, ಸಿದ್ಧಾಂತ ಹಾಗೂ ಕೌಲ. ಸಿದ್ಧಾಂತದ ಹಂತದಲ್ಲಿ ಸಾಧಕನು ಅನುಭಾವವನ್ನೂ ಹೊಂದುತ್ತಾನೆ, ಹಾಗೂ ಕೌಲದಲ್ಲಿ ಅದೇ ಅನುಭಾವದಲ್ಲಿ ಪ್ರತಿಷ್ಠಿತನಾಗುತ್ತಾನೆ. *ಕುಲಾರ್ಣವ ತಂತ್ರ* ದಲ್ಲಿ (II.8) ಹೇಳಿದೆ, ''**ಕೌಲಾತ್ ಪರತರಂ ನ ಹಿ**'' ಕೌಲಕ್ಕಿಂತ ಮಿಗಿಲಾದದ್ದು ಇಲ್ಲ. ಕೌಲದ ಹಂತವನ್ನು ತಲುಪಿದವನು ಶಿವನೇ ಆಗುತ್ತಾನೆ. ಆ ಸ್ಥಿತಿಯ ವರ್ಣನೆಯು ಉಪನಿಷತ್ತಿನಲ್ಲಿ ಬರುವ ಬ್ರಹ್ಮಜ್ಞಾನಿಯ ಅವಸ್ಥೆಯನ್ನು ಹಾಗೂ ಭಗವದ್ಗೀತೆಯಲ್ಲಿ ವಿವರಿಸಿರುವ ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೋಲುತ್ತದೆ.

ಮಂತ್ರಶಾಸ್ತ್ರವು ಒಂದು ಪರಿಪೂರ್ಣ ಶಾಸ್ತ್ರ, ವಿಜ್ಞಾನವೆಂದರೂ ತಪ್ಪಲ್ಲ. ಮಂತ್ರಶಕ್ತಿಯ ಸಾಧ್ಯತೆಗಳ ಬಗ್ಗೆ ಶಾಸ್ತ್ರಗಳಲ್ಲಿ ಹಾಗೂ ಅನುಭಾವಿಗಳ ನುಡಿಗಳಲ್ಲಿ ಬಹಳವಾಗಿ ಹೇಳಿದೆ. ಸಂಸ್ಕೃತ ಭಾಷೆಯ ಕೆಲವು ಅಕ್ಷರಗಳಲ್ಲಿ, ಶಬ್ದದ ಆಯಕಟ್ಟಿನಲ್ಲಿ ಹಿಡಿದಿಡ ಲ್ಪಟ್ಟ ಶಕ್ತಿಯ ಕೇಂದ್ರವೇ ಮಂತ್ರ. ಶಕ್ತಿಯ ತರಂಗಗಳನ್ನು ಆ ಶಬ್ದದ ಮೂಲಕ ಜಾಗೃತಗೊಳಿಸಿ ಉನ್ನತ ಅನುಭಾವಗಳನ್ನು ತನ್ಮೂಲಕ ಹೊಂದಬಹುದು ಎಂದು ಮಂತ್ರಶಾಸ್ತ್ರ ಹೇಳುತ್ತದೆ.

ನಾಡಿಗಳನ್ನು ಶುದ್ಧಗೊಳಿಸಿ ಕುಂಡಲಿನೀ ಶಕ್ತಿಯು ವಿಭಿನ್ನ ಚಕ್ರಗಳಲ್ಲಿ ಅಡಚಣೆಯಿಲ್ಲದೆ ಸಂಚರಿಸುವಂತೆ ಮಂತ್ರ ಮಾಡಬಲ್ಲದು ಎಂದು ಮಂತ್ರಯೋಗ ಹೇಳುತ್ತದೆ.

ತಂತ್ರಶಾಸ್ತ್ರದಂತೆ ತ್ರಿಗುಣಗಳ ಸಮತೋಲನವನ್ನು ಶಬ್ದದ ಸ್ಪಂದನವು ಪ್ರಚೋದಿಸಿದಾಗ ಯಾವುದು ಅಭಿನ್ನವೂ, ಏಕವೂ, ನಿರಾಕಾರವೂ ಆಗಿತ್ತೋ, ಆ ಪರಬ್ರಹ್ಮ ಅಥವಾ ಶಬ್ದಬ್ರಹ್ಮವು ಈಗ ಕ್ರಿಯಾತ್ಮಕ ಶಕ್ತಿಯಾಗಿ ಸೃಷ್ಟಿಯಲ್ಲಿ ತೊಡಗುತ್ತದೆ. ಈ ಸ್ಪಂದನದಿಂದ ಶಕ್ತಿಯೂ ಇಬ್ಭಾಗವಾಗಿ ನಾದ ಮತ್ತು ಬಿಂದು ಹೊರಹೊಮ್ಮುತ್ತವೆ. ಬಿಂದುವಿನ ಆಧಾರದ ಮೇಲೆ ನಾದವು ಈ ಸೃಷ್ಟಿಕಾರ್ಯದಲ್ಲಿ ತೊಡಗುತ್ತದೆ. ಶಿವನೇ ಬಿಂದು, ಸಾಕ್ಷಿ ಹಾಗೂ ಪರಮಾತ್ಮ. ನಾದವೇ ಕಾಳಿ; ಶಿವನನ್ನು ಆಧರಿಸಿಕೊಂಡು ಜಗಲ್ಲೀಲೆಯನ್ನು ಆಡುವವಳು. ಮತ್ತೆ ಮತ್ತೆ ವಿಭಜನೆಯಾದಂತೆ ವರ್ಣಗಳು, ಶಬ್ದಗಳು, ಭಾಷೆಗಳು ಹೊಮ್ಮುತ್ತವೆ. ಮಂತ್ರಗಳನ್ನು ಸರಿಯಾಗಿ ಉಚ್ಚರಿಸಿದಾಗ ಆಯಾ ದೇವತೆಯು ತನ್ಮೂಲಕ ಎಚ್ಚೆತ್ತು ಸಾಧಕನನ್ನು ಆಧ್ಯಾತ್ಮಿಕ ಉನ್ನತಿಯತ್ತ ಕೊಂಡೊಯ್ಯುವುದು ಎಂದು ಈ ಶಾಸ್ತ್ರ ಹೇಳುತ್ತದೆ. ವ್ಯಕ್ತಿಯಲ್ಲಿ ಈ ನಾದವೇ ಕುಂಡಲಿನೀ ಶಕ್ತಿಯಾಗಿ ಸುಪ್ತ ಅವಸ್ಥೆಯಲ್ಲಿರುತ್ತದೆ.

ನಾಮ-ರೂಪವೆಂದು ವಿಭಜನೆ ಹೊಂದದೆ, ಯಾವುದೇ ಬದಲಾವಣೆಗಳಿಲ್ಲದ ತರಂಗರಹಿತ ಶಬ್ದಬ್ರಹ್ಮನೊಂದಿಗೆ ತಾದಾತ್ಮ್ಯವನ್ನು ಹೊಂದಿರುವ ಅಭಿನ್ನ ಶಕ್ತಿ ಅಥವಾ ಶುದ್ಧ ಶಕ್ತಿಯನ್ನು '**ಪರಾ**' ಎಂದು ಕರೆಯುತ್ತಾರೆ. ನಾಮ-ರೂಪಗಳಾಗಿ ವಿಭಜನೆ ಹೊಂದದೆ ಭಾವನೆಯಾಗಿ ತೋರುವುದು '**ಪಶ್ಯಂತೀ**.' ಉದಾಹರಣೆಗೆ ಒಂದು ಹೂವನ್ನು ನೋಡಿದಾಗ ಒಬ್ಬ ಭಾರತೀಯನಾಗಲಿ, ಅಮೇರಿಕದವನಾಗಲಿ, ಜಪಾನಿಯಾಗಲಿ ಒಂದೇ ಭಾವನೆಯನ್ನು ಮನಸ್ಸಿನಲ್ಲಿ ಹೊಂದುತ್ತಾರೆ. ಇಲ್ಲಿ ಅದು ಯಾವ ಹೂವು ಯಾವ ಬಣ್ಣ ಅಥವಾ ಇತರ ವಿಭಜನೆಗಳಿಗೆ ಇನ್ನೂ ಆಸ್ಪದವಿಲ್ಲ. ಶ್ರೀಮಾತೆ ಶಾರದಾದೇವಿಯವರು ಬೆಂಗಳೂರಿನಲ್ಲಿ ಭಕ್ತರನ್ನು ಕಾಣುತ್ತಿದ್ದಾಗ, ದೀಕ್ಷೆಯನ್ನು ಕರುಣಿಸುತ್ತಿದ್ದಾಗ ಯಾವುದೇ ಭಾಷೆಯ ಬಳಕೆಯಿರುತ್ತಿರಲಿಲ್ಲವಾದರೂ ಅಲ್ಲಿದ್ದವರಿಗೆ ಎಲ್ಲವೂ ಅರ್ಥವಾಗುತ್ತಿತ್ತು. ಈ ಸಂವಾದವು **ಪಶ್ಯಂತೀ** ಹಂತದಲ್ಲಿ ನಡೆದಿತ್ತು ಹಾಗೂ ಶ್ರೀಮಾತೆಯು ಭಾವನಾತ್ಮಕವಾಗಿ ಎಲ್ಲರೊಂದಿಗೆ ಸ್ಪಂದಿಸಿದ್ದರು.

ನಮ್ಮ ಮನಸ್ಸಿನಲ್ಲಿರುವ ಪೂರ್ವಸಂಸ್ಕಾರಗಳಿಂದ, ಕಲ್ಪನೆಗಳಿಂದ ಪಶ್ಯಂತಿಯು ಕಲುಷಿತಗೊಂಡು **ಮಧ್ಯಮಾ** ಹಂತಕ್ಕೆ ಬರುತ್ತದೆ. ಇಲ್ಲಿ ವ್ಯತ್ಯಾಸಗಳು, ನಾಮ-ರೂಪಾದಿ ಭೇದಗಳು ಈ ಹಂತದಲ್ಲೇ ಉಂಟಾಗುವುದು. ಈ ಜಗತ್ತನ್ನು ನಾವೆಲ್ಲರೂ ಪ್ರತ್ಯೇಕವಾಗಿ ಕಾಣುವುದೂ ಈ ಕಾರಣದಿಂದಲೇ. ಶಬ್ದದ ರೂಪದಲ್ಲಿ ಭಾಷೆಯ ಮೂಲಕ ವಾಗಿಂದ್ರಿಯದ ಸಹಾಯದಿಂದ ಉಚ್ಚರಿಸಿದಾಗ ಅದು **ವೈಖರಿ**ಯಾಗುತ್ತದೆ. ಇದು ಕಡೆಯ ಅಥವಾ ಅತ್ಯಂತ ಸ್ಥೂಲವಾದ, ಎಲ್ಲರಿಗೂ ತಿಳಿದಿರುವ ಹಂತ. ಬೆಕ್ಕು ಎಂದು ಹೇಳಿದಾಗ ಅದು ವೈಖರಿಯಾಗುತ್ತದೆ. ಈ ಬೆಕ್ಕು ನನಗೆ ಪ್ರಿಯವಾದದ್ದು, ಇದರ ಬಣ್ಣ ಬಿಳಿಯಾಗಿದೆ, ಇದು ನನ್ನದು ಎಂಬ ಅಭಿಮಾನಜನಿತ ತಾದಾತ್ಮ್ಯದ ಹಂತವು **ಮಧ್ಯಮಾ**. ಬೆಕ್ಕು ಎಂಬ ಭಾವನೆ, ಅದು ಸಾಮಾನ್ಯವಾಗಿದ್ದಾಗ, ವ್ಯಕ್ತಿಗತ ಸಂಬಂಧಗಳೊಂದಿಗೆ ಸೇರಿಕೊಳ್ಳದೇ ಇರು ವಾಗ ಅದು ಪಶ್ಯಂತಿ. ಇದಕ್ಕಿಂತ ಸೂಕ್ಷ್ಮವಾದದ್ದು ಈ ಎಲ್ಲ ಭಾವನೆಗಳಿಗೆ, ಶಬ್ದಗಳಿಗೆ ಆಧಾರವಾಗಿರುವ **ಪರಾ**.

ಮಂತ್ರವನ್ನು ಶಬ್ದವಾಗಿ ಉಚ್ಚರಿಸಿದಾಗ ಅದು ವೈಖರಿಯ ಹಂತದಲ್ಲಿದ್ದರೂ ಅದರಲ್ಲಿರುವ ಶಕ್ತಿಯ ಬಲದಿಂದ ಸಾಧಕನನ್ನು ಪರಾ ಅವಸ್ಥೆಗೆ ಅದು ಕೊಂಡೊಯ್ಯಬಲ್ಲದು ಎಂದು ಮಂತ್ರಶಾಸ್ತ್ರ ಹೇಳುತ್ತದೆ. 'ನಾಮ ಹಾಗೂ ನಾಮಿ ಅಭೇದ' ಎಂದು ಶ್ರೀರಾಮಕೃಷ್ಣರು ಅತ್ಯಂತ ಸಮರ್ಪಕವಾಗಿ ಸಂಪೂರ್ಣ ಮಂತ್ರಶಾಸ್ತ್ರವನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆ. 'ರಾಮ' ಎಂಬ ಶಬ್ದವನ್ನು ಮೊದಮೊದಲು ಸ್ಥೂಲವಾಗಿ ವಾಗಿಂದ್ರಿಯದ ಸಹಾಯದಿಂದ ಹೇಳಿದರೂ ತನ್ಮೂಲಕ ಆ 'ರಾಮ'ಸ್ವರೂಪದ ಸೂಕ್ಷ್ಮರೂಪ ಆ ನಾಮದೊಂದಿಗೆ ಅಭೇದವಾಗಿದ್ದು, ಮಾನಸಿಕ ಸೂತ್ರದಲ್ಲಿ ಸೂಕ್ಷ್ಮವಾಗಿ ಹೊಕ್ಕು, ಕಡೆಯ ಹಂತದಲ್ಲಿ ಅತ್ಯಂತ ಆಂತರ್ಯದಲ್ಲಿರುವ ಜೀವಾತ್ಮವೇ ಆಗಿ ತುರೀಯ ಅವಸ್ಥೆಗೆ ಕೊಂಡೊಯ್ಯಬಲ್ಲದು ಎಂದು ಶ್ರೀರಾಮಕೃಷ್ಣರ ಈ ಸಂಕ್ಷಿಪ್ತ ಉಪದೇಶ ತಿಳಿಸುತ್ತದೆ.

ಹಾವು ಎಂಬ ಶಬ್ದವು ಕಿವಿಗೆ ಬಿದ್ದೊಡನೆ ಅದರ ರೂಪದ ನೆನಪಾಗುವುದು ಹಾಗೂ ಅದಕ್ಕೆ ಸಂಬಂಧಿಸಿದಂತೆ ಭಯ, ಆತಂಕಗಳು ಉಂಟಾಗಿ ಆ ಜಾಗದಿಂದ ಓಡಬೇಕೆನಿಸುವುದು. ಅಂತೆಯೇ ಮಂತ್ರವನ್ನು ಉಚ್ಚರಿಸಿದಾಗ, ಜಪಿಸಿದಾಗ ನಮ್ಮ ಅಂತರ್ಮನಸ್ಸಿನಲ್ಲಿರುವ ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಆ ಪವಿತ್ರ ನಾಮ ಹಾಗೂ ಆ ದಿವ್ಯರೂಪದಲ್ಲಿರುವ ಗುಣಗಳ ನೆನಪು ಕ್ಷೀಣಗೊಳಿಸುವುದು. ಮನಸ್ಸು ಕ್ರಮೇಣ ಪವಿತ್ರತೆಯನ್ನು ಹೊಂದಿ ಉನ್ನತ ಆಧ್ಯಾತ್ಮಿಕ ಅನುಭವಗಳನ್ನು ಪಡೆಯಲು ಸಿದ್ಧಗೊಳ್ಳುತ್ತದೆ. ಧೂಳು ಮುಚ್ಚಿಕೊಂಡಿರುವ ಕನ್ನಡಿಯು ಶುಭ್ರಗೊಂಡಾಗ ಪ್ರತಿಬಿಂಬವು ಅದರಲ್ಲಿ ತೋರುವಂತೆ ಇದು. ಅದು ಎಷ್ಟು ಶುಭ್ರಗೊಳ್ಳುತ್ತದೆಯೋ ಅಷ್ಟೇ ಸ್ಪಷ್ಟವಾಗಿ ಪ್ರತಿಬಿಂಬವು ಮೂಡಿಬರುತ್ತದೆ. ಲ್ಯಾಂಟರ್ನ್‌ನ ಗಾಜಿನಲ್ಲಿರುವ ಮಸಿಯನ್ನು ಎಷ್ಟು ತೆಗೆಯುತ್ತೇವೆಯೋ ಅಷ್ಟು ಬೆಳಕು ಪ್ರಕಾಶಿಸುವುದು. ಈ ರೀತಿಯಲ್ಲಿ ಮಂತ್ರಜಪವು ಪರಮ ಅವಸ್ಥೆಗೆ ಕೊಂಡೊಯ್ಯಬಲ್ಲದು. ಶ್ರೀರಾಮಕೃಷ್ಣರು ಒಮ್ಮೆ ತಮ್ಮ ಶಿಷ್ಯನಾದ ಯೋಗೀಂದ್ರನಿಗೆ ಹೇಳಿದರು, ''ಕಾಮವನ್ನು ಗೆಲ್ಲಲು ಭಗವಂತನ ನಾಮಸ್ಮರಣೆ ಅತ್ಯುತ್ತಮ ಉಪಾಯ'' ಎಂದು. ಅವರು ಪ್ರತಿದಿನ ಸಂಧ್ಯಾ ಸಮಯದಲ್ಲಿ ದೇವದೇವಿಯರ ನಾಮಗಳನ್ನು ಚಪ್ಪಾಳೆ ತಟ್ಟುತ್ತ, ಮಧುರಸ್ವರದೊಂದಿಗೆ ಹೇಳುತ್ತಿದ್ದರು.

ಸಂಕ್ಷಿಪ್ತವಾಗಿ ಹೇಳುವುದಾದರೆ,

೧. ಋಷಿಮುನಿಗಳಿಗೆ ಅಥವಾ ಅನುಭಾವಿಗಳಿಗೆ ಗೋಚರಿಸಿದ ಮಂತ್ರಗಳು ಅವರಿಗೆ ಆ ಪರಮಸತ್ಯದ ಅನುಭೂತಿಯನ್ನು ನೀಡಿದ್ದಲ್ಲದೆ ಆಯಾ ದೇವತೆಯ ರೂಪದ ಮೂಲಕ ಪ್ರಕಾಶಗೊಂಡವು. ಅಂತಹ ದಿವ್ಯಮಂತ್ರಗಳನ್ನು ಅವರು

ತಮ್ಮ ಶಿಷ್ಯರಿಗೆ ದಯಪಾಲಿಸಿದಾಗ ಅವರಲ್ಲೂ ಅದರಿಂದ ಶಕ್ತಿಯ ಸಂಚಾರವಾಗಿ ಆ ಮಂತ್ರವು ಸಿದ್ಧಮಂತ್ರವಾಗುತ್ತದೆ.

೨. ಪ್ರತಿಯೊಂದು ಮಂತ್ರಕ್ಕೂ ನಿರ್ದಿಷ್ಟವಾದ ಇಷ್ಟದೇವತೆಯೊಂದಿರುತ್ತದೆ.

೩. ಮಂತ್ರವು ಒಂದು ಛಂದಸ್ಸಿನಲ್ಲಿರುತ್ತದೆ. ಉದಾ: ಅನುಷ್ಟುಪ್ ಇತ್ಯಾದಿ.

೪. ಮಂತ್ರಕ್ಕೆ ಶಕ್ತಿನೀಡುವ ಬೀಜಮಂತ್ರ ಅಥವಾ ಬೀಜವೊಂದಿರುತ್ತದೆ.

೫. ಸಾಧಕನು ಶ್ರದ್ಧೆಯಿಂದ ಜಪಿಸುವುದರ ಮೂಲಕ ಮಂತ್ರದಲ್ಲಿ ಶಕ್ತಿಯನ್ನು ಜಾಗ್ರತಗೊಳಿಸಬೇಕು. ಹಾಗಾದಾಗ ಆ ಮಂತ್ರದ ಇಷ್ಟದೇವತೆಯ ದರ್ಶನವಾಗುತ್ತದೆ.

೬. ಮಂತ್ರಗಳು ವಿಭಿನ್ನವಾಗಿದ್ದರೂ, ದೇವತೆಗಳಿಗೆ ವಿಭಿನ್ನ ರೂಪಗಳಿದ್ದರೂ ಒಂದೇ ಅದ್ವಯವಾದ ಪರಬ್ರಹ್ಮನ ವಿಭಿನ್ನ ರೂಪಗಳನ್ನು ಇವು ನಮೂದಿಸುತ್ತವೆ. ಎಲ್ಲ ಸಾಧಕರು ಅಂತ್ಯದಲ್ಲಿ ಅದೇ ಅದ್ವೈತವೂ ಪರಮವೂ ಆದ ಪರಬ್ರಹ್ಮವನ್ನು ಆಯಾ ಇಷ್ಟ ದೇವತೆಯ ಕೃಪೆಯಿಂದ ಹೊಂದುತ್ತಾರೆ. ಇದನ್ನು ಶ್ರೀರಾಮಕೃಷ್ಣರು ಮತ್ತೆ ಮತ್ತೆ ಹೇಳುತ್ತಿದ್ದರು, ''ತಾಯಿಯು ಕೃಪೆಮಾಡಿ ನಿರ್ಗುಣ ಪರಬ್ರಹ್ಮದ ಅನುಭವವನ್ನು ನೀಡಬಲ್ಲಳು.''

ಕೆಲವು ಮಂತ್ರಗಳನ್ನು ಪರಿಚಯ ಮಾಡಿಕೊಳ್ಳೋಣ. ಸಾಧಕರು ತಮ್ಮ ಇಷ್ಟದೇವತೆಯ ಮಂತ್ರವನ್ನು ಜಪಿಸಿ ಆಯಾ ದೇವತೆಯ ರೂಪಧ್ಯಾನವನ್ನು ಮಾಡುತ್ತಾರೆ. ಇಂತಹ ಮಂತ್ರಗಳನ್ನು ಸಗುಣ ಮಂತ್ರಗಳೆನ್ನುತ್ತಾರೆ. ಉದಾ: **ಓಂ ನಮಃ ಶಿವಾಯ, ಓಂ ಸರಸ್ವತ್ಯೈ ನಮಃ, ಓಂ ಶ್ರೀ ಮಹಾಗಣಪತಯೇ ನಮಃ, ಓಂ ಶ್ರೀರಾಮಾಯ ನಮಃ, ಓಂ ಶ್ರೀ ದುರ್ಗಾಯೈ ನಮಃ, ಓಂ ನಮೋ ನಾರಾಯಣಾಯ, ಓಂ ನಮೋ ಭಗವತೇ ವಾಸುದೇವಾಯ** ಇತ್ಯಾದಿ. ವೇದಗಳಲ್ಲಿ ಹಾಗೂ ಪಂಚದೇವತಾ ಪೂಜೆಯಲ್ಲಿ ಬರುವ ದೇವತೆಗಳಿಗೆ ಪ್ರತ್ಯೇಕವಾದ ಗಾಯತ್ರೀ ಮಂತ್ರಗಳೂ ಇವೆ. ಓಂಕಾರವನ್ನು ಜಪಿಸುವವರು ನಿರ್ಗುಣ ಮಂತ್ರವನ್ನು ಬಳಸುತ್ತಿದ್ದಾರೆ. ಅದನ್ನು ಸರಿಯಾಗಿ ಉಚ್ಚರಿಸಿದಾಗ ಅದರಿಂದ ನಿರ್ಗುಣ ಪರಬ್ರಹ್ಮದ ಅನುಭಾವವು ಆಗುವುದು ಎಂದು ವೇದಗಳಲ್ಲಿ ಹೇಳಿದೆ. **ಸೋಽಹಂ, ಅಹಂ ಬ್ರಹ್ಮಾಸ್ಮಿ** ಇತ್ಯಾದಿ ಮಹಾವಾಕ್ಯಗಳೂ ಕೂಡ ನಿರ್ಗುಣ ಮಂತ್ರಗಳು. ಆದರೆ ಇವುಗಳನ್ನು ಎಲ್ಲರೂ ಬಳಸುವಂತಿಲ್ಲ. ಓಂಕಾರವು ಸಾರ್ವಜನಿಕ ಮಂತ್ರವಾಗಿದ್ದು ಅತ್ಯಂತ ಪವಿತ್ರವಾದ ಹಾಗೂ ಶಕ್ತಿಯುತವಾದ ಮಂತ್ರ.

ಈಗಾಗಲೇ ಹೇಳಿದಂತೆ ಮಂತ್ರವನ್ನು ಜಪಿಸುವುದು ಹಾಗೂ ತನ್ಮೂಲಕ ಅದರಲ್ಲಿರುವ ಶಕ್ತಿಯನ್ನು ಜಾಗ್ರತಗೊಳಿಸುವುದು ಸಾಧಕನ ಕೈಯಲ್ಲಿದೆ. ಶ್ರೀರಾಮಕೃಷ್ಣರು ಹೇಳುತ್ತಿದ್ದಂತೆ, ಗುರು ದೊರೆತರೂ, ಆತ ಶ್ರೇಷ್ಠನಾಗಿದ್ದರೂ, ಪವಿತ್ರ ಮಂತ್ರ ನೀಡಿದರೂ, ಎಲ್ಲವೂ ಅನುಕೂಲವಾಗಿದ್ದರೂ ಒಂದರ (ಮನಸ್ಸಿನ) ಸಹಾಯವಿಲ್ಲದೆ ಏನೂ ಸಿದ್ಧಿಸುವುದಿಲ್ಲ. ನಿರಂತರ ಅಭ್ಯಾಸವೇ ಮಂತ್ರಜಪದ ಮೂಲಸೂತ್ರ. ಶ್ರೀಮಾತೆ ಲಕ್ಷಾಂತರ ಜಪವನ್ನು ಮಾಡುತ್ತಿದ್ದರು. ಸ್ವಾಮಿ ಬ್ರಹ್ಮಾನಂದರು ಹಾಗೂ ಇತರ ಶಿಷ್ಯರು ತೀವ್ರ ಸಾಧನೆಯ ಮೂಲಕ ಜಪದಲ್ಲಿ ನಿಷ್ಣಾತರಾಗಿದ್ದರು. ಈ ಆಧುನಿಕ ಯುಗದಲ್ಲಿ ಅತ್ಯಂತ ಸಹಜವಾಗಿ ಸಾಧನೆಯನ್ನು ಮಾಡುವ ಮಾರ್ಗವನ್ನು ಇವರೆಲ್ಲ ತೋರಿದ್ದಾರೆ. ಜಪದಿಂದ ಎಲ್ಲವೂ ಲಭಿಸುತ್ತದೆ ಎಂದು ದಿವ್ಯತ್ರಯರ ಉಪದೇಶದಲ್ಲಿ ಶ್ರದ್ಧೆಯಿಟ್ಟು ಮುನ್ನಡೆಯೋಣ. ❖

## ಜಪವನ್ನು ಹೇಗೆ ಮಾಡಬೇಕು?

**ಶಿಷ್ಯ:** ಜಪ ಮಾಡುವ ಕಾಲದಲ್ಲಿ ಅದರ ಅರ್ಥದ ಮೇಲೂ ಧ್ಯಾನಿಸಬೇಕೆಂದು ಶಾಸ್ತ್ರದಲ್ಲಿ ಓದಿರುವೆನು. ಅದನ್ನೇ ಕೆಲವರು ಹೇಳುವುದನ್ನೂ ಕೇಳಿರುವೆನು. ಈ ಅರ್ಥವನ್ನು ಹೇಗೆ ಆಲೋಚಿಸುವುದು. ಪದಶಃ ಅಥವಾ ಪೂರ್ತಿ ಮಂತ್ರವನ್ನೊ?

**ಸ್ವಾಮಿ ಬ್ರಹ್ಮಾನಂದರು:** ಹಾಗಲ್ಲ, ಮನುಷ್ಯನನ್ನು ಹೆಸರು ಹಿಡಿದು ಕೂಗುವಂತೆ ನಿನ್ನ ಹೆಸರನ್ನು ಕೇಳಿದೊಡನೆಯೇ ನಿನ್ನ ಆಕಾರವೂ ನನ್ನ ಮನಸ್ಸಿಗೆ ಹೊಳೆಯುವುದು. ಇದರಂತೆಯೇ ಮಂತ್ರ ಮತ್ತು ಅದರಿಂದ ಜನಿಸುವ ಆಕಾರ ಕೂಡ.

**ಶಿಷ್ಯ:** ನಾನು ಜಪವನ್ನು ಹೇಗೆ ಮಾಡಲಿ? ಮನಸ್ಸಿನಲ್ಲಿಯೋ ಅಥವಾ ನಿಧಾನವಾಗಿ ಉಚ್ಚರಿಸುತ್ತ ಮಾಡಲೆ?

**ಸ್ವಾಮಿ ಬ್ರಹ್ಮಾನಂದರು:** ನೀನೊಬ್ಬನೇ ಏಕಾಂತ ಸ್ಥಳದಲ್ಲಿರುವಾಗ ನಿನಗೆ ಮಾತ್ರ ಕೇಳುವಂತೆ ಮಾಡು. ಯಾರಾದರೂ ಹತ್ತಿರ ಇದ್ದರೆ ಮನಸ್ಸಿನಲ್ಲಿಯೇ ಮಾಡಬೇಕು. ಎರಡು ಪ್ರಸಂಗದಲ್ಲಿಯೂ ತುಟಿ ಅಲ್ಲಾಡಬೇಕು.

ಜಪ, ಧ್ಯಾನ ಇವೇ ಮನಸ್ಸಿಗೆ ಆಹಾರ. ಇವೇ ನಾವು ಮಾಡಬೇಕಾದ ಪ್ರಥಮ ಮತ್ತು ಮುಖ್ಯ ಕರ್ತವ್ಯ. ಮೊದಲು ಸರಿಯಾಗಿ ಧ್ಯಾನ ಮತ್ತು ಜಪವನ್ನು ಮಾಡುವುದಕ್ಕೆ ಆಗದೇ ಇದ್ದರೂ ಅಭ್ಯಾಸವನ್ನು ಬಿಡಕೂಡದು. ಅಭ್ಯಾಸಬಲದಿಂದಲೇ ನಾವು ಎಷ್ಟೋ ಸಾಧಿಸಬಹುದು. ಪ್ರತಿದಿನ ಎರಡು ಗಂಟೆ ಧ್ಯಾನ, ಜಪ, ಅರ್ಧ ಗಂಟೆ ವಿಶ್ರಾಂತಿ ಇವನ್ನು ಎಲ್ಲರೂ ಮಾಡಬೇಕು. ಸಾಧಕನಿಗೆ ಏಕಾಂತವಾಸವೂ ಬಹಳ ಪ್ರಯೋಜನಕಾರಿ. ಒಂದು ತೋಟದ ಮೂಲೆಯ ನಿರ್ಜನಪ್ರದೇಶದಲ್ಲೋ, ನದೀತೀರದಲ್ಲೋ, ಒಬ್ಬನೆ ಏಕಾಂತವಾಗಿ ಸ್ವಲ್ಪ ಹೊತ್ತು ಕಳೆಯುವುದರಿಂದಲೇ ಎಷ್ಟೋ ಪ್ರಯೋಜನವಾಗುವುದು.

*('ಬ್ರಹ್ಮಾನಂದ ವಚನಸುಧೆ', ಪು. ೯೨)*



# ಯಜ್ಞಾನಾಂ ಜಪಯಜ್ಞೋಽಸ್ಮಿ

ಸ್ವಾಮಿ ಶಿವಾಕಾಂತಾನಂದ

**ಶ್ರೀಮದ್ಭಗವದ್ಗೀತೆಯು ಭಾರತೀಯ ಆಧ್ಯಾತ್ಮಿಕ ಜಗತ್ತಿನಲ್ಲಿ ಯೋಗಶಾಸ್ತ್ರವೆಂದು ಕರೆಯಲ್ಪಟ್ಟಿದೆ. ಜಪಸಾಧನೆಯನ್ನು ಕುರಿತು ಗೀತೆಯಲ್ಲಿ ಹೇಳಿರುವ ಮಾತೊಂದನ್ನು ವಿಸ್ತೃತವಾಗಿ ವಿವರಿಸಿರುವ ಸ್ವಾಮೀಜಿಯವರು ಕೇರಳದ ಕಾಲಡಿಯಲ್ಲಿರುವ ರಾಮಕೃಷ್ಣ ಅದ್ವೈತ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಉತ್ತಮ ವಾಗ್ಮಿಗಳು ಮತ್ತು ಲೇಖಕರು. ಇವರು ಬರೆದ ಹಲವು ಲೇಖನಗಳು ಈಗಾಗಲೇ ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

**ಭ**ಗವದ್ಗೀತೆಯ ಹತ್ತನೇ ಅಧ್ಯಾಯವು ವಿಭೂತಿಯೋಗವೆಂದು ಕರೆಯಲ್ಪಟ್ಟಿದೆ. ವಿವಿಧ ವಸ್ತುಗಳಲ್ಲಿ ಶ್ರೇಷ್ಠವಾದದ್ದು ಯಾವುದೋ, ಭಗವಂತನ ಆ ಆವಿರ್ಭಾವವೇ ವಿಭೂತಿ.

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ॥ (೭.೬)

''ಸ್ಥಾವರ, ಜಂಗಮ ರೂಪದ ಎಲ್ಲ ವಸ್ತುಗಳ ಮೂಲವೂ ನಾನೇ. ಸಂಪೂರ್ಣ ಜಗತ್ತಿನ ವಸ್ತುಗಳ ಸೃಷ್ಟಿ ಲಯಗಳನ್ನು ಮಾಡುವವನೂ ನಾನೇ.''

ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ।
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ॥ (೭.೭)

''ನನಗಿಂತ ಶ್ರೇಷ್ಠವಾದ ವಸ್ತುಗಳು ಇನ್ನೊಂದಿಲ್ಲ (ಶ್ರೇಷ್ಠವಾದದ್ದೆಲ್ಲ ನನ್ನ ವಿಭೂತಿಯೇ). ಈ ಶ್ರೇಷ್ಠವಸ್ತುಗಳು ನನಗೆ ಅಲಂಕಾರವೋ ಎಂಬಂತೆ ಮಣಿಹಾರವಾಗಿ ಸೂತ್ರಾತ್ಮನಾದ ನನ್ನಲ್ಲಿ ಪೋಣಿಸಲ್ಪಟ್ಟಿವೆ.'' ಏಳನೇ ಅಧ್ಯಾಯದಲ್ಲಿ ಹೇಳಿರುವ ಈ ಶ್ಲೋಕದ್ವಯದ ಭಾವನೆಯನ್ನೇ ಹತ್ತನೆಯ ಅಧ್ಯಾಯದಲ್ಲಿ ವಿಸ್ತರಿಸಲಾಗಿದೆ. ಅನೇಕ ವ್ಯಕ್ತಿ, ವಸ್ತುಗಳಲ್ಲೆಲ್ಲ ಉತ್ತಮವಾದುದೆಲ್ಲಾ ತಾನೇ ಎಂಬುದನ್ನು ಕೃಷ್ಣ ವಿವರಿಸುತ್ತಾ ಹೋಗುತ್ತಾನೆ.

**ಯಜ್ಞ** – ಮಾನವಕುಲದ ಅತ್ಯುನ್ನತ ಆವಿಷ್ಕಾರವೇ ಈ ಯಜ್ಞ ಕಲ್ಪನೆ. **ಯಜ್** ಧಾತುವಿನ ಅರ್ಥ, ಅರ್ಪಿಸುವುದು. ತನ್ನದು ಎಂಬ ವಸ್ತುವನ್ನು ಬೇರೆಯವರಿಗೆ ನೀಡುವುದು. ಪೂಜಾಭಾವದಿಂದ ಅರ್ಪಿಸುವುದೂ ಸಹ ಯಜ್ಞ. ಧರ್ಮಶಾಸ್ತ್ರಗಳ ಪ್ರಕಾರ ದ್ವಿಜನು ಈ ಐದು ಯಜ್ಞಗಳನ್ನು ನಿಯಮಿತವಾಗಿ ನಡೆಸಬೇಕು: ಭೂತಯಜ್ಞ, ಮನುಷ್ಯಯಜ್ಞ, ದೇವಯಜ್ಞ, ಪಿತೃಯಜ್ಞ, ಬ್ರಹ್ಮಯಜ್ಞ. ತ್ಯಾಗ ಮನೋಭಾವನೆ ಇದ್ದಲ್ಲಿ ಇಹದಲ್ಲಿಯೂ ಪರದಲ್ಲಿಯೂ ಹೆಚ್ಚಿನ ಸುಖ–ಶಾಂತಿಯನ್ನು ಹೊಂದಬಹುದೆಂಬ ಪ್ರಜ್ಞೆ ನಮ್ಮ ಪೂರ್ವಜರಿಗೆ ಇತ್ತು. ಪ್ರಾಪಂಚಿಕ ಫಲಗಳ ಅಲ್ಪ ಪ್ರಮಾಣವೂ, ಅಲ್ಪಾವಧಿಯೂ, ಕಿರಿಸುಖದ ಜೊತೆಗೆ ಹಿರಿದುಃಖವನ್ನು ತಂದೊಡ್ಡುವ ಸ್ವಭಾವವಾದ್ದರಿಂದ ಪರಿಹಾರವೇನೆಂಬ ಜಿಜ್ಞಾಸೆಯುಂಟಾಯಿತು. ಮೊದಲು ನಮ್ಮೊಡನಿರುವ ಪಶುಪಕ್ಷಿಗಳು ಮನುಷ್ಯರಿಗೆ ಮಾಡುವ ಸೇವಾ ಕಾರ್ಯದಿಂದ ಪುಣ್ಯ ಸಂಪಾದನೆ. ಇದಕ್ಕಿಂತಲೂ ಹೆಚ್ಚಿನ, ಮೇಲಿನ ಲೋಕಗಳಲ್ಲಿರುವ ದಿವ್ಯಶಕ್ತಿಗಳಿಗೆ, ಪಿತೃಲೋಕದಲ್ಲಿರುವ ತನ್ನ ಪೂರ್ವಜರಿಗೆ ತನ್ನಲ್ಲಿರುವ ಉತ್ತಮ ವಸ್ತುಗಳ ಸಮರ್ಪಣೆಯಿಂದ ಪಡೆಯಬಹುದಾದ ಫಲಗಳ ಅನ್ವೇಷಣೆಯೇ ಕರ್ಮಸಿದ್ಧಾಂತ. ದೇವತೆಗಳಲ್ಲಿ ಕಿರಿಯನಾದ ಅಗ್ನಿಯ ಮೂಲಕ ನೀಡುವ ಆಹುತಿಗಳು ಆ ದೇವತೆಗಳಿಗೆ ತಲುಪುತ್ತವೆ. ಈ ಮೂಲಕ ತೃಪ್ತರಾದ ಆ ದೇವತೆಗಳು ನಿವೇದನೆಯನ್ನು ಮನ್ನಿಸುತ್ತಾರೆ. ದಿವ್ಯವಾದ, ದುಃಖವಿಲ್ಲದ, ಶಾಶ್ವತವಾದ, ದೊರೆತ ಫಲವನ್ನು ಯಾವುದೇ ಭಯವಿಲ್ಲದೆ ದೀರ್ಘಕಾಲ (ಅಮೃತಪಾನವೇ ಮುಂತಾದ) ಅನುಭವಿಸಲು ಮಾಡಿದ ಯೋಜನೆ ಈ ಯಜ್ಞ. ಯಜ್ಞವು ಪ್ರಬಲ ಪುರುಷಯತ್ನದಿಂದ ದಿವ್ಯಶಕ್ತಿಗಳನ್ನು ತೃಪ್ತಿಪಡಿಸುವ ಮೂಲಕ, ದೀರ್ಘವಾದ ಉತ್ತಮ ಫಲಗಳನ್ನು ಪಡೆಯುವ ವೈದಿಕ ವಿಧಾನ. ವಿಧಿ, ಅನುಷ್ಠಾನಗಳು ಕರ್ಮಕಾಂಡದಲ್ಲಿ ಪ್ರತಿಪಾದಿತವಾಗಿರುವ ವಿಷಯ. ಮಂತ್ರ, ಉಪಾಸನೆಗಳೆಲ್ಲ ಯಜ್ಞ–ಯಾಗಾದಿ ಸಮಯದಲ್ಲಿ ಉಪಯೋಗಿಸಲ್ಪಡುವ ಅಂಗಗಳಾಗಿದ್ದವು. ಸಾತ್ತ್ವಿಕ ಮನೋಭಾವನೆಯಿಂದ, ಶಕ್ತ್ಯುತ್ಸಾಹದಿಂದ, ಫಲಪ್ರಾಪ್ತಿಯಾಗುವವರೆಗೂ ನಿರಂತರ ಮಾಡುವ ಯತ್ನ. ಇವು ಅಷ್ಟು ಸುಲಭ

ದ್ದೆಂದು, ಹೀನವಾದದ್ದೆಂದು ತಿಳಿಯಬೇಡಿ. ದೃಢ ಪ್ರಯತ್ನವಿಲ್ಲದ, ಇಂದಿಯನಿಗ್ರಹ ಸಾಮರ್ಥ್ಯವಿಲ್ಲದ ವ್ಯಕ್ತಿಗಳಿಗೆ ಇದು ಅಸಾಧ್ಯ. ಕರ್ಮವು ಚಿತ್ತಶಕ್ತಿಗೆ, ಚಿತ್ತಶುದ್ಧಿಗೆ ನೆರವಾಗುತ್ತದೆ. ಆದ್ದರಿಂದ ಕರ್ಮಗಳು ಅನರ್ಥವೆಂದು ಶಂಕಿಸಬಾರದು. ಯಜ್ಞಗಳನ್ನು ನಡೆಸಬೇಕೆಂಬ ವ್ಯಕ್ತಿಯಲ್ಲಿರಬೇಕಾದ ಯೋಗ್ಯತೆಯೆಂದರೆ:

- ನಿತ್ಯ, ನೈಮಿತ್ತಿಕ, ವ್ರತ, ಪ್ರಾಯಶ್ಚಿತ್ತ ಮುಂತಾದ ವಿಧಿ ನಿಷೇಧವನ್ನು ಜೀವನಪರ್ಯಂತ ಅನುಸರಿಸುವುದು. ಯಾವ ಕಾರ್ಯವಾದರೂ ಸರಿ, ನಿಯಮಿತವಾಗಿ, ನಿರಂತರವಾಗಿ ಏಕಾಗ್ರ ಮನಸ್ಸಿಟ್ಟು ಶುದ್ಧನಾಗಿ, ಶ್ರದ್ಧೆಯಿಂದ ಮಾಡುವ ಸ್ವಭಾವ.

- ದೇಶ, ಕಾಲ, ಪರಿಕರಣ, ಮಂತ್ರ, ಪ್ರಯೋಗಗಳಲ್ಲಿ ಯಾವುದೇ ದೋಷವಿರದಂತೆ ಕಣ್ಣಲ್ಲಿ ಕಣ್ಣಿಟ್ಟು ಎಚ್ಚರಿಕೆ ವಹಿಸುವುದು.

- ಅತೀಂದ್ರಿಯ ಶಕ್ತಿಗಳ ಸಂಪರ್ಕಕ್ಕಾಗಿ ಬೇಕಾಗಿರುವ ಸೂಕ್ಷ್ಮ ಬುದ್ಧಿಯನ್ನು ಬೆಳೆಸಿಕೊಳ್ಳಲು ಇಂದ್ರಿಯ ಪ್ರಲೋಭನೆ, ಮನೋ ಚಾಂಚಲ್ಯ, ಸ್ರಕ್ಚಂದನ ವನಿತಾದಿಗಳಲ್ಲಿ ಜಾಗರೂಕನಾಗಿ ಕಟ್ಟುನಿಟ್ಟಿನ ಧಾರ್ಮಿಕ ಜೀವನ. ಇಂದ್ರಪದವಿಯೇ ಮುಂತಾದ ದಿವ್ಯ ಭೋಗಗಳಿಗಾಗಿ ಕ್ಷುದ್ರ ಭೋಗಗಳ ತ್ಯಾಗ.

- ಬಾಹ್ಯ ಹಾಗೂ ಆಂತರಿಕ ವಿಧಿಗಳನ್ನು ನಿಷ್ಕಳಂಕವಾಗಿ, ಶ್ರದ್ಧೆಯಿಂದ ನಡೆಸಿದಲ್ಲಿ ಮಾತ್ರ ಯಜ್ಞಫಲ ದೊರಕುವುದೆಂಬ ದೃಢ ನಂಬಿಕೆ. ಇಲ್ಲವಾದಲ್ಲಿ ಕ್ರಿಯಾ, ಭಾವನೆಗಳ ದೋಷವೇ ಹೊರತು ಶ್ರುತಿದೋಷವಲ್ಲವೆಂಬ ನಂಬಿಕೆ.

ಹೀಗೆ ಮಾಡಿದ ಯಜ್ಞಕಾರ್ಯವು ಆ ದೇವತೆಗಳನ್ನು ತಟ್ಟುತ್ತದೆ. ಆಯಾ ದೇವತೆಗಳು ಯಜ್ಞಾಗ್ನಿಯಲ್ಲಿ ಪ್ರವೇಶಿಸಿ ಆಹುತಿಗಳನ್ನು ಸ್ವೀಕರಿಸಿ ಸಂತುಷ್ಟರಾಗಿ ಅಭೀಷ್ಟ ವರಪ್ರದಾನವನ್ನು ಮಾಡುತ್ತಾರೆ. ಉಳಿದ ಯಜ್ಞಗಳು ಶಾಸ್ತ್ರಪ್ರಮಾಣ ಬಲದಿಂದಲೇ ತಕ್ಕ ಫಲವನ್ನು ನೀಡುತ್ತವೆ. ಎಲ್ಲವೂ ಶಾಸ್ತ್ರೀಯವಾಗಿ ನಡೆದಲ್ಲಿ ಪರಿಣಾಮ ಉಂಟಾಗುವುದು ಖಂಡಿತ ಏಕೆಂದರೆ ಆಸ್ತಿಕರಿಗೆ ಪ್ರಯೋಜನವಾದ ನಿದರ್ಶನಗಳಿವೆ. ಇಲ್ಲಿ ಕಾಮ್ಯಕರ್ಮವೆಂಬ ದೋಷವಿದ್ದರೂ ಉಳಿದದ್ದೆಲ್ಲ ಅತ್ಯಂತ ಶ್ರೇಷ್ಠವಾದ ಮನೋಭಾವನೆಗಳು. ಈ ಕಾಮವನ್ನು ಭಗವಂತನಲ್ಲಿಟ್ಟರೆ ಉಂಟಾಗುವುದು ಭಕ್ತಿ, ಆತ್ಮನಲ್ಲಿಟ್ಟರೆ ಉಂಟಾಗುವುದು ಜ್ಞಾನ. ಈ ರೀತಿ ಮಾಡುವುದು ಒಂದು ಕ್ರಮ.

ಇನ್ನೊಂದು, ನಾವು ಮಾಡುವ ಸ್ವಧರ್ಮವೂ ಯಜ್ಞವೇ, ಸಮರ್ಪಣಾಭಾವದಿಂದ ಮಾಡುವ ಕೆಲಸವೂ ಯಜ್ಞವೇ. '**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ।**' *(ಗೀತೆ, ೧೮.೪೬)*. ಶಾರೀರಿಕ, ಇಂದ್ರಿಯ, ಪ್ರಾಣ, ಮಾನಸಿಕ ವ್ಯಾಪಾರಗಳನ್ನು, ಜೀವನದಲ್ಲಿ ಮಾಡುವ ಎಲ್ಲ ಕಾರ್ಯಗಳನ್ನು ಯಜ್ಞರೂಪದಲ್ಲಿ ಆಚರಿಸುವುದು. ದೇವತಾರ್ಪಣ ಭಾವದಿಂದ ಮಾಡುವ ಕೆಲಸವೆಲ್ಲ ಪೂಜಾ ಕಾರ್ಯವೆ. ವೈದಿಕಯಜ್ಞವು ದ್ರವ್ಯಯಜ್ಞವಾದರೆ, ಫಲಾಪೇಕ್ಷೆಯಿಲ್ಲದೆ ಸಮರ್ಪಣಾ ಭಾವದಿಂದ ಮಾಡಿದ ಕಾರ್ಯಗಳು ಜ್ಞಾನ ಯಜ್ಞ. ('**ಬ್ರಹ್ಮಾರ್ಪಣಂ ಬ್ರಹ್ಮಹವಿಃ...**' *(ಗೀತೆ, ೪.೨೪)* ಶ್ಲೋಕದಿಂದ '**ಶ್ರೇಯಾನ್‌ದ್ರವ್ಯಮಯಾದ್ಯಜ್ಞಾದ್ ಜ್ಞಾನಯಜ್ಞಃ...** *(ಗೀತೆ, ೪.೩೩)* ವರೆಗೆ ಹಾಗೂ '**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ**' *(ಗೀತೆ,೪.೧೯)* ನೋಡಿ.) ಈ ವಿಷಯವು ಪ್ರಸ್ತುತ ಆಧುನಿಕ ಯುಗಕ್ಕೆ ಇನ್ನೂ ಹೆಚ್ಚಾಗಿ ಅನ್ವಯಿಸುತ್ತದೆ.

ಉಪಾಸನೆಗಳು – ಕೇವಲ ಕರ್ಮದ ಜೊತೆಗೆ ಮನೋವ್ಯಾಪಾರವನ್ನು ಜೊತೆಗೂಡಿಸುವ ಯತ್ನವೇ ಉಪಾಸನೆ. ಶಾಸ್ತ್ರವು ಹೇಳಿರುವ ಪ್ರಣವ, ಅಗ್ನಿ, ಆಕಾಶ, ಆದಿತ್ಯ, ಗಾಯತ್ರಿ, ಮುಂತಾದವು ವೈದಿಕ ಆಲಂಬನಗಳು. ದಹರವಿದ್ಯೆ, ಗಾಯತ್ರಿಬ್ರಹ್ಮೋಪಾಸನೆ, ಶಾಂಡಿಲ್ಯ ವಿದ್ಯೆ, ಕೋಶವಿದ್ಯೆ, ಪುರುಷವಿದ್ಯೆ ಮುಂತಾದವು ಉಪಾಸನೆಗಳು. ಮುಂದೆ ಇವೇ ವೇದಾಂತದ ಸ್ವರೂಪಾನುಸಂಧಾನಕ್ಕೂ, ಭಕ್ತಿ ಯೋಗದ ಜಪಸಾಧನೆ ಇತ್ಯಾದಿಗಳಿಗೂ ಸೋಪಾನವಾಯಿತು. ಆಲಂಬನಕ್ಕಿಂತ ವಿಲಕ್ಷಣವಾದ ಪ್ರತ್ಯಯವು ಬಾರದಂತೆ ನಡೆಸುವ ಸತತವಾದ ಚಿತ್ತವೃತ್ತಿಯೇ ಮಾನಸಿಕ ಕರ್ಮ, ಉಪಾಸನೆ. ಈ ಉಪಾಸನೆಯ ಕಾಲದಲ್ಲಿ ಉಪಾಸ್ಯ ವಸ್ತುವನ್ನು ನಾನೇ ಎಂದು ಅಥವಾ ಈಶ್ವರನೆಂಬ ದೃಷ್ಟಿಯಿಂದ ಉಪಾಸಿಸಬೇಕು ಎಂದು ತಿಳಿಸಲಾಗಿದೆ – '**ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ ಸ ದೇವಾನಾಂ**' *(ಬೃ. ೧.೪.೧೦)*. ಈ ರೀತಿಯ ಉಪಾಸನೆ ಚಿತ್ತಶುದ್ಧಿಗೂ, ಕಾಲಕ್ರಮದಲ್ಲಿ ಜ್ಞಾನೋತ್ಪತ್ತಿಗೂ ಕಾರಣವಾಗುತ್ತದೆ. ಮನೋಬಲವು ಹೆಚ್ಚಾದಂತೆ ಕರ್ಮಗಳೊಡನೆ ಉಪಾಸನೆಗಳನ್ನು ಜೊತೆಗೂಡಿಸುವ ಅಭ್ಯಾಸದಿಂದ ಮನಶ್ಶಕ್ತಿ, ಸಂಯಮ, ನಿಷ್ಠೆಗಳ ಜೊತೆ ಉನ್ನತವಾದದ್ದನ್ನು ಪಡೆಯುವ ತೀವ್ರ ಪ್ರಯತ್ನಕ್ಕೆ ಪುಷ್ಟಿ ನೀಡುತ್ತದೆ. ಕೇವಲ ಕರ್ಮ, ಕರ್ಮಉಪಾಸನೆ ಸಮುಚ್ಚಯ, ಕೇವಲ ಉಪಾಸನೆ ಇವು ಕ್ರಮಕ್ರಮವಾಗಿ ಮುಕ್ತಿ ಮಾರ್ಗಕ್ಕೆ ಸೋಪಾನವನ್ನು ನೀಡುತ್ತದೆ. ಕೇವಲ ಉಪಾಸನೆಯಿಂದ ಇನ್ನೂ ಉನ್ನತಲೋಕವನ್ನೂ ಪಡೆಯಬಹುದು ಮತ್ತು ಪುನರಾವರ್ತನೆಯನ್ನು ನಿಲ್ಲಿಸಬಹುದು. ಉಪಾಸನೆಗಳು ಮತ್ತು ಜ್ಞಾನಕ್ಕಿರುವ ಸಾಮಾನ್ಯತೆಯೆಂದರೆ ಶಂಕರರು ವಿವರಿಸುವಂತೆ '**ರಹಸ್ಯ ಸಾಮಾನ್ಯಾತ್, ಮನೋವೃತ್ತಿ ಸಾಮಾನ್ಯಾಚ್ಚ**' *(ಛಾಂ. ಉಪೋದ್ಘಾತ ಭಾಷ್ಯ)*. ಶಾಸ್ತ್ರ, ಗುರು–ಶಿಷ್ಯ ಪರಂಪರೆಯಿಂದ ಬರುವುದರಿಂದ ಇವೆರಡೂ ರಹಸ್ಯವಿದ್ಯೆ. ಉಪಾಸನೆಯಲ್ಲಿ ಚಿತ್ತವೃತ್ತಿಸಮಾಧಾನ, ಜ್ಞಾನಮಾರ್ಗದ ಸ್ವರೂಪಾನುಸಂಧಾನದಲ್ಲಿ ನಿಧಿಧ್ಯಾಸನ ಎಂಬ ಮನೋವೃತ್ತಿ ಸಾಮಾನ್ಯತೆ. ಜಪವೂ ಸಹ ಗುರುಶಿಷ್ಯ ಪರಂಪರೆಯಿಂದ ಬಂದ ರಹಸ್ಯಮಂತ್ರ, ರಹಸ್ಯವಿದ್ಯೆ, ಪುನರಾವರ್ತನೆ ಮತ್ತು ತದೇಕಚಿತ್ತದಿಂದ ಇಷ್ಟದೇವತೆಯ ಉಪಾಸನೆ ಎಂಬ ಮನೋವೃತ್ತಿ. ಈ ಉಪಾಸನೆಯ ತಂತ್ರವೇ (technique) ಮುಂದೆ ಯೋಗ, ತಂತ್ರ, ಭಾಗವತ ಯುಗದಲ್ಲಿ ಧ್ಯಾನ, ಜಪ ಮುಂತಾದವುಗಳಿಗೆ ಉಪಯೋಗಿಸಲ್ಪಟ್ಟಿತು. ವಿಶೇಷವಾಗಿ ಮಂತ್ರಜಪವು ಮಂತ್ರಾವರ್ತನೆ, ಪರಮೇಶ್ವರನ ಮಾನಸಿಕ ಪ್ರತೀಕೋಪಾಸನೆ ಎಂಬ ಕೇವಲ ಮಾನಸಿಕ–ಆಂತರಿಕ ಯಜ್ಞವಾದ್ದರಿಂದ ಉಪಾಸನೆಗಳಲ್ಲೆಲ್ಲಾ ಶ್ರೇಷ್ಠವಾಗಿ ಕಂಡುಬರುವುದರಿಂದ ಶ್ರೀಕೃಷ್ಣನು ನುಡಿಯುತ್ತಾನೆ– ''**ಯಜ್ಞಾನಾಂ ಜಪ ಯಜ್ಞೋಽಸ್ಮಿ.**''

ಪ್ರತಿಯೊಂದು ಶಬ್ದವೂ ಧ್ವನಿ ಮತ್ತು ಅರ್ಥವನ್ನು ಒಳಗೊಂಡಿದೆ. ಒಂದೇ ಧ್ವನಿಯಿಂದ ಎರಡು ಅರ್ಥವಾಗುತ್ತದೆ. ಮಿತ್ರ ಎಂದರೆ ಸೂರ್ಯನೂ, ಗೆಳೆಯನೂ. ಹಾಗಿದ್ದಲ್ಲಿ ವಾಚಕನ ಭಾವವನ್ನರಿತು ಅರ್ಥಗ್ರಹಣವಾಗುತ್ತದೆ. ಶಬ್ದವು ನಮ್ಮ ಮನಸ್ಸಿನ ತರಂಗಗಳನ್ನು ವ್ಯಕ್ತಪಡಿಸುತ್ತದೆ. ಶಬ್ದವೂ ಮನೋತರಂಗವನ್ನುಂಟು ಮಾಡುತ್ತದೆ. ನೃತ್ತಾವಸಾನದಲ್ಲಿ ನಟರಾಜನು ಹದಿನಾಲ್ಕು ಬಾರಿ ಡಮರು ಬಾರಿಸಿದಾಗ ಹೊರಟ ಪ್ರಥಮ ಮೂರು ಅಕ್ಷರಗಳೇ 'ಅ,ಇ,ಉ.'

ಅನುತ್ತರವಾದ 'ಅ'ಕಾರ ಸೃಷ್ಟಿಗಿಂತ ಮೊದಲಿನ ಸ್ಥಿತಿ; 'ಇ'ಕಾರ ಇಚ್ಛಾಶಕ್ತಿ, ಸೃಷ್ಟಿಯ ಆರಂಭದ ಮೂಲ; 'ಉ' ಉನ್ಮೇಷ ಉಬ್ಬುವಿಕೆ ಅಥವಾ ಜಗತ್ಸೃಷ್ಟಿ. ಸೃಷ್ಟಿ, ಸ್ಥಿತಿಗಳು ಶಬ್ದದಿಂದ ಉಂಟಾದವು. ಸಚ್ಚಿದಾನಂದ ಶಿವನಿಂದ, ಮೂಲಶಕ್ತಿಯಾದ ಸಚ್ಚಿದಾನಂದಮಯಿ ಹೊರಬಂದಳು. ಈ ಶಕ್ತಿಯಿಂದ ಉಂಟಾದ ಪ್ರಥಮ ಕಂಪನದಿಂದ ಹೊರಹೊಮ್ಮಿದ್ದು ನಾದ. ಈ ಕಂಪನವು ಸಾಂದ್ರವಾಗಿ(concealed, compressed) ಬಿಂದು (nucleus) ಹೊರ ಬಂದಿತು. ಬಿಂದುವು ಮತ್ತೆ ನಾದವಾಗಿ ಸಿಡಿದು ಮಂತ್ರಬೀಜ ವರ್ಣಗಳು ಉಂಟಾದವು. ಸಚ್ಚಿದಾನಂದನ ಶಕ್ತಿಯನ್ನೇ ಅಡಗಿಸಿಟ್ಟುಕೊಂಡಿವೆ ಈ ಬೀಜಮಂತ್ರಗಳು. ಅವನೇ ಪ್ರಥಮಗುರುವಾಗಿ ಅವತರಿಸಿ ಮಂತ್ರವಿದ್ಯೆಯನ್ನು ಪಸರಿಸಿದನು. ಮಂತ್ರಗಳು ಸಾಮಾನ್ಯ ಪದಗಳಂತೆ ವರ್ಣಸಮೂಹವಲ್ಲ. ಇವುಗಳಲ್ಲಿ ಚಿಚ್ಛಕ್ತಿ ಅಡಗಿದೆ. ಒಂದು ಅಣುಬಾಂಬಿನಲ್ಲಿರುವ ಅಪಾರ ಶಕ್ತಿಯಂತೆ. ಮಂತ್ರಗಳಲ್ಲಿ ಭಗವಚ್ಛಕ್ತಿ ಇರುವುದರಿಂದ ನಮ್ಮ ಮನಸ್ಸಿನ ಹೊರ, ಒಳ, ಆಳದಲ್ಲಿರುವ ಪದರಗಳೂ ಬದಲಾಗುತ್ತವೆ. ಶಬ್ದವೂ ತರಂಗವಾಗಿರುವಂತೆ ಮನಸ್ಸೂ ಸಹ ತರಂಗರೂಪದಲ್ಲಿದೆ. ಯೋಗಶಾಸ್ತ್ರದಲ್ಲಿ ಪತಂಜಲಿಯು ಇದನ್ನು **ಚಿತ್ತವೃತ್ತಿ**ಯೆಂದು ಕರೆದರೆ, ವ್ಯಾಸರು ಸರೋವರದ ಅಲೆಗೆ ಹೋಲಿಸಿದ್ದಾರೆ. ಮನಸ್ಸೂ, ಶಬ್ದವೂ ಭೂತ ತನ್ಮಾತ್ರೆಗಳಿಂದಲೇ ಉಂಟಾಗಿವೆ. ಮಂತ್ರಗಳ ಕಂಪನವು ಮನಸ್ಸಿನ ಮೇಲೆ ದಿವ್ಯ ತರಂಗಗಳನ್ನು ಎಬ್ಬಿಸುತ್ತದೆ. ನಿಯಮಿತವಾಗಿ ಮಾಡುವ ಜಪ, ಗುರುವಿನ ಕೃಪೆ, ಇಷ್ಟ ದೇವತೆಯ ಕೃಪೆ ಎಲ್ಲವೂ ಸೇರಿಕೊಂಡಾಗ (ಸಿಂಕ್ರೊನೈಸ್ ಆದಾಗ) ಮನಸ್ಸು ಬೇಗ ಮಾರ್ಪಾಟಾಗುತ್ತದೆ.

ವೈದಿಕ ಯಜ್ಞಗಳು ಹೇಗೆ ವಿಶೇಷ ಸ್ಥಾನವನ್ನು ಪಡೆಯಲು ಸಾಧನೆಯೋ ಹಾಗೆಯೇ ಮಂತ್ರಜಪವೂ ಸಹ. ಮಂತ್ರವು ಆ ಪರಬ್ರಹ್ಮನ ವಿಶಿಷ್ಟ ಆಕಾರವನ್ನು ಸಾಧಕನಿಗಾಗಿ ಪ್ರಕಟಪಡಿಸುತ್ತದೆ. ಈ ಮಂತ್ರವು ಅನೇಕ ಕಾಲದಿಂದ ಪರಂಪರಾಗತವಾಗಿ ಕಾರ್ಯೋನ್ಮುಖವಾಗಿರುವುದರಿಂದ ಶಕ್ತಿಯು ಇನ್ನೂ ಹೆಚ್ಚು. **'ಮನನಾತ್ ತ್ರಾಯತೇ ಇತಿ ಮಂತ್ರಃ'** - ಮಂತ್ರಕ್ಕೆ ಮಾತೃಸ್ಥಾನವಿದೆ. ಮಂತ್ರದಿಂದಲೇ ದೇವತೆಯ ಪ್ರಸವವಾಗುತ್ತದೆ. ಮಂತ್ರವು ಶಬ್ದ, ದೇವತೆಯು ಅರ್ಥ. ಜಪ ಮಾಡುವಾಗ ನಮ್ಮ ಮೇಲ್ಕೆಳಗಿನ ತುಟಿಗಳು ಶಿವ-ಶಕ್ತಿ ಸ್ವರೂಪ. ಇವೆರಡರ ಸಂಯೋಗದಿಂದ ಬರುವ ಶಬ್ದ ಸಂತಾನವೇ ಇಷ್ಟದೇವತೆ. ಸಾಧಕನು ಹೀಗೆ ದೇವತೆಯನ್ನೇ ಉತ್ಪತ್ತಿ ಮಾಡುವುದರಿಂದ ದೇವತೆಯು ಅವನ ಸಂತಾನ.

ಪರಂಪರೆಗೆ ಶರಣಾದ ಸಾಧಕನಿಗೆ ಭೂತಶರೀರದಲ್ಲಿರುವ ಗುರುವು ಪೂರ್ವಜನ್ಮಸಂಸ್ಕಾರ, ಮನೋಗುಣಕ್ಕನುಗುಣವಾಗಿ ಸ್ಥೂಲವಾದ ಶಬ್ದದಿಂದ (ವೈಖರೀ) ಮಂತ್ರವನ್ನು ನಮ್ಮ ಕಿವಿಯೊಳಗೆ ಉಚ್ಚರಿಸುತ್ತಾನೆ. ಗುರುವು ಎಷ್ಟೇ ಸಮರ್ಥನಾಗಿದ್ದರೂ ಇದೇ ರೀತಿಯಲ್ಲೇ ಜಪ ಮಂತ್ರವನ್ನು ನೀಡಬೇಕಾಗಿದೆ. ಏಕೆಂದರೆ ಶಿಷ್ಯನು ಆ ಸ್ತರದಲ್ಲಿದ್ದಾನೆ. ಆದರೆ ಮಂತ್ರಕ್ಕೆ ಸ್ವಶಕ್ತಿಯಿರುವುದರಿಂದ ಸಾಧಕನು ಸ್ವಲ್ಪವಾದರೂ ಈ ಮಂತ್ರಬೀಜವನ್ನು ಪೋಷಿಸಿದರೂ ನಾಶವಾಗದೆ ವೈಖರೀ, ಮಧ್ಯಮಾ, ಅಜಪಾ, ಪರಾ ಎಂಬ ಸೂಕ್ಷ್ಮಸ್ಥಿತಿಯನ್ನು ಕ್ರಮವಾಗಿ ತಲುಪುತ್ತಾನೆ. ಈ ವಿವರಣೆಯಿಂದ ಇವು ಎಷ್ಟು ಸೂಕ್ಷ್ಮ ಎಂಬುದು ಅರ್ಥವಾಗುತ್ತದೆ. ಆದರೆ ಶಿಷ್ಯ ಸಮರ್ಥನಾದರೆ ಮಂತ್ರವು ನೀಡಿದ ತಕ್ಷಣವೇ ಕಾರ್ಯೋನ್ಮುಖವಾಗುತ್ತದೆ. ಒಮ್ಮೆ ಶ್ರೀರಾಮಕೃಷ್ಣರು ಕಾಶೀಪುರದಲ್ಲಿ ನರೇಂದ್ರನಿಗೆ ರಾಮನಾಮವನ್ನಿತ್ತರು. ನರೇಂದ್ರ ಎಂತಹ ಸ್ಥಿತಿ ತಲುಪಿದನೆಂದರೆ ಬಂಗಲೆಯ ಸುತ್ತಲಿರುವ ಹಾದಿಯನ್ನು ವೇಗವಾಗಿ ಸುತ್ತುತ್ತಾ ಇಡೀ ರಾತ್ರಿ ಜೋರಾಗಿ ರಾಮನಾಮವನ್ನು ಮಾಡುತ್ತಿದ್ದ.

ಮೂಲಶಕ್ತಿಯಿಂದ ಗುರುಪರಂಪರೆಯ ಮೂಲಕ ಹರಿದು ಬರುತ್ತಿರುವ ಈ ಮಂತ್ರವಿದ್ಯೆಗೂ, ವೈದಿಕ ಉಪಾಸನೆಗೂ ಶಂಕರರು ತಿಳಿಸಿರುವ **'ರಹಸ್ಯಸಾಮಾನ್ಯಾತ್'** ಅನ್ವಯಿಸುತ್ತದೆ. ಪುಸ್ತಕಗಳಲ್ಲಿ, ಧ್ವನಿಮುದ್ರಿಕೆಯಲ್ಲಿರುವ ಮಂತ್ರಗಳನ್ನು ಜಪಿಸಿ ಪ್ರಯೋಜನವಿಲ್ಲ. ಆದ್ದರಿಂದ ಗುರುಪರಂಪರೆಗೆ ಶರಣಾಗಬೇಕು. ಇದರಲ್ಲಿ ಅಂಧಶ್ರದ್ಧೆಯಿಲ್ಲ, ತಾತ್ವಿಕ ಕಾರಣ ಇದೆ. ಮಂತ್ರವು ಸ್ಥೂಲವೆಂಬ ಸಿಪ್ಪೆ(ಶಬ್ದ)ಯನ್ನು ಹೊಂದಿದ್ದರೂ ಮೂಲ ನಾದಶಕ್ತಿಯನ್ನು ತಿರುಳೊಳಗೆ ಅಡಗಿಸಿಕೊಂಡೇ ಇದೆ. ಗುರುವಿತ್ತ ಮಂತ್ರದ ದೀರ್ಘಕಾಲ ಪುನರಾವರ್ತನೆಯೇ ಜಪ. ಸಾಧನೆಯ ಘರ್ಷಣೆ ಯಿಂದ ಸಿಪ್ಪೆ ಉದುರಿ ತಿರುಳು ಮನೋಭೂಮಿಯಲ್ಲಿ ಅಂಕುರವಾಗುತ್ತದೆ. ಅತಿಯಾದ ಆವರ್ತನೆಯಿಂದ ಶಬ್ದಾರ್ಥವನ್ನುಂಟು ಮಾಡುವ ಕ್ರಿಯೆಯೇ ಮಂತ್ರಚೈತ್ಯನ್ಯ. ಮಂತ್ರದೇವತೆಯು ಮನಸ್ಸಿನಲ್ಲಿ ಚೈತನ್ಯತೆಯನ್ನು ಪಡೆಯುತ್ತದೆ. ಈ ಮಂತ್ರಚೈತನ್ಯದ ಪ್ರಥಮಕ್ರಿಯೆ ಉಳಿದ, ಹೊಸದಾಗಿ ಕೂಡಿದ ಚಿತ್ತಮಲವನ್ನು ಕಟ ರೇಣುವಿನಂತೆ (Alum) ಶುದ್ಧಿಗೊಳಿಸುತ್ತದೆ. ಇದನ್ನು ಮಂತ್ರಸ್ನಾನವೆನ್ನುತ್ತಾರೆ. ಈ ಮಂತ್ರಜಲವು ಗಂಗೆಗಿಂತ ಪವಿತ್ರ. ದ್ವಿತೀಯ ಕ್ರಿಯೆ ಮಲಗಿರುವವನನ್ನು ಅಲ್ಲಾಡಿಸಿ ಎಬ್ಬಿಸುವಂತೆ ಇಷ್ಟದೇವತೆಯನ್ನು ಎಬ್ಬಿಸುವುದು. ಜಡವಾದ ದೇವತೆಯು ಈಗ ಜ್ಯೋತಿ ಸ್ವರೂಪವಾಗಿ ಬೆಳಗುತ್ತದೆ, ಅದರ ಅಂಗಾಂಗಗಳು ಚಲಿಸಲಾರಂಭಿಸುತ್ತದೆ, ಮನಸ್ಸು ದೈವೀಮಯವಾಗುತ್ತದೆ. ಜಪವು ರಸಮಯವಾಗಿ ಮುಂದುವರಿಯುತ್ತದೆ. ಸಾಧಕನು ಮಂತ್ರದಿಂದಲೇ ಭಗವಂತನಿಗೆ ಪಂಚಾಮೃತಾಭಿಷೇಕ, ಸ್ನಾನ, ವಸ್ತ್ರ, ಗಂಧ, ಧೂಪ, ದೀಪ, ನೈವೇದ್ಯವನ್ನೂ ಅರ್ಪಿಸುತ್ತಾನೆ. ಪ್ರತಿ ಯತ್ನದಲ್ಲಿಯೂ ಭಗವಂತನ ನಾಮರೂಪಗಳಲ್ಲಿ ಮನಸ್ಸನ್ನು ಒಂದಾಗುವಂತೆ ಮಾಡುವುದೇ ನ್ಯಾಸ. ಕ್ರಮೇಣ ಈ ಮಂತ್ರನಾದವೂ, ಅದರ ಅರ್ಥವೂ ಮೂಲವಾದ ಅಖಂಡ ನಾದದೊಡನೆ ಲಯವಾಗಿ ಸಚ್ಚಿದಾನಂದನಲ್ಲಿ ಒಂದಾಗುತ್ತದೆ. ಸಾಧಕನು ಮನಸ್ಸು ವಿಮುಖವಾಗುವವರೆಗೂ ಜಪಮಾಡಿ, ಕ್ರಮವಾಗಿ ಹೊರಬರುತ್ತಾ, ಜಪ ಸಮರ್ಪಣೆ, ನಂತರ ಗುರುಸ್ಮರಣೆಯನ್ನು ಮಾಡಿ ಆಸನದಿಂದ ಹೊರಬರುತ್ತಾನೆ. ಈ ಸಾಧನಾಸ್ಥಿತಿಯಿಂದ ಅಂತಿಮವಾಗಿ ಇಷ್ಟದೇವತೆಯ ಸಾಮೀಪ್ಯ, ಸಾಯುಜ್ಯ, ಸಾರೂಪ್ಯವನ್ನು ಹಂತಹಂತವಾಗಿ ಪಡೆಯುವವರೆಗೂ ಸಾಧಕನಿಗೆ ಭಯವಿಲ್ಲ. ಭಗವಂತನು ಕೈಹಿಡಿದಿದ್ದಾನೆ. ಗುರುವು ಹಿಂದೆ ನಿಂತೇ ಇದ್ದಾನೆ. ಸಾಧಕನ ಮನಸ್ಸು ಭೂಮಿ, ಬಿಂದುವು ಮಂತ್ರ ಬೀಜಾಕ್ಷರಗಳು. ಬೀಜವು ಸೂಕ್ಷ್ಮವಾದ ಆ ವಸ್ತುವಿನ ಸಾಂದ್ರಸ್ಥಿತಿ (condensed state).

ಭಗವಂತ ನಮ್ಮ ಹೃದಯಾಳದಲ್ಲಿಯೇ ಇದ್ದಾನೆ. ನಮ್ಮ ಹೃದಯ ರತ್ನಾಕರನ ಗರ್ಭದಲ್ಲಿ ವಜ್ರ ವೈಡೂರ್ಯಗಳು ಚೆಲ್ಲಿವೆ. ಇವುಗಳು ಸಾಮಾನ್ಯ ಲೌಕಿಕ ವಸ್ತುಗಳಾಗಿರದೆ, ಯಥಾರ್ಥ ಮಂತ್ರಕ್ಕೆ ಓಗೊಡುತ್ತವೆ, ಈ ಅನರ್ಘ್ಯ ರತ್ನಗಳು. ನಿರಂತರ ಜಪವೆಂಬ ಸ್ತುತಿಯಿಂದ ಸಂತುಷ್ಟರಾಗಿ ಮೇಲೆದ್ದು ನಗೆಸೂಸಿ, ಬೆಳಕು ಚೆಲ್ಲುತ್ತಾ ಷಟ್ಚಕ್ರ ಮಾರ್ಗದಲ್ಲಿ ಕ್ರಮವಾಗಿ ಮೇಲೇರಿ ಹೃತ್ಪುಂಡರೀಕದಲ್ಲಿ



ಪ್ರಕಟವಾಗುತ್ತವೆ. ಇಂತಹ ದಿವ್ಯಶಕ್ತಿಗಳನ್ನು ಮನಸ್ಸನ್ನು ಸ್ವಚ್ಛಗೊಳಿಸದೆ ಎಬ್ಬಿಸಬಾರದು. ಹೀಗೆ ಮಾಡಿದಲ್ಲಿ ಆಧ್ಯಾತ್ಮಿಕ ಅವನತಿಗೂ, ದೇವತೆಗಳ ಅವಕೃಪೆಗೂ ಒಳಗಾಗಬೇಕಾಗುತ್ತದೆ. ನಮ್ಮ ಮನವೆಂಬ ಪುಷ್ಕರದ ಜಲವನ್ನು ಸ್ವಚ್ಛಗೊಳಿಸಿ, ಮನವೆಂಬ ಮನೆಯನ್ನು ಗುಡಿಸಿ, ಸಾರಿಸಿ, ನಂತರ ಕರೆಯಬೇಕು. ನಾವು ಮಾಡುವ ನಿತ್ಯಕಾರ್ಯಗಳ ನಡುವೆಯೂ ಅನಾಸಕ್ತಿ, ಫಲಸಮರ್ಪಣೆ, ನಾಮಸ್ಮರಣೆ ನಡೆಯುತ್ತಿರಬೇಕು. ಜಪ ಆರಂಭಿಸುವ ಮುನ್ನ ಶುದ್ಧೀಕರಣವನ್ನಾಚರಿಸಿ, ಮತ್ತೆ ಮನಸ್ಸು ಅಶುದ್ಧಿಯಾಗದಂತೆ ಎಚ್ಚರವಹಿಸಬೇಕಾಗುತ್ತದೆ. ಆದ್ದರಿಂದ ಶ್ರೀ ರಾಮಕೃಷ್ಣರ ಪರಂಪರೆಯಲ್ಲಿ ಕರ್ಮಯೋಗವು ಜಪ ಸಾಧನೆಯ ಅವಿಭಾಜ್ಯ ಅಂಗವಾಗಿದೆ. ಶ್ರೀರಾಮಕೃಷ್ಣರು ಈ ವಿಷಯವನ್ನು ಪದ್ದೊ ಎಂಬುವನ ಕಥೆಯ ಮೂಲಕ ಹೇಳುತ್ತಾರೆ. ಅವನು ದೇವಸ್ಥಾನವನ್ನು ಗುಡಿಸದೆ ಸಾರಿಸದೆ (ಷಡ್ರಿಪುಗಳನ್ನು ಅಟ್ಟದೆ) ಬೆಳಗ್ಗೆ ಎದ್ದು ಶಂಖ ಊದಿದನಂತೆ. ಆದ್ದರಿಂದ ಕರ್ಮಗಳಿಂದ ಚಿತ್ತಶುದ್ಧಿ ಮಾಡಿಕೊಳ್ಳುವುದು, ಜೊತೆಜೊತೆಗೆ ಜಪದ ಸಮುಚ್ಚಯದ ರೀತ್ಯಾ ಜಪಸಾಧನೆ ನಡೆಸುವುದು ಸೂಕ್ತ. ವೈದಿಕ ಕರ್ಮಗಳ ಮಾನಸಿಕ ಅನುಕರಣೆಯೇ ಜಪ.

ನಾಮಶಕ್ತಿಯ ಅವ್ಯಾಹತ ಪ್ರವಾಹವೇ ಜಪ. ಜಪವೆಂಬುದು ಜೀವನು ಭಗವಂತನ ಸೇವೆ ಮಾಡಲು ಸಾಧನವಾದ ಸೇತು. ಭಕ್ತನನ್ನು ಈ ಸೇತುವಿನ ಮುಖದಲ್ಲಿ ಗುರು ತಂದು ನಿಲ್ಲಿಸುತ್ತಾನೆ. ಅವನು ಇದನ್ನವಲಂಬಿಸಿ ಸಂಸಾರಸಾಗರವನ್ನು ದಾಟುತ್ತಾನೆ. ಮೇಲೆ ಮಂತ್ರದ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದೇವೆ. ಮನಸ್ಸಿನ ಆಲೋಚನೆಗಳೂ ತರಂಗಗಳೇ ಎಂದು ತಿಳಿದಿದ್ದಾಗಿದೆ. ಗುರುಪಿತ್ತ ಮಂತ್ರವನ್ನು ಉಪಾಸಿಸದೆ ಇದ್ದಲ್ಲಿ ಅದು ಬಿಂದುರೂಪ (binary form)ದಲ್ಲಿಯೇ ಇರುತ್ತದೆ. ಮಂತ್ರವನ್ನು ಕೂಡ ತರಂಗದಂತೆ ಎಬ್ಬಿಸಿದರೆ (analytical wave consisting) ಮಾತ್ರ ಅದು ಮನಸ್ಸಿನ ಮೇಲೆ ಕೆಲಸ ಮಾಡಬಲ್ಲದು. ಮನಸ್ಸಿನಲ್ಲಿರುವ ಅಕ್ಲಿಷ್ಟ ವೃತ್ತಿಗಳ ಅಲೆಯನ್ನು ಜಪವೆಂಬ ಮಂತ್ರಪ್ರವಾಹದಿಂದ ಬದಲಾಯಿಸಬೇಕಾಗುತ್ತದೆ. ಆದ್ದರಿಂದಲೇ ಮಂತ್ರವನ್ನು ಶಕ್ತ್ಯಾಯುಧವನ್ನಾಗಿ ಪರಿವರ್ತಿಸಲು ಜಪ ಮಾಡಬೇಕು. ಯಾಂತ್ರಿಕ ಜಪವು ಮಾನಸಿಕ ಜಪವಾಗಿ, ಮಾನಸಿಕ ಜಪವು ಅಜಪಾ ಜಪವಾಗುತ್ತದೆ. ಭಗವನ್ನಾಮ, ರೂಪ, ಗುಣದ ರುಚಿಯ ಆಕರ್ಷಣೆ ಹೆಚ್ಚುತ್ತಾ ಹೋಗುತ್ತದೆ. ಉಪಾಸನೆಯು ಹೀಗೆ ಬಲವಾದಾಗ ಅನಾಸಕ್ತ ಕರ್ಮಗಳು ನಡೆಯುತ್ತಿದ್ದರೂ ಭಗವಂತನ ಸ್ವರೂಪ ಮತ್ತು ನಿಜ ಸ್ವರೂಪಗಳ ಸ್ಪಷ್ಟ ಜ್ಞಾನ ಸದಾ ಇದ್ದೇ ಇರುತ್ತದೆ. ನಾಮಸ್ಮರಣೆಯಿಂದ ಅವ್ಯಕ್ತ ಆನಂದ, ಜೊತೆಗೆ ರೂಪದರ್ಶನದ ಸಾಧ್ಯತೆ ಹೆಚ್ಚಾಗುತ್ತದೆ. ಜಪಕ್ಕೆ ಪರಿಣಾಮದ್ವಯಗಳಿವೆ: ಶುದ್ಧೀಕರಿಸುವ ಮತ್ತು ದರ್ಶನ ತರುವ ವರಾಭಯ ಶಕ್ತಿಯಿದೆ. ಜಪವು ಮನಸ್ಸೆಂಬ ದರ್ಪಣದ ಮಾರ್ಜನ ವಸ್ತ್ರದಂತೆ, ಸಂಸಾರ ದುಃಖಗಹನಾರಣ್ಯಕ್ಕೆ ಅಗ್ನಿಯಂತೆ. ಹಾಗೆಯೇ ಶುದ್ಧಮನಸ್ಸೆಂಬ ಪದ್ಮಕ್ಕೆ, ಸಾಗರದ ಅಲೆಗಳಿಗೆ, ಭಗವದ್ದರ್ಶನವೆಂಬ ಪೂರ್ಣಚಂದ್ರಜ್ಯೋತ್ಸ್ನೆ. ಗುರುಪಿತ್ತ ಮಂತ್ರದ ಜೊತೆಗೆ ಅವನಿತ್ತ ಕ್ರಮವನ್ನನುಸರಿಸುತ್ತ ಮಂತ್ರಶಕ್ತಿಯಲ್ಲಿ ಶ್ರದ್ಧೆಯಿಟ್ಟು ಅರ್ಥಾನುಸಂಧಾನ ಮಾಡುತ್ತಿರಬೇಕು. ಅರ್ಥವೆಂದರೆ ಉಪಾಸ್ಯ ದೇವತೆ. ಜಪವು ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟುಮಾಡುತ್ತದೆ. ಏಕೆಂದರೆ ಪುರುಷಕಾರವಷ್ಟೇ ಅಲ್ಲದೆ ಗುರುಕೃಪೆ, ದೇವತಾಕೃಪೆ ಎಂಬೆರಡು ಮಹತ್ ಶಕ್ತಿಗಳು ಒಡಗೂಡುತ್ತವೆ. ಈ ತ್ರಿವೇಣೀ ಸಂಗಮದಿಂದ ಮನೋಗಂಗೆಯು ಶಕ್ತಿಯುತವಾಗುತ್ತದೆ. ನಾದ ಶಕ್ತಿಯ ಅನುಭವವಾಗುತ್ತದೆ.

**ಅವಿಸ್ಮೃತಿಃ ಕೃಷ್ಣಪಾದಾರವಿಂದಯೋಃ**
**ಕ್ಷಿಣೋತ್ಯಭದ್ರಾಣಿ ಚ ಶಂ ತನೋತಿ।**
**ಸತ್ತ್ವಸ್ಯ ಶುದ್ಧಿಂ ಪರಮಾತ್ಮಭಕ್ತಿಂ**
**ಜ್ಞಾನಂ ಚ ವಿಜ್ಞಾನವಿರಾಗಯುಕ್ತಮ್॥** *(ಭಾಗವತ ೧೨.೧೨.೫೫)*

ಕೃಷ್ಣಪಾದಾರವಿಂದಗಳಲ್ಲಿ ವಿಸ್ಮೃತಿಯಿಲ್ಲದ ಭಕ್ತಿಯು ಅನಿಷ್ಟಗಳನ್ನು ಕ್ಷೀಣಿಸಿ ಶಾಂತಿ, ಮನಶ್ಶುದ್ಧಿ, ಪರಮಾತ್ಮಭಕ್ತಿ, ಜ್ಞಾನ, ವಿಜ್ಞಾನ ವೈರಾಗ್ಯವನ್ನೀಯುತ್ತದೆ. ನಾಮಶಕ್ತಿಯಿಂದ ನಮ್ಮಲ್ಲಿರುವ ಪಾಪ, ಚಿತ್ತಚಂಚಲತೆ, ಮನೋದೌರ್ಬಲ್ಯ, ಭಯ ಮುಂತಾದವು ತೊಲಗುತ್ತದೆ.

ಜಪವು ಉನ್ನತವಾದ ಸಾಧನೆಯಾದುದ್ದರಿಂದ ಮೊದಲು ಭಕ್ತಿಯಿಂದ ಭಗವಂತನ ನಾಮಶ್ರವಣ, ಕರತಾಡನ ಮಾಡುತ್ತ ಮಾಡುವ ಸಾಮೂಹಿಕ ಭಜನೆ ಇವುಗಳಿಂದ ಭಕ್ತಿಯ ಅಲೆ ಮನದಲ್ಲಿ ಏಳುವಂತೆ ಮಾಡಬೇಕು. ಇವು ಪ್ರಾಪಂಚಿಕ ಅಲೆಗಳನ್ನು ಹಿಂಸಿಸುತ್ತಾ ನಿಗ್ರಹಿಸುತ್ತದೆ. ಇದರಿಂದ ಪ್ರಾಪಂಚಿಕತೆಯ ಬಲ ಕ್ಷೀಣವಾಗುತ್ತ ಹೋಗುತ್ತದೆ. ಇಂತಹ ಶ್ರವಣದಿಂದ ಪಕ್ವವಾದ ಮನಸ್ಸು ಮಂತ್ರದೀಕ್ಷೆಯಂತಹ ಉತ್ತಮ ಸಾಧನೆಗೆ ಅನುವು ಮಾಡಿಕೊಡುತ್ತದೆ.

**ಕಲಿಯುಗಲ್ಲಿ ಹರಿಭಕ್ತಿ:** ಕಲಿಯುಗದಲ್ಲಿ ಭಗವನ್ನಾಮ ಜಪವೇ ಶ್ರೇಷ್ಠವೆಂದು ಭಾಗವತ ಹೇಳಿದೆ, ಇದನ್ನೇ ಶ್ರೀರಾಮಕೃಷ್ಣರೂ ತಿಳಿಸಿದ್ದಾರೆ. ಭಗವನ್ನಾಮದ ನಿರಂತರ ಸ್ಮರಣೆಯೇ ಕಲಿಯುಗದಲ್ಲಿ ಅತ್ಯಂತ ಶಕ್ತಿಯುತವಾದ ಆಧ್ಯಾತ್ಮಿಕ ಸಾಧನೆ. ಅಜಾಮಿಳನು ಅಂತಿಮ ಉಸಿರಿನಲ್ಲಿ ಯಮದೂತರನ್ನು ಕಂಡು ಬೆದರಿ ಮಗನಾದ ನಾರಾಯಣನನ್ನು ಕರೆದಾಗ, ವಿಷ್ಣುಭಟರು ಬಂದು ತಡೆದರು *(ಭಾಗವತ ೧೨.೩.೫೧–೫೨)*. ದುರಾಚಾರಿಯಾದ ಅಜಾಮಿಳನು ಮನದಲ್ಲಿ ಮಗನನ್ನು ನೆನೆದು 'ನಾರಾಯಣ' ಎಂದು ಒಮ್ಮೆ ಕರೆದದ್ದೇ ಇಷ್ಟೊಂದು ಕೆಲಸ ಮಾಡಿದಲ್ಲಿ, ಮನಃಪೂರ್ವಕವಾಗಿ ಜಪಿಸಿದರೆ ಒಲಿಯನಾರನೆ?

ಯಜ್ಞಗಳಲ್ಲಿ ಕ್ರಿಯಾಶಕ್ತಿ ಇದೆ. ಕ್ರಿಯಾಶಕ್ತಿಯೆಂದರೆ ಸುಪ್ತವಾದ ಶಕ್ತಿಯನ್ನು ಬಡಿದೆಬ್ಬಿಸುವ ಕಾರ್ಯ. ಯಾಜ್ಞಿಕರಲ್ಲಿ ಬಾಹ್ಯ ಕ್ರಿಯೋತ್ಸಾಹ ಕಂಡುಬರುತ್ತದೆ. ಜಪದಲ್ಲಿ ಇದೇ ಕ್ರಿಯಾಶಕ್ತಿಯು ಸುಪ್ತವಾಗಿರುವ ಕುಂಡಲವಾಗಿ ಮಲಗಿರುವ ಭುಜಂಗಶಕ್ತಿಯನ್ನು ದಂಡದಿಂದ ತಿವಿದು, ಅಥವಾ ಹುಶ್, ಹುಶ್ ಎಂಬ ಶಬ್ದಮಾಡಿ ಎಬ್ಬಿಸುವಂತೆ ಮಂತ್ರದಂಡ, ಮಂತ್ರೋಚ್ಚಾರಣೆಯಿಂದ ಎಬ್ಬಿಸುವ ಕ್ರಿಯಾಶಕ್ತಿಯು ಜಪಸಾಧನೆಯಲ್ಲಿದೆ. ಜಪವೆಂಬ ಸಾಧನೆಗೆ ಬಾಹ್ಯ ಕರ್ಮಗಳ ಆಯಾಸವಿಲ್ಲ, ಕಾಲ, ವಿಧಿ, ನಿಯಮವೆಂಬ ಅತಿಯಾದ ಕಟ್ಟುಪಾಡುಗಳಿಲ್ಲ, ವಿಪರೀತವಾದ ಶಾಸ್ತ್ರಜ್ಞಾನಗಳ ಆವಶ್ಯಕತೆ ಇಲ್ಲ, ಯಾವುದೇ ಜಾತಿ, ಧರ್ಮವೆಂಬ ಭೇದವಿಲ್ಲದೆ ನೀಡಬಹುದಾದ, ಮಾಡಬಹುದಾದ ಸಾಧನೆ. ಆದರೂ ಸಹ ವೈದಿಕ ಯಜ್ಞಗಳಿಗಿಂತ ಉನ್ನತವಾದ ಫಲಗಳನ್ನು ಆಯಾಸವಿಲ್ಲದೆ, ಕ್ಷಿಪ್ರವಾಗಿ ತಂದು ನೀಡುವ ಮಹಾಯಜ್ಞ. ಅದಕ್ಕಾಗಿಯೇ ಅಲ್ಲವೆ ಶ್ರೀಕೃಷ್ಣನು ಹೇಳಿರುವುದು, ''ಯಜ್ಞಗಳಲ್ಲೆಲ್ಲ ನಾನು ಜಪಯಜ್ಞ'' ವೆಂದು? ❖

# ಓಂಕಾರ - ತತ್ತ್ವ ಮತ್ತು ಉಪಾಸನೆ

ಬ್ರಹ್ಮಚಾರಿ ಭೂದೇವಚೈತನ್ಯ



**ಮಾ**ನವನಿಗೆ ನೂರಾರು ಕೆಲಸಗಳು, ಸಾವಿರಾರು ಸಮಸ್ಯೆಗಳು, ಲೆಕ್ಕವಿಲ್ಲದಷ್ಟು ಆಸೆಗಳು. ಈ ಕಂಪ್ಯೂಟರ್ ಯುಗದಲ್ಲಂತೂ ಮಾಹಿತಿಗಳ ಸುರಿಮಳೆ ಬೇರೆ. ಈ ಮಧ್ಯೆ ಯೋಗ ಅಧ್ಯಾತ್ಮ ಇವಕ್ಕೆಲ್ಲ ಸಮಯವೆಲ್ಲಿ, ಮನಸ್ಸೆಲ್ಲಿ. ಎಲ್ಲದರಲ್ಲೂ ಸಂಕ್ಷೇಪವನ್ನು ಕೋರುವ, ಸಾರವನ್ನು ಹೀರುವ, ಕಡಿಮೆ ಸಮಯದಲ್ಲಿ ಹೆಚ್ಚನ್ನು ಗಳಿಸುವ ತವಕ ಹೆಚ್ಚುತ್ತಿದೆ ಜನಮನದಲ್ಲಿ. ಇದು ತಪ್ಪೇನಲ್ಲ. ಈ ಪ್ರಯತ್ನ ಹೊಸತೂ ಅಲ್ಲ. ಹಿಂದೆ ಉಪನಿಷತ್ಕಾಲದಲ್ಲೂ ಇಂಥ ಪ್ರಯತ್ನ ನಡೆದಿತ್ತು. ದಿಟ್ಟ ಶಿಷ್ಯನೊಬ್ಬ ಅಂದೇ ಗುರುಗಳನ್ನು ಕೇಳಿದ್ದ:

**ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ** – 'ಹೇ ಪೂಜ್ಯನಾದ ಆಚಾರ್ಯನೇ, ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುತ್ತದೊ ಅಂಥ ತತ್ತ್ವ ಯಾವುದದು?'[೧] ಎಂದು.

ಶಿಷ್ಯನ ದಿಟ್ಟ ಪ್ರಶ್ನೆಗೆ ಉಪನಿಷದ್-ಋಷಿ ಕೊಟ್ಟ ಉತ್ತರವೂ ಅಷ್ಟೇ ಗಟ್ಟಿಯಾದದ್ದು :

**ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ** – 'ಆ ಒಂದು ಆತ್ಮ ತತ್ತ್ವವನ್ನೇ ಅರಿತು ಕೊಳ್ಳಿರಿ, ಮಿಕ್ಕೆಲ್ಲ ಮಾತುಗಳನ್ನೂ ಬಿಟ್ಟುಬಿಡಿ. ಸಂಸಾರಸಾಗರವನ್ನು ದಾಟಲು ಇದೊಂದೇ ಸೇತುವು.'[೨] ಈ ಆತ್ಮವನ್ನು ಅರಿಯುವುದಾದರೂ ಹೇಗೆ? ಉಪನಿಷದ್-ಗುರುಗಳು ಮುಂದುವರಿದು ಹೇಳುತ್ತಾರೆ :

**ಓಮಿತ್ಯೇವಂ ಧ್ಯಾಯಥ ಆತ್ಮಾನಂ ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್** – 'ಆತ್ಮನನ್ನು ಓಂ ಎಂಬುದಾಗಿ ಧ್ಯಾನಿಸಿರಿ, ಸಂಸಾರದ ಆ ದಡವನ್ನು ಸೇರುವಲ್ಲಿ ನಿಮಗೆ ಮಂಗಳವಾಗಲಿ.'

ಸವಾಲಿಗೆ ತಕ್ಕ ಜವಾಬಲ್ಲವೇ ಇದು. ಒಂದೇ ಏಟಿಗೆ ಸಕಲ ವಿದ್ಯೆಗಳನ್ನೂ ಗಳಿಸುವ ತಂತ್ರವನ್ನು ಬಯಸಿದ ಶಿಷ್ಯ. ಅದಕ್ಕೆ ಸರಿಸಾಟಿಯಾಗಿ ಅತ್ಯಂತ ಚಿಕ್ಕ ಚೊಕ್ಕ ಉತ್ತರವನ್ನಿತ್ತರು ಗುರುಗಳು. ಇಂದಿನ ಕಂಪ್ಯೂಟರ್ ಭಾಷೆಯಲ್ಲಿ ಹೇಳುವುದಾದರೆ – **Administrative Password** ಅನ್ನು ನೀಡಿದರು – ಅದೇ ''ಓಂ.'' ಅದನ್ನು ಬಳಸಿಕೊಳ್ಳಬಲ್ಲ ತಾಕತ್ತನ್ನು ಬೆಳೆಸಿಕೊಳ್ಳಬೇಕು ಅಷ್ಟೆ ! ಅಲ್ಲದೆ, ಗುರುಗಳ ಔದಾರ್ಯ ನೋಡಿ ! ಉಪದೇಶ ನೀಡಿದ್ದಲ್ಲದೆ ಆಶೀರ್ವಾದವನ್ನೂ ಮಾಡಿಬಿಟ್ಟರು. ಇದು ಅವರ ಮುಂದಾಲೋಚನೆಯನ್ನು ಸೂಚಿಸುತ್ತದೆ. ನಮಗಾರೂ ಗುರುಗಳು ಇಲ್ಲ, ಆಶೀರ್ವಾದ ಮಾಡಿಲ್ಲ ಎಂದೆಲ್ಲ ಜನ ತಬ್ಬಿಬ್ಬಾಗದಿರಲಿ ಎಂಬ ಮುಂದಾಲೋಚನೆ! ಉಪನಿಷತ್-ನುಡಿಗಳೆಲ್ಲ ಹೀಗೇ : ನೇರ! ನಿಖರ! ಪ್ರಖರ! ಅಲ್ಲಿ ಕಂಜೂಸುತನವಿಲ್ಲ, ಮುಚ್ಚುಮರೆ ಇಲ್ಲ , ಅಂಜಿಕೆಗಂತೂ ಎಡೆಯೇ ಇಲ್ಲ. ಅಲ್ಲಿರುವುದೆಲ್ಲ ಮುಕ್ತ, ಶಕ್ತ ನುಡಿಕಿಡಿಗಳು! ಆದರೆ, ಎಷ್ಟು ಜನ ಓದಿದ್ದಾರೆ ಉಪನಿಷತ್ತನ್ನು? ಭಾರತೀಯರೆನಿಸಿಕೊಂಡವರೇ ಭಾರತದ ಋಷಿಸಂದೇಶವನ್ನು ಓದಿಲ್ಲ ! ಆದ್ದರಿಂದ, ಮನೆಮನೆಗಳಿಗೆ ಉಪನಿಷತ್-ಸಂದೇಶಗಳನ್ನು ತಲುಪಿಸಿರಿ ಎಂಬ ಶ್ರೀಸ್ವಾಮಿ ವಿವೇಕಾನಂದರ ನುಡಿ ಸರಿಯಾಗಿಯೇ ಇದೆ ಎನಿಸುವುದಿಲ್ಲವೇ! ಇಲ್ಲೊಂದು ಎಚ್ಚರಿಕೆಯ ಮಾತನ್ನು ಹೇಳಬೇಕು – ಅದೇನೆಂದರೆ, ಉಪನಿಷತ್-ಸಂದೇಶವನ್ನು ಮನೆಮನೆಗೆ ತಲುಪಿಸುವುದರ ಜೊತೆಗೆ ನೀವೂ ಕುಳಿತು ಓದಿರಿ ಎಂದು. ಎಲ್ಲರೂ ತಲುಪಿಸುವವರೇ ಆಗಿ ಬಿಟ್ಟರೆ ಒಪ್ಪಿಸಿಕೊಳ್ಳುವವರಾರು! ಅಂತೂ, ಗಡಿಬಿಡಿಯ ಈ ಯುಗದಲ್ಲಿ ಶೀಘ್ರಗಾಮಿಗಳಿಗೆ ನೇರಮಾರ್ಗದಂತಿದೆ ಓಂಕಾರಸಾಧನೆ !

**ವೇದಕಾಲದ ಇತಿಹಾಸಪೂರ್ವ ದಿನಗಳಿಂದ ಆರಂಭಿಸಿ ಇಂದಿನವರೆಗೂ ಅವಿರತವಾಗಿ ಹರಿದುಬಂದ ಹಿಂದೂ ಆಧ್ಯಾತ್ಮಿಕ ಪರಂಪರೆಯಲ್ಲಿ ಓಂಕಾರಕ್ಕೆ ಅತಿ ಮಹತ್ವದ ಸ್ಥಾನವಿದೆ. ಪರಬ್ರಹ್ಮನ ನೈಜಸ್ವರೂಪದಿಂದ ಹಿಡಿದು ದೈನಂದಿನ ಕರ್ಮಗಳ ವರೆಗೆ ಇದರ ನೆಲೆ ಹಲವು ಆಯಾಮಗಳಲ್ಲಿ ವ್ಯಾಪಿಸಿಕೊಂಡಿದೆ. ಇದನ್ನು ಶಾಸ್ತ್ರಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿರುವ ಲೇಖಕರು ಸಂಸ್ಕೃತದಲ್ಲಿ ವಿಶೇಷ ಪರಿಣತಿ ಹೊಂದಿದ್ದು, ಬೇಲೂರು ಮಠದಲ್ಲಿರುವ ವಿವೇಕಾನಂದ ವಿಶ್ವವಿದ್ಯಾನಿಲಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

[೧] ಮುಂಡಕೋಪನಿಷತ್ತು, ೧.೧.೩
[೨] ಮುಂಡಕೋಪನಿಷತ್ತು, ೨.೨.೫

ಇಲ್ಲೊಂದು ಪ್ರಶ್ನೆ : ಓಂ ಎಂಬುದಾಗಿ ಆತ್ಮನನ್ನು ಧ್ಯಾನಿಸಿರಿ ಎಂದರಲ್ಲ , ಹಾಗಾದರೆ ಶಿವ, ವಿಷ್ಣು , ಕಾಳೀ, ದುರ್ಗಾ, ಕೃಷ್ಣ ಎಂಬುದಾಗಿ ಧ್ಯಾನಿಸಬಾರದೆ? ಇದಕ್ಕೆ ಇನ್ನೊಂದು ಪ್ರಶ್ನೆಯೇ ಮೊದಲ ಉತ್ತರ – ''ಒಂದನ್ನು ಮಾಡಿರಿ ಎಂದರೆ, ಇನ್ನೊಂದನ್ನು ಮಾಡಬಾರದು ಎಂದು ನೀವು ಅರ್ಥಮಾಡಿಕೊಂಡದ್ದು ಯಾಕೆ?'' ಜೀವನದಲ್ಲಿ ಒಮ್ಮೆಯಾದರೂ ಬೇಲೂರು ಮಠಕ್ಕೆ ಹೋಗಿಬರಬೇಕು ಎಂದರೆ, ''ಹಾಗಾದರೆ ಕಾಶಿಗೆ ಹೋಗಬಾರದೆ?'' ಎಂದು ಸೆಡವಿ ದಂತಾಯಿತು. ಎರಡನೆಯ ಉತ್ತರ – ಯಾವ ರೂಪದಿಂದಾದರೂ ಆತ್ಮನನ್ನು ಧ್ಯಾನಿಸಬಹುದು ಎಂದು. ಆದರೆ, ಒಂದನ್ನು ಹಿಡಿದು ಆಳಕ್ಕೆ ಮುಳುಗಬೇಕಾದ್ದು ಮುಖ್ಯ. ದಿನಕ್ಕೊಂದು ಬಗೆಯ ಸಾಧನೆ ಮಾಡಿ ನೋಡುವ ತಲೆಹರಟೆ ಮಾಡಬಾರದು! ಹಾಗೆ ಮಾಡಿದರೆ ಋಷಿಗಳಿಗೇನೂ ಹೊಟ್ಟೆಕಿಚ್ಚಿಲ್ಲ, ಪ್ರತಿದಿನ ಹೊಸ ಸ್ಕೂಲೊಳಗೆ ಹೋಗಿ ಕುಳಿತಂತಾಗುತ್ತದೆ ಅಷ್ಟೆ! ಏಕನಿಷ್ಠೆಯೇ ಆಧ್ಯಾತ್ಮಿಕ ಜೀವನದ ಬುನಾದಿ ಎಂಬುದನ್ನು ಮರೆಯುವಂತಿಲ್ಲ.

ಯಾವ ರೂಪದಿಂದಾದರೂ ಆತ್ಮನನ್ನು ಧ್ಯಾನಿಸಬಹುದೆಂದಾದರೆ, ಉಪನಿಷತ್ತು ಓಂಕಾರಕ್ಕೆ ಅಷ್ಟೊಂದು ಒತ್ತುಕೊಟ್ಟಿರುವುದೇಕೆ? ಏಕೆಂದರೆ, ಎಲ್ಲ ಶಬ್ದಗಳಿಗೂ ರೂಪಗಳಿಗೂ ಓಂಕಾರವೇ ಮೂಲ. ಓಂಕಾರ ಮಿಕ್ಕೆಲ್ಲ ಉಪಾಸನೆಗಳ ಸಾರ. ಶ್ರೀರಾಮಕೃಷ್ಣರು ಹೇಳುತ್ತಾರೆ:

''ಶ್ರೀಹರಿ ನಾಮವನ್ನೋ ಶ್ರೀರಾಮನಾಮವನ್ನೋ ಕೇಳಿದ ಕೂಡಲೆ ಭಕ್ತಿಯಿಂದ ಕಣ್ಣೀರಿಳಿದರೆ, ಮೈನವಿರೆದ್ದರೆ ಆಗ ತಿಳಿದುಕೊಳ್ಳಬಹುದು ಸಂಧ್ಯಾವಂದನಾದಿ ಆಚಾರಗಳನ್ನು ಇನ್ನು ಮುಂದುವರಿಸುವ ಆವಶ್ಯಕತೆ ಇಲ್ಲ ಎಂದು. ಆಗ... ಪೂಜೆ ಪುನಸ್ಕಾರಗಳನ್ನು ತ್ಯಜಿಸುವ ಅಧಿಕಾರ ಬರುತ್ತದೆ. ಅಲ್ಲ , ಆಗ ಪೂಜೆ ಪುನಸ್ಕಾರಗಳು ತಾವಾಗಿಯೇ ಬಿಟ್ಟುಹೋಗುತ್ತವೆ. ಆ ಅವಸ್ಥೆಯಲ್ಲಿ ಬರೀ ರಾಮ ನಾಮವನ್ನೊ ಹರಿನಾಮವನ್ನೊ ಜಪಿಸಿದರಾಯಿತು, ಅಥವಾ ಕೇವಲ ಓಂಕಾರವನ್ನು ಜಪಿಸಿದರೂ ಸಾಕು.....ಸಂಧ್ಯೆಯು ಗಾಯತ್ರಿಯಲ್ಲಿ, ಗಾಯತ್ರಿಯು ಓಂಕಾರದಲ್ಲಿ ಲಯಗೊಳ್ಳುತ್ತದೆ.[೩]

## ತಾತ್ತ್ವಿಕ ಹಿನ್ನೆಲೆ

ತತ್ತ್ವ ಎಂದರೆ ಸತ್ಯವಾದ ರೂಪ. ತಾತ್ತ್ವಿಕ ಹಿನ್ನೆಲೆ ಎಂದರೆ ನಿಜ ಸ್ವರೂಪದ ತಿಳಿವು. ವಸ್ತುತಃ ಓಂಕಾರ ಏನು? ಅದರ ಸ್ವರೂಪವೇನು? ಅದರ ಅರ್ಥವೇನು? ತಾತ್ತ್ವಿಕ ಹಿನ್ನೆಲೆಯೇನು? ಅದರ ನಿಜವಾದ ಮಹಿಮೆ ಏನು? ಎನ್ನುವುದೆಲ್ಲ ಮನವರಿಕೆಯಾಗುವುದು ಸಾಕ್ಷಾತ್ಕಾರದ ದೆಸೆಯಲ್ಲೇ. ಹಾಗೆಂದು ಈಗ ಕೈಕಟ್ಟಿ ಕುಳಿತಿರ ಬೇಕಿಲ್ಲ. ಹಾಗೆ ಸಾಕಷ್ಟು ಕುಳಿತದ್ದು ಕೊಳೆತದ್ದು ಆಗಿದೆ. ಈಗ ಮೈ ಕೊಡಹಿ ಎದ್ದು ಸಾಧನೆಗೆ ತೊಡಗಬಹುದು.

ಆ ನಿಟ್ಟಿನಲ್ಲಿ , ಮೊದಲಿಗೆ ಬೌದ್ಧಿಕ ಸ್ತರದಲ್ಲಾದರೂ ಓಂಕಾರದ ಕುರಿತಾಗಿ ತಿಳಿವ ಯತ್ನ ನಡೆಯಬೇಕು. ಉಪನಿಷತ್ತು, ಶಾಸ್ತ್ರಗಳು ಆ ಬಗ್ಗೆ ಏನು ಹೇಳಿವೆ ಎಂಬುದನ್ನೋದಬೇಕು. ಆಗ ತಲೆಯಲ್ಲಿ ಗೂಡು ಕಟ್ಟಿಕೊಂಡ ತಪ್ಪುಕಲ್ಪನೆಗಳು ತೊಲಗುತ್ತವೆ. ಆಧ್ಯಾತ್ಮಿಕ ಜೀವನ ಹಿಂದೆಂದಿಗಿಂತ ಅರ್ಥಪೂರ್ಣವಾಗುತ್ತದೆ. ಮನೋಬುದ್ಧಿಗಳು ಒಪ್ಪವಾಗಲು ಒಪ್ಪಿಕೊಳ್ಳುತ್ತವೆ. ಸಾಧನೆ ಸುಗಮಗೊಳ್ಳುತ್ತದೆ, ಹೋರಾಟ ಹುರುಪೇರುತ್ತದೆ. ಓಂಕಾರದ ಅಧ್ಯಯನ ಚಿಂತನೆ ಸಾಧಕರಿಗೆ ತುಂಬ ಲಾಭದಾಯಕ. ಏನದು ಈ ಓಂಕಾರ?...

**ಶಾಬ್ದಿಕ ವಿವರ:** ರಕ್ಷಿಸುತ್ತದೆ ಆದ್ದರಿಂದ ಅದರ ಹೆಸರು **ಓಂ** ಎನ್ನುತ್ತದೆ ಸಂಸ್ಕೃತ ವ್ಯಾಕರಣ. ಇದೊಂದು ಅವ್ಯಯ ಶಬ್ದ. ಓಂ ಶಬ್ದದ ವ್ಯುತ್ಪತ್ತಿಯೇ ಅದರ ಅರ್ಥವನ್ನು ತಿಳಿಸುತ್ತದೆ : **ಅವತಿ ಇತಿ ಓಮ್.** 'ಅವ ರಕ್ಷಣಾದೌ' ಎಂಬ ಧಾತುವಿಗೆ ಔಣಾದಿಕ ಮನ್ ಪ್ರತ್ಯಯ ಸೇರಿ ವ್ಯುತ್ಪನ್ನವಾದ ಶಬ್ದ ಓಮ್.[೪] ಅ, ಉ, ಮ್ ಎಂಬ ಮೂರು ಅಕ್ಷರಗಳಿಂದಾದ ಶಬ್ದವೇ 'ಓಂ' ಎನ್ನುತ್ತದೆ ಮಂತ್ರಶಾಸ್ತ್ರ.

**ಅರ್ಥ:** ಈ ಓಂಕಾರವನ್ನು ಪ್ರಣವ ಎಂದೂ ಕರೆಯಲಾಗಿದೆ. ಇದು ಪರಮಪವಿತ್ರವಾದ ಮಂತ್ರ, ಭಗವಂತನ ಹೆಸರು, ಪರಬ್ರಹ್ಮದ ಹೆಸರು. **ಪರಮಾತ್ಮಪ್ರತೀಕಂ ಹಿ ತತ್** – ಓಂಕಾರವು ಪರಮಾತ್ಮನ ಪ್ರತೀಕ ಎನ್ನುತ್ತಾರೆ ಶ್ರೀಶಂಕರಭಗವತ್ಪಾದರು.[೫] ಶಿವ ಕೃಷ್ಣ ವಿಷ್ಣು ಕಾಳಿ ಎನ್ನುತ್ತ ನೆನೆದಾಗ ದೇವರ ಒಂದಂಶವನ್ನು ನೆನೆದಂತಾಯಿತು. ಓಂ ಎನ್ನುತ್ತ ಭಗವಂತನನ್ನು ಸ್ಮರಿಸಿದರೆ ಅವನ ಎಲ್ಲ ನಾಮ ರೂಪಗಳನ್ನೂ ಒಟ್ಟಾಗಿ ನೆನೆಸಿಕೊಂಡಂತೆ ! ಎಲ್ಲ ದೇವದೇವಿಯರ ನಾಮರೂಪಗಳೂ ಓಂಕಾರದಲ್ಲಡಗಿವೆ. ಏಕೆಂದರೆ ಎಲ್ಲ ಶಬ್ದಗಳೂ ಓಂಕಾರದಿಂದಲೇ ಹೊರಹೊಮ್ಮಿವೆ. ವೇದಗಳಿಗೂ ಕೂಡ ಓಂಕಾರವೇ ಮೂಲ ಎಂದು ಸ್ವಯಂ ವೇದಗಳೇ ಹೇಳುತ್ತವೆ.

ಅನಂತವಾದ ವಿಶ್ವದಲ್ಲಿ ಅಂತ್ಯವಿಲ್ಲದೆ ಮಿಡಿವ ನುಡಿ ಈ ಓಂಕಾರ. ಯೋಗಿಗಳ ಆಂತರ್ಯದಲ್ಲಿ ನಿರತ ಮೊರೆವ ಮಧುರ ಬ್ರಹ್ಮನಾದ ಈ ಓಂಕಾರ. ಗುರುವಿನ ಕೃಪಾಶಕ್ತಿ ಶಿಷ್ಯನಲ್ಲಿಳಿವ ಮಾಧ್ಯಮ ಈ ಓಂಕಾರ. ಶಿಷ್ಯನ ಮನೋವಾಕ್ಕಾಯಗಳನ್ನು ಶಿಸ್ತುಗೊಳಿಸಬಲ್ಲ ಬಾರುಗೋಲು ಈ ಓಂಕಾರ. ಹದ್ದಿಲ್ಲದೆ ಅಲೆದಾಡುವ ಮನವ ಹದ್ದುಬಸ್ತಿನಲ್ಲಿಡುವ ಕಡಿವಾಣ ಈ ಓಂಕಾರ. ಎಲ್ಲೆಂದರಲ್ಲಿ ಎಲ್ಲೆ ಇಲ್ಲದೆ ನಲಿವ ಹುಲ್ಲೆ ಮನವ ತನ್ನಲ್ಲೆ ನೆಲೆನಿಲ್ಲಿಸಬಲ್ಲ ದಿವ್ಯ ಗೊಲ್ಲನ ಕೊಳಲಿನುಲಿ ಈ ಓಂಕಾರ. ಹತ್ತಾರು ಕಡೆ ಹರಿದಾಡುವ ಮನವನಾತ್ಮನತ್ತ ಹರಿಯಗೊಡುವ ಸಾಧನ ಈ ಓಂಕಾರ. ಮೋಹ ಮಮತೆಗಳ ಮದ್ಯವೇರಿಸಿ ಮದವೇರಿದ ಮನದ ಮತ್ತಿಳಿಸುವ ಕಲಗಚ್ಚು ಈ ಓಂಕಾರ. ದುಸ್ಸಾಧ್ಯವಾದ ಏಕಾಗ್ರತೆಯನ್ನು ಸುಸಾಧ್ಯಗೊಳಿಸಬಲ್ಲ ದಿವ್ಯೋಪಾಯ ಈ ಓಂಕಾರ. ಅಷ್ಟೇ ಅಲ್ಲ , ಬೇಕಾದ್ದನ್ನು ಕರೆವ ಕಾಮಧೇನು ಈ ಓಂಕಾರ. ನಿಜಕು, ಓಂಕಾರದ ಮಹಿಮೆ ಅನಂತ, ಅಪಾರ! ಋಷಿಗಳು ಆ ಮಹಿಮೆಯನ್ನು ಬಣ್ಣಿಸಿದ ಸೊಬಗನ್ನು ಅವರ ನುಡಿಗಳಲ್ಲೇ ಸವಿದು ನೋಡಬೇಕು:

## ಓಂ ಶಬ್ದದ ಸ್ವರೂಪ

**ಅಕಾರ ಉಕಾರ ಮಕಾರ ಇತಿ। ತಾನೇಕಧಾ ಸಮಭರತ್ತದೇತದೋಮಿತಿ ॥**

'ಅಕಾರ ಉಕಾರ ಮಕಾರ ಎಂದು ಮೂರು ಅಕ್ಷರಗಳು. ಬ್ರಹ್ಮವು ಅವುಗಳನ್ನು ಒಗ್ಗೂಡಿಸಿ ಅದರಲ್ಲಿ ತನ್ನ ಶಕ್ತಿಯನ್ನು ತುಂಬಿದೆ. ಅದೇ ಓಂ ಎಂಬ ಮಂತ್ರ.'[೬]

[೩] The Gospel of Sri Ramakrishna, p.77

[೪] ಅವತೇಷ್ಟಿಲೋಪಶ್ಚ (೧.೧೪೧) ಎಂಬುದು ಔಣಾದಿಕಸೂತ್ರ.

[೫] ಛಾಂದೋಗ್ಯ-ಉಪನಿಷತ್ತಿನ ೧.೧.೧ನೇ ಮಂತ್ರದ ಭಾಷ್ಯ

[೬] ಅಥರ್ವವೇದದ ನಾರಾಣೋಪನಿಷತ್

### ಓಂ ಎಂದರೇನು?

**ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಮ್ ।**

'ಓಂ ಎಂಬುದು ಬ್ರಹ್ಮ. ಓಂ ಎಂಬುದೇ ಇದೆಲ್ಲವೂ ಆಗಿದೆ.' (ಇದೆಲ್ಲವೂ ಆಗಿದೆ ಎಂದರೆ, ಎಲ್ಲ ನುಡಿಗಳೂ ಮೂಲದಲ್ಲಿ ಓಂಕಾರವೇ ಆಗಿದೆ ಎಂದರ್ಥ).[೭]

**ಪ್ರತ್ಯಗಾನಂದಂ ಬ್ರಹ್ಮ ಪುರುಷಂ ಪ್ರಣವಸ್ವರೂಪಮ್ ।**

'ಬ್ರಹ್ಮವು ಪ್ರತಿಯೊಂದು ಜೀವಿಯಲ್ಲೂ ನೆಲೆಸಿದೆ. ಅದು ಆನಂದರೂಪದ್ದು. ಅದು ಇಡೀ ವಿಶ್ವವನ್ನು ವ್ಯಾಪಿಸಿಕೊಂಡಿದೆ. ಮತ್ತು ಓಂಕಾರರೂಪದಿಂದ ವ್ಯಕ್ತವಾಗಿದೆ.'[೮]

**ತಸ್ಯ ವಾಚಕಃ ಪ್ರಣವಃ।**

ಪ್ರಣವ (ಅಂದರೆ ಓಂಕಾರ) ಈಶ್ವರನ ಹೆಸರು (ಇಲ್ಲಿ ಈಶ್ವರ ಎಂದರೆ ದೇವರು, ಭಗವಂತ, ಪರಮಾತ್ಮ ಎಂದರ್ಥ).[೯]

### ವೇದಗಳ ತಿರುಳು ಓಂಕಾರ !

**ಯಶ್ಛಂದಸಾಮೃಷಭೋ ವಿಶ್ವರೂಪಃ ।**
**ಛಂದೋಭ್ಯೋಽಧ್ಯಮೃತಾ ತ್ಸಂಬಭೂವ ।** [೧೦]

'ಸಮಸ್ತ ವಿಶ್ವದ ರೂಪದಲ್ಲಿರುವ, ವೇದಗಳಲ್ಲಿ ಶ್ರೇಷ್ಠವಾದ ಈ ಓಂಕಾರವು ವೇದಗಳಿಗಿಂತ ಮಿಗಿಲಾಗಿ (ಅಂದರೆ ವೇದಗಳ ತಿರುಳಾಗಿ) ಹೊರಹೊಮ್ಮಿತು.'

**ಸರ್ವೇ ವೇದಾ ಯತ್ ಪದಮಾಮನನ್ತಿ**
**ತಪಾಂಸಿ ಸರ್ವಾಣಿ ಚ ಯದ್ವದಂತಿ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥**[೧೧]

'ಎಲ್ಲ ವೇದಗಳೂ ಯಾವ ಪರಮ ಪದದ ಕುರಿತಾಗಿ ಹೇಳುತ್ತವೆಯೋ, ಎಲ್ಲ ತಪಸ್ಸುಗಳೂ ಯಾವುದಕ್ಕಾಗಿ ಇವೆಯೋ, ಯಾವುದನ್ನು ಬಯಸಿ ಬ್ರಹ್ಮಚರ್ಯವನ್ನು ಪಾಲಿಸುವರೋ ಆ ಪರಮ ಪದವನ್ನು ನಿನಗೆ ಸಂಕ್ಷೇಪವಾಗಿ ಹೇಳುತ್ತೇನೆ – ಅದೇ ''ಓಂ'' ಎಂಬುದು.'

### ನುಡಿನುಡಿಗಳಲ್ಲೂ ಮಿಡಿದಿದೆ ಓಂಕಾರ !

**ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನಿ ಏವಮ್ ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ ಏವಮ್ ಓಂಕಾರ ಏವೇದಗ್ಂ ಸರ್ವಮ್, ಓಂಕಾರ ಏವೇದಗ್ಂ ಸರ್ವಮ್**

'ಹೇಗೆ ಎಲ್ಲ ಎಲೆಗಳಲ್ಲೂ ನಾಳಗಳು ಹಮ್ಮಿಕೊಂಡಿವೆಯೊ ಹಾಗೆ ಎಲ್ಲ ಮಾತುಗಳಲ್ಲೂ ಓಂಕಾರವು ಹರಡಿಕೊಂಡಿದೆ. (ಎಲ್ಲ ಜೀವಿಗಳ ಮಾತಿನಲ್ಲೂ ಓಂಕಾರವೇ ಹಾಸುಹೊಕ್ಕಾಗಿದೆ ಎಂದರ್ಥ.)ಹೀಗೆ ಓಂಕಾರವೇ ಇದೆಲ್ಲವೂ ಆಗಿದೆ.' [೧೨]

---

[೭] ತೈತ್ತಿರೀಯೋಪನಿಷತ್, ೧.೮

[೮] ಅಥರ್ವವೇದದ ನಾರಾಣೋಪನಿಷತ್

[೯] ಯೋಗಸೂತ್ರಗಳು, ೧.೨೭

[೧೦] ತೈತ್ತಿರೀಯೋಪನಿಷತ್, ೧.೩

[೧೧] ಕಠೋಪನಿಷತ್ತು , ೧.೨.೧೫

[೧೨] ಛಾಂದೋಗ್ಯೋಪನಿಷತ್ತು , ೨.೨೩.೩

### ಸರ್ವ ಸಾರ ಓಂಕಾರ !

**ಪ್ರಜಾಪತಿರ್ಲೋಕಾನ್ ಅಭ್ಯತಪತ್ ತೇಭ್ಯೋಽಭಿ ತಪ್ತೇಭ್ಯ ಸ್ತ್ರಯೀ ವಿದ್ಯಾ ಸಂಪ್ರಾಸ್ರವತ್**

ಸಕಲಲೋಕಗಳಲ್ಲೂ ಸಾರಭೂತವಾದದ್ದು ಯಾವುದು ಎಂದು ತಿಳಿಯಲು ಪ್ರಜಾಪತಿಯು ತಪಸ್ಸು ಮಾಡಿದನು. ಆಗ ವೇದಗಳೇ ಸಾರಭೂತವಾಗಿ ಕಂಡುಬಂದವು.(ಬಳಿಕ –)

**ತಾಮ್ ಅಭ್ಯತಪತ್ ತಸ್ಯಾ ಅಭತಪ್ತಾಯಾ ಏತಾನ್ಯಕ್ಷರಾಣಿ ಸಂಪ್ರಾ ಸ್ರವನ್ತ ಭೂರ್ಭುರ್ವಃಸ್ವರಿತಿ**

ವೇದಗಳನ್ನು ಕುರಿತು ತಪಸ್ಸು ಮಾಡಿದನು. ಆಗ **ಭೂಃ ಭುವಃ ಸ್ವಃ** ಎಂಬ ವ್ಯಾಹೃತಿಗಳು ಸಕಲ ವೇದಗಳ ಸಾರವಾಗಿ ತೋರಿಕೊಂಡವು. (ಬಳಿಕ –)

**ತಾನ್ಯಭ್ಯತಪತ್ ತೇಭ್ಯೋಽಭಿತಪ್ತೇಭ್ಯ ಓಂಕಾರಃ ಸಂಪ್ರಾಸ್ರವತ್**

ಮತ್ತೆ ಆ ವ್ಯಾಹೃತಿಗಳ ಕುರಿತಾಗಿ ತಪಸ್ಸು ಮಾಡಿದನು. ಓಂಕಾರವು ಅವುಗಳ ಸಾರವಾಗಿ ಹೊರಹೊಮ್ಮಿತು. (ಹೀಗೆ ಓಂಕಾರವೇ ಸರ್ವಸಾರ ಎಂದು ಪ್ರಜಾಪತಿಗೆ ತಿಳಿದು ಬಂದಿತು).[೧೩]

ಇದನ್ನೇ ಛಾಂದೋಗ್ಯ–ಉಪನಿಷತ್ತಿನ ಮಂತ್ರವು ಮತ್ತೊಂದು ಬಗೆಯಿಂದ ಬಣ್ಣಿಸುತ್ತದೆ..

**ಏಷಾ ಭೂತಾನಾಂ ಪೃಥಿವೀ ರಸಃ, ಪೃಥಿವ್ಯಾ ಆಪೋ ರಸಃ, ಅಪಾಮೋಷಧಯೋ ರಸಃ, ಓಷಧೀನಾಂ ಪುರುಷೋ ರಸಃ, ಪುರುಷಸ್ಯ ವಾಗ್ರಸಃ, ವಾಚ ಋಗ್ ರಸಃ, ಋಚಃ ಸಾಮ ರಸಃ, ಸಾಮ್ನ ಉದ್ಗೀಥೋ ರಸಃ ॥**

ವಿಶ್ವದ ಎಲ್ಲ ವಸ್ತುಗಳ ರಸವು (ಅಂದರೆ ಸಾರವು) ಪೃಥಿವಿ,[೧೪] ಪೃಥಿವಿಯ ಸಾರವು ನೀರು,[೧೫] ನೀರಿನ ಸಾರವು ಓಷಧಿಗಳು [೧೬] (ಗಿಡ–ಮರ–ಬಳ್ಳಿಗಳು), ಓಷಧಿಗಳ ಸಾರ ಪುರುಷನು,[೧೭] ಪುರುಷನ ಸಾರ ಮಾತು,[೧೮] ಮಾತಿನ ಸಾರ ಋಗ್ವೇದ ಮಂತ್ರಗಳು, ಋಗ್ವೇದ ಮಂತ್ರಗಳ ಸಾರ ಸಾಮವೇದ ಮಂತ್ರಗಳು, ಸಾಮಗಳ ಸಾರ ಓಂಕಾರ !

### ವಿಶ್ವರೂಪವೀ ಓಂಕಾರ !

ಈ ಇಡೀ ವಿಶ್ವವೆಲ್ಲ ಓಂಕಾರವೇ ಆಗಿದೆ ಎಂದು ಮೇಲಿನ ಮಂತ್ರಗಳಲ್ಲಿ ಹೇಳಲಾಯಿತು. . ಇಲ್ಲೊಂದು ಸಂಶಯ : ಕೈ ಇಟ್ಟು ಮುಟ್ಟಿ ನೋಡಿ ಗಟ್ಟಿಯಾಗಿದೆಯೆಂದು ಮನದಟ್ಟುಮಾಡಿಕೊಂಡ

---

[೧೩] ಛಾಂದೋಗ್ಯೋಪನಿಷತ್ತು , ೨.೨೩.೨, ೩

[೧೪] ಅಂದರೆ ಎಲ್ಲ ವಸ್ತುಗಳಿಗೂ ಆಧಾರವಾದ್ದರಿಂದ ಪೃಥಿವಿಯೇ ಸಕಲ ಪದಾರ್ಥಗಳ ರಸ ಎನ್ನಲಾಗಿದೆ.

[೧೫] ಏಕೆಂದರೇ ನೀರಿನಲ್ಲೇ ಅಲ್ಲವೇ ಪೃಥ್ವಿಯು ಹಾಸುಹೊಕ್ಕಾಗಿ ನೆಲೆಸಿರುವುದು.

[೧೬] ಏಕೆಂದರೆ ನೀರಿನ ಪರಿಣಾಮವಲ್ಲವೇ (ನೀರಿನಿಂದ ಒಡಮೂಡಿದವುಗಳಲ್ಲವೇ) ಗಿಡಮರಬಳ್ಳಿಗಳು.

[೧೭] ಏಕೆಂದರೆ ಓಷಧಿಗಳಿಂದಾದ ಜೀವಿಗಳಲ್ಲಿ ಮನುಷ್ಯನೇ ಪ್ರಧಾನನಲ್ಲವೇ. (ಓಷಧಿಗಳಿಂದ ಗಿಡಮರಬಳ್ಳಿಗಳಿಂದ ಆಹಾರವಾಗುತ್ತದೆ, ಆಹಾರದಿಂದ ಜೀವಿಗಳು. ಜೀವಿಗಳಲ್ಲಿ ಮಾನವ ಪ್ರಮುಖ. ಆದ್ದರಿಂದ ಓಷಧಗಳ ಸಾರ ಮನುಷ್ಯ ಎನ್ನಲಾಗಿದೆ.)

[೧೮] ಏಕೆಂದರೆ ಮನುಷ್ಯನ ವ್ಯಕ್ತಿತ್ವದಲ್ಲಿ ವಾಕ್ಕು ಮಾತು ಎಲ್ಲಕ್ಕಿಂತ ಮಿಗಿಲಾದದ್ದಲ್ಲವೇ.

ವಸ್ತುವನ್ನು ಇದು ಓಂಕಾರವೇ ಆಗಿದೆ ಎಂದು ತಿಳಿದುಕೊಳ್ಳಲು ಹೇಗೆ ತಾನೆ ಸಾಧ್ಯ ? ನಿಜ, ಸಾಮಾನ್ಯ ದೃಷ್ಟಿಯಿಂದ, ಸ್ಥೂಲ ಬುದ್ಧಿಯಿಂದ ಸಾಧ್ಯವಿಲ್ಲ. ಆಧ್ಯಾತ್ಮಿಕ ದೃಷ್ಟಿಯಿಂದಲೇ ಇದನ್ನು ಕಂಡುಕೊಳ್ಳಬೇಕು. ಈ ವಿಷಯದಲ್ಲಿ ಶ್ರೀಸಾಯಣಾಚಾರ್ಯರ ಭಾಷ್ಯದ ಈ ಸಾಲುಗಳು ವಿಶೇಷ ಬೆಳಕನ್ನು ಬೀರುತ್ತವೆ.

**ಸ ಚ ಪ್ರಣವಃ ವಿಶ್ವರೂಪಃ ಸರ್ವಜಗದಾತ್ಮಕಃ। ಅರ್ಥಪ್ರಪಂಚಸ್ಯ ವಾಚಿ ಅಂತರ್ಭಾವಾತ್, ವಾಚಃ ಚ ಅಕಾರೇ ಪ್ರಣವಸ್ಯ ಪ್ರಥಮಾವಯವೇ ಅಂತರ್ಭಾವಾತ್। ಅರ್ಥಪ್ರಪಂಚಸ್ಯ ವಾಚಿ ಅಂತರ್ಭಾವಃ ಐತರೇಯಕೇ ಸಮಾಮ್ನಾತಃ – ತಸ್ಯ ವಾಕ್ತಂತಿರ್ನಾಮಾನಿ ದಾಮಾನಿ ತದಸ್ಯೇದಂ ವಾಚಾ ತಂತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಂ ಸರ್ವಂ ಹೀದಂ ನಾಮಾನಿ ॥**[೧೯]

'ಆ ಪ್ರಣವವು ವಿಶ್ವರೂಪವು, ಅಂದರೆ ಈ ಇಡೀ ಜಗತ್ತು ಓಂಕಾರದ ವ್ಯಕ್ತರೂಪ. ಜಗತ್ತಿನ ಎಲ್ಲ ವಸ್ತುಗಳೂ ನಾಮದಲ್ಲಿ (ಅಂದರೆ ಶಬ್ದಗಳಲ್ಲಿ) ಅಡಗಿವೆ, ಎಲ್ಲ ನಾಮಗಳೂ ಓಂಕಾರದ ಮೊದಲಕ್ಷರವಾದ ಅಕಾರದಲ್ಲಿ ಅಡಗಿವೆ, ಹೀಗಾಗಿ ಇಡೀ ಜಗತ್ತೇ ಓಂಕಾರದಲ್ಲಿ ಅಡಗಿದೆ. (ಎಲ್ಲ ಚರಾಚರ ವಸ್ತುಗಳಿಂದ ಕೂಡಿದ) ಈ ಜಗತ್ತು ವಾಕ್ಕಿನಲ್ಲಿ ನೆಲಸಿದೆ ಎಂಬುದನ್ನು ಐತರೇಯಕ–ಆರಣ್ಯಕದಲ್ಲಿ ಹೇಳಲಾಗಿದೆ : ಮಾತು ಅದರ (ಪ್ರಾಣದ) ಹಗ್ಗ ಇದ್ದಂತೆ, ಹೆಸರುಗಳು ಅದರ ಗಂಟುಗಳು. ಮಾತೆಂಬ ಹಗ್ಗದಿಂದ, ಹೆಸರುಗಳೆಂಬ ಕುಣಿಕೆಗಳಿಂದ ಇದೆಲ್ಲವೂ ಬಿಗಿಯಲ್ಪಟ್ಟಿದೆ. ನಿಜಕ್ಕು ಇವೆಲ್ಲವೂ ಹೆಸರುಗಳಲ್ಲದೆ ಮತ್ತೇನಲ್ಲ !'

**ಯಥಾ ವಣಿಜಃ ಪ್ರಸಾರಿತಯಾ ದೀರ್ಘರಜ್ಜ್ವಾ ಸಂಲಗ್ನಃ ಬಹುಭಿಃ ಪಾಶೈಃ ಬಹೂನ್ ಬಲೀವರ್ದಾನ್ ಬಧ್ನಂತಿ, ತಥಾ ತಸ್ಯ ಪ್ರಣವೋ ಪಾಧಿಕಸ್ಯ ಪರಮೇಶ್ವರಸ್ಯ ವಾಗೇವ ದೀರ್ಘರಜ್ಜುಃ ದೇವದತ್ತಾದಿ ನಾಮಾನಿ ಪಾಶಾಃ, ತೈಃ ಸರ್ವಮ್ ಅರ್ಥಪ್ರಪಂಚ ಜಾತಂ ಬದ್ಧಮ್। ತಸ್ಮಾತ್ ಸರ್ವಂ ನಾಮನಿ ವರ್ತತೇ। ಸರ್ವೋ ಜನಃ ಸ್ವಕೀಯಂ ನಾಮ ಶ್ರುತ್ವಾ ಪಾಶೇನ ಬದ್ಧ್ವಾ ಸಮಾಕೃಷ್ಟ ಇವ ಆಗಚ್ಛತೀತಿ ತಸ್ಯ ವಾಕ್ಯಸ್ಯ ಅರ್ಥಃ। ಅಂತರ್ಭಾವಿತಕೃತ್ಸ್ನಾರ್ಥಪ್ರಪಂಚೋಪೇತಾಯಾಃ ವಾಚಃ ಪ್ರಣವೇ ಅಂತರ್ಭಾವಃ....। ತದೇವಂ ಪ್ರಣವಸ್ಯ ವಿಶ್ವರೂಪತ್ವಂ ಸಿದ್ಧಮ್।**

'ಹೇಗೆ ಆಕಳನ್ನು ಮಾರುವವರು ಹಲವು ಕುಣಿಕೆಗಳಿಂದ ಹತ್ತಾರು ಪಶುಗಳನ್ನು ಬಿಗಿದು ಅವೆಲ್ಲವನ್ನೂ ಉದ್ದವಾದ ಮತ್ತೊಂದು ಹಗ್ಗಕ್ಕೆ ಕಟ್ಟುವರೋ ಹಾಗೆ ಓಂಕಾರರೂಪಿಯಾದ ಪರಮಾತ್ಮನಿಗೆ ಮಾತೇ ಹಗ್ಗವು, 'ದೇವದತ್ತ'[೨೦] ಮುಂತಾದ ಹೆಸರುಗಳೇ ಕುಣಿಕೆಗಳು, ಅವುಗಳಿಂದ ಸಮಗ್ರ ವಿಶ್ವವೇ ಬಿಗಿಯಲ್ಪಟ್ಟಿದೆ. ಆದ್ದರಿಂದ ಎಲ್ಲವೂ ಹೆಸರಿನಲ್ಲಿ ನೆಲೆಸಿದೆ. ಅಂದರೆ ಹೆಸರು ಹಿಡಿದು ಕರೆದಾಗ ಎಲ್ಲರೂ ಹಗ್ಗದಿಂದ ಕಟ್ಟಿ ಸೆಳೆಯಲ್ಪಟ್ಟಂತೆ ಬಂದು ನಿಲ್ಲುತ್ತಾರೆ ಎಂದರ್ಥ. ಹೀಗೆ ಮಾತು ತನ್ನಲ್ಲಿ ಎಲ್ಲವನ್ನೂ ಹಿಡಿದಿಟ್ಟುಕೊಂಡಿದೆ. ಓಂಕಾರವು ಮಾತೆಲ್ಲವನ್ನೂ ತನ್ನ ಅಂಕೆಯಲ್ಲಿಟ್ಟುಕೊಂಡಿದೆ. ಆದ್ದರಿಂದ ಇಡೀ ವಿಶ್ವವು ಓಂಕಾರದಲ್ಲಿ ನೆಲಸಿದೆ ಎಂಬುದು ಸಾಬೀತಾಯಿತು.'[೨೧]

## ಓಂ ಎಂದು ಹೇಳಿ ಶುರುಮಾಡಿರಿ !

**ತೇನೇಯಂ ತ್ರಯೀ ವಿದ್ಯಾ ವರ್ತತ ಓಮಿತ್ಯಾಶ್ರಾವಯತ್ಯೋಮಿತಿ ಶಗ್ಂಸತ್ಯೋಮಿತ್ಯುದ್ಗಾಯತ್ಯೇತಸ್ಯೈವಾಕ್ಷರಸ್ಯಾಪಚಿತ್ಯೈ ಮಹಿಮ್ನಾ ರಸೇನ ।**[೨೨]

'ಓಂ ಎಂದು ಹೇಳುವುದರ ಮೂಲಕವೇ ವೇದೋಕ್ತವಾದ ಕರ್ಮಗಳು ನಡೆಯುತ್ತವೆ. ಓಂ ಎಂದು ಹೇಳಿದ ಬಳಿಕವೇ ಅಧ್ವರ್ಯುವು ದೇವತೆಗಳನ್ನು ಉದ್ದೇಶಿಸಿ ಮಂತ್ರಗಳನ್ನು ಪಠಿಸುತ್ತಾನೆ . ಓಂ ಎಂದು ಹೇಳಿದ ಬಳಿಕವೇ ಹೋತೃವು ಮಂತ್ರಗಳ ಮೂಲಕ ದೇವತೆಗಳನ್ನು ಸ್ತುತಿಸುತ್ತಾನೆ. ಓಂ ಎಂದುಚ್ಚರಿಸಿದ ಬಳಿಕವೇ ಉದ್ಗಾತೃವು ಸಾಮಗಾನ ಮಾಡುತ್ತಾನೆ. ಹೀಗೆ ಅವರೆಲ್ಲ ಕೂಡಿ ಮಾಡುವ ಸೋಮಯಾಗಾದಿ ಕರ್ಮಗಳೂ ಕೂಡ ಈ ಓಂಕಾರದ ಪೂಜೆಗಾಗಿಯೇ ಇವೆ. ಈ ಓಂಕಾರದ ಮಹಿಮೆಯಿಂದಲೇ, ಸಹಾಯದಿಂದಲೇ ಯಾಗಹೋಮಾದಿಗಳು ನಡೆಯುತ್ತವೆ.'

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ॥**[೨೩]

'ಓಂ ತತ್ ಸತ್ ಎಂದು ಬ್ರಹ್ಮಕ್ಕೆ ಮೂರು ಹೆಸರು. ಹಿಂದೆ ಅದರಿಂದಲೇ (ಆ ಓಂಕಾರದಿಂದಲೇ ) ಬ್ರಾಹ್ಮಣರು, ವೇದಗಳು, ಯಜ್ಞಗಳು ನಿರ್ಮಿಸಲ್ಪಟ್ಟವು.'

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್॥**[೨೪]

'ಆದ್ದರಿಂದ (ಓಂ ಎಂಬುದು ಬ್ರಹ್ಮದ ಹೆಸರು ಆದ್ದರಿಂದ) ಬ್ರಹ್ಮವನ್ನು ಉಪಾಸನೆ ಮಾಡುವವರು ಯಜ್ಞ ದಾನ ತಪಸ್ಸು ಮುಂತಾದ ಕ್ರಿಯೆಗಳನ್ನು ಯಾವಾಗಲೂ ಓಂ ಎಂದು ಉಚ್ಚರಿಸಿ ಶುರುಮಾಡುತ್ತಾರೆ.'

## ಉಪಾಸನೆ – ಅದರ ಪ್ರಕ್ರಿಯೆ !

ಉಪ ಪೂರ್ವಕ ಆಸ ಉಪವೇಶನೇ ಧಾತುವಿಗೆ ಯುಚ್ ಪ್ರತ್ಯಯವನ್ನು ಸೇರಿಸಿದಾಗ ನಿಷ್ಪನ್ನವಾಗುವ ಶಬ್ದ **ಉಪಾಸನಾ.**[೨೫] ಇದರ ಅರ್ಥ ಪೂಜೆ, ಶುಶ್ರೂಷೆ, ಸೇವೆ, ಧ್ಯಾನ ಇತ್ಯಾದಿ. ಓಂಕಾರದ ಉಪಾಸನೆ, ಓಂಕಾರಸಾಧನೆ ಎಂದರೇನು? ಸರಳವಾಗಿ ಹೇಳುವುದಾದರೆ ಓಂಕಾರವನ್ನು ಉಚ್ಚರಿಸುತ್ತ ಆತ್ಮನನ್ನು ಬ್ರಹ್ಮವನ್ನು ಧ್ಯಾನಿಸುವುದೇ ಓಂಕಾರೋಪಾಸನೆ. ಮೊದಮೊದಲು ಕಿವಿಗೆ ಕೇಳುವಂತೆ ಹೇಳುತ್ತ ಬಳಿಕ ಏಕಾಗ್ರತೆ ಹೆಚ್ಚಿದಂತೆ ಮನದಲ್ಲೇ ಜಪಿಸುತ್ತ

---

[೧೯] ಐತರೇಯ–ಆರಣ್ಯಕದಲ್ಲಿ ೨.೧.೬.೧ನೇ ಮಂತ್ರ.

[೨೦] ಯಾವುದಾದರೂ ಒಂದು ಹೆಸರನ್ನು ಹೇಳಬೇಕು ಎಂದು ಹೀಗೆ ಹೇಳಲಾಗಿದೆ ಅಷ್ಟೆ. ಅದರ ಬದಲಿಗೆ ತಿಮ್ಮಪ್ಪ ಕೃಷ್ಣಪ್ಪ ಎಂದು ಹೇಳಿದರೂ ಆಗುತ್ತದೆ. ಸಾಯಣರು ಭಾಷ್ಯವನ್ನು ಸಂಸ್ಕೃತದಲ್ಲಿ ಬರೆದದ್ದರಿಂದ ಹಾಗೆ ಬರೆದಿದ್ದಾರೆ ಅಷ್ಟೆ.

[೨೧] ತೈತ್ತಿರೀಯೋಪನಿಷತ್ತಿನ ಯಶ್ಛಂದಸಾಮೃಷಭೋ ವಿಶ್ವರೂಪಃ ಎಂಬ ಮಂತ್ರದ ಸಾಯಣಭಾಷ್ಯ

[೨೨] ಛಾಂದೋಗ್ಯೋಪನಿಷತ್ ೧.೧.೯

[೨೩] ಶ್ರೀಮದ್ಭಗವದ್ಗೀತಾ – ೧೭.೨೩

[೨೪] ಶ್ರೀಮದ್ಭಗವದ್ಗೀತಾ – ೧೭.೨೪

[೨೫] ಣ್ಯಾಸಶ್ರನ್ಥೋ ಯುಚ್ (೩.೩.೧೦೭) ಎಂಬ ಪಾಣಿನೀಯ ಸೂತ್ರದಿಂದ ಯುಚ್ ಪ್ರತ್ಯಯ ಬಂದಿದೆ.

ಬ್ರಹ್ಮಧ್ಯಾನವನ್ನು ಮಾಡುವುದೇ ಉಪಾಸನೆ. ಉಪನಿಷತ್ತುಗಳಲ್ಲಿ ಆತ್ಮ ಎಂದರೇನು, ಬ್ರಹ್ಮ ಎಂದರೇನು[೨೬] ಎಂಬುದನ್ನೆಲ್ಲ ಹೇಳಲಾಗಿದೆ. ಆ ಲಕ್ಷಣಗಳನ್ನೆಲ್ಲ ಗುರುತು ಹಾಕಿಟ್ಟುಕೊಂಡು ಓಂಕಾರವನ್ನುಚ್ಚರಿಸುವಾಗ ಅವುಗಳನ್ನು ನೆನಸಿಕೊಳ್ಳಬೇಕು, ಮನನ ಮಾಡಬೇಕು. ಆಗ ಓಂಕಾರಧ್ಯಾನಕ್ಕೆ ಮನಸ್ಸು ಅಣಿಗೊಳ್ಳುತ್ತದೆ. ಭಗವತ್ಪಾದ ಶ್ರೀಶಂಕರಾಚಾರ್ಯರು ಉಪಾಸನೆಯನ್ನು ಕುರಿತಾಗಿ ಹೇಳುತ್ತಾರೆ: ''ಉಪಾಸನಾ ಚ ...ತುಲ್ಯಪ್ರತ್ಯಯಸಂತತಿಃ ಅಸಂಕೀರ್ಣಾ ಚ ಅತತ್-ಪ್ರತ್ಯಯೈಃ - ಬೇರೊಂದು ಭಾವದಿಂದ ಕಲಬೆರಕೆಯಾಗದಂತಹ ಒಂದೇ ತೆರನಾದ ತಿಳಿವಿನ ಹೊನಲೇ ಉಪಾಸನೆ''[೨೭] ಎಂದು. ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಎಣ್ಣೆಯನ್ನು ಸುರಿಯುವಾಗ ಹೇಗೆ ಆ ಧಾರೆಯು ಒಡಕು-ಬಿರುಕುಗಳಿಲ್ಲದೆ ಇಳಿಯುವುದೋ ಹಾಗೆ ಭಗವಂತನೆಡೆಗೆ ಮನಸ್ಸು ಒಂದೇಸಮನೆ ಎಡೆಬಿಡದೆ ಹರಿದರೆ ಅದು ಧ್ಯಾನ, ಉಪಾಸನೆ ಎನಿಸಿಕೊಳ್ಳುತ್ತದೆ.

ಮಾತು ಹೇಗೆ ಉಂಟಾಗುತ್ತದೆ ಎಂಬುದರ ಬಗ್ಗೆ ನಮ್ಮ ಋಷಿಮುನಿಗಳು ಹೇಳಿರುವುದನ್ನು ಇಲ್ಲಿ ಅವಲೋಕಿಸಬೇಕು. ಆಗ ಜಪ ಮಂತ್ರೋಪಾಸನೆ ಇವುಗಳ ಹಿನ್ನೆಲೆಯ ತಂತ್ರ(technique) ಏನೆಂಬುದು ತಿಳಿಯುತ್ತದೆ. ಮೈತ್ರಾಯಣೀಯೋಪನಿಷತ್ತು,[೨೮] ಪಾಣಿನೀಯ ಶಿಕ್ಷಾ, ಅಗ್ನಿಪುರಾಣ, ಶಿವಪುರಾಣ ಮುಂತಾದ ಶಾಸ್ತ್ರಗಳಲ್ಲಿ ಶಬ್ದಗಳ ಉಚ್ಚಾರಣೆ ಹೇಗಾಗುತ್ತದೆ ಎಂಬ ಪ್ರಕ್ರಿಯೆಯನ್ನು (process ಅನ್ನು) ವಿವರಿಸಲಾಗಿದೆ. ಆ ವಿವರಗಳು ತುಂಬ ಬೋಧಪ್ರದ:

**ಆತ್ಮನು ಬುದ್ಧಿಯೊಡನೆ ಕೂಡಿ ವಿಷಯಗಳನ್ನು ಚೆನ್ನಾಗಿ ತಿಳಿದು ತೀರ್ಮಾನಿಸಿ ಬಳಿಕ ಮಾತನಾಡುವ ಆಸೆಯಿಂದ ಮನಸ್ಸನ್ನು ಆ ಕೆಲಸದಲ್ಲಿ ತೊಡಗಿಸುತ್ತಾನೆ.**[೨೯] **ಮನಸ್ಸು ದೇಹದಲ್ಲಿರುವ ಅಗ್ನಿಯನ್ನು (ಉದರ-ಪ್ರದೇಶದಲ್ಲಿರುವ ಬೆಂಕಿಯನ್ನು) ತೀಡುತ್ತದೆ. ದೇಹಾಗ್ನಿಯು ಗಾಳಿಯನ್ನು ದೂಡುತ್ತದೆ.**

**ಹೀಗೆ ನೂಕಲ್ಪಟ್ಟ ಗಾಳಿಯು ಮೇಲೇರಿ ಶಿರಸ್ಸನ್ನು ಬಡಿದು ಮರಳಿ ಇಳಿದು ಬಾಯಲ್ಲಿ ಬೇರೆ ಬೇರೆ ಜಾಗಗಳಲ್ಲಿ ಅಪ್ಪಳಿಸುತ್ತ ಅಕ್ಷರಗಳನ್ನು ಹೊಮ್ಮಿಸುತ್ತದೆ.**[೩೦] (ಹೀಗೆ ನಾವು ಮಾತಾಡಲು ಸಮರ್ಥರಾಗುತ್ತೇವೆ.)

ಎಷ್ಟು ಆಳವಾದ ವಿಚಾರಗಳಿವು! ಋಷಿಗಳು ನಿಖರವಾಗಿ ತಿಳಿದದ್ದಲ್ಲದೆ ತಿಳಿಯಾಗಿ ತಿಳಿಸಿಕೊಟ್ಟರಲ್ಲ ! ಮನುಕುಲ ಅವರಿಗೆ ಎಷ್ಟು ಮಣಿದರೂ ಕಡಿಮೆಯೇ ಅಲ್ಲವೆ ! ಈಗ, ಪ್ರಸ್ತುತ ನಾವು ಗಮನಿಸಬೇಕಾದ ವಿಚಾರ ಇದು - ನಾವೇನೇ ಮಾತಾಡಬೇಕಾದರೂ ಆತ್ಮನು ಆ ಕುರಿತಾಗಿ ಭಾವಿಸಿ ಬಯಸಿದರೆ ಮಾತ್ರ ಮಾತು ಹೊರಡುತ್ತದೆ ಎಂಬುದು. ಓಂಕಾರಜಪ ಮಾಡುವುದೆಂದರೆ ಆತ್ಮನು ಪರಮಾತ್ಮನನ್ನು ಮರಳಿಮರಳಿ ನೆನೆಯುವಂತೆ, ಓಂಕಾರವನ್ನುಚ್ಚರಿಸಲು ಬಯಸುವಂತೆ ಪ್ರೇರೇಪಿಸಿದಂತೆ, ಆ ಮೂಲಕ ಬುದ್ಧಿ ಮನಸ್ಸುಗಳನ್ನು ಮತ್ತೆ ಮತ್ತೆ ಓಂಕಾರೋಚ್ಚಾರಣೆಯಲ್ಲಿ ತೊಡಗಿಸಿದಂತೆ, ಅಂದರೆ ಪುನಃ ಪುನಃ ಪರಮಾತ್ಮನನ್ನು ಕುರಿತಾಗಿ ಉಚ್ಚರಿಸುವ ಬಯಕೆಯನ್ನು ಹೇರಿದಂತಾಯಿತು. ಹೀಗೆ ನಿಯತವಾಗಿ ಅಭ್ಯಾಸ ಮಾಡುತ್ತಬಂದರೆ ಕೊನೆಗೆ ಆ ಬಯಕೆ (ಮಂತ್ರವನ್ನುಚ್ಚರಿಸಬೇಕು ಭಗವಂತನನ್ನು ಧ್ಯಾನಿಸಬೇಕು ಎಂಬ ತವಕ ) ಸ್ವಭಾವವಾಗಿಬಿಡುತ್ತದೆ, ಸಹಜವಾಗಿಬಿಡುತ್ತದೆ. ಅದೇ ಮುಮುಕ್ಷುತ್ವ-ವ್ಯಾಕುಲತೆಯಾಗಿ ಅರಳುತ್ತದೆ. ವ್ಯಾಕುಲತೆ ಮೂಡುವುದು ಹೇಗೆ ಎಂಬುದರ ವೈಜ್ಞಾನಿಕ ವಿವರಣೆಯನ್ನು ನಾವಿಲ್ಲಿ ಕಾಣಬಹುದಾಗಿದೆ. ಇದೇ ಮಂತ್ರಜಪದ ಹಿಂದಿರುವ ತಂತ್ರ !

ಈ ಮೇಲಿನ ನುಡಿಗಳಲ್ಲಿ ನಮಗಿನ್ನೊಂದು ಒಳ್ಳೆ ಸುದ್ದಿ ಇದೆ. ಅದೇನೆಂದರೆ, ತನ್ನಿಷ್ಟದಂತೆ ಜೀವಿಯನ್ನು ಕುಣಿಸುವ ಈ ಮನಸ್ಸು ಸ್ವತಂತ್ರವಲ್ಲ, ಆತ್ಮನ ಕೈಯಲ್ಲಿನ ಒಂದು ಸಲಕರಣೆ ಮಾತ್ರ ಎಂಬುದು! ಓಂಕಾರವನ್ನು ಜಪಿಸಲು ಕುಳಿತಾಗ ಆತ್ಮನಿಂದ ನಿಯುಕ್ತವಾಗಿ ಮನಸ್ಸು ಮತ್ತೆ ಮತ್ತೆ ಆ ಪವಿತ್ರ ಕಾರ್ಯದಲ್ಲಿ ತೊಡಗುವಂತಾಗುತ್ತದೆ. ಬುದ್ಧಿ ಮನಸ್ಸುಗಳು ಮರಳಿಮರಳಿ ಓಂಕಾರದ ರಂಗಿನಿಂದ ರಂಜಿತವಾಗಲೇಬೇಕಾಗುತ್ತದೆ. ಅಷ್ಟರ ಮಟ್ಟಿಗಾದರೂ ಅವು ಹಿಡಿತಕ್ಕೆ ಬಂದಂತಾಯಿತಲ್ಲ ! ಇದೇನು ಕಡಿಮೆ ಪ್ರಯೋಜನವೇ !

ಉಪಾಸನೆಯ ಕುರಿತಾಗಿ ಸಮಾಲೋಚನೆ ಮಾಡಿದ್ದು ಸಾಕು. ಏಕೆಂದರೆ ಉಪಾಸನೆ ಇರುವುದು ಮಾಡುವುದಕ್ಕಾಗಿ, ಸಮಾಲೋಚನೆ ಮಾಡುವುದಕ್ಕಾಗಿ ಅಲ್ಲ !

### ಹೇಗೆ ಉಪಾಸನೆ ಮಾಡಬೇಕು?

ಎಲ್ಲದರಲ್ಲೂ ಮೀನ ಮೇಷ ಎಣಿಸುತ್ತ ತಡಮಾಡುವುದು ಮನುಷ್ಯನ ಜಾಡ್ಯ. ಇನ್ನು ಆಧ್ಯಾತ್ಮಿಕ ಸಾಧನೆಗೆಂದರೆ ಆ ಎಣಿಸುವಿಕೆಯನ್ನು ಅವನು ನಿಲ್ಲಿಸುವುದೇ ಇಲ್ಲ ! ಆದ್ದರಿಂದ ಶುದ್ಧ ಉದ್ದೇಶ, ಪ್ರಾಮಾಣಿಕ ಭಾವ ಇಟ್ಟುಕೊಂಡು ಶುರು ಮಾಡಿಬಿಡಬೇಕು ಸಾಧನೆಯನ್ನು. ಮಾಡುತ್ತ ಹೋದಂತೆಲ್ಲ ಮುಂದಿನ ಮಾರ್ಗ ತೆರೆದುಕೊಳ್ಳುತ್ತದೆ. ಆದ್ದರಿಂದಲೇ ಯೋಗಶಾಸ್ತ್ರವು **ಯೋಗ ಏವ ಉಪಾಧ್ಯಾಯಃ**[೩೧] ಎಂದಿತು. ಎಂದರೆ ಸಾಧಕನು ಮಾಡುವ ಸಾಧನೆಯೇ ಅವನ ಗುರು ಎಂದರ್ಥ. ಸಾಧನೆ ಹೇಗೆ ಮಾಡಬೇಕೆಂಬ ವಿಷಯದಲ್ಲಿ ಉಪನಿಷತ್ತು ನೀಡುವ ಸಲಹೆ ಇದು -

**ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ**
**ಶರಂ ಹ್ಯುಪಾಸಾನಿಶಿತಂ ಸನ್ದಧೀತ ।**
**ಆಯಮ್ಯ ತದ್ಭಾವಗತೇನ ಚೇತಸಾ**
**ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥**[೩೨]

---

[೨೬] ಆತ್ಮ ಬ್ರಹ್ಮ ಬೇರೆ ಬೇರೆ ಅಲ್ಲ ಒಂದೇ. ಕೆಲವೊಮ್ಮೆ ಒಂದೇ ಅರ್ಥದ ಎರಡು ಶಬ್ದಗಳನ್ನು ಬಳಸುವರಲ್ಲವೇ ಬೆಟ್ಟಗುಡ್ಡ, ರೋಗರುಜಿನ ಇತ್ಯಾದಿ, ಹಾಗೆಯೇ ಇಲ್ಲೂ ಅರ್ಥಮಾಡಿಕೊಳ್ಳಬೇಕು.

[೨೭] ತೈತ್ತಿರೀಯೋಪನಿಷತ್ತಿನ ಭಾಷ್ಯ, ಅನುವಾಕ ೩, ಶೀಕ್ಷಾವಲ್ಲೀ

[೨೮] ಮೈತ್ರಾಯಣೀಯೋಪನಿಷತ್ ೭, ೧೧

[೨೯] ಇಲ್ಲಿ ಆತ್ಮಾ ಎಂದರೆ ಜೀವರೂಪದಲ್ಲಿ ನೆಲಸಿರುವ ಚೈತನ್ಯ ಎಂದು ಅರ್ಥ ಮಾಡಿಕೊಳ್ಳಬೇಕು.

[೩೦] ಆತ್ಮಾ ಬುದ್ಧ್ಯಾ ಸಮೇತ್ಯಾರ್ಥಾನ್ ಮನೋ ಯುಂಕ್ತೇ ವಿವಕ್ಷಯಾ ।
ಮನಃಕಾಯಾಗ್ನಿಮಾಹನ್ತಿ ಸೋದೀರಯತಿ ಮಾರುತಮ್ । ಪಾಣಿನೀಯಶಿಕ್ಷಾ,೬
ಮಾರುತಸ್ತೂರಸಿ ಚರನ್ ಮಂದ್ರಂ ಜನಯತಿ ಸ್ವರಮ್ । ಪಾ. ಶಿಕ್ಷಾ ೭
ಸೋದೀರ್ಣೋ ಮೂರ್ಧ್ನ್ಯಭಿಹತೋ ವಕ್ತ್ರಮಾಪದ್ಯ ಮಾರುತಃ ।
ವರ್ಣಾನ್ ಜನಯತೇ ತೇಷಾಂ ವಿಭಾಗಃ ಪಂಚಧಾ ಸ್ಮೃತಃ । ಪಾ. ಶಿಕ್ಷಾ ೯

[೩೧] ಯೋಗಸೂತ್ರಗಳ ವ್ಯಾಸಭಾಷ್ಯದಲ್ಲಿ ಬರುವ ಮಾತು.

[೩೨] ಮುಂಡಕೋಪನಿಷತ್ ೨.೨.೩

'ಉಪನಿಷತ್ತಿನ ಮಹಾಸ್ತ್ರವಾದ ಧನುಸ್ಸನ್ನು ತೆಗೆದುಕೊಂಡು, ಉಪಾಸನೆಯ ಸಾಣೆ ಹಿಡಿದ ಚೂಪಾದ ಬಾಣವನ್ನು ಹೂಡಬೇಕು. ಒಳ್ಳೆಯ ಮನಸ್ಸುಳ್ಳ ಎಲೈ ಸಾಧಕನೇ ! ಗುರಿಯಲ್ಲೇ ಮನನೆಟ್ಟು ಬಿಲ್ಲನ್ನೆಳೆದು ಹೊಡೆ.'(ಯಾವುದು ಆ ಬಿಲ್ಲು, ಯಾವುದು ಆ ಬಾಣ, ಯಾವುದು ಆ ಗುರಿ ಯಾವುದದು?...ಎಂಬುದನ್ನೆಲ್ಲ ಮುಂದಿನ ಮಂತ್ರ ತಿಳಿಸುತ್ತದೆ –)

**ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್।** [೩೩]

'ಓಂಕಾರವೇ ಬಿಲ್ಲು, ಆತ್ಮವೇ ಬಾಣ, ಬ್ರಹ್ಮವೇ ಅದರ ಗುರಿ. ಎಚ್ಚರ ತಪ್ಪದೆ ಹೊಡೆಯಬೇಕು, ಬಾಣವು ಗುರಿಯನ್ನು ಹೊಗುವಂತೆ, ಬ್ರಹ್ಮದಲ್ಲಿ ಒಂದಾಗಬೇಕು.'

(ವೇದಮಂತ್ರದ ಭಾಷೆ ಎಷ್ಟು ಶಕ್ತಿಪೂರ್ಣ! ಕಲ್ಪನೆಯಲ್ಲೂ ಪರಾಕ್ರಮದ ಕಾವು! ಇದಲ್ಲವೇ ಉಪನಿಷದ್–ಋಷಿಗಳ ರೀತಿ! ಎಲ್ಲದರಲ್ಲೂ ತೇಜಸ್ಸು ಓಜಸ್ಸು! ಆದ್ದರಿಂದಲೇ ಶ್ರೀಸ್ವಾಮಿ ವಿವೇಕಾನಂದರಿಗೆ ಅವು ಅಷ್ಟು ಪ್ರಿಯ !)

## ಉಪಾಸನೆಯ ಫಲ ? – ಯಾರಿಗೇನು ಬೇಕೋ ಅದು ಸಿಕ್ಕುತ್ತದೆ!

**ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್ ।**
**ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ।** [೩೪]

'ಈ ಓಂಕಾರವೆಂಬ ಅಕ್ಷರವೇ ಅಪರ ಬ್ರಹ್ಮ, ಇದೇ ಪರಬ್ರಹ್ಮ, ಇದನ್ನು ಧ್ಯಾನಿಸುತ್ತ ಯಾರು ಯಾವುದನ್ನು ಬಯಸುವರೋ ಅವರಿಗೆ ಅದು ದೊರಕುತ್ತದೆ.' (ಇಲ್ಲಿ, ಅಪರ ಬ್ರಹ್ಮ ಎಂದರೆ ಶಿವ ವಿಷ್ಣು ಕಾಳಿ ಕೃಷ್ಣ ಇತ್ಯಾದಿಯಾಗಿ ಆವಿರ್ಭವಿಸಿದ ಭಗವಂತ. ಪರಬ್ರಹ್ಮ ಎಂದರೆ ಈ ಎಲ್ಲ ಆವಿರ್ಭಾವಗಳ ಹಿನ್ನೆಲೆಯಲ್ಲಿರುವ ಭಗವಂತನ ಮೂಲಸ್ವರೂಪ, ಸಚ್ಚಿದಾನಂದಸ್ವರೂಪ. ಓಂ ಎಂಬುದಾಗಿ ಧ್ಯಾನಿಸುತ್ತ ಯಾರು ಯಾವುದನ್ನು ಸಾಕ್ಷಾತ್ಕರಿಸಿಕೊಳ್ಳಲು ಬಯಸುತ್ತಾರೋ ಅವರಿಗೆ ಅದು ದೊರಕುತ್ತದೆ ಎಂದರ್ಥ.)

**ಏತದಾಲಂಬನಂ ಶ್ರೇಷ್ಠಂ ಏತದಾಲಂಬನಂ ಪರಮ್ ।**
**ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹಿಯತೇ ॥** [೩೫]

'ಓಂಕಾರವೆಂಬ ಈ ಆಲಂಬನವೇ ಅತ್ಯುತ್ತಮವಾದದ್ದು, ಈ ಆಲಂಬನವೇ ಪರಬ್ರಹ್ಮ, ಅಪರ ಬ್ರಹ್ಮ ಎರಡೂ ಆಗಿದೆ. ಈ ಆಲಂಬನವನ್ನು ತಿಳಿದುಕೊಂಡರೆ ( ಅಂದರೆ, ಈ ಓಂಕಾರದ ಮೇಲೆ ಧ್ಯಾನಿಸಿದರೆ ) ಸಾಧಕನು ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.'

**ಆಪಯಿತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನ್ ಅಕ್ಷರಮುದ್ಗೀಥಮ್ ಉಪಾಸ್ತೇ ।**

'ಓಂಕಾರವು ಬಯಕೆಗಳನ್ನು ಈಡೇರಿಸಬಲ್ಲದು ಎಂದು ಅರಿತುಕೊಂಡು ಯಾರು ಓಂಕಾರವನ್ನು ಉಪಾಸಿಸುವವನೋ ಅವನು ಸ್ವತಃ ಇತರರ ಇಷ್ಟಾರ್ಥಗಳನ್ನು ಪೂರೈಸುವವನಾಗುತ್ತಾನೆ.'

[೩೩] ಮುಂಡಕೋಪನಿಷತ್ ೨.೨.೪

[೩೪] ಕಠೋಪನಿಷತ್ ೧.೨.೧೬

[೩೫] ಕಠೋಪನಿಷತ್ ೧.೨.೧೭

## ಕಿವಿ ಮಾತು !

ಕಿವಿಮಾತು ಎಂದರೆ ಗುಟ್ಟು ! ಲೋಕದಲ್ಲಿ ಗುಟ್ಟು ಯಾರಿಗೂ ಹೇಳುವಂಥದಲ್ಲ. ಆದರೆ ಉಪನಿಷತ್ತು ಗೀತೆಗಳ ಗುಟ್ಟು ಎಲ್ಲರಿಗೂ ಹೇಳಬಹುದಾದ್ದು! (ಶ್ರೀಸ್ವಾಮಿ ವಿವೇಕಾನಂದರ ಪ್ರಕಾರ ಹೇಳಲೇಬೇಕಾದದ್ದು!) ಹಾಗಾದರೆ ಅದನ್ನು ರಹಸ್ಯ ಎಂದು ಕರೆಯುವುದೇಕೆ ಎಂದರೆ – ಹೇಳಿದರೂ ತತ್ತ್ವ ಅರ್ಥವಾಗದೇ ಇರುವುದರಿಂದ ಅದು ಗುಟ್ಟಾಗಿಯೇ ಉಳಿದಿದೆ ! ನಮೂನೆಗಾಗಿ ಇಲ್ಲೊಂದು ಗುಟ್ಟನ್ನು ಹೊರಬಿಟ್ಟಿದೆ ನೋಡಿ! ಶ್ರೀಕೃಷ್ಣ ಹೇಳಿದ ಕಿವಿ ಮಾತು ಇದು –

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುದ್ಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್॥**
**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥**

'ಎಲ್ಲ ಇಂದ್ರಿಯ ದ್ವಾರಗಳನ್ನೂ ಹತೋಟಿಯಲ್ಲಿಟ್ಟುಕೊಂಡು, ಮನಸ್ಸನ್ನು ಹೃದಯದಲ್ಲಿ ಹಿಡಿದು ನಿಲ್ಲಿಸಿ, ಪ್ರಾಣವನ್ನು ಶಿರದಲ್ಲಿ ಇರಿಸಿ, ಯೋಗಧಾರಣೆ ಮಾಡುವುದಕ್ಕಾಗಿ ಓಂ ಎಂಬ ಏಕಾಕ್ಷರ ಬ್ರಹ್ಮವನ್ನು ಹೇಳಿಕೊಳ್ಳುತ್ತ, ನನ್ನನ್ನೇ ನೆನೆಯುತ್ತ ಯಾರು ದೇಹ ಬಿಡುವರೊ ಅವರು ಪರಮಗತಿಯನ್ನು ಪಡೆಯುತ್ತಾರೆ.' [೩೬]

ಗುಟ್ಟನ್ನು ಹೇಳಿದಾಗ ಜನ ಹಾತೊರೆದು ಬಂದು ಕೇಳಿ ಧನ್ಯರಾಗಬೇಕಲ್ಲವೇ. ಪರಮಗತಿ ಯಾರಿಗೆ ತಾನೆ ಬೇಡ! ಅದರ ರಹಸ್ಯವನ್ನು ಡಂಗುರ ಸಾರಿದೆ ಗೀತೆ ! ಆದರೂ ಜನರಲ್ಲೇನು ಅದನ್ನು ಪಾಲಿಸುವ ಕಾತರವೇನೂ ಕಾಣುತ್ತಿಲ್ಲ. ಆದ್ದರಿಂದ ಉಪನಿಷತ್ಸಂದೇಶಗಳೆಲ್ಲ ಓದಿದ ಮೇಲೂ ರಹಸ್ಯವಾಗಿಯೇ ಉಳಿದಿವೆ. ಈ ಶ್ಲೋಕವನ್ನೋದಿ ಪ್ರಾಣ ಬಿಡಬೇಕೆಂದು ಅರ್ಥವಲ್ಲ. ಆ ಕೊನೆಯ ದಿನಕ್ಕಾಗಿ ಇಂದಿನಿಂದಲೇ ತಯಾರಿ ಮಾಡಿಕೊಳ್ಳಬೇಕೆಂದು ತಾತ್ಪರ್ಯ. ಏಕೆಂದರೆ ಪ್ರಾಣಹೋಗುವ ಘಳಿಗೆಯಲ್ಲಿ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ಭಗವಂತನನ್ನು ನೆನೆಯುತ್ತ ಓಂಕಾರವನ್ನುಚ್ಚರಿಸಲು ಸಾಧ್ಯವಾಗಬೇಕಾದರೆ ಮುಂಚಿನಿಂದಲೂ ಅದನ್ನು ಅಭ್ಯಾಸ ಮಾಡಿರಬೇಕಾಗುತ್ತದೆ. ಜೀವನವಿಡೀ ಇಂದ್ರಿಯಗಳ ಬೆಂಬತ್ತಿ ಕೊನೆಯಲ್ಲಿ ಅವನ್ನು ಹತ್ತಿಕ್ಕಲು ತಿಣುಕಿದರೆ ಏನೂ ಪ್ರಯೋಜನವಿಲ್ಲ. ಕರೆದೊಯ್ಯಲು ಬಂದ ಯಮದೇವರಿಗೆ ಬಿಟ್ಟಿ ವಿನೋದ ಅಷ್ಟೆ ! ವರ್ಷವಿಡೀ ಅಂಡಲೆದು ಪರೀಕ್ಷೆಯ ಹೊತ್ತಿಗೆ ಕಪಾಟಿನಿಂದ ಪಠ್ಯ ಪುಸ್ತಕ 'ಬಿಡುಗಡೆ' ಮಾಡುವವರು Rank ಪಡೆವುದುಂಟೆ ! ಹಾಗೆಯೇ ಇದೂ ಕೂಡ ! ಸಮಸ್ತ ಜಗತ್ತಿನೆದುರು ಮುಕ್ತಿಯ ಗುಟ್ಟನ್ನು ರಟ್ಟು ಮಾಡಿಟ್ಟಿದೆ ಗೀತೆ. ಅದನ್ನು ಬಳಸಿಕೊಳ್ಳಬಲ್ಲ ಗಟ್ಟಿಗರಾರು ಎಂಬುದೀಗ ಪ್ರಶ್ನೆ !

[೩೬] ಶ್ರೀಮದ್ಭಗವದ್ಗೀತಾ ೮.೧೨,೧೩

ಯಾಂತ್ರಿಕವಾಗಿ ಜಪ ಮಾಡುವುದರಿಂದ ಹೆಚ್ಚೇನೂ ಲಾಭವಿಲ್ಲ. ದೇವರ ಮೇಲೆ ಒಲವು ಇರಬೇಕು. ಹೀಗಿದ್ದೂ, ಯಾಂತ್ರಿಕ ಜಪದಿಂದ ಕೆಲವು ಲಾಭಗಳಿವೆ– ಏಕೆಂದರೆ ಅದು ದೇವರ ನಾಮ ತಾನೆ?

*–ಸ್ವಾಮಿ ಶಿವಾನಂದ*

# ನಾಮ ಮಹಿಮೆ: ತತ್ತ್ವ ಮತ್ತು ಆಚರಣೆ

ಎಚ್.ಎಂ. ನಾಗರಾಜರಾವ್



ಭಾರತೀಯ ಆಧ್ಯಾತ್ಮಿಕ ಪರಂಪರೆಯಲ್ಲಿ ಭಗವಂತನ ನಾಮಕ್ಕೆ ವಿಶೇಷ ಮಹತ್ವ ನೀಡಲಾಗಿದೆ. ವಿವಿಧ ತತ್ತ್ವ, ದರ್ಶನ, ಪಂಥಗಳಲ್ಲಿ ನಾಮಮಹಿಮೆಯನ್ನು ಕೊಂಡಾಡಲಾಗಿದೆ. ಇದರ ಹಿಂದಿರುವ ತತ್ತ್ವ ಮತ್ತು ಆಚರಣೆಯ ವೈಶಿಷ್ಟ್ಯಗಳನ್ನು ಕುರಿತು ವಿದ್ವತ್ಪೂರ್ಣವಾಗಿ ಬರೆದಿರುವ ಲೇಖಕರು ಕನ್ನಡದ ಹಿರಿಯ ವಿದ್ವಾಂಸರು ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಶಾಸನ ತಜ್ಞರಾಗಿದ್ದು ನಿವೃತ್ತರಾಗಿದ್ದಾರೆ.

**ಭಾ**ಗವತ ತಿಳಿಸುವ ನವವಿಧ ಭಕ್ತಿಗಳಲ್ಲಿ ಸ್ಮರಣೆ ಒಂದು[೧]. ಕಲಿಯುಗದಲ್ಲಿ ಎಲ್ಲಕ್ಕಿಂತ ನಾಮಸ್ಮರಣೆಯನ್ನು ಸುಲಭ ಮತ್ತು ಮೋಕ್ಷದಾಯಕ ಎಂದು ಭಾವಿಸಲಾಗುತ್ತದೆ. **'ಅಮಂತ್ರಮಕ್ಷರಂ ನಾಸ್ತಿ'** – ಮಂತ್ರವಲ್ಲದ ಅಕ್ಷರವೇ ಇಲ್ಲವೆಂಬುದು ನಮ್ಮ ಹಿರಿಯರ ದೃಢನಂಬಿಕೆಯಾಗಿತ್ತು. ಎಲ್ಲ ಅಕ್ಷರಗಳೂ ದೈವಸ್ವರೂಪವೇ.

ನಾಮ ಎನ್ನುವುದು ಕೇವಲ ಪದವಲ್ಲ. ಅದು ಸೂಸುವುದು ಬಾಗುವಿಕೆಯ ಭಾವವನ್ನು **(ಣಮು ಪ್ರಹ್ವತ್ವೇ ಶಬ್ದೇ ಚ)**. ಬಾಗುವುದು **(ನಮತಿ)** ಹಾಗೂ ಭಗವಂತನೆಡೆಗೆ ನಮ್ಮನ್ನು ಬಾಗಿಸಿ **(ನಾಮಯತಿ)** ಕರೆದೊಯ್ಯುವುದು ನಾಮಜಪದ ಹಿರಿಮೆ. ಇದಕ್ಕೊಂದು ಕಥೆ ಇದೆ: ಲಂಕೆಗೆ ಸೇತುವೆ ನಿರ್ಮಾಣದ ಸಮಯದಲ್ಲಿ ಕಪಿಗಳೆಲ್ಲ 'ರಾಮ' ಎಂದು ಬರೆದಿದ್ದ ಕಲ್ಲುಬಂಡೆಗಳನ್ನು ಹೊತ್ತು ಸಮುದ್ರಕ್ಕೆ ಎಸೆದಾಗ ಅವು ತೇಲುತ್ತಿದ್ದವಂತೆ! ಶ್ರೀರಾಮಚಂದ್ರನಿಗೆ ಆಶ್ಚರ್ಯವಾಯಿತು. ತಾನೂ ಪುಟ್ಟ ಕಲ್ಲುಗುಂಡನ್ನು ಆಯ್ದು 'ರಾಮ' ಎಂದು ಬರೆದು ಸಮುದ್ರಕ್ಕೆ ಹಾಕಿದಾಗ ಅದು ಮುಳುಗಿಹೋಯಿತಂತೆ! ಹನುಮಂತನನ್ನು ರಾಮ ಕಾರಣ ಕೇಳಿದಾಗ ಆ ರಾಮದಾಸ ಹೇಳಿದ್ದು: ''ನಿನ್ನ ನಾಮ ಬರೆದಾಗ ಕಲ್ಲುಗುಂಡಿಗೂ ಧನ್ಯತೆಯ ಭಾವ ಮೂಡಿ, ಸೇತುವೆಯ ನಿರ್ಮಾಣದಲ್ಲಿ ತಾನೂ ಭಾಗಿ ಎಂದು ಸಂತೋಷದಿಂದ ತೇಲುತ್ತಿತ್ತು. ಆದರೆ ನೀನೇ ಕಲ್ಲುಗುಂಡನ್ನು ಸಮುದ್ರಕ್ಕೆ ಹಾಕಿದಾಗ ಅದು 'ಅಯ್ಯೋ ಶ್ರೀರಾಮಚಂದ್ರ ನನ್ನ ಕೈಬಿಟ್ಟನಲ್ಲ' ಎಂಬ ದುಃಖದ ಭಾರದಿಂದ ಮುಳುಗಿಹೋಯಿತು!'' ಈ ಕಥೆ ನಾಮಮಹಿಮೆಯನ್ನು ಸಶಕ್ತವಾಗಿ ಪ್ರತಿನಿಧಿಸುತ್ತದೆ.

ಭಗವನ್ನಾಮವನ್ನು ಪುನರುಚ್ಚರಿಸುವುದು ಜಪ. ಅಂತರಂಗದಲ್ಲಿ ಅಥವಾ ಬಹಿರಂಗದಲ್ಲಿ ನಡೆಯುವ ಜಪಕ್ರಿಯೆ ಯಾಂತ್ರಿಕವಾಗಬಾರದು. ಜಪದಲ್ಲಿ ಶ್ರದ್ಧಾನ್ವಿತ ಭಕ್ತಿ ಸ್ವಾಭಾವಿಕವಾಗಿ ಬೆರೆತಿರಬೇಕು. ಉಸಿರಾಟದಂತೆ ನಾಮಜಪ ಸಹಜವಾಗಿ ನಡೆಯುತ್ತಿರಬೇಕು. ಎಂದರೆ ಭಗವಂತನ ಸ್ಮರಣೆಯು ಸತತ ಧಾರೆಯಂತೆ ದೇಹಮನಗಳಲ್ಲಿ ಪ್ರವಹಿಸುತ್ತಿರಬೇಕು; ಹೃದಯ ಬಡಿತದಂತೆ ಮಿಡಿಯುತ್ತಿರಬೇಕು. ಗೋಂದಾವಲೀ ಮಹಾರಾಜರ ಕಾಯದ ಕಣಕಣವೂ ರಾಮನಾಮವನ್ನು ಸ್ಪಂದಿಸುತ್ತಿತ್ತಂತೆ. ವಾಗ್ಗೇಯಕಾರ ತ್ಯಾಗರಾಜರು, ಸಮರ್ಥ ರಾಮದಾಸರೂ ಹಾಗಿದ್ದರು. ಮೀರಾಳ ಹೃದಯದಲ್ಲಿ ಶ್ರೀಕೃಷ್ಣ ನೆಲೆಸಿದುದೂ ಅಂತೆಯೇ.

ಕೆಲವೊಮ್ಮೆ ನಾಮಜಪದ ಹಿಂದೆ ಒಂದು ಉದ್ದೇಶವಿದ್ದಿರಬಹುದು. ಅದು ಭೌತಿಕ ಸಂಪತ್ತಾಗಿರಬಹುದು, ಆಸೆಯ ಈಡೇರಿಕೆಯ ನಿರೀಕ್ಷೆಯಾಗಿದ್ದಿರಬಹುದು ಅಥವಾ ಮಾನಸಿಕ ಶಾಂತಿಯ ಕೋರಿಕೆ ಆಗಿದ್ದಿರಬಹುದು. ನಾಮಜಪ ದೈವಸಾಕ್ಷಾತ್ಕಾರದ ಅನುಸಂಧಾನದ ಮಾರ್ಗ ಕೂಡ. ಆದರೆ ಮೊದಲ ಹಂತದಲ್ಲಿ ನಾಮಜಪ ಮಾಡಬೇಕಾದುದು ಮನದ ನಿರ್ಮಲೀಕರಣಕ್ಕಾಗಿ. ಧ್ಯಾನದ ಪೂರ್ವರಂಗ ನಾಮಜಪ. ಹೆಚ್ಚಿನ ಸಾಧನೆಗೆ ಅದೊಂದು ಪ್ರವೇಶ ಪರೀಕ್ಷೆ.

[೧] ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥

ನಾಮಜಪ ಮಾಡಲು ವಿಧಿಪೂರ್ವಕವಾಗಿ ದೀಕ್ಷೆ ಪಡೆಯುವ ಕ್ರಮ ಕೂಡ ಉಂಟು. ದಿವ್ಯಭಾವವನ್ನು ನೀಡಿ ವೈಷಮ್ಯಗಳನ್ನು ಕ್ಷೀಣಿಸುವಂತೆ ಮಾಡುವುದು ದೀಕ್ಷೆ.[೧] ವ್ರತದಂತೆ ಮಾಡುವ ನಾಮ ಸ್ಮರಣೆ ಜಪಯಜ್ಞವೆನ್ನಿಸಿಕೊಳ್ಳುತ್ತದೆ. ಯಜ್ಞವೆಂದರೆ ಹೋಮಹವನ ಗಳೇ ಆಗಬೇಕಿಲ್ಲ, ಹವ್ಯವಾಹನನ ಪ್ರತಿಷ್ಠಾಪನೆಯಾಗಬೇಕಿಲ್ಲ, ಋತ್ವಿಜರ ಅನಿವಾರ್ಯತೆ ಅಲ್ಲಿಲ್ಲ. ವೇದಮಂತ್ರಗಳ ಪಠಣ ಅವಶ್ಯ ವಲ್ಲ. ಸಾತ್ತ್ವಿಕಭಾವದಿಂದಮಾಡುವಕೆಲಸವೆಲ್ಲವೂದೈವಾರಾಧನೆಯೇ.

ನಾಮಜಪಕ್ಕೂ ಭಕ್ತಿಗೂ ಅನ್ಯೋನ್ಯ ಸಂಬಂಧವಿದೆ. ಭಕ್ತಿ[೨] ಪರಮಪ್ರೀತಿಯ ಅಭಿವ್ಯಕ್ತಿ, ಪರೀಕ್ಷಿಸುವ ಸಾಧನವಲ್ಲ. ಅಲ್ಲಿ ನಂಬಿಕೆಗೆ ಪ್ರಾಶಸ್ತ್ಯ. ನಂಬಿಕೆ ಎಂದೂ ಪ್ರದರ್ಶನದ ವಸ್ತುವಲ್ಲ. ಲೋಕ ಬದಲಾಗುತ್ತಿರುವುದು, ಜೀವ ಕ್ಷಣಿಕವಾದದು, ಜೀವನ ನಶ್ವರವಾದದು. ಲೋಕವ್ಯವಹಾರದಲ್ಲಿನ ಲಾಭ ನಷ್ಟಗಳ ಲೆಕ್ಕಾಚಾರ ದಲ್ಲಿಯೇ ನಿಮಗ್ನವಾಗಿ ಬಹಿರ್ಮುಖರಾಗಿರುವವರಿಗೆ ನಾಮಜಪ ನವಚೈತನ್ಯ ತಂದುಕೊಡಬಲ್ಲ ಶಕ್ತಿಯಾಗುತ್ತದೆ. ಅದಕ್ಕೆ ಧನ ಬೇಕಿಲ್ಲ, ಬೇಕಾದದು ಮನ. ಬ್ರಹ್ಮಚೈತನ್ಯರು ಹೇಳುತ್ತಾರೆ: ''ನಾಮದ ಆನಂದದ ಅನುಭವ ಬಂದಿತೆಂದರೆ ಮನುಷ್ಯನು ತನ್ನನ್ನು ತಾನು ಮರೆಯುತ್ತಾನೆ ಹಾಗೂ ಜಗತ್ತನ್ನೂ ಮರೆಯುತ್ತಾನೆ. ಕೆಲವು ಸಮಯ ಆ ಅವಸ್ಥೆಯಲ್ಲಿರುತ್ತಾನೆ. ಅವನು ಅದರಿಂದ ಕೆಳಗೆ ಬಂದನೆಂದರೆ ಅವನ ದೃಷ್ಟಿಯು ಬೇರೆಯಾಗಿರುವಂತೆ ಕಾಣುತ್ತದೆ. ಆದರೆ ನಾಮವು ರಕ್ತಗತವಾಯಿತೆಂದರೆ ಅವನು ಸಾಮಾನ್ಯ ಜನರಂತೆ ಕಾಣುತ್ತಾನೆ. ನಾಮದ ಮೋಜು ಹೇಗೆ ಇರುತ್ತದೆ ಎಂದರೆ ನಾಮದಲ್ಲಿ ಮನಸ್ಸನ್ನು ತಿರುವುಮುರುವು ಮಾಡಲಾಗುತ್ತದೆ.'' ('ಮ-ನಾ' ವೆ 'ನಾ-ಮ' ಆಗಿರುತ್ತದೆ). [೩]

ತಾನೆಂಬುದಿಲ್ಲ, ತನ್ನದೆಂಬುದಿಲ್ಲ, ಸರ್ವಸ್ವವೂ ಭಗವಂತನದು ಎಂಬ ಭಾವದಿಂದ ಆತನನ್ನು ಸ್ಮರಿಸುತ್ತ ಅನುಸಂಧಾನ ಮಾಡುವುದು ನಾಮಜಪದ ಗುರಿ ಮತ್ತು ದಾರಿ ಕೂಡ. ಭಕ್ತಿಭರಿತ ಮನೋಸಂಕಲ್ಪವೇ ನಾಮಜಪಕ್ಕೆ ತಳಹದಿ. ಅದು ಸಾತ್ತ್ವಿಕ ತಪಸ್ಸು ; ಮಾನಸಪೂಜೆ. ಅಂತರಂಗದ ಗುಡಿಯೊಳಗೆ ಪ್ರತಿಷ್ಠಾಪಿತವಾದ ಸಚ್ಚಿದಾನಂದ ಸ್ವರೂಪವನ್ನು ಆರಾಧಿಸುವ ರೀತಿ. ಅದರಿಂದ ಆತ್ಮಸ್ಥೈರ್ಯ ವೃದ್ಧಿಸುತ್ತದೆ. ಭಗವದಂಶ ತನ್ನಲ್ಲಿಯೇ ಇರುವ ಅರಿವನ್ನು ಹೊಂದಿದ ಮೇಲೆ ಮನುಷ್ಯನ ಬದುಕಿನ ದಾರಿ ಬದಲಾಗುತ್ತದೆ. ಅಲ್ಲಿಕ್ಷುಲ್ಲಕತೆಗೆ ಆಸ್ಪದವಿಲ್ಲ, ಕ್ಷುದ್ರತೆಗೆ ಅವಕಾಶವಿಲ್ಲ ಮತ್ತು ರಾಗದ್ವೇಷಗಳಿಗೆ ಸ್ಥಾನಮಾನವಿಲ್ಲ. ಸೋಹಂ ಎಂಬ ಪ್ರಜ್ಞೆ ಮತ್ತು ದಾಸೋಹಂ ಎಂಬ ಭಕ್ತಿಗಳೆರಡೂ ಅಂತರ್ಗತವಾಗಿರುತ್ತವೆ. ಲೋಕಪರಿವರ್ತನೆಗೆ ಮೊದಲು ಆಗಬೇಕಾದುದು ಸ್ವಪರಿವರ್ತನೆ.

ಜಪಯಜ್ಞ ವಿಶಿಷ್ಟವಾದುದು. ಯಜ್ಞಾನಾಂ ಜಪಯಜ್ಞೋಽಸ್ಮಿ ಎಂಬುದು ಗೀತಾಚಾರ್ಯನ ಮಾತು. ಜಪ ಅಂತರಂಗದಲ್ಲಿ ನಿರಂತರವಾಗಿ ನಡೆವ ಕ್ರಿಯೆ. ಹೊರಗಿನ ಅವಲಂಬನೆ ಇರದು. ಎಲ್ಲ ಧರ್ಮಗಳಲ್ಲಿಯೂ ಜಪವೇ ಪರಮಧರ್ಮವೆಂದು ಹೇಳಲಾಗು ತ್ತದೆ. ಪ್ರಾಣಿ ಹಿಂಸೆ ಇರದ ಯಜ್ಞ ಜಪ.[೪]

ಜಪಯಜ್ಞದಲ್ಲಿ ಮೂರು ವಿಧಾನಗಳಿವೆ ಎಂದು ಹೇಳಲಾಗಿದೆ. ಅಕ್ಷರಗಳನ್ನು ಸ್ಪಷ್ಟವಾಗಿ ಮತ್ತು ಗಟ್ಟಿಯಾಗಿ ಉದಾತ್ತ, ಅನುದಾತ್ತ ಹಾಗೂ ಸ್ವರಿತ ಸಹಿತಾಗಿ ಹೇಳುವ ಮಂತ್ರ, ಜಪಯಜ್ಞ.[೫] ಇದು ಒಂದನೆಯ **'ವಾಚಿಕ'** ವಿಧಾನ.

ತುಟಿಚಲನೆ ಇದ್ದು ಮೆಲುವಾಗಿ ಹೇಳಿಕೊಳ್ಳುವುದು ಎರಡನೆಯ ವಿಧಾನ. ಈ ಜಪಯಜ್ಞಕ್ಕೆ **'ಉಪಾಂಶು'** ಎಂದು ಹೆಸರು.[೬]

ಮನಸ್ಸಿನಲ್ಲಿಯೇ ಭಗವನ್ನಾಮವನ್ನು ಹೇಳಿಕೊಳ್ಳುತ್ತ ಮಂತ್ರಾರ್ಥ ಚಿಂತನೆ ಮಾಡುವುದು ಮೂರನೆಯ ವಿಧಾನ. ಇದಕ್ಕೆ **'ಮಾನಸಿಕ'** ಜಪಯಜ್ಞ ಎಂದು ಕರೆಯಲಾಗುತ್ತದೆ.[೭]

ಈ ಮೂರು ಬಗೆಯ ಜಪಯಜ್ಞಗಳೂ ಅನುಸರಣೀಯವೇ. ಚಿತ್ತವೃತ್ತಿಯನ್ನು ನಿರೋಧಿಸಲು ಆವಶ್ಯಕವೇ. ಇವು ಮೂರು ಧ್ಯಾನ ಮತ್ತು ಧಾರಣಕ್ಕೆ ಬೇಕಾಗುವಂಥವು. ಆದರೆ ವಾಚಿಕ ಮತ್ತು ಉಪಾಂಶು ಜಪಯಜ್ಞಗಳಿಗೆ ಕ್ರಮಬದ್ಧ ಶಿಕ್ಷಣ ಬೇಕು. ಮಂತ್ರಗಳು ಕಂಠಸ್ಥವಾಗಿರಬೇಕು. ಮಂತ್ರಾರ್ಥ ಹೃದ್ಗತವಾಗಿರಬೇಕು. ಮಾನಸಿಕ ಜಪಯಜ್ಞವೇ ಸರ್ವಶ್ರೇಷ್ಠ ಎಂದು ಭಾವಿಸಲಾಗುತ್ತದೆ. ಏಕೆಂದರೆ ಜಪ ಅವ್ಯಕ್ತ ಶಬ್ದ **(ಜಪ ಅವ್ಯಕ್ತಶಬ್ದೇ)**; ಅದನ್ನು ಮಾನಸಿಕವಾಗಿಯೇ ಉಚ್ಚರಿಸಬೇಕಂತೆ. ವಿಧಿಪೂರ್ವಕವಾದ ಬಾಹ್ಯಯಜ್ಞಕ್ಕಿಂತ ವಾಚಿಕ ಜಪಯಜ್ಞವು ಹತ್ತು ಪಟ್ಟು ಶ್ರೇಷ್ಠ ; ಉಪಾಂಶು ಜಪಯಜ್ಞ ನೂರುಪಟ್ಟು ಶ್ರೇಷ್ಠ. ಆದರೆ ಮಾನಸಿಕ ಜಪಯಜ್ಞವು ಸಾವಿರಪಟ್ಟು ಹೆಚ್ಚು ಗುಣವನ್ನು ಹೊಂದಿದೆ.[೮] ಇದು ಮನೋಪಾರಾಯಣ.

ಭಗವದನುಗ್ರಹಕ್ಕೆ ಇರುವ ದಶಮಾರ್ಗಗಳೆಂದರೆ ಮೌನ, ವ್ರತ, ಶ್ರುತ, ತಪ, ಅಧ್ಯಯನ, ಸ್ವಧರ್ಮ, ವ್ಯಾಖ್ಯಾ, ರಹ, ಜಪ, ಸಮಾಧಿ. ಎಲ್ಲವೂ ಚಿತ್ತಚಾಂಚಲ್ಯವನ್ನು ನಿಲ್ಲಿಸಲು ಅವಶ್ಯವಾದ ಪರಿಕರಗಳೇ. ಇವುಗಳಲ್ಲಿ ಜಪ ಸಾಮಾನ್ಯ ಸಾಧಕನಿಗೆ ಹೆಚ್ಚು ಸರಳ ಹಾಗೂ ಸುಲಭ. ಏಕಾಕ್ಷರದಿಂದ ಅನಂತಾಕ್ಷರಗಳವರೆಗೆ ಭಗವನ್ನಾಮ ವನ್ನು ಜಪ ಮಾಡಬಹುದು. ಅಷ್ಟೋತ್ತರಶತನಾಮ, ಸಹಸ್ರನಾಮ ಗಳು ನಾಮಜಪದ ವಿಸ್ತೃತರೂಪಗಳು. ಭಾರತೀಯ ಸಂಸ್ಕೃತಿಯಲ್ಲಿ ಅತ್ಯಂತ ಮಹತ್ವದ ಮೂರು ಪಾರಿಭಾಷಿಕ ಶಬ್ದಗಳಿವೆ: ಶ್ರವಣ, ಮನನ ಹಾಗೂ ನಿದಿಧ್ಯಾಸನ. ನಾವಾಡುವ ಶಬ್ದಗಳಿಗೆ ಯುಕ್ತ ಅರ್ಥಶಕ್ತಿ ಪ್ರಾಪ್ತವಾಗುವುದು ಈ ಮೂರರಿಂದಲೇ.

---

[೧] **ದದಾತಿ ದಿವ್ಯಭಾವಂ ಕ್ಷೀಣುಯಾತ್ ದುರಿತಾಣಿ ಇತಿ ದೀಕ್ಷಾ**

[೨] **ಪ್ರೇಮಪೂರ್ವಕಮನುಧ್ಯಾನಂ ಭಕ್ತಿರಿತ್ಯಭಿಧೀಯತೇ**

[೩] ಶ್ರೀ ಬ್ರಹ್ಮಚೈತನ್ಯ ಗೋಂದಾವಲೇಕರ ಮಹಾರಾಜರ ಚರಿತ್ರೆ ಹಾಗೂ ವಾಙ್ಮಯ; ಚೈತನ್ಯ ಪ್ರಕಾಶನ, ಹೆಬ್ಬಳ್ಳಿ, ೨೦೦೦; ಪು ೩೫೯

[೪] ಜಪಸ್ತು ಸರ್ವಧರ್ಮೇಭ್ಯಃ ಪರಮೋ ಧರ್ಮಉಚ್ಯತೇ ।
ಅಹಿಂಸಯಾ ಚ ಭೂತಾನಾಂ ಜಪಯಜ್ಞಃ ಪ್ರವರ್ತತೇ ॥

[೫] ಯದುಚ್ಚನೀಚೋಚ್ಚರಿತೈಃ ಶಬ್ದೈಃ ಸ್ಪಷ್ಟಪದಾಕ್ಷರೈಃ ।
ಮಂತ್ರಮುಚ್ಚಾರಯನ್ ವಾಚಾ ಜಪಯಜ್ಞಃ ಸವಾಚಿಕಃ ॥

[೬] ಶನೈರುಚ್ಚಾರಯನ್ ಮಂತ್ರಂ ಕಿಂಚಿದೋಷ್ಠೌ ಪ್ರಚಾಲಯೇತ್ ।
ಕಿಂಚಿತ್ ಶ್ರವಣಯೋಗ್ಯಸ್ತು ಸ ಉಪಾಂಶು ಜಪಃ ಸ್ಮೃತಃ ॥

[೭] ಧಿಯಂ ಪದಾಕ್ಷರ ಶ್ರೇಣ್ಯಾ ಅವರ್ನಮಪದಾಕ್ಷರಮ್ ।
ಮಂತ್ರಾರ್ಥ ಚಿಂತನಯಾಂ ತು ತದುಕ್ತಂ ಮಾನಸಂಸ್ಮೃತಮ್ ॥

[೮] ವಿಧಿಯಜ್ಞಾತ್ ಜಪಯಜ್ಞೋ ವಿಶಿಷ್ಟೋ ದಶಭಿರ್ಗುಣೈಃ ।
ಉಪಾಂಶುಃ ಸ್ಯಾಚ್ಛತಗುಣಃ ಸಾಹಸ್ರೋ ಮಾನಸಃ ಸ್ಮೃತಃ ॥

ರೂಪವಿಲ್ಲದ ಭಗವಂತನಿಗೆ ರೂಪ ಕಲ್ಪಿಸಿಕೊಳ್ಳುವುದು ನಮ್ಮ ಧ್ಯಾನಾನುಕೂಲಕ್ಕಾಗಿ.[೧೦] ಹಾಗೆಯೆ ಹೆಸರಿಲ್ಲದವನಿಗೆ ಹೆಸರು ಕಲ್ಪಿಸಿಕೊಳ್ಳುವುದೂ ನಾಮಜಪಕ್ಕಾಗಿ. ವಾಸನಾಕ್ಷಯವೇ ನಾಮಜಪದ ಉದ್ದೇಶ. ''ಭಗವಂತನ ಸ್ಮರಣೆಯಲ್ಲಿ ಅಭಿಮಾನದ ಮರಣವಿರುತ್ತದೆ''; ''ಕತ್ತಲೆಯ ರಾತ್ರಿಯಲ್ಲಿ ಕೋಲಿನ ಆಧಾರವಿರುವಂತೆ ಪ್ರಪಂಚದಲ್ಲಿ ನಾಮದ ಆಧಾರವಿರುತ್ತದೆ, ಹಾಗೆಯೇ ವೇದಾಂತಿಗಳು ಯಾವುದನ್ನು ಬ್ರಹ್ಮವೆಂದು ಅನ್ನುತ್ತಾರೋ ಅದನ್ನೇ ಭಕ್ತರು ನಾಮವೆಂದು ಅನ್ನುತ್ತಾರೆ.''– ಇವು ಬ್ರಹ್ಮಚೈತನ್ಯ ಮಹಾರಾಜರ ವಾಣಿ.

ನಾಮ ಮಹಿಮೆಗೂ ಸಿರಿತನ ಬಡತನಗಳಿಗೂ ಸಂಬಂಧವೇ ಇಲ್ಲ. ಜಿಪುಣ ಶ್ರೀನಿವಾಸನಾಯಕ ಪುರಂದರದಾಸರಾದುದು ಪತ್ನಿಯ ದೈವಭಕ್ತಿಯಿಂದ. ಬಾಯಲ್ಲಿ ಬೆಣಚುಕಲ್ಲನ್ನು ಇರಿಸಿಕೊಡು ಅದು ಕರಗುವವರೆಗೂ '**ನಾರೇಯಣ**' ಎಂದೇ ಹೇಳುತ್ತಿದ್ದ ಕೈವಾರದ ತಾತಯ್ಯನವರಿಗೆ ಭಗವಂತನ ದರ್ಶನವಾದುದು ನಾಮಜಪದಿಂದ. ಬ್ರಹ್ಮಚೈತನ್ಯರ ಪಾಲಿಗೆ '**ಶ್ರೀರಾಮ ಜಯ ರಾಮ ಜಯ ಜಯ ರಾಮ**' ಎಂಬುದು ಹದಿಮೂರು ಅಕ್ಷರದ ಮಹಾಮಂತ್ರವಾಯಿತು. ದಾಸರಿಗೆ ರಾಮನೋ ವಿಠಲನೋ ಮಾರ್ಗದರ್ಶಕರಾದರು; ಭಗವಂತನ ಸ್ಮರಣೆ ಕೀರ್ತನೆಗಳೇ ಅವರ ಪಥವಾಯಿತು. ಉತ್ತರಭಾರತದಲ್ಲಿ ನಮಸ್ಕಾರ ಎನ್ನುವುದಕ್ಕೆ ಬದಲಾಗಿ **ರಾಮ್ ರಾಮ್** ಎನ್ನುವ ರೂಢಿ ಇರುವುದು ಗಮನಾರ್ಹ. ಅಂತ್ಯಸಂಸ್ಕಾರದಲ್ಲಿ '**ರಾಮ ನಾಮಹೀ ಸತ್ಯ ಹೈ**' ಎಂದು ಮತ್ತೆ ಮತ್ತೆ ಹೇಳುವ ಪದ್ಧತಿ ಚಾಲ್ತಿಯಲ್ಲಿದೆ. ರಾಮ ಗಾಂಧೀಜಿಯ ಮಂತ್ರವೂ ಹೌದು. ''**ಕಹೋ ರಾಮ್ ಕರೋ ಕಾಮ್**'' ಎಂದು ಹೇಳುವ ಅವರು ಭಕ್ತಿಯೋಗವನ್ನೂ ಕಾಯಕಶ್ರದ್ಧೆಯ ಕರ್ಮಯೋಗವನ್ನೂ ಸಮನ್ವಯಗೊಳಿಸುತ್ತಾರೆ. ಬೌದ್ಧರಲ್ಲಿ ತಿರುಗಿಸುವ ಜಪಯಂತ್ರಗಳಿವೆ (ಮಾನೆ).

ನಾಮಜಪವನ್ನು ವ್ಯಷ್ಟಿಯಾಗಿ ಹಾಗೂ ಸಮಷ್ಟಿಯಾಗಿ ಮಾಡಬಹುದು. ನಾಮಜಪ ಧ್ಯಾನದ ಪೂರ್ವಸಿದ್ಧತೆ. ಧ್ಯಾನಕ್ಕೆ ಸಮಾನವಾದ ತೀರ್ಥ ಇಲ್ಲ , ತಪವಿಲ್ಲ ಹಾಗೂ ಯಜ್ಞವಿಲ್ಲ. ಅದಕ್ಕಾಗಿ ಧ್ಯಾನವನ್ನು ಅವಶ್ಯವಾಗಿ ಮಾಡಬೇಕು.[೧೧] ಶ್ರೀ ಶಂಕರರ ಈ ಸ್ತೋತ್ರ ಸರ್ವಕಾಲಕ್ಕೂ ಆದರ್ಶವಾಗಿದೆ:

**ಆತ್ಮಾ ತ್ವಂ ಗಿರಿಜಾಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ**
**ಪೂಜಾ ತೇ ವಿಷಯೋಪಭೋಗ ರಚನಾ ನಿದ್ರಾ ಸಮಾಧಿಸ್ಥಿತಿಃ ।।**
**ಸಂಚಾರಃ ಪದಯೋಃ ಪ್ರದಕ್ಷಿಣ ವಿಧಿಃ ಸ್ತೋತ್ರಾಣಿ ಸರ್ವಾಗಿರೋ**
**ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಮ್ ।।**

'ಎಲೈ ಶಂಭೋ, ನೀನು ನನ್ನ ಆತ್ಮ, ಪಾರ್ವತಿಯೇ ಬುದ್ಧಿ, ಪಂಚಪ್ರಾಣಗಳೇ ಸಹಚರರು, ಶರೀರವೇ ನಿನ್ನ ಮನೆ. ವಿಷಯಗಳ ಉಪಭೋಗ ನಿನ್ನ ಪೂಜೆ. ನಿದ್ರೆಯೇ ಸಮಾಧಿ. ನಡೆಯುವುದೆಲ್ಲ ನಿನಗೆ ಹಾಕುವ ಪ್ರದಕ್ಷಿಣೆ. ಆಡುವ ನುಡಿಗಳೆಲ್ಲ ನಿನ್ನ ಸ್ತೋತ್ರ. ನಾನು ಮಾಡುವ ಎಲ್ಲ ಕಾರ್ಯಗಳೂ ನಿನ್ನ ಅರಾಧನೆಯೇ ಅಗಿದೆ.'

ಇದೇ ನಮಗೆ ಆಗಬೇಕಾದ ಸಾಕ್ಷಾತ್ಕಾರ. 

[೧೦] ರೂಪಂ ರೂಪವಿವರ್ಜಿತಸ್ಯ ಭವತೋ ಧ್ಯಾನೇನ ಯತ್ಕಲ್ಪಿತಮ್ ।

[೧೧] ನಾಸ್ತಿ ಧ್ಯಾನ ಸಮಂ ತೀರ್ಥಂ ನಾಸ್ತಿ ಧ್ಯಾನ ಸಮಂ ತಪಃ ।
ನಾಸ್ತಿ ಧ್ಯಾನ ಸಮೋಯಜ್ಞಸ್ತಸ್ಮಾತ್ ಧ್ಯಾನಂ ಸಮಾಚರೇತ್ ।

HDFC BANK

with best compliments from

Housing Development Finance Corp. Ltd.,

Mistry Bhuvan, Ground Floor,
Backbay Reclamtion
Churchgate, MUMBAI - 400020

# ಸಹಸ್ರನಾಮಗಳು ಮತ್ತು ಆಧ್ಯಾತ್ಮಿಕತೆ

ಟಿ.ವಿ. ಶ್ರೀನಾಥಶಾಸ್ತ್ರೀ



**ಭಾ**ರತ ದೇಶದಲ್ಲಿರುವ ಜನರು ಅನೇಕ ವಿಧವಾದ ಆಚಾರ ವಿಚಾರಗಳನ್ನು ಮತ್ತು ಸಂಪ್ರದಾಯಗಳನ್ನು ಆಚರಿಸುತ್ತಿರುತ್ತಾರೆ. ಬಹುಮುಖ್ಯವಾಗಿ ಹಿಂದೂ ಧರ್ಮದ ವಿವಿಧ ಜಾತಿಮತಗಳಲ್ಲಿರುವ ಸಮಷ್ಟಿ ಪ್ರಜ್ಞೆ, ಭ್ರಾತೃತ್ವ ಭಾವನೆ, ಸಹೃದಯತೆ, ಉತ್ತಮ ಜೀವನದ ಅಂಶಗಳು ಮುಂತಾದವನ್ನು ಎಲ್ಲರೂ ಮನದಟ್ಟು ಮಾಡಿಕೊಳ್ಳಬೇಕು. ಜೀವನದ ನಿಜವಾದ ಉದ್ದೇಶವೆಂದರೆ ಒಳ್ಳೆಯ ವಿಚಾರಗಳತ್ತಲೇ ಮನಸ್ಸನ್ನು ಇಟ್ಟುಕೊಂಡಿರುವುದು ಮತ್ತು ಸಮಾಜದಲ್ಲಿನ ಎಲ್ಲರೊಡನೆ ಸಾಮೂಹಿಕ ಜೀವನ ನಡೆಸಿಕೊಂಡಿರಲು ಅಗತ್ಯವಾದ ಕ್ರಿಯಾವಿಧಾನಗಳನ್ನು ಅನುಸರಿಸುವುದು. ಹೊರನೋಟಕ್ಕೆ ಬೇರೆ ಬೇರೆಯಾಗಿ ಕಂಡರೂ ಇವುಗಳ ಅಂತಿಮಗುರಿ ಮಾನವರನ್ನು ಆತ್ಮಜ್ಞಾನದ ಉನ್ನತಮಟ್ಟಕ್ಕೆ ಕೊಂಡೊಯ್ಯುವುದೇ ಆಗಿದೆ. ಜನತೆಯು ಇಂತಹ ಉತ್ತಮ ಪ್ರವೃತ್ತಿಗಳನ್ನು ಬೆಳೆಸಿಕೊಂಡು ಅವುಗಳನ್ನು ಅನುಸರಿಸಲು ಹಿಂದೂ ಯೋಗಿವರ್ಯರು, ಪಂಡಿತರು, ವಿದ್ಯಾಪಾರಂಗತರು ಮುಂತಾದ ಸದ್ವಿಚಾರ ಸಂಪನ್ನರ ಉನ್ನತ ಚಿಂತನೆಗಳ ಪರಿಣಾಮವಾಗಿ ಹೊರಹೊಮ್ಮಿರುವ ಮಂತ್ರ, ಉಪನಿಷತ್ತು, ಸ್ತೋತ್ರ, ರಾಮಾಯಣ, ಮಹಾಭಾರತ, ಭಾಗವತ, ಭಗವದ್ಗೀತೆ, ಪುರಾಣಗಳು, ಪುಣ್ಯಕಥೆಗಳು ಮುಂತಾದವು ಅನನ್ಯ ಸಾಧನಗಳಾಗಿವೆ.

**ದೈನಂದಿನ ಜೀವನದಲ್ಲಿ ಆಧ್ಯಾತ್ಮಿಕ ಸಾಧನೆ ಮಾಡಲು ಅತ್ಯಂತ ಸರಳ ಹಾಗೂ ಪರಿಣಾಮಕಾರಿ ವಿಧಾನವೇ ಭಗವಂತನ ಹಲವು ನಾಮಗಳ ಸಂಕೀರ್ತನೆ, ಪಾರಾಯಣ ಮಾಡುವುದು. ಅದಕ್ಕಾಗಿಯೇ ರಚಿತವಾದ ಸಹಸ್ರನಾಮಗಳ ಒಂದು ದೀರ್ಘ ಪರಂಪರೆ ನಮ್ಮಲ್ಲಿದೆ; ಅಂತೆಯೇ ಸಹಸ್ರನಾಮ ಪಾರಾಯಣದ ವಿಧಿಯೂ ರೂಢಿಯಲ್ಲಿದೆ. ಇವುಗಳನ್ನು ಕುರಿತು ವಿಶ್ಲೇಷಿಸಿ ಬರೆದಿರುವ ಲೇಖಕರು ಬೆಂಗಳೂರಿನ ಎನ್.ಎ.ಎಲ್. ಸಂಸ್ಥೆಯಲ್ಲಿ ವಿಜ್ಞಾನಿಗಳಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ನಾಡು, ನುಡಿ, ಸಂಸ್ಕೃತಿಗಳ ಬಗ್ಗೆ ವಿಶೇಷ ಕಾಳಜಿ ಹೊಂದಿರುವ ಅವರು ಕನ್ನಡದಲ್ಲಿ ಅನೇಕ ಲೇಖನಗಳನ್ನು ಬರೆದಿದ್ದಾರೆ.**

**ಸಹಸ್ರನಾಮ :** ಹಿಂದೂಗಳು ಪರಮಾತ್ಮನನ್ನು ವಿವಿಧ ರೂಪಗಳಲ್ಲಿ ಹಲವಾರು ದೇವರುಗಳನ್ನಾಗಿ ಕಂಡು ಅವುಗಳನ್ನು ಪೂಜಿಸುವುದು, ಅವುಗಳನ್ನು ಕುರಿತ ಸ್ತೋತ್ರಗಳನ್ನು ಭಜಿಸುವುದು ಮುಂತಾಗಿ ಅನೇಕ ಭಕ್ತಿಯುತ ಚಟುವಟಿಕೆಗಳನ್ನು ಅನುಸರಿಸುತ್ತಿರುತ್ತಾರೆ. ಕೆಲವರು ದಿನನಿತ್ಯವೂ ದೈವಾಚರಣೆಯ ಭೌತಿಕ ಕ್ರಿಯೆಗಳಲ್ಲಿ ತೊಡಗಲು ಸಾಧ್ಯವಾಗದೇ ಇರಬಹುದು. ಆದರೆ ವಿವಿಧ ದೇವರುಗಳನ್ನು ಕುರಿತ ಸಹಸ್ರನಾಮಸ್ತೋತ್ರಗಳನ್ನು ವೈಯಕ್ತಿಕವಾಗಿ, ಕೆಲವೊಮ್ಮೆ ಸಾಮೂಹಿಕವಾಗಿ ಹೇಳಿಕೊಳ್ಳುವ ಸಂಪ್ರದಾಯಗಳು ಬಹು ಉಪಯುಕ್ತವಾಗಿರುತ್ತವೆ. ಇವುಗಳಲ್ಲಿ ವಿಷ್ಣು, ಶಿವ, ಲಕ್ಷ್ಮೀನೃಸಿಂಹ, ಗಣಪತಿ, ರಾಮ, ಲಕ್ಷ್ಮೀ, ಲಲಿತಾ ಮುಂತಾದ ದೇವತೆಗಳನ್ನು ಸ್ತುತಿಸುವ ಸಹಸ್ರನಾಮಗಳು ಬಹುಜನಪ್ರಿಯವಾಗಿವೆ.

ಈ ಯಾವುದೇ ಸಹಸ್ರನಾಮದ ಪ್ರತಿಯೊಂದು ನಾಮವೂ ನಿರ್ದಿಷ್ಟ ರೂಪದ ಭಗವಂತನ ಮಹತ್ವದ ಗುಣಗಳನ್ನು ತೆರೆದು ತೋರುತ್ತದೆ. ಮನುಷ್ಯನ ಸುಖಮಯ, ಸದಾಚಾರ ಹಾಗೂ ಸುಸಂಸ್ಕೃತ ಜೀವನಕ್ಕೆ ಕಾಟ ಕೊಡುವ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಲ್ಲೇ ತೊಡಗಿಕೊಂಡಿರುವ ಜೀವಿಗಳನ್ನು ಪ್ರತಿನಿಧಿಸುವ ದೇವ, ಗಂಧರ್ವ, ಮಾನುಷ ರೂಪಗಳನ್ನು ಚಿತ್ರೀಕರಿಸಿ, ಅವುಗಳನ್ನು (ಅಂದರೆ ಇಂತಹ ನಿಜಜೀವನ ವಿರೋಧಿ ಗುಣಸ್ವಭಾವದ ಜೀವಿಗಳನ್ನು) ನಾಶಪಡಿಸುವ ಕ್ರಿಯೆಗಳನ್ನು ಪ್ರತಿನಿಧಿಸುವ ದೇವರ ನಾಮಗಳನ್ನು ಸೃಜಿಸಿ ಈ ಸ್ತೋತ್ರಗಳಲ್ಲಿ ದಾಖಲಿಸಲಾಗಿರುತ್ತದೆ. ಅಲ್ಲದೆ ಅಧರ್ಮದ ಕಳಂಕವಿಲ್ಲದ ಧರ್ಮದ ಜೀವನವನ್ನು ನಡೆಸುತ್ತಾ ಸದಾಚಾರ ಹಾಗೂ ಸುಸಂಸ್ಕೃತ ಬೆಳವಣಿಗೆಗೆ ಅಗತ್ಯವಾದ ಮನಃಶುದ್ಧಿಕರವಾದ ಮಾರ್ಗದರ್ಶಕ ಕ್ರಿಯೆಗಳನ್ನು ತೋರುವ ಭಗವಂತನ ಮಹೋನ್ನತ ರೂಪಗಳನ್ನೂ ಈ ನಾಮಗಳು ನಮ್ಮೆದುರಿಗೆ ತೆರೆದಿಡುತ್ತವೆ. ಇವುಗಳೊಡನೆ ಭಗವಂತನ ಮಹಿಮೆಗಳು, ಗುಣಗಳು ಮುಂತಾದವುಗಳನ್ನು ಪ್ರತಿಪಾದಿಸುವ ಪದಗಳು, ಪದಗುಚ್ಛಗಳು

ಈ ನಾಮಗಳೊಡನೆ ಸಂಕಲಿತಗೊಂಡಿರುತ್ತವೆ. ಚಿಂತಕರು ಹೀಗೆ ಸೃಜಿಸಿರುವ ದೇವರ ಇಂತಹ ಅನೇಕ ವೈವಿಧ್ಯಮಯ ನಾಮರೂಪಗಳಲ್ಲಿ ನಿರತಿಶಯ ಶಕ್ತಿ, ಅಪಾರ ಮಹಿಮೆಗಳನ್ನು ಕಾಣಬಹುದು. ಇವುಗಳಲ್ಲಿ ಶೃಂಗಾರ, ರೌದ್ರ, ವೀರ, ಕರುಣ ಮುಂತಾದ ರಸಗಳಿವೆ. ಸಹಸ್ರನಾಮಗಳಲ್ಲಿನ ನಾಮಗಳು, ದೇವರುಗಳ ಚಟುವಟಿಕೆಗಳು ಮುಂತಾದವುಗಳನ್ನು ಪ್ರತಿನಿಧಿಸುವ ಪದಗಳು ಹಾಗೂ ಪದಗುಚ್ಛಗಳು ಪ್ರಾಸಬದ್ಧವಾಗಿದ್ದು ಭಾವ, ಭಕ್ತಿಗಳಿಂದ ಕೂಡಿವೆ. ಮಾನವನ ಲೌಕಿಕ ಜೀವನದಲ್ಲಿ ಸಹಜವಾಗಿಯೇ ಬೆಳೆದುಬರಬಹುದಾದ ದುಷ್ಟ ಕಾಮನೆಗಳನ್ನು ಅವು ಎಷ್ಟೇ ಅಲ್ಪ ಅಥವಾ ತಾತ್ಕಾಲಿಕವಾಗಿದ್ದರೂ ಅವನ್ನು ಮನಸ್ಸಿನಿಂದ ದೂರಗೊಳಿಸುತ್ತಾ ಇರುವುದಕ್ಕೆ ಅಗತ್ಯವಾದ ಮಾನಸಿಕ ಸಮತೋಲನ, ಧನಾತ್ಮಕ ಚಿಂತನೆಗಳು ಮುಂತಾದವುಗಳನ್ನು ಈ ಸಹಸ್ರನಾಮ ಸ್ತೋತ್ರಗಳು ಮಾನವನ ಮನದಲ್ಲಿ ಸೃಜಿಸಿ ಬೆಳೆಸುತ್ತವೆ.

ನಮ್ಮ ಮನಸ್ಸಿನಲ್ಲಿ ಸದಾಕಾಲವೂ ಸದ್ವಿಚಾರಗಳೇ ಇರಬೇಕು, ನಾವು ಸತ್ಸಂಕಲ್ಪಗಳನ್ನೇ ಮಾಡಬೇಕು. ಮನಸ್ಸಿನ ಆಸೆಗೆ ಮಿತಿಯೇ ಇಲ್ಲ, ಸಂತೃಪ್ತಿಯೂ ಇಲ್ಲ. ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಂಡಿರಲು ಪರಮಾತ್ಮನ ಸ್ಮರಣೆ ಬಹುಮುಖ್ಯ. ಪ್ರಾರ್ಥನೆಯಿಂದ ಮನೋನಿಗ್ರಹವಾಗುತ್ತದೆ. ಮಾನವ ತನ್ನ ಮಾತು, ಮನಸ್ಸುಗಳನ್ನು ಶುದ್ಧವಾಗಿ ಇಟ್ಟುಕೊಂಡಿರಬೇಕು. ಇದಕ್ಕಾಗಿ ಮೊದಲು ದೇವರನ್ನು ಪೂಜಿಸಬೇಕು. ದೇವರನ್ನು ಪೂಜಿಸಬೇಕಾದರೆ ಆತನನ್ನು ಸಾಕಾರ ರೂಪದಲ್ಲಿ ನೋಡಬೇಕು. ಇದಕ್ಕಾಗಿಯೇ ದೇವರ ವೈವಿಧ್ಯಮಯ ರೂಪಗಳನ್ನು ಕಲ್ಪಿಸಿಕೊಳ್ಳಲಾಗುತ್ತದೆ. ಪರಮಾತ್ಮನು ದೋಷವಿಲ್ಲದ ಅವಯವಗಳಿರುವ ಮಂಗಳಕರವೂ ಹಾಗೂ ದಿವ್ಯವೂ ಆದ ಶರೀರವನ್ನು ಹೊಂದಿದ್ದು, ಲೋಕಕಲ್ಯಾಣಕ್ಕಾಗಿ ಮಾಡಿದ ಮಹಾನ್ ಸಾಧನೆಗಳ ಬಹಳಷ್ಟು ವಿವರಗಳು ಮತ್ತು ವರ್ಣನೆಗಳು ಈ ಸ್ತೋತ್ರಗಳಲ್ಲಿ ಕಂಡುಬರುತ್ತವೆ. ಪರಮಾತ್ಮನು ದಶಾವತಾರಗಳನ್ನು ತಾಳಿ ವೀರ, ರೌದ್ರ, ಕರುಣೆ ಮುಂತಾಗಿ ಎಲ್ಲ ಬಗೆಯ ಅದ್ಭುತ ರಸಗಳ ಸಮುದ್ರದಂತೆ ಇರುತ್ತಾ ದುಷ್ಟಶಿಕ್ಷಕ, ಶಿಷ್ಟ ರಕ್ಷಕನಾಗಿ ನಡೆಸಿದ ಲೋಕಕಲ್ಯಾಣದ ಚಟುವಟಿಕೆಗಳನ್ನೂ ಈ ಸ್ತೋತ್ರಗಳಲ್ಲಿ ತೆರೆದಿಡಲಾಗಿದೆ. ಎಲ್ಲ ಜೀವಿಗಳಿಗೂ ಅವರವರ ಕರ್ಮಗಳಿಗೆ ತಕ್ಕದಾದ ಫಲಗಳನ್ನು ನೀಡುತ್ತಾ ಪ್ರಕೃತಿಗೂ ಚೇತನಕ್ಕೂ ಒಡೆಯರಾಗಿರುವ, ಎಲ್ಲ ಕಡೆಯೂ ವ್ಯಾಪಿಸಿಕೊಂಡಿರುವ, ಭೂತ, ವರ್ತಮಾನ ಹಾಗೂ ಭವಿಷ್ಯತ್ ಕಾಲಗಳಲ್ಲಿ ಇದ್ದು ಭಕ್ತೋದ್ಧಾರಕರಾಗಿ ಭಕ್ತರಿಗೆ ಸುಖವನ್ನು ಕೊಡುವ, ಭಕ್ತರನ್ನು ಕಾಪಾಡುವ, ಎಲ್ಲ ಜೀವಿಗಳ ಆತ್ಮವಾಗಿರುವ, ಭಗವಂತನ ವಿವಿಧ ರೂಪಗಳನ್ನು ಮನಮೋಹಕವಾಗಿ ಈ ಸ್ತೋತ್ರಗಳಲ್ಲಿ ಚಿತ್ರೀಕರಿಸಲಾಗಿದೆ.

ಯಾವುದೇ ವ್ಯಕ್ತಿಯು ತನ್ನ ಜೀವನದ ವಿವಿಧ ಆಯಾಮಗಳಲ್ಲಿ ವಿವಿಧ ರೀತಿಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವುದೇ ಮನುಷ್ಯಜೀವನದ ಸಹಜ ಕ್ರಿಯೆಗಳಾಗಿರುತ್ತವೆ. ಇವು ಎಲ್ಲ ಜೀವಿಗಳಿಗೂ ಅನ್ವಯಿಸುತ್ತವೆ. ಜೀವನದ ಇಂತಹ ವೈವಿಧ್ಯಮಯ ಮಾನಸಿಕ ಮಜಲುಗಳನ್ನು ಸಜೀವರೂಪಗಳಾಗಿ ಪ್ರತಿನಿಧಿಸಿ, ಅವುಗಳಲ್ಲಿ ಸೇರಿರಬಹುದಾದ ಗುಣ, ದುರ್ಗುಣಗಳನ್ನು ಪ್ರತಿಬಿಂಬಿಸುತ್ತಾ ದುರ್ಗುಣಗಳನ್ನು ಮನದಿಂದ, ತನ್ಮೂಲಕ ಜೀವನದಿಂದ ದೂರೀಕರಿಸಬೇಕಾದ ಮಹತ್ವವನ್ನು ಈ ಸಹಸ್ರನಾಮಸ್ತೋತ್ರಗಳು ಮನಮುಟ್ಟುವಂತೆ ತಿಳಿಸಿಕೊಡುತ್ತವೆ. ಅಲ್ಲದೆ ಜೀವನದಲ್ಲಿ ನಿಜವಾದ ಉನ್ನತಿಗೆ ಅಗತ್ಯವೂ ಪೂರಕವೂ ಆದ ಸಚ್ಚಾರಿತ್ರ್ಯ, ನಡವಳಿಕೆಗಳ ರೂಪವೈವಿಧ್ಯಗಳೂ ಸಹಸ್ರನಾಮ ಸ್ತೋತ್ರಗಳಲ್ಲಿರುತ್ತವೆ. ಇವುಗಳನ್ನು ತದೇಕಚಿತ್ತದಿಂದ, ಭಕ್ತಿಭಾವದಿಂದ ಭಜಿಸುವವರ ಮನಸ್ಸು ಆದರ್ಶ ಜೀವನದತ್ತ ಹೊರಳುತ್ತದೆ; ಅವರ ಜೀವನ ಸುಖಮಯವಾಗುತ್ತವೆ. ನಿತ್ಯಜೀವನದಲ್ಲಿನ ಅತ್ಯಗತ್ಯವಾದ ಲೌಕಿಕ ಚಟುವಟಿಕೆಗಳ ಜೊತೆಗೆ ಆಧ್ಯಾತ್ಮಿಕ ಜೀವನದತ್ತಲೂ ಮನಸ್ಸು ಸಮಾಂತರವಾಗಿ ತೊಡಗಿಕೊಳ್ಳಲು ಇದು ಸಹಾಯವಾಗುತ್ತದೆ. ಒಟ್ಟಿನಲ್ಲಿ ಮಾನವರು ಸದ್ಗುಣ ಸಂಪನ್ನರಾಗಿ ಬೆಳೆಯಲು ಈ ಸಹಸ್ರನಾಮಸ್ತೋತ್ರಗಳು ದಾರಿದೀಪವಾಗಿವೆ.

ಸಹಸ್ರನಾಮ ಸ್ತೋತ್ರಗಳನ್ನು ಪಠಿಸುವುದು ಹಾಗೂ ಕಾಲಕ್ರಮದಲ್ಲಿ ಅವುಗಳಲ್ಲಿನ ನೈಜ ಅರ್ಥಗಳನ್ನು ಮನಸ್ಸಿಗೆ ತಂದುಕೊಳ್ಳುವುದು ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಾಧನೆಗೆ ಉಪಕಾರಿ. ಇದು ಮನುಷ್ಯರನ್ನು ಹೆಚ್ಚು ಉತ್ಸಾಹಶಾಲಿಗಳನ್ನಾಗಿಯೂ, ಆರೋಗ್ಯವಂತರನ್ನಾಗಿಯೂ ಮಾಡುತ್ತಾ ಅವರ ಬದುಕನ್ನು ಸಫಲಗೊಳಿಸುವುದು. ಉತ್ತಮ ಧ್ಯಾನ, ಭಜನೆಗಳಿಂದ ನಿಜ ಮಾನವನಾಗಿ ಕ್ರಮೇಣ ಆಧ್ಯಾತ್ಮಿಕ ದಾರಿಯಲ್ಲೂ ಮನಸ್ಸು ಚಲಿಸುತ್ತಾ ಶಾಂತಿ ನೆಮ್ಮದಿಗಳಿಂದ ಜೀವಿಸುವಂತಾಗುತ್ತದೆ. ಆಧ್ಯಾತ್ಮಿಕ ಸಾಧನೆಗಾಗಿ ಅಗತ್ಯವಾದ ಅನುಷ್ಠಾನ ಕ್ರಿಯೆಗಳು ಮತ್ತು ವ್ಯಾವಹಾರಿಕ ಕೆಲಸಗಳು ಇವುಗಳನ್ನು ಕಾಲಧರ್ಮಕ್ಕನುಸಾರವಾಗಿ ಜೋಡಿಸಿಕೊಳ್ಳುವುದರಿಂದ ಮನುಷ್ಯನಲ್ಲಿ ಸದಾಚಾರ ಪ್ರವೃತ್ತಿಗಳು ಬೆಳೆಯುತ್ತವೆ. ಬೇಸರ, ಜುಗುಪ್ಸೆ, ಆಲಸ್ಯ, ಸೋಮಾರಿತನ ಮುಂತಾದ ತಾಮಸಗುಣಗಳನ್ನು ಸಹಸ್ರನಾಮಗಳು ದೂರೀಕರಿಸುತ್ತವೆ. ಕೇವಲ ಲೌಕಿಕ ಸುಖದತ್ತ ಮಾತ್ರ ಮನಸ್ಸು ಸೆಳೆಯಲ್ಪಟ್ಟರೆ ಅದು ಬದುಕಿನ ಒಳಿತಿಗೆ ಅಗತ್ಯವಾದ ಉದಾತ್ತ ತತ್ತ್ವ, ನ್ಯಾಯ, ಧರ್ಮ, ನೀತಿ ಇವುಗಳ ಕುಸಿತಕ್ಕೆ ಕಾರಣವಾಗುತ್ತದೆ. ಆದ್ದರಿಂದಲೇ ಎಲ್ಲರಿಗೂ ಧರ್ಮ ಬೇಕಾಗಿದ್ದು, ಅಧ್ಯಾತ್ಮದ ಹಸಿವು ಮೂಡಬೇಕು. ಲೌಕಿಕತೆ ಮತ್ತು ಆಧ್ಯಾತ್ಮಿಕತೆ ಇವುಗಳ ನಡುವೆ ಭಾವ ಸಾಮರಸ್ಯದ ಸುಮಧುರ ಬಾಂಧವ್ಯ ಉಂಟಾಗಬೇಕು. ಇದನ್ನು ತಂದುಕೊಡುವುದೇ ಸಹಸ್ರನಾಮ ಸ್ತೋತ್ರಗಳ ಉದ್ದೇಶವಾಗಿದೆ.

ಮಾನವತ್ವ, ರಾಕ್ಷಸತ್ವ ಹಾಗೂ ದೇವತ್ವ ಗುಣಗಳು ಎಲ್ಲ ಮಾನವರಲ್ಲೂ ಸಹಜವಾಗಿಯೇ ಇರುತ್ತವೆ. ಆದರೆ ಅವುಗಳಲ್ಲಿನ ಯೋಗ್ಯ ಅಂಶಗಳನ್ನು ಮಾತ್ರ ಅನುಸರಿಸುತ್ತಾ ಹೋಗುವ ಮನೋವೃತ್ತಿಯೇ ನಿಜವಾದ ಮಾನವತೆ. ಆದರೆ ಅಪಥ್ಯ ಆಹಾರ ಸೇವನೆಯಿಂದ ರೋಗವು ಉಂಟಾಗಿ ದೈಹಿಕ ಜೀವನಕ್ಕೆ ಕೆಡುಕನ್ನು ಉಂಟು ಮಾಡುವಂತೆ ಯೋಗ್ಯವಲ್ಲದ ಮನೋವೃತ್ತಿಗಳಿಂದ ಅನಾಗರಿಕತಾ ವ್ಯಾಧಿ ತಲೆದೋರಿ ಬೆಳೆಯುತ್ತಾ ಹೋಗುತ್ತದೆ. ಇದಕ್ಕೆ ಔಷಧಿಗಳಾದ ದಾನ ಮಾಡುವ, ದಯೆತೋರುವ, ಇಂದ್ರಿಯಗಳನ್ನು ಹತೋಟಿಯಲ್ಲಿಡುವ ಪ್ರವೃತ್ತಿಗಳಲ್ಲಿ ನಾವು ತೊಡಗಬೇಕು. ಆದ್ದರಿಂದ ನಿಜವಾದ ಮಾನವತ್ವ, ದೈವತ್ವಗಳನ್ನು ಉಳಿಸಿಕೊಂಡು ಬರಲು ಅಂದರೆ ಅನಾಗರಿವೆಯೆಂಬ ವ್ಯಾಧಿಯ ನಿವಾರಣೆಗೆ ಈ ಪ್ರವೃತ್ತಿಗಳಲ್ಲಿ ತೊಡಗಬೇಕು. ರೋಗಪರಿಹಾರಕ್ಕೆ ಔಷಧಜ್ಞಾನ ಮಾತ್ರದಿಂದ ಪ್ರಯೋಜನವಿರದೆ, ಔಷಧ ಸೇವನೆಯ ಆವಶ್ಯಕತೆ ಇರುತ್ತದೆ.

ಅಂತೆಯೇ ಪೂಜೆ, ಧ್ಯಾನ, ಜಪ ಇವುಗಳು ಜೀವ ಮತ್ತು ದೇವರ ನಡುವೆ ಸಂಬಂಧವನ್ನು ಕಲ್ಪಿಸುವ ಕ್ರಿಯೆಗಳು. ಇವುಗಳು ಏಕಾಗ್ರತೆ, ತನ್ಮಯತೆಗಳಿಂದ ಕೂಡಿದ್ದರೆ ಮನಸ್ಸಿಗೆ ದೊರಕುವ ಶಾಂತಿ, ಸಮಾಧಾನ ಮುಂತಾದವುಗಳು ಹೇಳಲಸದಳ. ಇವುಗಳ ಪರಿಣಾಮವು ಅತ್ಯಂತ ಮೌಲ್ಯಯುತವಾಗಿದ್ದು ಕೇವಲ ವೈಯಕ್ತಿಕವೇ ಅಲ್ಲದೆ ಸಮಾಜದ ಹಿತಕ್ಕೂ ಪೂರಕವಾಗಿರುತ್ತವೆ; ತಾನೇ ಅಲ್ಲದೆ ಎಲ್ಲರೊಡನೆ ಸಾಮರಸ್ಯದಿಂದ ಸಂತೋಷವಾಗಿ, ಸುಖವಾಗಿ, ಆತ್ಮೀಯತೆಯಿಂದ ಬಾಳುವ ಮನಸ್ಥಿತಿಯನ್ನು ಉಂಟುಮಾಡುತ್ತವೆ. ಆತ್ಮೋನ್ನತಿಗೆ ಇಂತಹ ಮಾನಸಿಕ ಸಂಸ್ಕಾರವು ಅತ್ಯಂತ ಅಗತ್ಯವಾದುದು. ಎಲ್ಲರಿಗೂ ಸುಲಭಸಾಧ್ಯವಾಗುವ ಸಹಸ್ರನಾಮಗಳ ಪಠನ, ಮನನ, ಭಜನೆ ಮನಸ್ಸನ್ನು ಆರೋಗ್ಯವಂತ ಸ್ಥಿತಿಯಲ್ಲಿರಿಸುತ್ತದೆ. ಆದ್ದರಿಂದ ಸಹಸ್ರನಾಮಗಳ ಸಂದೇಶಗಳಲ್ಲಿ ಶ್ರದ್ಧೆಯನ್ನು ಇರಿಸಿಕೊಂಡು ಪಠನ ಮಾಡುತ್ತಿದ್ದರೆ ಮನಸ್ಸಿನಿಂದ ದುರಾಸೆ ಹಾಗೂ ದುರ್ಬುದ್ಧಿಗಳು ದೂರವಾಗುತ್ತವೆ. ಹೊಗೆ ಮತ್ತು ಇತರ ಅಡಚಣೆಗಳಿಂದ ದೂರವಾದ ನಂತರ ಬೆಂಕಿಯು ಪ್ರಜ್ವಲಿಸುವಂತೆ ಸ್ತೋತ್ರಗಳ ಪಠನದಿಂದ ಮನಸ್ಸು ಸಹ ಬೆಳಗುವುದು. ಮನಸ್ಸು ತಪ್ಪುದಾರಿಗೆ ಹೋಗುವುದಿಲ್ಲ. ಮನಸ್ಸಿನ ಗೊಂದಲಗಳು ನಿವಾರಣೆಯಾಗಿ ಚಿತ್ತಶುದ್ಧಿಯಾಗುತ್ತದೆ. ಬೇಸರ, ಆತಂಕ ಮುಂತಾದವುಗಳು ಕ್ಷಣಮಾತ್ರದಲ್ಲಿ ಮಾಯವಾಗಿ ಮಂದಹಾಸ ಮೂಡುತ್ತದೆ, ಆಧ್ಯಾತ್ಮಿಕತೆಗೆ ನಾಂದಿಯಾಗುತ್ತದೆ. ಯಾವುದೇ ರೀತಿಯ ಪೂಜಾವಿಧಾನಗಳು, ಪೂಜಾ ಪದಾರ್ಥಗಳು, ಪರಿಕರಗಳು ಮುಂತಾದವುಗಳ ಅಗತ್ಯವಿಲ್ಲದೆ ಧ್ಯಾನಸ್ಥರಾಗಿ ಒಂದು ಕಡೆ ಕುಳಿತು ಸಹಸ್ರನಾಮ ಸ್ತೋತ್ರಗಳನ್ನು ಏಕಾಗ್ರತೆಯಿಂದ ಹೇಳುವ ಈ ಭಕ್ತಿಮಾರ್ಗವು ಕರ್ಮಯೋಗ, ಜ್ಞಾನಯೋಗಗಳಿಗಿಂತಲೂ ಮಿಗಿಲಾದುದು. ಹೀಗೆ ಸ್ತ್ರೀ, ಪುರುಷ, ಜಾತಿ ಮುಂತಾದ ಭೇದಗಳಿಲ್ಲದೆ ಸಹಸ್ರನಾಮ ಸ್ತೋತ್ರಗಳಲ್ಲಿ ಭಕ್ತಿಯುಕ್ತರಾಗಿ ಅವುಗಳನ್ನು ಹೇಳಿಕೊಳ್ಳುವವರು ಸುಖಮಯ ಜೀವನವನ್ನು ನಡೆಸುತ್ತಾ ಮುಕ್ತಾತ್ಮರಾಗಲು ಅರ್ಹರಾಗುತ್ತಾರೆ.

ಸಹಸ್ರನಾಮಗಳನ್ನು ದಶಸಹಸ್ರ, ಶತಸಹಸ್ರ, ಲಕ್ಷ, ದಶಲಕ್ಷ, ಕೋಟಿ ಮುಂತಾಗಿ ಬಹುಸಂಖ್ಯೆಯಷ್ಟು ಬಾರಿ ಸಾಮೂಹಿಕವಾಗಿ ಹೇಳುವ ಚಟುವಟಿಕೆಗಳು ನಡೆಯುತ್ತಲೇ ಇರುತ್ತವೆ. ಧಾರ್ಮಿಕ ಮಠ, ಮಂದಿರಗಳು, ಧಾರ್ಮಿಕ ಸೇವಾ ಸಂಸ್ಥೆಗಳು, ಆಸಕ್ತರು ಇವುಗಳನ್ನು ನಡೆಸುತ್ತಿರುತ್ತಾರೆ. ಇಂತಹ ಸಂದರ್ಭಗಳಲ್ಲಿ ನಿರ್ದಿಷ್ಟಪಡಿಸಿದ ಸಹಸ್ರನಾಮಸ್ತೋತ್ರವನ್ನು ಹೇಳಲು ಆಸಕ್ತರಾದವರು ಬೇರೆ ಬೇರೆ ಗುಂಪುಗಳಾಗಿ ಮನೆಗಳಲ್ಲಿ ಅಥವಾ ನಿರ್ದಿಷ್ಟ ಸ್ಥಳಗಳಲ್ಲಿ ಹಲವಾರು ದಿನಗಳಲ್ಲಿ ಅಗತ್ಯವಾದಷ್ಟು ಬಾರಿ ಸಹಸ್ರನಾಮಗಳನ್ನು ಹೇಳಿಕೊಳ್ಳುವ ಪರಿಪಾಠ ಇರುತ್ತದೆ. ಇದಕ್ಕಾಗಿ ಗುಂಪುಗೂಡುವ ಭಕ್ತಾದಿಗಳು ತಮ್ಮ ಮನೆಗಳಲ್ಲಿ ಸರದಿಯಲ್ಲಿ ಸೇರುವ ಏರ್ಪಾಡುಗಳನ್ನು ಮಾಡಿಕೊಳ್ಳುತ್ತಾರೆ ಹೀಗೆ ಸಹಸ್ರನಾಮವನ್ನು ತಮ್ಮ ಮನೆಗಳಲ್ಲೇ ಸಾಕಷ್ಟು ದಿನಗಳು, ಸಾಕಷ್ಟು ಬಾರಿ ಹೇಳಿಕೊಳ್ಳುವ ಎಲ್ಲರನ್ನೂ ಒಟ್ಟಾಗಿ ಸೇರಿಸಿ ಒಂದು ದಿನ ಸಾಮೂಹಿಕ ಪೂಜಾ ಕೈಂಕರ್ಯಗಳನ್ನು ನಡೆಸಲಾಗುತ್ತದೆ. ಇದರ ಪರಿಣಾಮವೆಂದರೆ ಭಕ್ತಾದಿಗಳ ನಡುವೆ ಅತ್ಯಂತ ಆತ್ಮೀಯ ಭಾವನೆಗಳು ಬೆಳೆದು ಉತ್ತಮ ಸಮಾಜಜೀವನಕ್ಕೆ ದಾರಿಯಾಗುತ್ತದೆ.

ಆಧ್ಯಾತ್ಮ ವಿದ್ಯೆ ಅಥವಾ ಬ್ರಹ್ಮವಿದ್ಯೆ ಎಲ್ಲಾ ವಿದ್ಯೆಗಳಿಗೆ ಮೂಲವಾದದ್ದು. ಮಿಕ್ಕ ವಿದ್ಯೆಗಳೆಲ್ಲವೂ ತಮ್ಮ ತಮ್ಮ ವಿಷಯಗಳಿಗಷ್ಟೇ ಸೀಮಿತವಾಗಿರುತ್ತವೆ. ಇಂದ್ರಿಯಗಳಿಗೆ ಗೋಚರವಾಗುವ ಬಾಹ್ಯ ವಿಷಯಗಳನ್ನು ತರ್ಕ ಮತ್ತು ಅನುಭವಗಳಿಂದ ಅರ್ಥೈಸಿಕೊಳ್ಳಬಹುದು. ಸದಾಚಾರಗಳಿಂದ ಕೂಡಿದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವುದು ಎಲ್ಲರ ಕರ್ತವ್ಯವಾಗಿರುತ್ತದೆ. ತಾನು ಚೆನ್ನಾಗಿ ಬದುಕುವುದರ ಜೊತೆಯಲ್ಲಿ ಸಮಾಜದ ಸರ್ವಾಂಗೀಣ ಪ್ರಗತಿ ಮತ್ತು ಏಳಿಗೆ ಆಗಬೇಕು ಎಂಬ ಮನೋಭಾವನೆಯೇ ಇಂತಹ ಆದರ್ಶ ವ್ಯಕ್ತಿತ್ವವಾಗಿರುತ್ತದೆ. ಇಂತಹ ಸದಾಚಾರವು ಎಲ್ಲರಲ್ಲೂ ಮೂಡಬೇಕು. ಇದಕ್ಕಾಗಿ ಸಂಘಶಕ್ತಿ, ಸಹಕಾರಭಾವನೆಗಳು ಅಗತ್ಯ. ಸರ್ವವಿದ್ಯಾ ಪ್ರತಿಷ್ಠಾಪನೆ ಆಗಿರುವ ದೇವರುಗಳನ್ನು ಕುರಿತ ಸಹಸ್ರನಾಮ ಸ್ತೋತ್ರಗಳನ್ನು ಸಾಮೂಹಿಕವಾಗಿ ಹೇಳುವಾಗ ಎಲ್ಲರಲ್ಲೂ ಭಾವ, ಭಾವನೆಗಳು ಬೆಸೆದುಕೊಂಡು ಶಾಂತಿ, ನೆಮ್ಮದಿಯ ಮಾನಸಿಕ ಹಾಗೂ ಸಾಮಾಜಿಕ ಪರಿಸ್ಥಿತಿಗಳು ಉಂಟಾಗುತ್ತವೆ, ಆತ್ಮಜ್ಞಾನದತ್ತ ಮನಸ್ಸನ್ನು ಅವು ಕೊಂಡೊಯ್ಯುತ್ತವೆ. ಮಾನವನ ಶ್ರೇಯಸ್ಸಿಗೆ ಮತ್ತು ಸಮಾಜದ ಸುಭದ್ರತೆಗೆ ಇಂತಹ ಧರ್ಮ ಪರಿಪಾಲನೆ ಅಗತ್ಯವೆಂದು ಡಾ॥ ಅಂಬೇಡ್ಕರ್ ಅವರೂ ಹೇಳಿದ್ದಾರೆ.

ತನ್ನ ಮನಸ್ಸನ್ನು ವಿವೇಕದ ಹಿಡಿತದಲ್ಲಿ ಇಟ್ಟುಕೊಂಡಿರುವವರು ಮಾತ್ರ ಜಗತ್ತಿನಲ್ಲಿ ಏನಾದರೂ ಸಾಧಿಸಲು ಸಾಧ್ಯ. ನಮ್ಮ ಮನಸ್ಸಿನಲ್ಲಿ ಸದಾಕಾಲವೂ ಸದ್ವಿಚಾರಗಳೇ ಇರಬೇಕು, ನಾವು ಸತ್ಸಂಕಲ್ಪಗಳನ್ನೇ ಮಾಡಬೇಕು. ಮನಸ್ಸಿನ ಆಸೆಗೆ ಮಿತಿಯೂ ಇಲ್ಲ, ಸಂತೃಪ್ತಿಯೂ ಇಲ್ಲ. ಮನಸ್ಸಿನ ಒಳಗಡೆ ವಿವಿಧ ಆಯಾಮಗಳು ಸಂದರ್ಭಕ್ಕೆ ತಕ್ಕಂತೆ ಅನಾವರಣಗೊಳ್ಳುತ್ತವೆ. ದಿನದಿಂದ ದಿನಕ್ಕೆ ಮನಸ್ಸಿನ ಭಾವಗಳು ಬದಲಾಗುತ್ತವೆ. ಲೌಕಿಕ ಜೀವನದ ಆಸೆಗಳಿಗೆ ಪೂರ್ಣ ಶರಣಾದಾಗ ಬೇಕೇ ಬೇಕು ಎಂಬ ಬಯಕೆಗಳಿಗೆ ಕೊನೆಯೇ ಇರುವುದಿಲ್ಲ, ಇವುಗಳಿಗೆ ಅನಂತ ಮುಖಗಳಿರುತ್ತವೆ. ಲೌಕಿಕ ಆಸೆಗಳು ಇರಬೇಕು. ಆದರೆ ಪಾರಮಾರ್ಥಿಕ ಆಸೆ, ಲೌಕಿಕ ಆಸೆಗಳ ನಡುವೆ ಸರಿಯಾದ ತುಲನೆಮಾಡುವ ಮನೋವೃತ್ತಿ ಬೇಕು. ಸಹಸ್ರನಾಮಸ್ತೋತ್ರದಲ್ಲಿ ಸಾವಿರ ಮುಖಗಳು ಒಂದೇ ಮುಖದಲ್ಲಿ ಅಡಗಿರುತ್ತವೆ. ಸಹಸ್ರನಾಮಸ್ತೋತ್ರದಲ್ಲಿನ ಪದಗುಚ್ಛಗಳ ಅಂತರಂಗದೊಳಗೆ ದೇವ, ದಾನವ ಭಾವಗಳ ವಿವಿಧ ವಿಶ್ಲೇಷಣೆಗಳಿದ್ದು ಇವುಗಳನ್ನು ಜಪಿಸುವುದರಿಂದ ಮನಸ್ಸು ಹದವಾಗುತ್ತದೆ. ಇವುಗಳ ಧ್ಯಾನದಿಂದ ಮಾನಸ ಲೋಕದಲ್ಲಿ ಹಾಲನ್ನು ಕುದಿಸಿ ಹದಮಾಡುವಂತೆ ಆಗುತ್ತದೆ. ಭಜನೆಯು ದೇವರಿಗಲ್ಲ, ಅದು ನಮ್ಮ ಮನಸ್ಸಿನ ಉದ್ಧಾರಕ್ಕೆ. ಇದರಿಂದ ಬದುಕಿನಲ್ಲಿ ಹೊಸತನ ಬರುತ್ತದೆ. ಅಂತರಂಗದ ಮಲಿನತೆ ತೊಳೆದು ಮನಸ್ಸು ತಿಳಿಯಾದ ಶುಭ್ರವಾದ ನೀರಿನ ಕೊಳದಂತೆ ಆಗುತ್ತದೆ. ಮನಸ್ಸು ಮಾನಸಿಕ ತೊಳಲಾಟಗಳನ್ನು ತೆಗೆದುಹಾಕಿ ಆನಂದ, ಸಂತೋಷ, ಸಂತೃಪ್ತಿ, ಶಾಂತಿ ಸಮಾಧಾನಗಳನ್ನು ಹೊಂದುತ್ತದೆ. ಇಂತಹ ಆಧ್ಯಾತ್ಮಿಕ ಸಾಧನೆಯು ಏಕಾಗ್ರತೆಯ ಸತ್ವಗುಣದಿಂದ ಉಂಟಾಗುತ್ತದೆ. ಮನಸ್ಸಿನಲ್ಲಿ ಅತಿಯಾದ ತಳಮಳಗಳಿದ್ದರೆ ಅದು ಏಕಾಗ್ರಗೊಳ್ಳುವುದಿಲ್ಲ, ಸಹಸ್ರನಾಮ ಪಾರಾಯಣವು ಏಕಾಗ್ರತೆಗೆ ಹೆಚ್ಚು ಶ್ರೇಷ್ಠವಾದುದು. ಆಗ ಮನಸ್ಸಿನಲ್ಲಿ ದೇವರುಗಳ ಕುರಿತಾಗಿ ಭಕ್ತಿ ಉಕ್ಕಿಬರುತ್ತಿರುತ್ತದೆ. ಇದನ್ನು ಸದುಪಯೋಗಪಡಿಸಿಕೊಳ್ಳುವುದೇ

ಬುದ್ಧಿವಂತಿಕೆ. ಸಹಸ್ರನಾಮ ವಾಚನದಿಂದ ಮನೋನಿಗ್ರಹ ಉಂಟಾಗುತ್ತದೆ.

ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಂಡಿರಲು ಪರಮಾತ್ಮನ ಪ್ರಾರ್ಥನೆ ಬಹುಮುಖ್ಯ. ನಿಜಮುಕುತಿಯನ್ನು ಪಡೆಯಲು ಮೊದಲು ಮಾನವ ತನ್ನ ಶರೀರದ ಮೈ, ಮಾತು, ಮನಸ್ಸು ಎಂಬ ತ್ರಿಕರಣಗಳಿಗೆ ಸಂಸ್ಕಾರ ನೀಡಿ ಶುದ್ಧಿಮಾಡಿಕೊಳ್ಳಬೇಕು. ಕರಣಗಳು ಶುದ್ಧಿಯಾಗಬೇಕಾದರೆ ಮೊದಲು ದೇವರನ್ನು ಪೂಜಿಸಬೇಕು. ದೇವರನ್ನು ಪೂಜಿಸಬೇಕಾದರೆ ಆತನನ್ನು ಸಾಕಾರರೂಪದಲ್ಲಿ ನೋಡಬೇಕು. ಏನನ್ನೇ ನೋಡಿದರೂ ಒಳ್ಳೆಯದನ್ನೇ ನೋಡಬೇಕು, ಒಳ್ಳೆಯದನ್ನೇ ಕೇಳಬೇಕು, ಮಾಡಿದರೆ ಒಳ್ಳೆಯದನ್ನೇ ಮಾಡಬೇಕು. ಹೀಗೆ ಮಾಡಿದ ಕೆಲಸಗಳು ಮೊದಲು ನಮಗೆ ಇಷ್ಟವಾಗಬೇಕು. ಅದನ್ನು ಬೇರೆಯವರೂ ಮೆಚ್ಚಬೇಕು. ಆದರೆ ಬೇರೆಯವರನ್ನು ಮೆಚ್ಚಿಸುವುದಷ್ಟೇ ನಮ್ಮ ಗುರಿಯಾಗಿರಬಾರದು. ಈ ರೀತಿಯಲ್ಲಿ ಒಳ್ಳೆಯ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಲೌಕಿಕ ಕಾರ್ಯಗಳಲ್ಲಿ ತೊಡಗಿರುವುದಲ್ಲದೆ ದೇವರಧ್ಯಾನ ಮಾಡುವುದರಿಂದ ಮನದಲ್ಲಿ ಜ್ಞಾನ, ಸದ್ಗುಣ, ಸಂಯಮ ಇವುಗಳು ಒಂದೊಂದಾಗಿಯೇ ತುಂಬುತ್ತಾ ಬರುತ್ತವೆ. ಹೀಗೆ ಸಹಸ್ರನಾಮ ಸ್ತೋತ್ರಗಳನ್ನು ಹೇಳಿಕೊಳ್ಳುವ, ಅರ್ಥೈಸಿಕೊಳ್ಳುವ ಕ್ರಿಯೆಗಳಿಂದ ತ್ರಿಕರಣ ಶುದ್ಧಿಯಾಗಿ, ಜೀವಂತವಾಗಿರುವಾಗಲೇ ಲೌಕಿಕ ಜೀವನದ ಋಣಗಳನ್ನು ತೀರಿಸಿ ನಿಜಮುಕ್ತಿಯನ್ನು ಗಳಿಸಬಹುದು. ಇದು ಸಂಸಾರಿಯಿಂದಲೂ ಸಾಧ್ಯ.

ಹಿಂದೂಧರ್ಮದಲ್ಲಿರುವ ವಿವಿಧ ರೀತಿಯ ಜಾತಿ ಮತಗಳು, ಒಂದೇ ಜಾತಿಯಲ್ಲಿನ ವಿವಿಧ ಪಂಥಗಳಿಗೆ ಸೇರಿದವರ ಆಚಾರ ವಿಚಾರಗಳಲ್ಲಿ ಕಂಡುಬರುವ ಉತ್ತಮ ವಿಚಾರಗಳು ಸಹಸ್ರನಾಮಗಳಲ್ಲಿ ಅಡಕವಾಗಿವೆ. ಎಲ್ಲರೂ ಈ ವಿಚಾರಗಳನ್ನು ಕುರಿತು ಚಿಂತಿಸುವ, ತಮ್ಮ ಜೀವನದಲ್ಲಿ ಜಾರಿಗೆ ತರುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕು ಎಂಬುದೇ ಈ ಸಹಸ್ರನಾಮಗಳನ್ನು ರಚಿಸಿರುವ ಮಹಾಪ್ರಾಜ್ಞರ ಅಭಿಪ್ರಾಯವಾಗಿದೆ. ಅಂದರೆ ಜನತೆಯಲ್ಲಿ ನಿಜವಾದ ಮಾನವತೆಯನ್ನು ಮೂಡಿಸುವ ಹಿಂದೂಧರ್ಮದ ಉದ್ದೇಶಗಳು ಈ ಸಹಸ್ರನಾಮ ಸ್ತೋತ್ರಗಳಲ್ಲಿವೆ.

ಸಾಮೂಹಿಕ ಜೀವನ ನಡೆಸಿಕೊಂಡಿರಲು ಅಗತ್ಯವಾದ ಕ್ರಿಯಾವಿಧಾನಗಳನ್ನು ಅನುಸರಿಸುವ ವಿಧಾನಗಳು, ಪ್ರವೃತ್ತಿಗಳು, ನಾವು ಆಚರಿಸುತ್ತಿರುವ ಅರ್ಥಪೂರ್ಣವಾದ ಅನೇಕ ವಿಧವಾದ ಆಚಾರ ವಿಚಾರಗಳು ಮತ್ತು ಸಂಪ್ರದಾಯಗಳು ಸಹಸ್ರನಾಮ ಸ್ತೋತ್ರಗಳಲ್ಲಿ ದಾಖಲಾಗಿವೆ. ಇವುಗಳ ಆಚರಣೆ ಮಾನವನ ಸುಖಮಯ ಜೀವನಕ್ಕೆ ಕಾರಣವಾಗುತ್ತದೆ. ಜೀವನದ ಉದ್ದೇಶವೆಂದರೆ ಒಳ್ಳೆಯ ವಿಚಾರಗಳತ್ತಲೇ ಮನಸ್ಸನ್ನು ಇಟ್ಟುಕೊಂಡಿರುವುದು, ಇವುಗಳತ್ತಲೇ ಕೊಂಡೊಯ್ಯುವ ಈ ವೈವಿಧ್ಯಮಯ ಆಚಾರ ವಿಚಾರಗಳು ನಿಜ ಜೀವನವನ್ನು ನಡೆಸಲು ಉತ್ತಮ ದಾರಿದೀಪಗಳಾಗಿವೆ.

ಹೊಂದಾಣಿಕೆಯಿಂದ ಬಾಳುವ ಸ್ವಭಾವವು ಅತ್ಯಮೂಲ್ಯವೂ, ಸುಖಮಯ ಜೀವನಕ್ಕೆ ಸುಗಮ ದಾರಿಯೂ ಆಗುತ್ತದೆ. ಮಾನವ ಜನ್ಮದ ಶ್ರೇಷ್ಠತೆಗೆ ಕಾರಣವಾಗುವ ಇಂತಹ ಮಾರ್ಗದರ್ಶಕ ವಿಚಾರಗಳು ಸಹಸ್ರನಾಮಗಳಲ್ಲಿ ಕಂಡುಬರುತ್ತವೆ. ಪಾರಮಾರ್ಥಿಕವೇ ಅಲ್ಲದೆ ಲೌಕಿಕ ಹಾಗೂ ವ್ಯಾವಹಾರಿಕ ವಿಚಾರಗಳನ್ನು ಕುರಿತು ಹಿಂದೂಧರ್ಮದಲ್ಲಿ ಕಂಡುಬರುವ ಅದ್ಭುತ ಪರಿಕಲ್ಪನೆಗಳು, ಸುಖಮಯ ಹಾಗೂ ಶಾಂತಿಯುತ ಜೀವನ ವಿಧಾನಗಳು, ನೈತಿಕ ಮೌಲ್ಯಗಳು, ಇವುಗಳಿಗೆ ಪೂರಕವಾದ ಅನೇಕ ಅಮೂಲ್ಯ ವಿಚಾರಗಳು ಸಹಸ್ರನಾಮಗಳಲ್ಲಿವೆ. ಇಂತಹ ಉತ್ತಮ ಪ್ರವೃತ್ತಿಗಳನ್ನು ಬೆಳೆಸಿಕೊಂಡು ಅವುಗಳನ್ನು ಅನುಸರಿಸಲು ಸಹಸ್ರನಾಮಗಳು ಅನನ್ಯ ಸಾಧನಗಳಾಗಿವೆ. ಆದ್ದರಿಂದಲೇ ಮನಸ್ಸಿಗೆ ನಿಜವಾದ ನೆಮ್ಮದಿ, ಉತ್ಸಾಹ, ಸಂತೋಷಗಳನ್ನು ಉಂಟು ಮಾಡುವ ಸಹಸ್ರನಾಮಗಳಲ್ಲಿ ಆಸಕ್ತಿ ವಹಿಸಿ, ಅವುಗಳಲ್ಲಿನ ವಿಷಯಗಳನ್ನು ಚೆನ್ನಾಗಿ ಗ್ರಹಿಸಬೇಕು ಮತ್ತು ಗ್ರಹಿಸಿದ ವಿಷಯಗಳನ್ನು ಕುರಿತು ಚಿಂತನೆ ನಡೆಸಬೇಕು.

ಇಂತಹ ಮಹೋತ್ತಮ ಪ್ರವೃತ್ತಿಗಳು ಶ್ರೀ ರಾಮಕೃಷ್ಣ ಪರಮಹಂಸರು ಹಾಗೂ ಶ್ರೀ ಶಾರದಾದೇವಿಯವರಲ್ಲಿ ಅಂತರ್ಗತವಾಗಿದ್ದವು. ಅವರುಗಳು ಚಿಕ್ಕಂದಿನಲ್ಲೇ ರಾಮಾಯಣ, ಮಹಾಭಾರತ, ಭಾಗವತ, ಸ್ತೋತ್ರಗಳು, ಭಕ್ತಿಗೀತೆಗಳು ಮುಂತಾದವುಗಳನ್ನು ಓದಿ ಅವುಗಳಲ್ಲಿನ ಉತ್ತಮ ಅಂಶಗಳನ್ನು ಅರ್ಥಮಾಡಿಕೊಂಡಿದ್ದುದೇ ಕಾರಣವಾಗಿದ್ದಿತು. ಇವರಿಬ್ಬರ ಜೀವನದಲ್ಲಿ ನಡೆದ ಅನೇಕ ಆಗುಹೋಗುಗಳು, ಘಟನೆಗಳು ಅವರಲ್ಲಿದ್ದ ಮಹೋನ್ನತ ಗುಣಗಳನ್ನು ತೋರುತ್ತವೆ. ಅವರಲ್ಲಿನ ಈ ಎಲ್ಲ ಗುಣಗಳನ್ನು ಸೂಚ್ಯರೂಪದಲ್ಲಿ ಪ್ರತಿಪಾದಿಸುವ 'ಶ್ರೀರಾಮಕೃಷ್ಣ ಸಹಸ್ರನಾಮ ಸ್ತೋತ್ರಂ' ಹಾಗೂ 'ಶ್ರೀಶಾರದಾದೇವೀ ಸಹಸ್ರನಾಮಾವಲಿಃ' ಇವುಗಳನ್ನು ಹೇಳಿಕೊಳ್ಳುವ, ಭಜನೆ ಮಾಡುವ ಕ್ರಿಯೆಗಳು ಆತ್ಮೋನ್ನತಿಗೆ ದಾರಿಯಾಗುತ್ತದೆ.

ಸತ್ಯ, ಪ್ರಾಮಾಣಿಕತೆಗಳ ಹೆದ್ದಾರಿಯಲ್ಲಿ ನಡೆಯುವ ಇಂತಹ ಸಾಮೂಹಿಕ ಸಹಸ್ರನಾಮಸ್ತೋತ್ರ ವಾಚನಗಳ ಚಟುವಟಿಕೆಗಳು ಶುದ್ಧಜೀವನಕ್ಕೆ ಪ್ರೇರಕ ಶಕ್ತಿ, ಚೈತನ್ಯರೂಪ. ಇವುಗಳು ಬದುಕಿನಲ್ಲಿ ನೆಮ್ಮದಿ ಉಂಟುಮಾಡುತ್ತವೆ. ಇಂತಹ ಸಂದರ್ಭಗಳಲ್ಲಿ ಅಂತರಂಗದಲ್ಲಿ ಮೂಡುವ ಬೆಳಕು, ಎಲ್ಲರನ್ನೂ ಹತ್ತಿರ ತರುವ ಸಮಗ್ರತೆ, ಸಹೃದಯತೆ ಇವುಗಳು ಸರಿಯಾದ ಜೀವನಯಾನದ ದಿಕ್ಸೂಚಿಯಾಗಿರುತ್ತವೆ. ಇವೇ ಸನ್ಮಾರ್ಗ ಹಾಗೂ ಮುಕ್ತಿ ಎನ್ನುವ ಸತ್ಯ ಇವುಗಳ ತಿಳಿವಳಿಕೆಗೆ ಪ್ರೇರಣೆಯಾಗುತ್ತವೆ. ❖

**ಅಕ್ಷಸೂತ್ರಾಂಕುಶಧರಾ ಪಾಶಪುಸ್ತಕಧಾರಿಣೀ।**
**ಮುಕ್ತಾಹಾರಸಮಾಯುಕ್ತಾ ವಾಚಿ ತಿಷ್ಠತು ಮೇ ಸದಾ॥**

**ಯಾ ಶ್ರದ್ಧಾ ಧಾರಣಾ ಮೇಧಾ ವಾಗ್ದೇವೀ ವಿಧಿವಲ್ಲಭಾ।**
**ಭಕ್ತಜಿಹ್ವಾಗ್ರಸದನಾ ಶಮಾದಿಗುಣದಾಯಿನೀ ॥**

'ಜಪಮಾಲೆ, ಅಂಕುಶ, ಪಾಶ, ಪುಸ್ತಕ ಇವುಗಳನ್ನು ಹಿಡಿದಿರುವವಳೂ, ಕೊರಳಿನಲ್ಲಿ ಮುತ್ತಿನ ಹಾರವನ್ನು ಧರಿಸಿರುವವಳೂ, ಶ್ರದ್ಧೆ ಧಾರಣ ಮೇದಸ್ಸು ಇವುಗಳ ಸ್ವರೂಪಳೂ, ವಾಗ್ದೇವಿಯೂ, ಬ್ರಹ್ಮನ ಪ್ರಿಯಳೂ, ಭಕ್ತರ ನಾಲಗೆಯ ತುದಿಯಲ್ಲಿ ವಾಸಿಸುವವಳೂ, ಶಮದಮಾದಿ ಗುಣಗಳನ್ನು ಅನುಗ್ರಹಿಸುವವಳೂ ಆದ ಸರಸ್ವತಿಯು ನನ್ನ ವಾಕ್ಕಿನಲ್ಲಿ ನೆಲೆಸಲಿ.'

*–ಸರಸ್ವತೀರಹಸ್ಯೋಪನಿಷತ್*

# ಭಗವನ್ನಾಮ ಮತ್ತು ನಾಮಸ್ಮರಣೆ

**ಜಿ.ಎಸ್. ಜಯದೇವ**



**ಭಾ**ರತೀಯ ಧಾರ್ಮಿಕ ಪರಂಪರೆಯಲ್ಲಿ ನಾಮಸ್ಮರಣೆಗೆ ಮಹತ್ತರವಾದ ಸ್ಥಾನವಿದೆ. ವಾಲ್ಮೀಕಿ ಮಹರ್ಷಿಯಾದದ್ದು ನಾಮ ಸ್ಮರಣೆಯಿಂದ. ಕ್ರಮಬದ್ಧವಾದ ನಾಮಸ್ಮರಣೆಯೇ ಜಪ. ಬೇಡದ ಚಿಂತನೆಗಳಿಂದ ಚದುರಿಹೋದ ಮನಸ್ಸನ್ನು ಏಕಾಗ್ರಗೊಳಿಸಲು ನಾಮಸ್ಮರಣೆ ಅಥವಾ ಜಪ ಒಂದು ಸರಳ ಮಾರ್ಗ. ರಾಮಕೃಷ್ಣರು ಹೇಳುತ್ತಿದ್ದರು – ಗಂಗಾನದಿಯಲ್ಲಿ ದೊಡ್ಡ ಮರದ ದಿಮ್ಮಿಯನ್ನು ಉದ್ದವಾದ ಸರಪಳಿಯಿಂದ ಬಂಧಿಸಿದ್ದಾರೆಂದು ಭಾವಿಸಿ; ಈ ಸರಪಳಿಯ ಒಂದೊಂದು ಕೊಂಡಿಯನ್ನು ಎಳೆಯುತ್ತಾ ಹೋದರೆ ಆ ದೊಡ್ಡ ಮರದ ದಿಮ್ಮಿ ನಮ್ಮ ಸಮೀಪಕ್ಕೆ ಬಂದುಬಿಡುತ್ತದೆ. ಹಾಗೆಯೇ ಜಪ; ನಾಮಸ್ಮರಣೆ ಅಥವಾ ಜಪ ಎಂಬುದು ಭಗವಂತ ನನ್ನು ತಲುಪಲು ಒಂದು ಸರಪಳಿ.

ನಾಮಸ್ಮರಣೆಗೆ ಗೃಹಸ್ಥರು – ಸನ್ಯಾಸಿಗಳು ಎಂಬ ಭೇದವಿಲ್ಲ, ಮೇಲು–ಕೀಳು, ಬಡವ–ಬಲ್ಲಿದ ಎಂಬ ಭೇದವೂ ಇಲ್ಲ. ಸರಳವಾದ ನಾಮಸ್ಮರಣೆ ಮತ್ತು ಪ್ರಾರ್ಥನೆ ನಮ್ಮ ಸಂಸ್ಕೃತಿಯಲ್ಲಿ ಪೂಜಾಕ್ರಮದ ಭಾಗವಾಗಿ ಬೆಳೆದುಬಂದಿದೆ. ಯಾಂತ್ರಿಕವಾಗಿ ನಾಮಸ್ಮರಣೆ ಮಾಡುವವರನ್ನು ಶ್ರೀರಾಮಕೃಷ್ಣರು ತಮಾಷೆ ಮಾಡುತ್ತಿದ್ದರು. ಕೆಲವರು ಮೀನು ವ್ಯಾಪಾರ ಮಾಡುತ್ತಲೇ ಜಪಮಾಲೆ ತಿರುಗಿಸುವುದನ್ನು ವಿನೋದವಾಗಿ ವರ್ಣಿಸುತ್ತಿದ್ದರು. ಈ ಬಗೆಯ ನಾಮ ಸ್ಮರಣೆ ಕೇವಲ ತೋರಿಕೆಗೆ ಮಾತ್ರ. ಹಿಂದಿನ ಕಾಲದಲ್ಲಿ ತಾನೊಬ್ಬ ಆಸ್ತಿಕ ಎಂದು ತೋರಿಸಿಕೊಳ್ಳುವುದು ಗೌರವ ತರುವ ಸಂಗತಿಯಾಗಿದ್ದರಿಂದ ಹೀಗೆ ತೋರಿಕೆಯ ನಾಮಸ್ಮರಣೆ ಮಾಡುತ್ತಿದ್ದರು ಎಂದು ಕಾಣುತ್ತದೆ. ಆದರೆ ಇಂದಿನ ಪರಿಸರದಲ್ಲಿ ತೋರಿಕೆಯ ನಾಮಸ್ಮರಣೆಗಳು ಅಗತ್ಯವಿಲ್ಲ. ಆದರೂ ಅನೇಕರು ನಾಮಸ್ಮರಣೆಯನ್ನು ನಿಷ್ಠೆ ಯಿಂದ ಮಾಡುತ್ತಾರೆ. ಕಾಸರಗೋಡಿನ ರಾಮದಾಸರ ಆನಂದಾಶ್ರಮದಲ್ಲಿ ನಿರಂತರವಾಗಿ ನಾಮಸ್ಮರಣೆ ನಡೆಯುವುದನ್ನು ನೋಡಬಹುದು. ಇಲ್ಲಿ ಭಕ್ತಾದಿಗಳು ಒಟ್ಟಾಗಿ ಕಲೆತು ನಾಮ ಸ್ಮರಣೆ ಮಾಡುತ್ತಾರೆ. ಸುತ್ತೂರು ಮಠದ ಹಿಂದಿನ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳನ್ನು ''ಮಂತ್ರಮಹರ್ಷಿ'' ಎಂದು ಕರೆಯುತ್ತಾರೆ. ಇವರು ಕೋಟ್ಯಂತರ ''ಓಂ ನಮಃ ಶಿವಾಯ'' ಮಂತ್ರವನ್ನು ಪುಸ್ತಕದಲ್ಲಿ ಬರೆದಿದ್ದಾರೆ. ಹೀಗೆ ಬರೆಯುವ ಮುಖಾಂತರವೂ ಗಾಢವಾದ ನಾಮಸ್ಮರಣೆ ಮಾಡಬಹುದು.

ಹಿಂದೂ ಧರ್ಮೀಯರ ಜಪವನ್ನೇ ಹೋಲುವ ಸಾಧನಾಕ್ರಮ ಇತರ ಧರ್ಮಗಳಲ್ಲೂ ಆಚರಣೆಯಲ್ಲಿವೆ. ಉದಾಹರಣೆಗೆ ಕ್ರಿಸ್ತಧರ್ಮೀಯರಲ್ಲಿ ವಿಶಿಷ್ಟವಾದ ಜಪಮಾಲೆ ಉಪಯೋಗಿಸಿ ಸಣ್ಣ ಪ್ರಾರ್ಥನಾ ವಾಕ್ಯವನ್ನು ಪುನರುಚ್ಚರಿಸುವ ಪದ್ಧತಿ ಆಚರಣೆಯಲ್ಲಿವೆ. ಈ ಜಪಮಾಲೆಯಲ್ಲಿ ಹೃದಯಮಣಿ ಮತ್ತು ಕ್ರಿಸ್ತನ ಶಿಲುಬೆಗಳಿರುತ್ತವೆ. ಇವರ ಕೆಲವು ಜಪಮಾಲೆಗಳಲ್ಲಿ ಮೂವತ್ತ ಮೂರು ಮಣಿಗಳಿರುತ್ತವೆ. ಈ ಮಾಲೆ ಹಿಡಿದು ಮಾಡುವ ಪ್ರಾರ್ಥನೆಗೆ ''ಪ್ರೇಯರ್ ಆಫ್ ದಿ ಹಾರ್ಟ್'' ಎನ್ನುತ್ತಾರೆ. ಹೀಗೆ ಮಾಡುವ 'ಜೀಸಸ್ ಪ್ರೇಯರ್' ನಲ್ಲಿ ಕ್ರಿಸ್ತನ ಪವಿತ್ರನಾಮ ಪ್ರಾರ್ಥನೆಯ ಹೃದಯಭಾಗ. ಮುಸ್ಲಿಮರಲ್ಲಿ ಖುರಾನಿನ ಪ್ರಾರ್ಥನೆಯನ್ನು ಜಪದಂತೆ ಪುನರಾ ವರ್ತಿಸುವ ಆರಾಧನಾ ಪದ್ಧತಿ ಇದೆ. ಸೂಫಿಗಳು ಧಿಕ್‌ರ್ (Dhikr) ಅಥವಾ ಜ಼ಿಕರ್ (Zhikr) ಎಂಬ ಜಪದ ಪದ್ಧತಿಯನ್ನು ಅನುಸರಿಸುತ್ತಾರೆ. ಧಿಕ್‌ರ್ ಎಂದರೆ ಅರೇಬಿಯ ಭಾಷೆಯಲ್ಲಿ ಜಪಮಾಲೆ ಎಂದು ಅರ್ಥ. ಇದಕ್ಕೆ 'ಸ್ಮರಣೆ' ಎಂದೂ ಅರ್ಥವಿದೆ. ಒಟ್ಟಿನಲ್ಲಿ ಜಪಮಾಲೆ ತಿರುಗಿಸುತ್ತ ದೇವರನ್ನು ಸ್ಮರಿಸುವ ಪದ್ಧತಿ ಕ್ರಿಸ್ತ ಹಾಗೂ ಮುಸ್ಲಿಂ ಧರ್ಮೀಯರಲ್ಲಿದೆ. ಬೌದ್ಧಧರ್ಮೀಯರು, ಅವರಲ್ಲೂ ವಿಶೇಷವಾಗಿ ಟಿಬೆಟ್‌ನ ಬೌದ್ಧರು ಜಪಮಾಲೆ ತಿರುಗಿಸುತ್ತ ಸ್ಮರಣೆ ಮಾಡುವುದುಂಟು.

**ನಾಮಜಪವು ಮಾನವನ ಧಾರ್ಮಿಕ, ಆಧ್ಯಾತ್ಮಿಕ ಜೀವನದಲ್ಲಿ ಏಕೆ ಪ್ರಮುಖ ಸ್ಥಾನ ಪಡೆದಿದೆ, ಅದರ ವಿಭಿನ್ನ ಪ್ರಕ್ರಿಯೆಗಳು ಯಾವುವು ಎಂಬ ವಿಚಾರಗಳನ್ನು ಕುರಿತು ಬೌದ್ಧಿಕವಾಗಿಯೂ ಸಮಾಜಶಾಸ್ತ್ರದ ಹಿನ್ನೆಲೆಯಲ್ಲೂ ವಿಶ್ಲೇಷಿಸಿರುವ ಲೇಖಕರು ಉತ್ತಮ ಚಿಂತಕರೂ, ವಾಗ್ಮಿಗಳೂ, ನುರಿತ ಬರಹಗಾರರೂ ಆಗಿದ್ದಾರೆ. ಚಾಮರಾಜನಗರದಲ್ಲಿ 'ದೀನಬಂಧು ಟ್ರಸ್ಟ್' ಎಂಬ ಅನಾಥಾಲಯ ವೊಂದನ್ನು ಕಟ್ಟಿ ಬೆಳೆಸುವ ಮೂಲಕ ಅವರು ಸಮಾಜಸೇವೆಯಲ್ಲೇ ತಮ್ಮನ್ನು ತಾವು ಪೂರ್ಣಾವಧಿ ತೊಡಗಿಸಿಕೊಂಡಿದ್ದಾರೆ.**

ಜೈನ್ ಅನುಯಾಯಿಗಳಲ್ಲಿ ಗುರು ''ಕೋನ್'' ಎಂಬ ನುಡಿಗಟ್ಟನ್ನು ಶಿಷ್ಯನಿಗೆ ಕೊಡುತ್ತಾನೆ. ಇವು ಸಾಮಾನ್ಯವಾಗಿ ಅಸಂಬದ್ಧವಾದ ನುಡಿ ಗಟ್ಟಾಗಿರುತ್ತದೆ. ಉದಾ ಹರಣೆಗೆ, ''ಹೊರಗೆ ಒಂದು ಸಿಪ್ರಸ್ ಮರ ನಿಂತಿದೆ'' – ಇಲ್ಲಿ ನುಡಿಗಟ್ಟಿನ ಅರ್ಥ ಮುಖ್ಯವಲ್ಲ. ಆದರೆ ಅದನ್ನು ಕುರಿತು ಚಿಂತಿಸುವ ಮನಸ್ಸು ಅರ್ಥವಿಲ್ಲದ ಈ ವಾಕ್ಯ ಕುರಿತು ಚಿಂತಿಸಿ ಚಿಂತಿಸಿ ಕೊನೆಗೆ ಸ್ತಬ್ಧವಾಗುವುದು ಮತ್ತು ತನ್ನನ್ನೇ ತಾನು ತಿಳಿಯುವ ಅರಿವಿನಲ್ಲಿ ಕೊನೆಗೊಳ್ಳುವುದು. ಇದು ನಾಮಸ್ಮರಣೆಗೆ ಸಮನಾರ್ಥ ವುಳ್ಳ ಆಚರಣೆಯಲ್ಲದಿದ್ದರೂ ಮನಸ್ಸು ತನ್ನ ಮೂರ್ತ ಸ್ವರೂಪದ ಹಿಡಿತದಿಂದ ಬಿಡಿಸಿಕೊಂಡು ಅಮೂರ್ತವನ್ನು ಗ್ರಹಿಸಲು ಅನುಕೂಲ ವಾಗಬಹುದು.

ನಿರಾಕಾರವಾದಿಗಳು ಜಪ, ಭಜನೆ ಮುಂತಾದ ಸರಳ ಸಾಧನಾ ವಿಧಾನಗಳನ್ನು ಅಷ್ಟಾಗಿ ಗಂಭೀರವಾಗಿ ಪರಿಗಣಿಸದೇ ಇರಬಹುದು. ಶ್ರೀರಾಮಕೃಷ್ಣರ ಗುರು ತೋತಾಪುರಿ ನಿರಾಕಾರದ ಆರಾಧಕ. ರಾಮ ಕೃಷ್ಣರು ಕೈ ಚಪ್ಪಾಳೆ ತಟ್ಟುತ್ತ ತಾಯಿಯನ್ನು ಸ್ಮರಣೆ ಮಾಡುತ್ತಿದ್ದುದನ್ನು ನೋಡಿ, ''ಏನು ರೊಟ್ಟಿ ತಟ್ಟುತ್ತಿದ್ದೀಯ?'' ಎಂದು ತಮಾಷೆ ಮಾಡುತ್ತಿದ್ದರು. ಆದರೆ ಜಪ–ನಾಮಸ್ಮರಣೆಗಳಲ್ಲಿ ನಾಮ–ರೂಪದ ಮಹತ್ವವನ್ನು ಕುರಿತು ಸ್ವಾಮಿ ವಿವೇಕಾನಂದರು ತರ್ಕಬದ್ಧವಾಗಿ ಚರ್ಚಿಸುತ್ತಾರೆ. ನಿರಾಕಾರವನ್ನು ಎತ್ತಿ ಹಿಡಿಯುವ ಇಸ್ಲಾಂ ಧರ್ಮ ವಾಗಲಿ ಅಥವಾ ಕ್ರೈಸ್ತ ಧರ್ಮವಾಗಲಿ ನಾಮರೂಪಗಳನ್ನು ಸಂಪೂರ್ಣವಾಗಿ ತೊರೆಯಲಾಗದಿರುವುದನ್ನು ಸ್ವಾಮೀಜಿ ವಿಶ್ಲೇಷಿ ಸುತ್ತಾರೆ. ಮಹಮ್ಮದೀಯನು ನಮಾಜು ಮಾಡುವಾಗ ಕಾಬಾದ ಮುಂದೆ ಮಾಡುತ್ತಾನೆ. ಆತನಿಗೆ ಗೋಡೆಯೇ ಒಂದು ಮೂರ್ತ ರೂಪದ ಆಸರೆಯಾಗುತ್ತದೆ. ಕ್ರೈಸ್ತರ ಪೂಜಾ ವಿಧಾನವನ್ನು ಗಮನಿಸಿ ದರೆ ಅದು ಇತರೆಲ್ಲ ಧರ್ಮಗಳಲ್ಲಿರುವ ಬಾಹ್ಯ ಪೂಜಾ ವಿಧಾನವನ್ನೇ ಹೋಲುತ್ತದೆ. ಯಾವುದೇ ಒಂದು ರೂಪವನ್ನು ಊಹಿಸಿಕೊಳ್ಳ ಬೇಕಾದರೂ ಅದಕ್ಕೆ ಒಂದು ನಾಮ ಇರಲೇಬೇಕು. ಹಾಗಾಗಿ ನಾಮ ರೂಪಗಳು ಅವಿಭಾಜ್ಯ ಮತ್ತು ಅನಿವಾರ್ಯ. ನಾಮರೂಪಗಳನ್ನು ಅನುಭವಿಸುತ್ತಲೇ ಬೆಳೆದ ಮನಸ್ಸು ಇದನ್ನು ದಾಟಬೇಕಾದರೂ ನಾಮರೂಪದ ಬಾಗಿಲಿನಿಂದಲೇ ಸಾಧ್ಯ.

ಇಷ್ಟದೈವದ ಸ್ಮರಣೆಯಿಂದ, ಇಷ್ಟದೇವರ ಆಕಾರ ಮತ್ತು ಅದರ ಗುಣಗಳು ಒಟ್ಟಿಗೆ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ಆದ್ದರಿಂದ ನಾಮಸ್ಮರಣೆಯಲ್ಲಿ ಆಕಾರ ಮತ್ತು ಗುಣಗಳು ಬಹಳ ಮುಖ್ಯ. ಪ್ರಖ್ಯಾತಿ ಪಡೆದ ಆಧುನಿಕ ಗುರು ಒಬ್ಬ ಹೇಳಿದ ''ರಾಮಕೃಷ್ಣ–ರಾಮಕೃಷ್ಣ'' ಎನ್ನುವ ಬದಲು ''ಕೋಕ ಕೋಲ–ಕೋಕ ಕೋಲ'' ಎನ್ನಬಹುದಲ್ಲ! ಈ ಎರಡೂ ಕೂಡ ಮೂಲದಲ್ಲಿ ನಾಮ ರೂಪಗಳೇ ಆಗಿರುವುದು ಸತ್ಯ, ಆದರೆ ರಾಮಕೃಷ್ಣ ಎಂಬ ನಾಮ ರೂಪದ ಜೊತೆ ಒಂದು ದೈವೀವ್ಯಕ್ತಿತ್ವದ ಉದಾತ್ತ ಮಾದರಿಯೂ ಅಡಗಿದೆ. ರಾಮ ಕೃಷ್ಣ ಎಂಬ ನಾಮಸ್ಮರಣೆ ಈ ಉದಾತ್ತಗುಣಗಳನ್ನು ಅದು ನೀಡುವ ಶಕ್ತಿಯನ್ನು ಸಮಗ್ರವಾಗಿ ಆದರೆ ಸೂಕ್ಷ್ಮರೂಪದಲ್ಲಿ ಸಾಧಕನ ವ್ಯಕ್ತಿ ತ್ವದ ಅಂತರಾಳಕ್ಕೆ ತುಂಬುತ್ತಲೇ ಇರುತ್ತದೆ. ಆದರೆ ಕೋಕಕೋಲದ ನಾಮರೂಪಗಳು ಯಾವ ಮಾದರಿಯನ್ನು ನೀಡಬಲ್ಲದು? ಯಾವ ಶಕ್ತಿಯನ್ನು ನೀಡಬಲ್ಲದು?

ಎಲ್ಲಾ ಸಾಧಕರೂ ಒಂದೇ ಮಂತ್ರವನ್ನು ಜಪಿಸಬೇಕಾದ ಪ್ರಮೇಯ ನಮ್ಮಲ್ಲಿಲ್ಲ. ಏಕದೇವೋಪಾಸನೆಯ ಸೆಮೆಟಿಕ್ ಧರ್ಮ ಗಳಲ್ಲಿ ಇದು ಅನಿವಾರ್ಯವಿರಬಹುದು. ಆದರೆ ಭಾರತೀಯ ಅಧ್ಯಾತ್ಮ ಪರಂಪರೆಯಲ್ಲಿ ಅನೇಕಾನೇಕ ದೇವ–ದೇವಿಯರಿದ್ದಾರೆ. ಆ ದೇವತೆಗಳ ವರ್ಣನೆಯೊಡನೆ ಆ ದೇವತೆಗಳ ವಿಶಿಷ್ಟ ಗುಣಗಳೂ ಹೆಣೆದುಕೊಂಡು ಒಂದು ದೈವೀವ್ಯಕ್ತಿತ್ವದ ಮಾದರಿ ರೂಪುಗೊಳ್ಳುತ್ತದೆ. ಸಾಧಕನಾದವನು ತನ್ನದೇ ಗುಣಧರ್ಮಗಳಿಗೆ ತಾಳೆಯಾಗುವ ದೇವ–ದೇವಿಯರ ನಾಮವನ್ನು ನಾಮಜಪಕ್ಕೆ ಆರಿಸಿಕೊಳ್ಳಬಹುದು. ಹೀಗೆ ಬಹುಸಂಖ್ಯಾತ ದೇವತೆಗಳು ಸಾಧಕನ ಪ್ರವೃತ್ತಿ–ಗುಣಧರ್ಮ ಗಳಿಗೆ ಹೊಂದಿಕೆಯಾಗುವ ಅವಕಾಶವನ್ನು ಕಲ್ಪಿಸಿಕೊಡುತ್ತದೆ. ''ಜಥೋಮತ್–ತಥೋಪತ್'' (ಎಷ್ಟು ಮತಗಳೋ ಅಷ್ಟೂ ಪಥ ಗಳ್) ಎಂಬ ಶ್ರೀರಾಮಕೃಷ್ಣರ ಉದಾತ್ತ ಆಧ್ಯಾತ್ಮಿಕ ಸಂದೇಶ ಮೇಲಿನ ವಿವರಣೆಗೆ ಪೂರಕವಾಗಿದೆ. ಆದರೂ ಸಾಧಕನಾದವನು ಪ್ರಗತಿ ಸಾಧಿ ಸಿದಂತೆ ಈ ನಾಮರೂಪಗಳನ್ನು ದಾಟಿ ಮೇಲೆ ಹೋಗಲೇಬೇಕಾ ಗುತ್ತದೆ. ರಾಮಕೃಷ್ಣರು ಹೇಳುತ್ತಾರೆ, ಮೊದಮೊದಲು ಸಾಧಕನಿಗೆ ನೂರಾರು ಕೈಗಳು – ಆಯುಧಗಳು ಇರುವ ದೇವಿಯ ದರ್ಶನ ವಾಗುತ್ತದೆ. ಅನಂತರ ಸಾತ್ವಿಕಮೂರ್ತಿಯ ದರ್ಶನವಾಗ ತೊಡಗು ತ್ತದೆ. ಕೊನೆಗೆ ಜ್ಯೋತಿ ದರ್ಶನವಾಗಬಹುದು. ಎಂದರೆ ವಿಸ್ತಾರವಾದ ಆಕಾರ ವಿನ್ಯಾಸಗಳು ಕರಗುತ್ತಾ ಸರಳವಾದ ಲಿಂಗಸ್ವರೂಪವನ್ನೋ, ಜ್ಯೋತಿಸ್ವರೂಪವನ್ನೋ ಪಡೆಯುವುದು ಸಾಧಕನ ಬೆಳವಣಿಗೆಯನ್ನು ಸೂಚಿಸುತ್ತದೆ. ರಾಮಕೃಷ್ಣ ಪರಮಹಂಸರಿಗೆ ತೋತಾಪುರಿ ಸಾಧು ನಿರ್ವಿಕಲ್ಪ ಸಮಾಧಿ ಪಡೆಯಲು ಪ್ರೋತ್ಸಾಹಿಸುತ್ತಿದ್ದಾಗ ಕಾಳೀ ಮಾತೆಯ ರೂಪ ಅಡ್ಡ ಬಂದು ನಿಲ್ಲುತ್ತಿತ್ತು. ಆದರೆ ತೋತಾಪುರಿಯ ಸಲಹೆಯಂತೆ ರಾಮಕೃಷ್ಣರು ತಮ್ಮ ಜ್ಞಾನಖಡ್ಗದಿಂದ ಕಾಳೀರೂಪ ವನ್ನೇ ಛೇದಿಸಿ ಊರ್ಧ್ವಮುಖವಾಗಿ ಸಹಸ್ರಾರಕ್ಕೆ ಪ್ರವೇಶಿಸಿ ನಿರ್ವಿಕಲ್ಪ ಸಮಾಧಿಯನ್ನು ಪಡೆದರು. ಹೀಗೆ ನಾಮಸ್ಮರಣೆಯಿಂದ ಪ್ರಾರಂಭವಾದ ಸಾಧನೆ ನಾಮರೂಪಗಳನ್ನು ಹಿಂದೆಯೇ ಬಿಟ್ಟು ಮುಂದೆ ಹೋಗಬಹುದು. ಒಟ್ಟಿನಲ್ಲಿ ನಾಮಸ್ಮರಣೆ ಅದ್ವೈತ ಸಾಧನೆಗೆ ತೊಡಕು ಎಂದು ಭಾವಿಸಬೇಕಾಗಿಲ್ಲ.

ಶ್ರೀ ರಾಮಕೃಷ್ಣರ ಮನಸ್ಸು ಬಹಳ ವಿಶೇಷವಾದದ್ದು. ಅವರಿಗೆ ಸಾಮಾನ್ಯರು ಮಾಡುವಂತಹ ನಾಮಸ್ಮರಣೆ ಜಪಗಳು ಸಾಧ್ಯವಾಗು ತ್ತಿರಲಿಲ್ಲ. ಏಕೆಂದರೆ ನಾಮಸ್ಮರಣೆ ಮಾಡುತ್ತಿದ್ದಂತೆಯೇ ಅವರು ಸಮಾಧಿ ಸ್ಥಿತಿಗೇರಿಬಿಡುತ್ತಿದ್ದರು. ಅವರ ಮನಸ್ಸು ಒಣಗಿದ ಬೆಂಕಿ ಕಡ್ಡಿಯ ಹಾಗೆ, ಒಮ್ಮೆ ಗೀಚಿದರೆ ಸಾಕು ಅದು ಹತ್ತಿಕೊಂಡು ಬಿಡು ತ್ತಿತ್ತು. ನಾಮಸ್ಮರಣೆ ಆನಂದದಾಯಕವಾಗಿರಬೇಕಾದರೆ ಶ್ರದ್ಧೆ ಇರಬೇಕು. ರಾಮಕೃಷ್ಣರು ಶ್ರದ್ಧೆ ಮತ್ತು ಅನುರಾಗಗಳ ಕುರಿತು ಬಹಳ ಹೇಳುತ್ತಿದ್ದರು. ಆಗಾಗ ಅವರ ಹಾಡುತ್ತಿದ್ದ ಹಾಡು–

**ಭಾವುಕನ ಭಾವದೊಲು ಅವನೊಳುದಿಸುವ ಒಲವು,**
**ಅದಕನುಸಾರ ಅವನು ಪಡೆಯುವ ಫಲವು**
**ಶ್ರದ್ಧೆ ಎಲ್ಲಕು ಮೂಲ.**

ಮತ್ತೆ ಹಾಡುತ್ತಿದ್ದರು, 'ಅನುರಾಗ ಕಲ್ಲದೆಯೆ ಒಲಿಯದಿಹೆ ಪ್ರಭು ನೀನು.' ಭಗವಂತನ ಮೇಲೆ ಇಂತಹ ಶುದ್ಧವಾದ ಶ್ರದ್ಧೆ–

ಅನುರಾಗಗಳು ಹುಟ್ಟಿದರೆ ನಾಮಸ್ಮರಣೆ ಆನಂದದಾಯಕವಾಗಿರುತ್ತದೆ. ನಾಮಸ್ಮರಣೆ ಮಾಡುವ ಮನಸ್ಸು ಬಹುಬೇಗ ತಾನು ಸ್ಮರಿಸುವ ರೂಪದಲ್ಲಿ ಲಯವಾಗಿ ಭಾವಸಮಾಧಿಯನ್ನು ಪಡೆಯುತ್ತದೆ. ಇಷ್ಟದೇವರ ರೂಪು ಅಚ್ಚಳಿಯದೆ ಮನಸ್ಸಿನಲ್ಲಿ ಮುದ್ರೆಯಾಗುತ್ತದೆ. ಬೃಂದಾವನದ 'ಗೋಪೀಕೃಷ್ಣನನ್ನು' ಗಾಢವಾಗಿ ಪ್ರೀತಿಸುತ್ತಿದ್ದ ಗೋಪಿಕೆಯರು ಕೃಷ್ಣನ ಗೋಕುಲ ನಿರ್ಗಮನದ ನಂತರ ಅವನನ್ನು ನೋಡಲು ದ್ವಾರಕೆಗೆ ಹೋದರು. ಆದರೆ ಇಲ್ಲಿ ಕಂಡದ್ದು ಗೋವಳ ಕೃಷ್ಣ ಅಲ್ಲ. ಇವನು ಸಿಂಹಾಸನದ ಮೇಲೆ ಕಿರೀಟಧಾರಿಯಾಗಿ ಕುಳಿತಿದ್ದ ದ್ವಾರಕೆಯ ಕೃಷ್ಣ. ಈ ರೂಪದ ಬದಲಾವಣೆಯನ್ನು ಗೋಪಿಕೆಯರ ಮನಸ್ಸು ಒಪ್ಪಿಕೊಳ್ಳಲಿಲ್ಲ. ಅವರ ಮನಃಪಟಲದ ಮೇಲೆ ಬೃಂದಾವನದ ಕೃಷ್ಣ ಅಚ್ಚೊತ್ತಿದ್ದ. ಈ ಗೋಪಿಕಾಸ್ತ್ರೀಯರು ತಮ್ಮ ಮುಖಕ್ಕೆ ಸೆರಗು ಎಳೆದುಕೊಂಡು, ರೂಪ ಬದಲಾದ ಕೃಷ್ಣನನ್ನು ನೋಡಲಿಚ್ಛಿಸಲಿಲ್ಲ. ಈ ದ್ವಾರಕೆಯ ಕೃಷ್ಣನನ್ನು ನೋಡಿ ನಾವು ನಮ್ಮ ''ಕೃಷ್ಣನಿಷ್ಠೆ''ಯನ್ನು ಕಳೆದುಕೊಳ್ಳುವುದು ಬೇಡವೆಂದು ತಮ್ಮತಮ್ಮಲ್ಲೆ ಮಾತನಾಡಿಕೊಂಡರು. ನಾಮ-ರೂಪಗಳ ಸ್ಮರಣೆ ನಿಷ್ಠಾಭಕ್ತಿಗೆ ಕೊಂಡೊಯ್ಯುತ್ತವೆ. ದೀರ್ಘಕಾಲ ಶ್ರೀರಾಮಕೃಷ್ಣರ ಭಾವಚಿತ್ರದ ಮೇಲೆ ಧ್ಯಾನಮಾಡಿದ ಸ್ವಾಮಿಗಳು ತಮಗೆ ಕನ್ನಡಿಯಲ್ಲಿ ರಾಮಕೃಷ್ಣರ ಭಾವಚಿತ್ರವನ್ನು ನೋಡಲಾಗುವುದಿಲ್ಲ, ಮನಸ್ಸು ನಿರಾಕರಿಸುತ್ತದೆ ಎಂದು ಹೇಳಿದರು. ಕನ್ನಡಿಯಲ್ಲಿ ಚಿತ್ರಗಳು ಪಾರ್ಶ್ವ ವಿಪರ್ಯಯಕ್ಕೆ ಒಳಗಾಗುತ್ತವೆ. ಹಾಗಾಗಿ ಮನಸ್ಸಿನಲ್ಲಿ ಮುದ್ರೆಯಾದ ಚಿತ್ರಕ್ಕೂ ಕನ್ನಡಿಯ ಬಿಂಬಕ್ಕೂ ವ್ಯತ್ಯಾಸವಿರುತ್ತದೆ. ಈ ವ್ಯತ್ಯಾಸವನ್ನು ಮನಸ್ಸು ಒಪ್ಪುವುದಿಲ್ಲ. ಇದನ್ನು ಮನಗಂಡಾಗ ಗೋಪಿಕಾಸ್ತ್ರೀಯರ ನಿಷ್ಠಾಭಕ್ತಿ ಅತಿಶಯೋಕ್ತಿಯಾಗಿ ಕಾಣುವುದಿಲ್ಲ.

ನಾಮಸ್ಮರಣೆಯನ್ನು ದೀರ್ಘಕಾಲ ಅಭ್ಯಾಸ ಮಾಡಿದರೆ ಅದು ಅಜಪಜಪಕ್ಕೆ ಕೊಂಡೊಯ್ಯುತ್ತದೆ. ಅಜಪಜಪ ಎಂದರೆ ಅಪ್ರಯತ್ನಪೂರ್ವಕವಾಗಿ ನಡೆಯುವ ಜಪ ಅಥವಾ ನಾಮಸ್ಮರಣೆ. ಶಾರದಾ ಮಾತೆಯವರ ನೇರ ಶಿಷ್ಯರಾಗಿದ್ದ ಸ್ವಾಮಿ ವೀರೇಶ್ವರಾನಂದರ ಕಾಲಿಗೆ ನಮಸ್ಕರಿಸಲು ಅನೇಕ ಭಕ್ತರು ಸಾಲಾಗಿ ನಿಂತಿದ್ದೆವು. ಸ್ವಾಮೀಜಿಯವರ ತುಟಿಗಳು ಅಪ್ರಯತ್ನಪೂರ್ವಕವಾಗಿ ಜಪದಲ್ಲಿ ತೊಡಗಿದ್ದುದು ಗೊತ್ತಾಗುತ್ತಿತ್ತು. ಹೀಗೆ ಮುಂದುವರಿದ ಸಾಧಕರಲ್ಲಿ ಅಜಪಜಪ ತಾನೇತಾನಾಗಿ ನಡೆಯತ್ತದೆ. ಗೊಂದಾವಲಿಯ ಶ್ರೀಬ್ರಹ್ಮಚೈತನ್ಯರ ಜೀವನದಲ್ಲಿ ಪವಾಡಸದೃಶವಾದ ಅಜಪಜಪದ ಘಟನೆಗಳು ನಡೆದುದು ತಿಳಿದು ಬರುತ್ತದೆ. ಒಮ್ಮೆ ಭಕ್ತನೊಬ್ಬ ಜಪಮಾಡುವುದು ಹೇಗೆ ಎಂದು ಮಹಾರಾಜರನ್ನು ಕೇಳುತ್ತಾನೆ. ಆಗ ಮಹಾರಾಜರು ತಮ್ಮ ಕೈಚಾಚಿ ಕಿವಿಯನ್ನು ಹಸ್ತದ ಮೇಲಿರಿಸಲು ಹೇಳಿದರು. ಭಕ್ತನಿಗೆ ಮಹಾರಾಜರ ದೇಹದಿಂದ ರಾಮನಾಮ ಮಿಡಿಯತ್ತಿರುವುದು ಕೇಳಿತು. ತಬ್ಬಿಬ್ಬಾದ ಭಕ್ತನಿಗೆ ಮಹರಾಜರು ಹೀಗೆ ವಿವರಣೆ ನೀಡಿದರು – ''ಇದೇನೂ ಪವಾಡವಲ್ಲ. ನಮ್ಮ ಗ್ರಂಥಗಳಲ್ಲಿ ಇದನ್ನು ಅಜಪಜಪ ಎನ್ನುತ್ತಾರೆ. ಒತ್ತಾಯಕ್ಕೆ ಮಾಡುವ ಜಪ ಆಯಾಸ ಉಂಟುಮಾಡುತ್ತದೆ. ಆದರೆ ನಾಮದ ರುಚಿ ಕಂಡುಕೊಂಡು ಪ್ರೀತಿಯಿಂದ ಮಾಡಿದರೆ ಅದರಿಂದ ನಿರಂತರ ಜಪದ ಸಹಜ ಸ್ಥಿತಿ ಉಂಟಾಗುತ್ತದೆ. ಮೊದಲ ಹಂತಗಳಲ್ಲಿ ಜಪದ ಮೇಲೆ ಆಸಕ್ತಿ ಉಂಟಾಗದಿರಬಹುದು. ಆದರೆ ಬಿಡದೆ ಜಪ ಮುಂದುವರಿಸಿದರೆ ಅದರಲ್ಲಿ ರುಚಿ ಹುಟ್ಟುತ್ತದೆ. ಶ್ರದ್ಧಾಭಕ್ತಿಗಳಿಂದ, ನಿಗ್ರಹದಿಂದ ಜಪದ ಮೇಲೆ ಹಿಡಿತ ಸಾಧಿಸಿ ನಿನ್ನನ್ನೇ ನೀನು ಮರೆತುಬಿಡುವ ಅಮನಸ್ಕ ಸ್ಥಿತಿ ಉಂಟಾಗುತ್ತದೆ. ಈ ಸ್ಥಿತಿಯಲ್ಲಿ ನೀನು ಭಗವಂತನ ಬಾಗಿಲನ್ನು ಬಲವಾಗಿ ತಟ್ಟುತ್ತೀಯ; ಬಾಗಿಲು ವಿಶಾಲವಾಗಿ ತೆರೆದುಕೊಳ್ಳುತ್ತದೆ.'' ಕಾಲದ ಕುಲುಮೆಯಲ್ಲಿ ಎಲ್ಲವೂ ಕರಗಿಹೋಗುತ್ತದೆ ಆದರೆ ನಾಮ ಮಾತ್ರ ಅಮರ ಎಂದು ಅವರು ಹೇಳುತ್ತಿದ್ದರು. ಅವರು ದೇಹ ಬಿಡುವ ಮೊದಲು ಹೇಳಿದ ಕಟ್ಟಕಡೆಯ ಮಾತುಗಳೊಂದಿಗೆ ಈ ಲೇಖನವನ್ನು ಮುಗಿಸೋಣ: ''ನಾಮಸ್ಮರಣೆಯೇ ನನ್ನ ಜೀವನ; ಎಲ್ಲಿ ಭಗವನ್ನಾಮಸ್ಮರಣೆ ನಡೆಯುತ್ತದೆಯೊ ಅಲ್ಲಿ ನಾನಿದ್ದೇನೆಂದು ಭಾವಿಸು .''



* ನಾಮವು ಸಚ್ಚಿದಾನಂದ ಸ್ವರೂಪವಾಗಿರುತ್ತದೆ. ಪರಮಾತ್ಮ ಸ್ವರೂಪದ ಅತ್ಯಂತ ನಿಕಟವಿರುವ ವಸ್ತುವೆಂದರೆ ಅದು ಕೇವಲ ನಾಮವಾಗಿರುತ್ತದೆ. ನಾಮವು ಚಿನ್ಮಯವಾಗಿರುವುದರಿಂದ ಅದರ ಆನಂದವು ಉಕ್ಕೇರಿಬರುತ್ತದೆ.

* ನಾಮವು ವೇದಗಳಿಗಿಂತ ಶ್ರೇಷ್ಠವಾಗಿರುತ್ತದೆ. ಹೇಗೆಂದರೆ, ವೇದಾಧ್ಯಯನದಿಂದ ಲಾಭವಾಗಬೇಕಾದರೆ ನಾಲ್ಕೂ ವೇದಗಳ ಅಭ್ಯಾಸ ಮಾಡಬೇಕಾಗುತ್ತದೆ. ಅದಕ್ಕಾಗಿ ಸಾಕಷ್ಟು ಸಮಯ ಹಾಗೂ ಶ್ರಮ ಹತ್ತುತ್ತದೆ. ನಾಮಕ್ಕೆ ಶ್ರಮ ಬೇಕಾಗಿಲ್ಲ. ಎರಡನೆಯದಾಗಿ, ವೇದದ ಅಧಿಕಾರವು ಎಲ್ಲರಿಗೂ ಇರುವುದಿಲ್ಲ. ಆದರೆ ನಾಮವನ್ನು ಯಾರಾದರೂ ತೆಗೆದುಕೊಳ್ಳಬಹುದು. ವೇದಮಂತ್ರಗಳ ಆರಂಭವು ಓಂಕಾರದಿಂದಲೇ ಆಗುತ್ತದೆ. ಆದ್ದರಿಂದ ವೇದಾರಂಭದಲ್ಲಿ ಕೂಡ ನಾಮವೇ ಇರುತ್ತದೆ.

* ಸದ್ಗುರುಗಳಿಗೆ ಶರಣುಹೋಗಿ ನಿಃಸಂಶಯ ವೃತ್ತಿ ಉಳ್ಳವರಾಗಿ ನಾಮ ತೆಗೆದುಕೊಳ್ಳಬೇಕು. ನಾಮದಲ್ಲಿ ಪ್ರೇಮವಿಡಬೇಕು. ಹಾಗೆ ಮಾಡಿದರೆ ಅಲ್ಲಿಯೇ ಭಗವಂತನು ಪ್ರಕಟವಾಗುತ್ತಾನೆ. ಯಾರ ವಾಸನೆಗಳು ನಾಮದಲ್ಲಿ ಸ್ಥಿರವಾಗಿರುವವೋ ಆ ಮನುಷ್ಯನೇ ಧನ್ಯನು.

* ಮಕ್ಕಳು ಪತಂಗ ಹಾರಿಸುತ್ತಾರೆ. ಪತಂಗವು ಆಕಾಶದಲ್ಲಿ ಕಾಣದಷ್ಟು ದೂರ ಹೋಗುತ್ತದೆ. ಆದರೂ ಆ ಪತಂಗ ಹಾರಿಸುವವನು 'ಪತಂಗವು ನನ್ನ ಕೈಯಲ್ಲಿದೆ' ಎನ್ನುತ್ತಾನೆ. ಏಕೆಂದರೆ ಪತಂಗದ ದಾರವು ಅವನ ಕೈಯಲ್ಲಿರುತ್ತದೆ. ಎಲ್ಲಿಯವರೆಗೆ ಅಖಂಡ ನಾಮಸ್ಮರಣೆಯ ದಾರವು ನಮ್ಮ ಕೈಯಲ್ಲಿರುತ್ತದೆಯೋ ಅಲ್ಲಿಯವರೆಗೆ ಭಗವಂತನು ನಮ್ಮ ಕೈಯಲ್ಲಿಯೇ ಇರುತ್ತಾನೆ.

* ನಿಜವಾಗಿಯೂ ನಾಮಸ್ಮರಣೆಯ ಅಭ್ಯಾಸವು ಒಂದು ದೃಷ್ಟಿಯಿಂದ ಬಹಳ ಸುಲಭವಾಗಿರುತ್ತದೆ. ಅದಕ್ಕೆ ಯಾವುದೇ ಉಪಾಧಿ ಬೇಕಾಗುವುದಿಲ್ಲ. ಅದಕ್ಕೆ ಕಾಲ, ವೇಳೆ ಇರುವುದಿಲ್ಲ. ಅದಕ್ಕೆ ಸ್ಥಳದ ಹಾಗೂ ದೇಹದ ಅವಸ್ಥೆಯ ಬಂಧನವಿರುವುದಿಲ್ಲ. ಎಲ್ಲಿಯವರೆಗೆ ಜೀವವು ಎಚ್ಚರದಲ್ಲಿರುತ್ತದೋ, ಅಲ್ಲಿಯವರೆಗೆ ನಾಮವನ್ನು ತೆಗೆದುಕೊಳ್ಳಲು ಬರುತ್ತದೆ.

*–ಬ್ರಹ್ಮಚೈತನ್ಯ ಶ್ರೀ ಗೋಂದಾವಲೇಕರ್ ಮಹಾರಾಜರು*

# ಅದ್ವೈತ ಸಿದ್ಧಾಂತದಲ್ಲಿ ಮಹಾವಾಕ್ಯಗಳ ಪ್ರಾಮುಖ್ಯತೆ



ಸ್ವಾಮಿ ವೀರೇಶಾನಂದ

**ಅದ್ವೈತ ಪರಂಪರೆಯು ವೇದಾಂತದರ್ಶನದ ತತ್ತ್ವಗಳನ್ನು ಅನುಷ್ಠಾನಗೊಳಿಸಲು ವಿಧಿಸುವ ಹಲವು ಸಾಧನಗಳಲ್ಲಿ ಮಹಾವಾಕ್ಯಗಳ ಉಪದೇಶವೂ ಒಂದು. ಈ ವಿಧಾನ ಪರಂಪರಾಗತ ಸಂನ್ಯಾಸ ಪರಂಪರೆಯ ಒಂದು ಅಂಗವಾಗಿರುವಂತೆಯೇ ತಾತ್ತ್ವಿಕ ಜಿಜ್ಞಾಸೆ, ವಿಚಾರ ಹಾಗೂ ಧ್ಯಾನ-ಮನನಗಳ ವಸ್ತುವೂ ಆಗಿದೆ. ಈ ಅಗಾಧ ವಿಷಯದ ಬಗ್ಗೆ ವಿದ್ವತ್ಪೂರ್ಣವಾಗಿ ಬರೆದಿರುವ ಪೂಜ್ಯ ಸ್ವಾಮೀಜಿಯವರು 'ವಿವೇಕಪ್ರಭ'ದ ಹಿಂದಿನ ಸಂಪಾದಕರಾಗಿದ್ದರು. ಉತ್ತಮ ವಾಗ್ಮಿಗಳೂ, ಸಂಸ್ಕೃತ ವಿದ್ವಾಂಸರೂ ಆಗಿರುವ ಅವರು ಪ್ರಸ್ತುತ ಬೇಲೂರು ಮಠದಲ್ಲಿರುವ ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.**

ಭಕ್ತಿಶಾಸ್ತ್ರಗಳಲ್ಲಿ ಈಶ್ವರನ ಆರಾಧನೆಗೇ ಪ್ರಾಧಾನ್ಯ. ಈಶ್ವರನೆಂದರೆ ಪರಮಸತ್ಯದ ಸಾಪೇಕ್ಷ ಸ್ವರೂಪ. ಪರಮಸತ್ಯವನ್ನು ಉಪನಿಷತ್ತುಗಳು 'ಬ್ರಹ್ಮನ್' ಎಂದು ಕರೆಯುತ್ತವೆ. ಅದ್ವೈತ ಸಿದ್ಧಾಂತದ ಪ್ರಕಾರ ಬ್ರಹ್ಮವು ನಿರಪೇಕ್ಷ ತತ್ತ್ವ. ಅಂದರೆ ಬೇರೆ ಯಾವುದರ ಜೊತೆಗೂ ಅದನ್ನು ಹೋಲಿಸಲಾಗದು. ಇದೇಕೆ? ಇದನ್ನು ಬಿಟ್ಟು ಬೇರೆ ಏನೂ ಇಲ್ಲ. **ಏಕಮೇವ ಅದ್ವಿತೀಯಂ ಬ್ರಹ್ಮ** ಎನ್ನುತ್ತವೆ ಉಪನಿಷತ್ತುಗಳು. ಈ ಬ್ರಹ್ಮವು ಒಂದೇ; ಅದನ್ನು ಬಿಟ್ಟು ಬೇರೆ ಏನೂ ಇಲ್ಲ ಎಂದು ಇದರ ಅರ್ಥ. 'ಹಾಗಾದರೆ ಈ ಜಗತ್ತು ಇದೆಯಲ್ಲಾ, ಜೀವಿಗಳು ಇದ್ದಾರಲ್ಲ?' ಎಂಬ ಪ್ರಶ್ನೆ ಬರುತ್ತದೆ. ಬ್ರಹ್ಮವೇ ಈ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ ಎಂಬುದೇ ಇದಕ್ಕೆ ಉತ್ತರ. ಅದು ಹೇಗೆ ಕಾಣಿಸಿಕೊಳ್ಳುತ್ತದೆ? ಸಂಜೆಯ ಹೊತ್ತು, ಮಬ್ಬಾದ ಬೆಳಕಿನಲ್ಲಿ ಹಗ್ಗವು ಹಾವಿನಂತೆ ಕಾಣಿಸಿಕೊಳ್ಳುತ್ತದಷ್ಟೇ, ಆ ರೀತಿ ಎನ್ನುತ್ತಾರೆ ಅದ್ವೈತಿಗಳು. ಅದು ಭ್ರಮೆಯಲ್ಲವೋ ಎಂದರೆ ಅದೇ ರೀತಿ ಈ ಜಗತ್ತೂ ಕೂಡ ಭ್ರಮೆಯೇ ಎನ್ನುತ್ತಾರೆ ಅವರು. ಇರುವುದು ಬ್ರಹ್ಮತತ್ತ್ವವೊಂದೇ; ಆದರೆ ಅದು ಕಾಣಿಸಿಕೊಳ್ಳುವುದು ಜೀವಿಗಳಾಗಿ, ಜಗತ್ತಾಗಿ. ಇದೇಕೆ ಹೀಗೆ ಎಂದು ಕೇಳುತ್ತೀರೊ? ಅದಕ್ಕೆ ಅದ್ವೈತಿಗಳು ಕೊಡುವ ಉತ್ತರ 'ಮಾಯೆ' ಅಥವಾ 'ಅವಿದ್ಯೆ' ಎಂದು. ಹಗ್ಗ ಹಾವಾಗಿ ಕಾಣುವುದು ಏಕೆ? ತಪ್ಪು ತಿಳಿವಳಿಕೆಯಿಂದ. ಹಾಗೆಯೇ ಬ್ರಹ್ಮವು ಅನೇಕ ವಿಧವಾಗಿ ಕಾಣುವುದು ಕೂಡ ಅಜ್ಞಾನದ ದೆಸೆಯಿಂದ ಎಂದು ಅವರು ಹೇಳುತ್ತಾರೆ. ಅಜ್ಞಾನ ಏಕೆ ಹುಟ್ಟುತ್ತದೆ ಎಂದರೆ ಮಾಯೆಯಿಂದ ಎನ್ನುವುದೇ ಉತ್ತರ.

ಮಾಯೆಯೆಂದರೆ ಏನು ಎಂದು ಕೇಳುವಿರೋ? 'ಇಲ್ಲದ್ದನ್ನು ಇರುವಂತೆ ತೋರಿಸುವ ಒಂದು ಶಕ್ತಿ.' ಈ ಮಾಯೆಯ ಹಂದರದ ಒಳಗಿನಿಂದ ನೋಡಿದಾಗ, ಜೀವಿಗಳು, ಜಗತ್ತು ಎಲ್ಲ ಇರುವಂತೆ ಕಾಣುತ್ತದೆ; ನಿರಪೇಕ್ಷ ಬ್ರಹ್ಮವು ಸಾಪೇಕ್ಷವಾಗಿ, ನಿರ್ಗುಣ ಬ್ರಹ್ಮವು ಸಗುಣ ಬ್ರಹ್ಮವಾಗಿ ಕಾಣಿಸಿಕೊಳ್ಳುತ್ತದೆ. ಪರಬ್ರಹ್ಮದ ಈ ಸಾಪೇಕ್ಷ ಅಥವಾ ಸಗುಣ ಅಂಶವನ್ನೇ 'ಈಶ್ವರ' ಎನ್ನುವುದು. ಪರಬ್ರಹ್ಮ ತತ್ತ್ವದ ಈ ಅಂಶಕ್ಕೆ ಭಕ್ತಿಪಂಥಗಳಾದ ದ್ವೈತ ಮತ್ತು ವಿಶಿಷ್ಟಾದ್ವೈತ ಸಂಪ್ರದಾಯಗಳು ಪ್ರಾಧಾನ್ಯತೆಯನ್ನು ನೀಡುತ್ತವೆ. ಅದಕ್ಕೆ ಮೀರಿದ ಪರಸತ್ಯದ ಕಲ್ಪನೆಯನ್ನು ಅವು ಅಲ್ಲಗಳೆಯುತ್ತವೆ. ಅದೇ ತತ್ತ್ವದ ನಿರಪೇಕ್ಷ ತತ್ತ್ವಕ್ಕೆ ಪ್ರಾಧಾನ್ಯತೆಯನ್ನು ನೀಡುವವರು ಅದ್ವೈತಿಗಳು. ಹಾಗೆಂದು ಅವರು ಈಶ್ವರನನ್ನು ನಿರಾಕರಿಸುವುದಿಲ್ಲ. ನಮ್ಮಲ್ಲಿ ಜಗತ್ತಿನ ಭಾವನೆ ಇರುವವರೆಗೆ ಈಶ್ವರನಲ್ಲಿ ಪೂಜ್ಯಭಾವನೆ, ಭಕ್ತಿ ಬೇಕೇಬೇಕು ಎನ್ನುತ್ತಾರೆ ಅವರು. ಭಕ್ತಿಶಾಸ್ತ್ರಗಳು ಭಗವಂತನ ನಾಮ ಸಂಕೀರ್ತನೆಗೆ ಒತ್ತು ಕೊಡುತ್ತವೆ. 'ನಾಮ'-'ನಾಮಿ' ಬೇರೆಯಲ್ಲ ಎನ್ನುತ್ತಾರೆ ಶ್ರೀರಾಮಕೃಷ್ಣರು. ನಾಮ ಸಂಕೀರ್ತನೆ, ನಾಮಜಪಗಳೇ ಅಲ್ಲಿ ಮುಖ್ಯ ಸಾಧನೆಗಳು. ಆದರೆ, ಅದ್ವೈತ ಸಿದ್ಧಾಂತದಲ್ಲಿ 'ಆತ್ಮವಿಚಾರ' ಅಥವಾ 'ಬ್ರಹ್ಮವಿಚಾರ' ಎನ್ನುವುದೇ ಮುಖ್ಯ ಸಾಧನೆ.

**ಶಬ್ದ ಪ್ರಮಾಣ:** ವೇದಾಂತಿಗಳು ಉಪನಿಷತ್ತುಗಳನ್ನು ಸರ್ವೋತ್ಕೃಷ್ಟ ಪ್ರಮಾಣ ಎಂದು ಪರಿಗಣಿಸುತ್ತಾರೆ. ಪ್ರಮಾಣ ಎಂದರೆ ಜ್ಞಾನವನ್ನು ಪ್ರಕಾಶಪಡಿಸುವ ಸಾಧನ. ಅತೀಂದ್ರಿಯ ವಿಷಯಗಳಲ್ಲಿ ಶ್ರುತಿ ಅಥವಾ ವೇದವೇ ಪ್ರಮಾಣ. ಅದರಲ್ಲೂ ಬ್ರಹ್ಮ ಅಥವಾ ಆತ್ಯಂತಿಕ ಸತ್ಯದ ವಿಷಯದಲ್ಲಿ ವೇದಗಳ ತಾತ್ತ್ವಿಕ ಭಾಗವಾದ ಉಪನಿಷತ್ತುಗಳೇ ಪ್ರಮಾಣ ಎಂಬುದು ವೇದಾಂತಿಗಳ ನಿಲುವು. ಇದನ್ನು ಶಬ್ದಪ್ರಮಾಣ ಅಥವಾ ಆಗಮಪ್ರಮಾಣ ಎನ್ನುತ್ತಾರೆ. ಉಪನಿಷತ್ತುಗಳ ವಾಕ್ಯಗಳಿಂದ ಹೊರಹೊಮ್ಮುವ ಜ್ಞಾನವನ್ನು ಬೇರೆ ಯಾವ ಪ್ರಮಾಣಗಳಿಂದಲೂ ಪಡೆಯಲು ಸಾಧ್ಯವಿಲ್ಲ. ಇತರೆ ಪ್ರಮಾಣಗಳೆಂದರೆ ಪ್ರತ್ಯಕ್ಷ, ಅನುಮಾನ ಮುಂತಾದವು. ಅವು ಇಂದ್ರಿಯಗಳಿಂದ ಗ್ರಹಿಸಬಹುದಾದ ಜ್ಞಾನಕ್ಕೆ ಸಾಧನಗಳಾಗುತ್ತವೆ. ಆದರೆ, ಶ್ರುತಿ ಅಥವಾ ವೇದವು ಅತೀಂದ್ರಿಯ ವಿಷಯಗಳ ವಿಚಾರದಲ್ಲಿ ಏಕಮೇವ ಪ್ರಮಾಣ. ಅವು ತಮ್ಮ ಜ್ಞಾನವನ್ನು ನೀಡುವುದು ವೇದವಾಕ್ಯಗಳ ಮೂಲಕ. ಉಪನಿಷತ್ತುಗಳು ಕೂಡ ವೇದದ ಅವಿಭಾಜ್ಯ ಅಂಗಗಳಾಗಿರುವುದರಿಂದ ಅವೂ ವೇದವಾಕ್ಯಗಳೇ.

ಶ್ರೀ ಚಿತ್ಸುಖಾಚಾರ್ಯರು ಅದ್ವೈತ ಸಂಪ್ರದಾಯದ ಶ್ರೇಷ್ಠ ಪ್ರತಿಪಾದಕರಲ್ಲಿ ಒಬ್ಬರು. ಅವರು ಹೇಳುವಂತೆ ಶಬ್ದ ಪ್ರಮಾಣದ ಮೂಲಕ, ಪ್ರತ್ಯಕ್ಷ ಮುಂತಾದ ಇತರ ಪ್ರಮಾಣಗಳಿಲ್ಲದೆಯೇ, ಅಪರೋಕ್ಷ ಅಥವಾ ನೇರವಾದ ಜ್ಞಾನವನ್ನು ಪಡೆಯಬಹುದು. ಇದಕ್ಕೆ ಅವರು 'ದಶಮಸ್ತ್ವಮಸಿ' ('ನೀನು ಹತ್ತನೆಯವನು') ಎಂಬ ವಾಕ್ಯದ ಉದಾಹರಣೆಯನ್ನು ನೀಡುತ್ತಾರೆ. ಇದರ ಹಿಂದೆ ಒಂದು ಹಿನ್ನೆಲೆ ಇದೆ. ಹತ್ತುಮಂದಿ ಮೂರ್ಖರು ಒಂದು ನದಿಯನ್ನು ದಾಟಿದರು. ಎಲ್ಲರೂ ದಾಟಿ ಬಂದಿದ್ದಾರೆಯೋ, ಇಲ್ಲವೋ ಎಂದು ತಿಳಿಯುವುದಕ್ಕಾಗಿ ಅವರಲ್ಲೇ ಒಬ್ಬನು ಎಲ್ಲರನ್ನೂ ಎಣಿಸಿದ. ಆದರೆ

ತನ್ನನ್ನು ಎಣಿಸುವುದನ್ನು ಮಾತ್ರ ಬಿಟ್ಟುಬಿಟ್ಟ. ತಮ್ಮಲ್ಲಿ ಒಬ್ಬನು ನದಿಯ ಪಾಲಾಗಿಬಿಟ್ಟನೆಂದು ಅವರೆಲ್ಲರೂ ಅಳಲಾರಂಭಿಸಿದರು. ಅದೇ ಸಮಯಕ್ಕೆ ನದಿಯ ಆ ಕಡೆಯ ದಡದಿಂದ ಒಬ್ಬ ವ್ಯಕ್ತಿ ಬಂದನು. ಇವರ ದುಃಖದ ಕಾರಣವನ್ನು ಕೇಳಿ ತಿಳಿದನು. ''ನಾನು ನಿಮಗೆ ಹತ್ತನೆಯವನನ್ನು ಹುಡುಕಿಕೊಡುತ್ತೇನೆ'' ಎಂದನು. ಆ ಮೂರ್ಖರನ್ನು ಸಾಲಾಗಿ ನಿಲ್ಲಿಸಿ, ಒಂಬತ್ತರವರೆಗೆ ಎಣಿಸಿದನು. ಕಡೆಯವನಿಗೆ ''ನೀನೇ ಹತ್ತನೆಯವನು'' ಎಂದನು. ಹತ್ತನೆಯವನು ಎಲ್ಲಿಯೂ ಕಳೆದುಹೋಗಿರಲಿಲ್ಲ, ಅಲ್ಲೇ ಇದ್ದನು. ಆದರೆ ಅಜ್ಞಾನ ದಿಂದಾಗಿ ತಾನೇ ಹತ್ತನೆಯವನು ಎಂದು ಅವನಿಗೆ ಗೊತ್ತಿರಲಿಲ್ಲ, ಅಷ್ಟೇ. ಇಲ್ಲಿ ''ನೀನೇ ಹತ್ತನೆಯವನು'' ಎನ್ನುವುದೇ ಶಬ್ದ ಪ್ರಮಾಣ. ''ನಾನೇ ಹತ್ತನೆಯವನು'' ಎಂದು ನೇರವಾಗಿ ತಿಳಿದುಕೊಳ್ಳುವ ಪ್ರಕ್ರಿಯೆಯೇ ಅಪರೋಕ್ಷ ಜ್ಞಾನ. ಹೀಗೆ ಶಬ್ದಪ್ರಮಾಣವು ಅಪರೋಕ್ಷ ಜ್ಞಾನವನ್ನು ಉಂಟುಮಾಡಬಲ್ಲುದು ಎನ್ನುವುದು ಅದ್ವೈತಿಗಳ ಅಭಿಪ್ರಾಯ.

ಇದೇ ವಿಧಾನವನ್ನು ವೇದಾಂತ ವಾಕ್ಯಗಳಿಗೂ ಅನ್ವಯಿಸೋಣ. ವೇದಾಂತ ವಾಕ್ಯಗಳು ಆತ್ಮ ಮತ್ತು ಬ್ರಹ್ಮ ತತ್ತ್ವಗಳ ಐಕ್ಯಭಾವನೆಯ ಅಪರೋಕ್ಷ ಜ್ಞಾನವನ್ನು ಉಂಟುಮಾಡುವಲ್ಲಿ *ಕರಣ* ಅಂದರೆ ಮುಖ್ಯ ಸಾಧನಗಳಾಗಿ ಪಾತ್ರ ವಹಿಸುತ್ತವೆ ಎಂದು ಚಿತ್ಸುಖಾ ಚಾರ್ಯರು ಹೇಳುತ್ತಾರೆ. ಪ್ರತ್ಯಕ್ಷ, ಅನುಮಾನ ಮುಂತಾದ ಇತರ ಪ್ರಮಾಣಗಳು (ಜ್ಞಾನಸಾಧನಗಳು) ಒಮ್ಮೊಮ್ಮೆ ನಮಗೆ ದೋಷ ಪೂರಿತ ತಿಳಿವಳಿಕೆಯನ್ನು ನೀಡಬಹುದು. ಆದರೆ, ಶ್ರುತಿ ವಾಕ್ಯಗಳು ಸಂಪೂರ್ಣವಾಗಿ ದೋಷರಹಿತವಾದುವು ಎಂದು ವೇದಾಂತಿಗಳು ನಂಬುತ್ತಾರೆ. ಆದರೆ ಅವು ಅತೀಂದ್ರಿಯ ವಿಷಯಗಳಲ್ಲಿ ಮಾತ್ರ ಪ್ರಮಾಣಗಳಾಗಬಲ್ಲವೇ ಹೊರತು, ಐಂದ್ರಿಯ ವಿಷಯಗಳಲ್ಲಿ ನಾವು ಪ್ರತ್ಯಕ್ಷ ಮೊದಲಾದ ಪ್ರಮಾಣಗಳನ್ನೇ ಅವಲಂಬಿಸಬೇಕು ಎಂಬ ಎಚ್ಚರಿಕೆಯನ್ನೂ ನೀಡುತ್ತಾರೆ.

**ವಾಕ್ಯಾರ್ಥ:** ಅಕ್ಷರಗಳು ಸೇರಿ ಪದಗಳಾಗುತ್ತವೆ. ಪದಗಳು ಸೇರಿ ವಾಕ್ಯಗಳಾಗುತ್ತವೆ. ಒಂದು ವಾಕ್ಯದ ಹಿಂದೆ ಒಂದು ಭಾವನೆ ಇರುತ್ತದೆ. ಮೇಲುನೋಟಕ್ಕೆ ತೋರಿಬರುವ ವಾಕ್ಯಾರ್ಥವನ್ನು 'ವಾಚ್ಯಾರ್ಥ' ಎಂದು ಕರೆಯಲಾಗುತ್ತದೆ. ಕೆಲವೊಮ್ಮೆ ಈ ಪ್ರಾಥಮಿಕ ಅರ್ಥವನ್ನು ತೆಗೆದುಕೊಳ್ಳಲು ಆಗುವುದಿಲ್ಲ. ಆಗ ಈ ಪ್ರಾಥಮಿಕ ಅರ್ಥವು ಪರೋಕ್ಷವಾಗಿ ಸೂಚಿಸುವ ಅಥವಾ ಲಕ್ಷಿಸುವ ಅರ್ಥವನ್ನು ಪರಿಗಣಿಸಬೇಕಾಗುತ್ತದೆ. ಇದನ್ನೇ 'ಲಕ್ಷ್ಯಾರ್ಥ' ಎಂದು ಕರೆಯುತ್ತಾರೆ. ಉದಾಹರಣೆಗೆ, 'ಗಂಗೆಯ ಮೇಲೆ ಹಳ್ಳಿಯಿದೆ' ಎಂಬ ವಾಕ್ಯವನ್ನು ನೋಡೋಣ. ನಾವು ಇದರ ವಾಚ್ಯಾರ್ಥವನ್ನು ತೆಗೆದುಕೊಳ್ಳಲು ಆಗುವುದಿಲ್ಲ. ಏಕೆಂದರೆ ಒಂದು ನದಿಯ ಮೇಲೆ ಹಳ್ಳಿಯಿರಲು ಸಾಧ್ಯವಿಲ್ಲ. ಹೀಗಾಗಿ ಅದರ ಲಕ್ಷ್ಯಾರ್ಥ ಎಂದರೆ, 'ಗಂಗೆಯ ದಡದ ಮೇಲೆ ಹಳ್ಳಿಯಿದೆ' ಎಂಬ ಅರ್ಥವನ್ನೇ ತೆಗೆದುಕೊಳ್ಳಬೇಕು. ವೇದಾಂತ ವಾಕ್ಯಗಳನ್ನೂ ಹೀಗೆಯೇ ಅರ್ಥಮಾಡುವ ಪರಿಪಾಠವನ್ನು ವೇದಾಂತಿಗಳು ಬೆಳೆಸಿಕೊಂಡಿದ್ದಾರೆ. ಅದನ್ನು ವಿಚಾರ ಮಾಡುವ ಮೊದಲು ವೇದಾಂತ ವಾಕ್ಯಗಳ ಎರಡು ಬಗೆಗಳ ಬಗ್ಗೆ ನಾವು ತಿಳಿದುಕೊಳ್ಳಬೇಕು.

**ಎರಡು ಬಗೆಯ ವೇದಾಂತ ವಾಕ್ಯಗಳು: 'ನೇಹ ನಾನಾಸ್ತಿ ಕಿಂಚನ'** – ಇಲ್ಲಿ ಯಾವ ವೈವಿಧ್ಯತೆಯೂ ಇಲ್ಲ ಎಂದು ಬೃಹದಾರಣ್ಯಕ ಉಪನಿಷತ್ತು ಹೇಳುತ್ತದೆ. ಅಂದರೆ ಇರುವುದು ಆತ್ಮ ಅಥವಾ ಬ್ರಹ್ಮ ಮಾತ್ರ. ಆದರೆ ಈ ರೀತಿ ಸ್ಪಷ್ಟವಾಗಿ, ನಿಸ್ಸಂದಿಗ್ಧವಾಗಿ ಎಲ್ಲ ವೇದಾಂತ ವಾಕ್ಯಗಳೂ ಅದ್ವೈತವನ್ನು ಸಾರಿ ಹೇಳುವುದಿಲ್ಲ. ಅವುಗಳಲ್ಲಿ ಕೆಲವು ವಾಕ್ಯಗಳು ಅಸ್ತಿತ್ವದ ವೈವಿಧ್ಯವನ್ನೂ, ಪ್ರಪಂಚದ ಸೃಷ್ಟಿಯನ್ನೂ ವಿವರಿಸುತ್ತವೆ. ಹಾಗೆಂದು ಈ ಉಪನಿಷತ್ತಿನ ವಾಕ್ಯಗಳನ್ನು ಅರ್ಥ ಹೀನವಾದುವು ಎಂದು ತಿರಸ್ಕರಿಸುವಂತಿಲ್ಲ. ಅವುಗಳನ್ನು ತಾರ್ಕಿಕ ಜಿಜ್ಞಾಸೆಗೆ ಒಳಪಡಿಸಬೇಕು; ವೈಚಾರಿಕವಾಗಿ ವಿಮರ್ಶೆ ಮಾಡಬೇಕು. ಅದಕ್ಕಾಗಿ ಉಪನಿಷತ್ತಿನ ವಾಕ್ಯಗಳನ್ನು ಮುಖ್ಯವಾಗಿ ಎರಡು ವಿಧವಾಗಿ ಅದ್ವೈತಿಗಳು ವಿಂಗಡಣೆ ಮಾಡುತ್ತಾರೆ:

**೧. ಮಹಾವಾಕ್ಯ:** ವೇದಗಳ ಸಾರಸರ್ವಸ್ವವನ್ನು ತಮ್ಮಲ್ಲಿ ಹುದುಗಿಸಿಕೊಂಡಿರುವ ಉಪನಿಷತ್ ವಾಕ್ಯಗಳಿಗೆ ಮಹಾವಾಕ್ಯಗಳು ಎಂದು ಹೆಸರು. ಅದ್ವೈತ ವೇದಾಂತದ ಪ್ರಕಾರ, ಜೀವಿ ಮತ್ತು ಪರಬ್ರಹ್ಮ ತತ್ತ್ವಗಳ ನಡುವಿನ ಅಭೇದವನ್ನು ಅವು ಸ್ಪಷ್ಟವಾಗಿ, ನೇರವಾಗಿ, ನಿಸ್ಸಂದಿಗ್ಧವಾಗಿ ಪ್ರತಿಪಾದಿಸುತ್ತವೆ. ಹೀಗೆ ಜೀವಬ್ರಹ್ಮಾತ್ಮೈಕ್ಯವನ್ನು ಅಂದರೆ ಅಖಂಡವನ್ನು ಪ್ರತಿಪಾದಿಸುವುದರಿಂದ ಈ ವಾಕ್ಯಗಳನ್ನು ಅಖಂಡಾರ್ಥ ಬೋಧಕ ವಾಕ್ಯಗಳು ಎನ್ನುತ್ತಾರೆ. ಶ್ರೀವಿದ್ಯಾರಣ್ಯ ಮುನಿಗಳು ತಮ್ಮ ಪಂಚದಶೀ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ:

**ಅತ್ರಾಂತರೇಣ ವಾಕ್ಯೇನ ಪರೋಕ್ಷಾ ಬ್ರಹ್ಮಧೀರ್ಭವೇತ್ ।**
**ಸರ್ವತ್ರೈವ ಮಹಾವಾಕ್ಯವಿಚಾರಾದಪರೋಕ್ಷಧೀಃ ॥**

''ಬ್ರಹ್ಮತತ್ತ್ವದ ಬಗೆಗಿನ ಪರೋಕ್ಷ ಜ್ಞಾನವನ್ನು ಇತರ ವಾಕ್ಯಗಳಿಂದ ತಿಳಿದುಕೊಳ್ಳಲು ಸಾಧ್ಯ. ಆದರೆ ಬ್ರಹ್ಮಾತ್ಮೈಕ್ಯದ ಅಪರೋಕ್ಷ ಜ್ಞಾನವನ್ನು ಮಹಾವಾಕ್ಯಗಳ ಧ್ಯಾನದಿಂದ ಮಾತ್ರ ಪಡೆದುಕೊಳ್ಳಲು ಸಾಧ್ಯ.''

ಸಂಪ್ರದಾಯದ ಪ್ರಕಾರ, ನಾಲ್ಕು ಮಹಾವಾಕ್ಯಗಳನ್ನು ನಾಲ್ಕು ವೇದಗಳಿಗೆ ಸೇರಿದ ನಾಲ್ಕು ಉಪನಿಷತ್ತುಗಳಿಂದ ತೆಗೆದುಕೊಳ್ಳಲಾಗಿದೆ. ಅವುಗಳನ್ನು ನಾಲ್ಕು ಬಗೆಗಳನ್ನಾಗಿ ವಿಂಗಡಿಸಲಾಗಿದೆ:

೧. ಲಕ್ಷಣ ವಾಕ್ಯ (ವ್ಯಾಖ್ಯಾನ ವಾಕ್ಯ ) : **ಪ್ರಜ್ಞಾನಂ ಬ್ರಹ್ಮ** – ಪ್ರಜ್ಞಾನವೇ ಬ್ರಹ್ಮ *(ಋಗ್ವೇದಕ್ಕೆ ಸೇರಿದ ಐತರೇಯ ಉಪನಿಷತ್ತು, ೩:೧:೩)*

೨. ಅನುಸಂಧಾನ ವಾಕ್ಯ (ಸಾಧನ ವಾಕ್ಯ) : **ಅಹಂ ಬ್ರಹ್ಮಾಸ್ಮಿ** – ನಾನು ಬ್ರಹ್ಮನಾಗಿದ್ದೇನೆ *(ಶುಕ್ಲ ಯಜುರ್ವೇದಕ್ಕೆ ಸೇರಿದ ಬೃಹದಾರಣ್ಯಕ ಉಪನಿಷತ್ತು, ೧:೪:೧೦)*

೩. ಉಪದೇಶ ವಾಕ್ಯ (ಬೋಧನಾ ವಾಕ್ಯ) : **ತತ್ ತ್ವಮ್ ಅಸಿ** – ಅದು ನೀನೇ ಆಗಿದ್ದೀಯೆ *(ಸಾಮವೇದಕ್ಕೆ ಸೇರಿದ ಛಾಂದೋಗ್ಯ ಉಪನಿಷತ್ತು, ೬:೮:೭)*

೪. ಅನುಭವ ವಾಕ್ಯ (ಅನುಭವವನ್ನು ವ್ಯಕ್ತಪಡಿಸುವ ವಾಕ್ಯ) : **ಅಯಮ್ ಆತ್ಮಾ ಬ್ರಹ್ಮ** – ಈ ಆತ್ಮವು ಬ್ರಹ್ಮವೇ ಆಗಿದೆ. *(ಅಥರ್ವಣ ಉಪನಿಷತ್ತಿಗೆ ಸೇರಿದ ಮಾಂಡೂಕ್ಯ ಉಪನಿಷತ್ತು, ೨ನೆಯ ಮಂತ್ರ)*

ಕೆಲವು ವಿದ್ವಾಂಸರು ಮೊದಲನೆಯ ವಾಕ್ಯವನ್ನು ಸ್ವರೂಪಬೋಧ ವಾಕ್ಯವೆಂದೂ, ಎರಡನೆಯ ವಾಕ್ಯವನ್ನು ಅನುಭವ ವಾಕ್ಯವೆಂದೂ,

ನಾಲ್ಕನೆಯ ವಾಕ್ಯವನ್ನು ಅಪರೋಕ್ಷತ್ವ ಬೋಧಕ ವಾಕ್ಯವೆಂದೂ ಕರೆಯುತ್ತಾರೆ.

**೨. ಅವಾಂತರ ವಾಕ್ಯ:** **ತತ್ ತ್ವಂ ಅಸಿ** ಮುಂತಾದ ಮಹಾವಾಕ್ಯಗಳ ಅರ್ಥವನ್ನು ಸರಿಯಾಗಿ ಗ್ರಹಿಸಬೇಕಾದರೆ, ತತ್, ತ್ವಂ ಪದಗಳ ಅರ್ಥವನ್ನು ತಿಳಿದುಕೊಳ್ಳಬೇಕು. ಈ ಪದಗಳ ಅರ್ಥವನ್ನು ಸೂಚಿಸುವ ಅನೇಕ ವಾಕ್ಯಗಳನ್ನು ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಇಂಥ ವಾಕ್ಯಗಳನ್ನು ಅವಾಂತರ ವಾಕ್ಯಗಳೆಂದು ಕರೆಯುತ್ತಾರೆ. ಉದಾಹರಣೆಗೆ ತೈತ್ತಿರೀಯೋಪನಿಷತ್ತಿನಲ್ಲಿ, **'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತ್ಯಭಿಸಂವಿಶಂತೀತಿ, ತದ್ ವಿಜಿಜ್ಞಾಸಸ್ವ, ತದ್ ಬ್ರಹ್ಮೇತಿ'** *(ತೈತ್ತಿರೀಯ ಉಪನಿಷತ್, ३.೧.೧)* ''ಯಾವುದರಿಂದ ಈ ಎಲ್ಲ ಜೀವಿಗಳು ಹುಟ್ಟುತ್ತವೆಯೋ, ಯಾವುದರಿಂದ ಹುಟ್ಟಿದವುಗಳು ಜೀವಿಸುತ್ತಿವೆಯೋ, ಕಡೆಗೆ ಯಾವುದರಲ್ಲಿ ಎಲ್ಲವೂ ವಿಲೀನಗೊಳ್ಳುವವೋ, ಅದನ್ನೇ ಬ್ರಹ್ಮನೆಂದು ತಿಳಿ.'' ಈ ವಾಕ್ಯವು ಸೃಷ್ಟಿಕರ್ತನಾದ ಈಶ್ವರನ ವರ್ಣನೆಯಾಗಿದೆ. ಇದು **ತತ್ತ್ವಮಸಿ** ಎಂಬ ವಾಕ್ಯದ **ತತ್** ಎಂಬ ಪದದ ವಾಚ್ಯಾರ್ಥ. ಅದೇ ರೀತಿ, ಬೃಹದಾರಣ್ಯಕ ಉಪನಿಷತ್ತಿನಲ್ಲಿ ಈ ಮುಂದಿನ ವಾಕ್ಯವಿದೆ: **'ತದ್ ಯಥಾ ಮಹಾಮತ್ಸ್ಯ ಉಭೇ ಕೂಲೇ ಅನುಸಂಚರತಿ ಪೂರ್ವಂ ಚಾಪರಂ ಚೈವಮೇವಾಯಂ ಪುರುಷ ಏತಾವುಭಾವಂತಾವನುಸಂಚರತಿ ಸ್ವಪ್ನಾಂತಂ ಚ ಬುದ್ಧಾಂತಂ ಚ'** *(ಬೃ.४.३.೧೮)* – ಒಂದು ಮಹಾನ್ ಮತ್ಸ್ಯವು ಒಂದು ನದಿಯ ಪೂರ್ವ ಮತ್ತು ಪಶ್ಚಿಮ – ಎರಡೂ ದಿಕ್ಕುಗಳ ದಡಗಳ ಮಧ್ಯೆ ಸುತ್ತಾಡಿ ಕೊಂಡಿರುತ್ತದೆ. ಇದೇರೀತಿ ಅನಂತ ಪುರುಷನು ಸ್ವಪ್ನ ಮತ್ತು ಜಾಗ್ರದವಸ್ಥೆಗಳ ನಡುವೆ ಚಲಿಸುತ್ತಿರುತ್ತಾನೆ. ಈ ವಾಕ್ಯವು ದೇಹ ಧಾರಿಯಾದ ಜೀವಿಯ ವರ್ಣನೆಯಾಗಿದೆ. ಇದು ತತ್ತ್ವಮಸಿ ವಾಕ್ಯದ **ತ್ವಂ** ಪದದ ವಾಚ್ಯಾರ್ಥ.

**ಪದಾರ್ಥ ನಿರ್ಣಯ:** **ತತ್ತ್ವಮಸಿ** ಮಹಾವಾಕ್ಯವನ್ನು ತೆಗೆದುಕೊಳ್ಳೋಣ. ಇದರ ಸರಿಯಾದ ಅರ್ಥವನ್ನು ಹುಡುಕಿ ತೆಗೆಯಲು ನಾವು ಮೊದಲು **ತತ್** ಮತ್ತು **ತ್ವಂ** ಪದಗಳ ಅರ್ಥಗಳನ್ನು ತಿಳಿದುಕೊಳ್ಳಬೇಕು. ಮೊದಲು ಪ್ರಾಥಮಿಕ ಅರ್ಥ ಅಥವಾ ವಾಚ್ಯಾರ್ಥವನ್ನು ಪ್ರಯೋಗ ಮಾಡಿ ನೋಡೋಣ. ಈ ಹಿಂದೆ ನೋಡಿದಂತೆ, **ತತ್** ಪದದ ವಾಚ್ಯಾರ್ಥ ಸೃಷ್ಟಿಕರ್ತನಾದ ಈಶ್ವರ; **ತ್ವಂ** ಪದದ ವಾಚ್ಯಾರ್ಥ ಅಲ್ಪಜ್ಞನಾದ ಜೀವಿ. ಈ ವಾಕ್ಯವು **ತತ್** ಮತ್ತು **ತ್ವಂ** ಪದಾರ್ಥಗಳ ನಡುವೆ ಅಖಂಡಾರ್ಥವನ್ನು ಅಥವಾ ಐಕ್ಯತೆಯನ್ನು ಕಲ್ಪಿಸುವ ವಾಕ್ಯ. ಆದರೆ ಯಾವ ಬಗೆಯಿಂದಲೂ ಈಶ್ವರ ಮತ್ತು ಜೀವಿಯ ನಡುವೆ ಐಕ್ಯ ಅಥವಾ ಅಖಂಡಾರ್ಥವನ್ನು ಕಲ್ಪಿಸಲು ಸಾಧ್ಯವೇ ಇಲ್ಲ. ಆದರೆ ವೇದವಾಕ್ಯ ಸುಳ್ಳಾಗಲಾರದು. ಅದಕ್ಕೆಂದೇ ಮೇಲಿನ ಪದಗಳ ಲಕ್ಷ್ಯಾರ್ಥಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಅವು ಯಾವುವು ಎಂದು ಈಗ ನೋಡೋಣ. **ತತ್** ಪದದ ಲಕ್ಷ್ಯಾರ್ಥವನ್ನು ಸೂಚಿಸುವ ವಾಕ್ಯವನ್ನು ತೈತ್ತಿರೀಯ ಉಪನಿಷತ್ತಿನಲ್ಲಿ ಕಾಣುತ್ತೇವೆ. ಅದು ಹೀಗಿದೆ: **ಸತ್ಯಂ ಜ್ಞಾನಮನಂತಂ ಬ್ರಹ್ಮ** *(೨.೧.೧).* ಇದರ ಅರ್ಥ ಪರಮಾರ್ಥಸತ್ಯವೂ, ಚೈತನ್ಯ ಮತ್ತು ಅದ್ವೈತಾನಂದ ಸ್ವರೂಪವೂ ಆದದ್ದೇ ಬ್ರಹ್ಮ. ಇದೇ **ತತ್** ಪದದ ಲಕ್ಷ್ಯಾರ್ಥ. ಇನ್ನು **ತ್ವಂ** ಪದದ ಲಕ್ಷ್ಯಾರ್ಥವನ್ನು ಬೃಹದಾರಣ್ಯಕ ಉಪನಿಷತ್ತಿನ ಎರಡು ವಾಕ್ಯಗಳ ಮೂಲಕ ತಿಳಿದುಕೊಳ್ಳಬಹುದು: **'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ'** – ''ಈ ಪುರುಷನು ಇಂದ್ರಿಯಗಳ ನಡುವೆ ಇರುವ ಅರಿವೇ ಆಗಿದ್ದಾನೆ; ಹೃದಯಾಂತರದಲ್ಲಿ ಇರುವ ಜ್ಯೋತಿಪುರುಷನಾಗಿದ್ದಾನೆ'' *(४:३:೭)*; **'ನ ದೃಷ್ಟೇಃ ದ್ರಷ್ಟಾರಂ ಪಶ್ಯೇಃ'** ನೀವು ದೃಶ್ಯದ ದ್ರಷ್ಟಾರನನ್ನು ನೋಡಲಾರಿರಿ *(३:४:२)* ಈ ಎರಡು ವಾಕ್ಯಗಳು ಸ್ವಯಂಪ್ರಕಾಶವೂ ಚೈತನ್ಯವೂ ಅದ್ವಯವೂ ಆದ ತತ್ತ್ವವೊಂದು ಮಾನವ ವ್ಯಕ್ತಿತ್ವದ ಸಾರಸರ್ವಸ್ವವಾಗಿರುವುದನ್ನು ಸೂಚಿಸುತ್ತದೆ. ಇದನ್ನೇ ಪಾರಿಭಾಷಿಕ ಭಾಷೆಯಲ್ಲಿ ಆತ್ಮ ಎಂದು ಕರೆಯುತ್ತಾರೆ.

**ವಾಕ್ಯಾರ್ಥ ನಿರ್ಣಯ:** **ತತ್ತ್ವಮಸಿ** ವಾಕ್ಯವು **'ತತ್'** ಮತ್ತು **'ತ್ವಂ'** ಪದಗಳ ಅಖಂಡಾರ್ಥವನ್ನು ಬೋಧಿಸುತ್ತದೆ ಎಂದು ಈಗಾಗಲೇ ನಾವು ನೋಡಿದ್ದೇವೆ. **'ತತ್'** ಮತ್ತು **'ತ್ವಂ'** ಪದಗಳ ಲಕ್ಷ್ಯಾರ್ಥಗಳನ್ನು ಉಪಯೋಗಿಸಿಕೊಂಡು, ಅದನ್ನು ಸಾಧಿಸುವ ಸಾಂಪ್ರದಾಯಿಕ ವಿಧಾನವನ್ನು ನೋಡೋಣ: **'ತತ್'** ಮತ್ತು **'ತ್ವಂ'** ಈ ಎರಡು ಪದಗಳ ನಡುವೆ ಇರುವ ಸಂಬಂಧವನ್ನು ಸಮಾನಾಧಿಕರಣ ಸಂಬಂಧ ಎನ್ನುತ್ತೇವೆ. ಸಮಾನಾಧಿಕರಣ ಎಂದರೆ ಅವೆರಡೂ ಒಂದೇ ಅರ್ಥವನ್ನು ಸೂಚಿಸುತ್ತವೆ ಎಂದರ್ಥ. **'ಅಸಿ'** ಎಂಬ ಪದವು ಈ ಸಮಾನಾಧಿಕರಣವನ್ನು ಹೇಳುವ ಪದ. ನಾವೀಗಾಗಲೇ ನೋಡಿರುವಂತೆ, **'ತತ್'** ಮತ್ತು **'ತ್ವಂ'** ಈ ಎರಡೂ ಪದಗಳ ಲಕ್ಷ್ಯಾರ್ಥಗಳು ಪರಿಶುದ್ಧ ಚೈತನ್ಯವನ್ನೇ ಗೊತ್ತುಮಾಡಿ ತೋರಿಸುತ್ತದೆ. ಆದರೆ ಅವುಗಳ ವಾಚ್ಯಾರ್ಥಗಳು ಪರಸ್ಪರ ವಿರುದ್ಧವಾದ 'ಈಶ್ವರ' ಮತ್ತು 'ಜೀವಿ'ಗಳನ್ನು ಗೊತ್ತುಮಾಡಿ ತೋರಿಸುತ್ತದೆ. ಈ ವಿರೋಧಾಭಾಸವನ್ನು ಬಗೆಹರಿಸುವುದು ಹೇಗೆ? ಇದಕ್ಕಾಗಿ ಒಂದು ವಿಧಾನವನ್ನು ಅದ್ವೈತಿಗಳು ಕಂಡುಹಿಡಿದಿದ್ದಾರೆ. ಅದರ ಸರಳ ವಿವರಣೆ ಹೀಗಿದೆ:

'ಅವನೇ ಈ ದೇವದತ್ತ' ಎಂಬ ವಾಕ್ಯವನ್ನು ತೆಗೆದುಕೊಳ್ಳೋಣ. ಹಿಂದೆ ಯಾವುದೋ ಒಂದು ಪ್ರದೇಶದಲ್ಲಿ, ಯಾವುದೋ ಒಂದು ಕಾಲದಲ್ಲಿ ನೋಡಿದ್ದ ದೇವದತ್ತನು ನಮ್ಮ ಕಣ್ಣಿನ ಮುಂದೆ ಈಗ ನಿಂತಿದ್ದಾನೆ. ಹಿಂದೆ ನೋಡಿದ್ದ ದೇವದತ್ತ, ಈಗ ನೋಡುತ್ತಿರುವ ದೇವದತ್ತ – ಇವರಿಬ್ಬರ ನಡುವೆ ನಾವು ಅಖಂಡಾರ್ಥವನ್ನು ಕಲ್ಪಿಸಿ, ವಾಕ್ಯವನ್ನು ಅರ್ಥಮಾಡಿಕೊಳ್ಳಬೇಕು, ಅಲ್ಲವೇ. **ತತ್ ತ್ವಮ್ ಅಸಿ** ವಾಕ್ಯವನ್ನು ಅರ್ಥಮಾಡಿಕೊಳ್ಳಬೇಕಾದರೂ ಇದೇ ವಿಧಾನವನ್ನು ಅನುಸರಿಸಬೇಕು. ಅದ್ವೈತಿಗಳ ಪ್ರಕಾರ ಸೃಷ್ಟಿಕರ್ತನಾದ ಈಶ್ವರನು ಸರ್ವಜ್ಞ ಮುಂತಾದ ಉಪಾಧಿಗಳಿಂದ ಕೂಡಿರುವ ಚೈತನ್ಯ; ಅವನನ್ನು ನೇರವಾಗಿ ಅರಿಯಲು ಸಾಧ್ಯವಾಗುವುದಿಲ್ಲವಾದ್ದರಿಂದ 'ಪರೋಕ್ಷ ಚೈತನ್ಯ' ಎಂದು ಕರೆಯುತ್ತಾರೆ. ಹೀಗಾಗಿ **ತತ್** ಪದವು 'ಉಪಾಧಿ ಸಂಬಂಧವಾದ ಪರೋಕ್ಷ ಚೈತನ್ಯ'ವನ್ನು ಸೂಚಿಸುತ್ತದೆ. ಜೀವಿಯು ಅಲ್ಪಜ್ಞ ಮುಂತಾದ ಉಪಾಧಿಗಳಿಂದ ಕೂಡಿದ ಚೈತನ್ಯ. ಅವನನ್ನು ನಾನು ಎಂಬ ಭಾವದಿಂದ ನೇರವಾಗಿ ಅರಿಯಬಹುದು. ಆದ್ದರಿಂದ ಜೀವಿಯನ್ನು ಅಪರೋಕ್ಷ ಚ ಎಂದು ಚೈತನ್ಯ ಎಂದು ಕರೆಯುತ್ತಾರೆ. ಹೀಗಾಗಿ, **ತ್ವಂ** ಪದವು ಉಪಾಧಿಸಂಬಂಧವಾದ ಅಪರೋಕ್ಷ ಚೈತನ್ಯವನ್ನು ಸೂಚಿಸುತ್ತದೆ. ದೇವದತ್ತನ ವಿಷಯದಲ್ಲಿ ಅವನು 'ಆ ಕಾಲದವನು, ಆ ಪ್ರದೇಶದವನು', 'ಈಗ ನೋಡುತ್ತಿರು



ವವನು, ಇಲ್ಲಿರುವವನು' ಮುಂತಾದ ವಿಶೇಷಗಳನ್ನು ತಿರಸ್ಕರಿಸಿದರೆ ಮಾತ್ರವೇ ಅಖಂಡಾರ್ಥವಾದ ಒಬ್ಬನೇ ದೇವದತ್ತ ನೆಂಬ ವಾಕ್ಯಾರ್ಥ ಸಿದ್ಧಿಸುತ್ತದೆಯಲ್ಲವೇ? ಅದೇ ರೀತಿ ಇಲ್ಲಿಯೂ ಕೂಡ ಸರ್ವಜ್ಞತ್ವ, ಅಲ್ಪಜ್ಞತ್ವ ಮುಂತಾದ ಉಪಾಧಿಗಳು ಮತ್ತು 'ಪರೋಕ್ಷತ್ವ', 'ಅಪರೋಕ್ಷತ್ವ' ಮುಂತಾದ ವಿಶೇಷಣಗಳನ್ನು ತ್ಯಜಿಸಿಬಿಡಬೇಕು. ಅದ್ವೈತ ಸಿದ್ಧಾಂತದ ಪ್ರಕಾರ ಈ ಎಲ್ಲ ಉಪಾಧಿಗಳು ಮತ್ತು ವಿಶೇಷಗಳು ಭ್ರಮೆ ಮಾತ್ರ. ಅವು ಅಸತ್ಯವಾದುವು, ಅನಿತ್ಯವಾದುವು. ಹೀಗೆ **ತತ್** ಮತ್ತು **ತ್ವಂ** ಪದಾರ್ಥಗಳ ಒಂದು ಭಾಗವನ್ನು ತ್ಯಜಿಸಿ, 'ಚೈತನ್ಯ' ಎಂಬ ಇನ್ನೊಂದು ಭಾಗವನ್ನು ಮಾತ್ರ ಪರಿಗಣಿಸುತ್ತಿದ್ದೇವೆ. ದೇವದತ್ತನ ವಿಷಯದಲ್ಲಿಯೂ ನಾವು ಹಾಗೆಯೇ ಮಾಡಿದೆವೆಂಬುದನ್ನು ಜ್ಞಾಪಕದಲ್ಲಿಡಬೇಕು. ಈ ವಿಧಾನವನ್ನು 'ಭಾಗ-ತ್ಯಾಗ ಲಕ್ಷಣ' ಎಂದು ಕರೆಯುತ್ತಾರೆ. ಆಗ ಮಾತ್ರ, ಅಖಂಡಾರ್ಥವಾದ 'ಚೈತನ್ಯ'ವೇ **ತತ್ತ್ವಮಸಿ** ವಾಕ್ಯದ ನೈಜಾರ್ಥವೆಂಬುದು ಸ್ಫುಟವಾಗಿ ಹೊರಹೊಮ್ಮುತ್ತದೆ. ಇದು **ತತ್ತ್ವಮಸಿ** ವಾಕ್ಯವನ್ನು ನಿರ್ಧರಿಸುವ ಸಾಂಪ್ರದಾಯಿಕ ಕ್ರಮ.

**ಮಹಾವಾಕ್ಯ ಸಾಧನೆ:** ಇತರೆ ಮಹಾವಾಕ್ಯಗಳನ್ನೂ ಇದೇ ರೀತಿ ಅರ್ಥೈಸಿದಾಗ, ಅವೆಲ್ಲವೂ ಅಖಂಡಾರ್ಥ ಬೋಧಕಗಳೆಂಬ ಅರಿವಾಗುತ್ತದೆ. ಇಂಥ ಅರಿವು ಕೇವಲ ಬೌದ್ಧಿಕ ತಿಳಿವಳಿಕೆಯಾಗಿ ಮಾತ್ರ ಉಳಿದುಬಿಡಬಾರದು. ಅದು ಅನುಭೂತಿಯ ನೆಲೆಯನ್ನು ತಲುಪಬೇಕು. ಅದಕ್ಕಾಗಿ ಸಾಧನೆ ಅತ್ಯಂತ ಆವಶ್ಯಕ. ಅದ್ವೈತ ಸಂಪ್ರದಾಯದ ಶ್ರೇಷ್ಠ ಆಚಾರ್ಯರಾದ ಶ್ರೀ ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಇದನ್ನು ಒತ್ತಿ ಹೇಳುತ್ತಾರೆ. ಬ್ರಹ್ಮಸೂತ್ರಗಳಲ್ಲಿ ಮೊದಲನೆಯ ಸೂತ್ರ '**ಅಥಾತೋ ಬ್ರಹ್ಮಜಿಜ್ಞಾಸಾ**' (ಆಮೇಲೆ, ಈ ಕಾರಣದಿಂದ, ಬ್ರಹ್ಮವನ್ನು ಜಿಜ್ಞಾಸೆ ಮಾಡಬೇಕು). ಇಲ್ಲಿ **ಅಥ** ಎನ್ನುವ ಪದಕ್ಕೆ ಆಮೇಲೆ ಎಂದು ಅರ್ಥ. ಯಾವುದು ಆದಮೇಲೆ ಎಂದರೆ, ಸಾಧನಚತುಷ್ಟಯ ಸಂಪತ್ತನ್ನು ಪಡೆದುಕೊಂಡ ನಂತರ ಎಂದು ಶ್ರೀಶಂಕರರು ವ್ಯಾಖ್ಯಾನ ಮಾಡುತ್ತಾರೆ. ಯಾವುದು ಆ ನಾಲ್ಕು ಸಾಧನಗಳು ಎಂದರೆ ಅವರೇ ಹೀಗೆ ಹೇಳುತ್ತಾರೆ: ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಫಲಭೋಗವಿರಾಗ, ಶಮದಮಾದಿ ಸಾಧನ ಸಂಪತ್ ಮತ್ತು ಮುಮುಕ್ಷುತ್ವ. '**ತೇಷು ಹಿ ಸತ್ಸು... ಶಕ್ಯತೇ ಬ್ರಹ್ಮ ಜಿಜ್ಞಾಸಿತುಂ ಜ್ಞಾತುಂ ಚ, ನ ವಿಪರ್ಯಯೇ**' ಇವುಗಳನ್ನು ಪಡೆದುಕೊಂಡರೆ ಮಾತ್ರ ಬ್ರಹ್ಮವನ್ನು ತಿಳಿದುಕೊಳ್ಳಲು ಸಾಧ್ಯ, ಇಲ್ಲದಿದ್ದರೆ ಇಲ್ಲ ಎಂಬ ಎಚ್ಚರಿಕೆಯನ್ನೂ ಅವರು ನೀಡುತ್ತಾರೆ.

ಸಾಧನಚತುಷ್ಟಯ ಸಂಪನ್ನನಾದ ಸಾಧಕನೇ ಸಾಧನೆಗೆ ಅರ್ಹತೆಯುಳ್ಳ ಮುಮುಕ್ಷು. ಇದು ಮೂರು ಹಂತಗಳಲ್ಲಿ ನಡೆಯುತ್ತದೆ. ೧. **ಶ್ರವಣ** ೨. **ಮನನ** ಮತ್ತು ೩. **ನಿದಿಧ್ಯಾಸನ.** ಶ್ರವಣವೆಂದರೆ ಕೇಳುವುದು ಎಂದರ್ಥ. ಉಪನಿಷತ್ತಿನ ವಾಕ್ಯಗಳನ್ನು ಅದರಲ್ಲೂ ಒಂದು ನಿರ್ದಿಷ್ಟ ಮಹಾವಾಕ್ಯವನ್ನು ಗುರುಮುಖೇನ ಶ್ರದ್ಧೆಯಿಂದ ಆಲಿಸುವುದೇ '**ಶ್ರವಣ**' ಎನಿಸಿಕೊಳ್ಳುತ್ತದೆ. ಅಷ್ಟು ಮಾತ್ರವಲ್ಲ, ಶ್ರವಣ ಎಂದರೆ ವಿವೇಕಯುಕ್ತವಾಗಿ ಅವುಗಳನ್ನು ವಿಚಾರಮಾಡಿ, ಕೇಳಿದ ಎಲ್ಲ ವೇದಾಂತವಾಕ್ಯಗಳೂ ಅದ್ವಿತೀಯ ಬ್ರಹ್ಮವನ್ನೇ ಹೇಳುತ್ತವೆ ಎಂದು ನಿಶ್ಚಯಿಸುವುದು. **ಮನನ** ಎಂದರೆ ವೇದಾಂತ ವಾಕ್ಯಗಳು ಮತ್ತು ಆಚಾರ್ಯರಿಂದ ಕೇಳಿದ ಅದ್ವಿತೀಯ ಬ್ರಹ್ಮವಸ್ತುವನ್ನು ಉಪನಿಷತ್ತಿನ ಅರ್ಥಕ್ಕೆ ವಿರುದ್ಧ ಬರದ ಹಾಗೆ ನಿರಂತರವಾಗಿ ಚಿಂತಿಸುವುದು. ಪರಬ್ರಹ್ಮಕ್ಕಿಂತ ಬೇರೆಯಾದ ದೇಹ, ಮನಸ್ಸು, ಬುದ್ಧಿಗಳ ವೃತ್ತಿಗಳಿಲ್ಲದ, ಅದ್ವಿತೀಯ ಪರಬ್ರಹ್ಮವಸ್ತುವಿಗೆ ಸದೃಶವಾದ ಆಲೋಚನೆಯ ಪ್ರವಾಹವೇ **ನಿದಿಧ್ಯಾಸನ.**

ಮಹಾವಾಕ್ಯ ಸಾಧನೆಯ ವಿಷಯದಲ್ಲಿ ಶ್ರೀಶಂಕರಾಚಾರ್ಯರು ತಮ್ಮ ಉಪದೇಶ ಸಾಹಸ್ರೀ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ:

**ತ್ವಂ ಪದಾರ್ಥ ವಿವೇಕೇ ಹಿ ಪಾಣೌ ಅರ್ಪಿತ ಬಿಲ್ವವತ್ ।**
**ವಾಕ್ಯಾರ್ಥೋ ವ್ಯಜ್ಯತೇ ಚೈವಂ ಕೇವಲೋಽಹಂ ಪದಾರ್ಥತಃ॥**
**ದುಃಖೀತ್ಯೇತದ್ ಅಪೋಹೇನ ಪ್ರತ್ಯಗಾತ್ಮ-ವಿನಿಶ್ಚಯಾತ್ ।**

*(ಉಪದೇಶ ಸಾಹಸ್ರೀ, ೧೮ : ೧೭೫)*

"('ತತ್ತ್ವಮಸಿ' ವಾಕ್ಯದಲ್ಲಿ) **ತ್ವಂ** ಪದದ ಅರ್ಥವನ್ನು ವಿಂಗಡಿಸಿ ಅರಿತುಕೊಂಡರೆ, 'ನಾನು ದುಃಖಿ' ಎಂಬ ಭಾವನೆ ಕಳೆಯುತ್ತದೆ. ಆಗ ಪ್ರತ್ಯಗಾತ್ಮಭಾವವೇ ಮನಸ್ಸಿನಲ್ಲಿ ನಿಶ್ಚಯಗೊಂಡು, ಆ ಪದವು ಶುದ್ಧ ಅಹಂ ಅನ್ನೇ ಸೂಚಿಸುತ್ತದೆ ಎನ್ನುವುದು, ಅಂಗೈನಲ್ಲಿ ಇರುವ ಬಿಲ್ವದ ಎಲೆಯಂತೆ ಸ್ಪಷ್ಟವಾಗಿ ತಿಳಿದುಬರುತ್ತದೆ."

ಮಹಾವಾಕ್ಯದ ಸಾಧನೆಯ ವಿಷಯದಲ್ಲಿ ಅದ್ವೈತಿಗಳಲ್ಲಿ ಅಲ್ಪ ಭಿನ್ನಾಭಿಪ್ರಾಯವಿದೆ. ಮಹಾವಾಕ್ಯಗಳು ತಾವಾಗಿಯೇ ಜೀವಾತ್ಮ ಮತ್ತು ಪರಮಾತ್ಮರ ಐಕ್ಯದ ಸಾಕ್ಷಾತ್ಕಾರವನ್ನು ಮಾಡಿಸಬಲ್ಲುವು ಎಂದು ಬಹುತೇಕ ಅದ್ವೈತಿಗಳು ಅಭಿಪ್ರಾಯಪಡುತ್ತಾರೆ. ಆದರೆ, ವಾಚಸ್ಪತಿ ಮಿಶ್ರರು ಅವುಗಳ ಅರ್ಥವನ್ನು ಅನುಸಂಧಾನ ಮಾಡಿದಾಗ ಮಾತ್ರವೇ ಅಂತಹ ಸಿದ್ಧಿಯುಂಟಾಗುವುದು ಎಂದು ಹೇಳುತ್ತಾರೆ. ಕೇವಲ ಶಬ್ದವು ಸಾಕ್ಷಾತ್ಕಾರವನ್ನು ತಂದುಕೊಡಲಾರದು ಎಂದು ಅವರ ಅಭಿಪ್ರಾಯ.

**ಉಪಸಂಹಾರ :** ಏನೇ ಇರಲಿ, ಮಹಾವಾಕ್ಯಗಳ ಸರಿಯಾದ ತಾತ್ಪರ್ಯವನ್ನು ಅಪರೋಕ್ಷ ಅನುಭವದ ಮುಖಾಂತರ ಮಾತ್ರವೇ ತಿಳಿದುಕೊಳ್ಳಲು ಸಾಧ್ಯ. ಈ ಅನುಭವವೇ ಎಲ್ಲ ಬಗೆಯ ಸಾಧನೆಗಳ ಏಕಮಾತ್ರ ಪರಮೋಚ್ಚ ಗುರಿ ಎಂದು ಅದ್ವೈತ ಸಿದ್ಧಾಂತವು ಸಾರುತ್ತದೆ. ಪರಂಪರೆಯ ಮೂಲಕ ಗುರುವು ಶಿಷ್ಯನಿಗೆ ಶ್ರವಣ, ಮನನ ಮತ್ತು ನಿದಿಧ್ಯಾಸನಗಳನ್ನು ಒಳಗೊಂಡ ಸಾಧನೆಯ ಮರ್ಮವನ್ನು ಉಪದೇಶಿಸುತ್ತಾರೆ. ಹಾಗೆಯೇ ಮಹಾವಾಕ್ಯಗಳ ವಾಕ್ಯಾರ್ಥ ವಿಚಾರವನ್ನೂ ಬೋಧಿಸುತ್ತಾರೆ. ಹೀಗೆ ಗುರುಮುಖೇನ ಪಡೆದ ಉಪದೇಶ ಮಾತ್ರವೇ, ಸಾಧನೆಯಲ್ಲಿ ತೊಡಗಿದಾಗ ಫಲವನ್ನು ನೀಡಬಲ್ಲುದು. ಸಂನ್ಯಾಸದೀಕ್ಷೆಯ ಸಮಯದಲ್ಲಿ ಮಹಾವಾಕ್ಯ ಉಪದೇಶವನ್ನು ಕೊಡುವ ಪದ್ಧತಿ ಇದೆ. ಮಹಾವಾಕ್ಯಗಳ ಸಾಧನೆಗೆ ಪ್ರಾಪಂಚಿಕ ಸುಖಭೋಗಗಳ ತ್ಯಾಗ ಅತ್ಯಂತ ಆವಶ್ಯಕ ಎನ್ನುವುದನ್ನು ಇದು ಸೂಚಿಸುತ್ತದೆ.

ಮಹಾವಾಕ್ಯಗಳು ಉಪನಿಷತ್ತುಗಳ ತತ್ತ್ವಜಿಜ್ಞಾಸೆಯನ್ನು ತಮ್ಮ ಗರ್ಭದಲ್ಲಿ ಧರಿಸಿಕೊಂಡ ಸಂಕ್ಷಿಪ್ತ ಸೂತ್ರಗಳು. ಸಾಂಪ್ರದಾಯಿಕ ರೀತಿಯಲ್ಲಿ ಅವುಗಳ ಅಧ್ಯಯನ ಮತ್ತು ಅನುಸಂಧಾನಗಳು ಅದ್ವೈತ ತತ್ತ್ವದ ಅನುಭೂತಿಯನ್ನು ಉಂಟುಮಾಡುತ್ತದೆ. ಈ ದೃಷ್ಟಿಯಲ್ಲಿ ಅವು ಕೇವಲ ಒಂದು ಮತ ಅಥವಾ ಪಂಗಡಕ್ಕೆ ಸೇರಿದ ಹೇಳಿಕೆಗಳಲ್ಲ. ಇಡೀ ಮಾನವತೆಗೆ ತಾತ್ತ್ವಿಕ ದರ್ಶನವನ್ನು ಮಾಡಿಸುವ ವೈಚಾರಿಕ ದೀವಿಗೆಗಳು. ❖

# ತಂತ್ರಶಾಸ್ತ್ರದಲ್ಲಿ ನಾಮಜಪ ಮತ್ತು ಮಂತ್ರದ ಮಹತ್ವ

ಸ್ವಾಮಿ ಕರುಣಾಕರಾನಂದ

**ತ**ಂತ್ರಶಾಸ್ತ್ರದ ವಿಸ್ತಾರ ಅಳತೆಗೆ ಮೀರಿದ್ದು. 'ತನೂ ವಿಸ್ತಾರೇ' ಎಂಬ ಧಾತುವಿನಿಂದ ಆದ ನಿಷ್ಪತ್ತಿಯೇ ಈ ಶಾಸ್ತ್ರದ ಅಗಾಧತೆಯನ್ನು ತೋರಿಸಿಕೊಡುತ್ತದೆ. ಮಾನವನ ಇಹ ಪರಗಳ ಕಾಮನೆಗಳನ್ನು ಪೂರೈಸುವುದಲ್ಲದೆ ಮೋಕ್ಷಕ್ಕೂ ಅನೇಕ ಮಾರ್ಗಗಳನ್ನು ತಂತ್ರವು ತೆರೆದಿಟ್ಟಿರುತ್ತದೆ. ಮಂತ್ರಶಾಸ್ತ್ರ ಈ ತಂತ್ರಶಾಸ್ತ್ರದ್ದೇ ಒಂದು ವಿಭಾಗವಾದರೂ ಇದರ ವಿಸ್ತಾರವೂ ಅಳತೆಗೆ ನಿಲುಕದ್ದೆ! ಆದ್ದರಿಂದ ಇದನ್ನೇ ಬೇರೆಯಾಗಿಯೂ ಅಧ್ಯಯನ ಮಾಡುವವರ ಸಂಖ್ಯೆ ಕಡಿಮೆಯೇನಿಲ್ಲ. ಆದರೆ ಸರಿಯಾದ ಸಂಪ್ರದಾಯವನ್ನು ಬಲ್ಲವರ ಕೊರತೆಯಿರುವುದರಿಂದಲೂ, ಯಾರೆಂದರೆ ಅವರಿಗೆ ಉಪದೇಶ ಮಾಡಬಾರದೆಂಬ ನಿಯಮವಿರುವುದರಿಂದಲೂ ('ಮತ್ರಿ ಗುಪ್ತ ಪರಿಭಾಷಣೇ' ಎಂಬ ಧಾತುವಿನಿಂದಲೂ ಮಂತ್ರಶಬ್ದ ನಿಷ್ಪನ್ನಗೊಂಡಿರುತ್ತದೆ) ಇಂದಿಗೂ ಮಂತ್ರಶಾಸ್ತ್ರವು ತನ್ನ ನಿಜವಾದ ಮಹಿಮೆಯನ್ನು ಲೋಕಕ್ಕೆ ಬಿಟ್ಟುಕೊಟ್ಟಿಲ್ಲ.



೧೬ನೆಯ ಶತಮಾನದ ಬಂಗಾಳದ ಸುಪ್ರಸಿದ್ಧ ತಂತ್ರಸಾಧಕರಾದ ಕೃಷ್ಣಾನಂದ ಆಗಮವಾಗೀಶರ ಬಗ್ಗೆ ಒಂದು ಪ್ರಸಿದ್ಧ ಕತೆಯಿದೆ. ಅವರು ತನ್ನ ಮಗನ ಮುಂದೆ ಒಂದು ಮಂತ್ರವನ್ನು ಉಚ್ಚರಿಸಿ ಯಾರೇ ಆಗಲಿ ಈ ಮಂತ್ರವನ್ನು ಒಂದು ಹಣ್ಣಿನ ಮೇಲೆ ಉಚ್ಚರಿಸಿದರೆ ಆ ಹಣ್ಣನ್ನು ಯಾರೂ ಕತ್ತರಿಸಲಾರರು ಎಂದರು. ಸಂತಸಗೊಂಡ ಮಗನು ಪಕ್ಕದ ಮನೆಗೆ ಹೋಗಿ ಅವರಿಗೆ ಒಂದು ಹಣ್ಣನ್ನು ತರಲು ಹೇಳಿದನು. ಹಣ್ಣನ್ನು ತಂದ ಮೇಲೆ ಮಗನು ಆ ಮಂತ್ರವನ್ನು ಅದರ ಮೇಲೆ ಉಸುರಿ ಈಗ ಆ ಹಣ್ಣನ್ನು ಕತ್ತರಿಸಲಾಗುವುದಿಲ್ಲ ಎಂದನು. ಅವನ ಹೇಳಿಕೆಯನ್ನು ಪರೀಕ್ಷಿಸಬೇಕೆಂದು ಆ ಮನೆಯವನು ಒಂದು ಚಾಕುವಿನಿಂದ ಆ ಹಣ್ಣನ್ನು ಹಲವು ಭಾಗಗಳಾಗಿ ಕತ್ತರಿಸಿಯೇಬಿಟ್ಟಾಗ ಅಲ್ಲೊಂದು ನಗೆಯ ಹೊನಲೇ ಹರಿಯಿತು. ಆ ನಗೆಯನ್ನು ಕೇಳಿಸಿಕೊಂಡ ಪಕ್ಕದ ಮನೆಯಲ್ಲಿದ್ದ ಕೃಷ್ಣಾನಂದರು ಆ ಮನೆಗೆ ಬಂದು, ಇನ್ನೊಂದು ಹಣ್ಣನ್ನು ತರುವಂತೆ ಕೇಳಿಕೊಂಡಾಗ ಇನ್ನೊಂದು ಹಣ್ಣು ತರಲಾಯಿತು. ಕೃಷ್ಣಾನಂದರು ಅದರ ಮೇಲೆ ಮಂತ್ರವನ್ನು ಉಸುರಿ ಕತ್ತರಿಸಲು ಹೇಳಿದಾಗ ಆ ಹಣ್ಣನ್ನು ಏನು ಮಾಡಿದರೂ ಮನೆಯವರಿಂದ ಕತ್ತರಿಸಲಾಗಲಿಲ್ಲ! ಎಲ್ಲರಿಗೂ ಆಶ್ಚರ್ಯವಾಯಿತು. ಮಗನು ಈ ವ್ಯತ್ಯಾಸಕ್ಕೆ ಕಾರಣ ಕೇಳಿದಾಗ ಕೃಷ್ಣಾನಂದರು ಹೇಳಿದರು, ಮಗನು ಉಚ್ಚರಿಸಿದ್ದು ಕೇವಲ ಶಬ್ದಗಳನ್ನಷ್ಟೆ; ಆದರೆ ತಾನು ಜೀವಂತ ಶಕ್ತಿಯನ್ನು!

**ಮಂತ್ರತತ್ತ್ವ ಹಾಗೂ ಅದರ ಮಹತ್ವ:** ನಮ್ಮ ಜೀವನದಲ್ಲಿ ಶಬ್ದತತ್ತ್ವವನ್ನು ಕಡೆಗಣಿಸಿ ಬದುಕುವಂತೆಯೇ ಇಲ್ಲ. ಮಂತ್ರವಿಜ್ಞಾನವು ಈ ಶಬ್ದತತ್ತ್ವವನ್ನು ಅವಲಂಬಿಸಿ ಮನುಷ್ಯನು ಪರಮ ಪದವನ್ನು ಪಡೆಯುವ ಬಗೆಯನ್ನು ವಿವರಿಸುತ್ತದೆ. ಶಿವಸೂತ್ರಗ್ರಂಥದಲ್ಲಿ ಶಾಕ್ತೋಪಾಯದ ಮೊದಲಸೂತ್ರವೇ **ಚಿತ್ತಂ ಮಂತ್ರಃ ।** ಎಂಬುದು. ಶಕ್ತಿಯು ಮಂತ್ರದ ರೂಪವನ್ನು ಧರಿಸಿ ಪರತತ್ತ್ವವನ್ನು ವಿಮರ್ಶಿಸುತ್ತಿರುವ ಮನಸ್ಸನ್ನು ಅಭೇದಬುದ್ಧಿಗೆ ಒಯ್ಯುತ್ತದೆ. ಸಾಧಕನ ಮನಸ್ಸು ಮಂತ್ರದೇವತೆಯೊಂದಿಗೆ ಅದೆಷ್ಟು ತಾದಾತ್ಮ್ಯವನ್ನು ಹೊಂದುವು

ನಾಮಜಪ, ಮಂತ್ರದೀಕ್ಷೆಯ ವಿಧಿವಿಧಾನ - ಇವುಗಳಿಗೆ ಶಾಸ್ತ್ರೀಯವಾದ ಹಾಗೂ ಆಚರಣಾತ್ಮಕವಾದ ಆಧಾರ ಲಭಿಸುವುದು ತಂತ್ರಶಾಸ್ತ್ರದಲ್ಲಿ. ರಹಸ್ಯವೂ ಗೂಢವೂ ಆದ ತತ್ತ್ವ ಹಾಗೂ ಪರಂಪರಾಗತ ಆಚರಣೆಗಳಿಂದ ಕೂಡಿದ ಈ ವಿಚಾರಗಳನ್ನು ಕುರಿತು ಬೆಳಕು ಚೆಲ್ಲುತ್ತದೆ ಈ ಲೇಖನ. ಇದನ್ನು ಬರೆದಿರುವ ಪೂಜ್ಯ ಸ್ವಾಮೀಜಿ ಸಂಸ್ಕೃತ ಹಾಗೂ ಶಾಸ್ತ್ರಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದು, ಮೈಸೂರು ರಾಮಕೃಷ್ಣ ಆಶ್ರಮದ ಅಂಗಸಂಸ್ಥೆಯಾದ 'ರಾಮಕೃಷ್ಣ ನೈತಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ'ಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



ದೆಂದರೆ ತಾನೇ ಮಂತ್ರವಾಗುತ್ತದೆ. ವಿಮರ್ಶಶಕ್ತಿಯೆಂಬ ಹೆಸರುಳ್ಳ ಶಿವನ ಪೂರ್ಣಾಹಂತಾವೇ (ನಾನೇ ಸರ್ವವೂ ಎಂಬ ಭಾವನೆ) ಎಲ್ಲ ಮಂತ್ರಗಳ ಉಗಮಸ್ಥಾನ. ಪ್ರತಿಯೊಂದು ಮಂತ್ರವೂ ಸಾಧಕನನ್ನು ಪರತತ್ತ್ವದ ಸೃಜನಾತ್ಮಕ ಶಕ್ತಿಯಾದ 'ದಿವ್ಯ ಅಹಂ' ಎಡೆಗೆ ಹಿಂತಿರುಗಿಸುತ್ತದೆ. ಆ 'ದಿವ್ಯ ಅಹಂ' ವಾಕ್ಸ್ವರೂಪವಾಗಿರದೆ ಎಲ್ಲ ವಾಕ್ಕಿನ ಉಗಮರೂಪವಾಗಿರುತ್ತದೆ. ಈ **ಪರಾವಾಕ್** ಎನ್ನುವುದು ನಾಮ ರೂಪಾತ್ಮಕವಾದ ಸಮಸ್ತಸೃಷ್ಟಿಯನ್ನೂ ಉಂಟುಮಾಡುವ ಪ್ರಥಮ ಸ್ಪಂದನ. ಈ ಪರಾವಾಕ್‌ನ ಮುಂದಿನ ಹಂತ **ಪಶ್ಯಂತೀ**. ಈ ಹಂತದಲ್ಲಿ ಶಬ್ದ ಮತ್ತು ಅರ್ಥಗಳು ಬೇರ್ಪಡದ ಸ್ಥಿತಿಯಲ್ಲಿಯೇ ಇರುತ್ತವೆ. ಮುಂದಿನ ಹಂತವೇ **ಮಧ್ಯಮಾ**. ಶಬ್ದಾರ್ಥಗಳಿಗೆ ಈ ಹಂತದಲ್ಲಿ ಭೇದವುಂಟಾದರೂ ಅದರ ಅಭಿವ್ಯಕ್ತಿಯಾಗಿರುವುದಿಲ್ಲ. ಆಲೋಚನೆಯ ಹಂತದಲ್ಲಿ ಮಾತ್ರ ಭೇದವು ಅನುಭವಕ್ಕೆ ಬರುತ್ತದೆ. ಇದು **ಪಶ್ಯಂತೀ** ಹಾಗೂ **ವೈಖರೀ** ಗಳ ಸಂಧಿಸ್ಥಳ. ಈ ಹಂತದಲ್ಲಿ ಒಂದು ಬಗೆಯ ಸೂಕ್ಷ್ಮ ವಾಕ್ ಇರುತ್ತದೆ. ವೈಖರಿಯ ಹಂತದಲ್ಲಿ ಮಾತ್ರ ಸ್ಥೂಲವಾದ ಮಾತು ಅಭಿವ್ಯಕ್ತವಾಗುತ್ತದೆ. ವಿಖರವೆಂದರೆ ಶರೀರ. ವೈಖರೀಯೆಂದರೆ ಮಾತನ್ನು ಹೊರಡಿಸಲು ಉಪಯೋಗವಾಗುವ ಶರೀರದ ಅಂಗಗಳು. ಕುಂಡಲಿನಿಯೇ ಆ ಪರಾವಾಕ್‌ಸ್ವರೂಪಿಣಿ, ಶಕ್ತಿಯ ಕೇಂದ್ರಬಿಂದು.

ಪ್ರತಿಯೊಂದು ಮಂತ್ರದಲ್ಲಿಯೂ ವಾಚ್ಯ ಮತ್ತು ವಾಚಕಗಳೆಂಬ ಎರಡು ಶಕ್ತಿಗಳುಂಟು. ವಾಚ್ಯಶಕ್ತಿಯೇ ಮಂತ್ರದ ಆತ್ಮಾ ಅಥವಾ ಸೂಕ್ಷ್ಮ ಶಕ್ತಿಯಾಗಿರುತ್ತದೆ. ಇದನ್ನು ಜ್ಯೋತಿರ್ಮಯೀ ಶಕ್ತಿಯೆಂಬುದಾಗಿಯೂ ಕರೆಯುವರು. ಮಂತ್ರದಲ್ಲಿರುವ ವರ್ಣಗಳ ಒಂದರ ನಂತರ ಇನ್ನೊಂದರ ಜೋಡಣೆಯೇ ಅದರಿಂದ ಉಕ್ತವಾದ ದೇವತೆಯಾಗಿರುತ್ತದೆ. ಈ ದೇವತೆಯನ್ನು ಎಚ್ಚರಿಸದೆಯೆ ವಾಚ್ಯದ ಜ್ಞಾನವುಂಟಾಗದು. ತಂತ್ರದ ಪ್ರಕಾರ ಶಬ್ದಬ್ರಹ್ಮವೇ ಪರಾವಾಕ್ ಅಥವಾ ಅದ್ವಯಶಕ್ತಿ. ಈ ವಾಚ್ಯವಾಚಕರೂಪದ ಮಂತ್ರವು ಅದರ ಒಂದು ಸಂಕುಚಿತವಾದ ಸ್ಫುರಣೆಯಷ್ಟೆ. ಈ ಅಪರಬ್ರಹ್ಮವಾದ ಶಬ್ದಬ್ರಹ್ಮವನ್ನು ದಾಟಿ ಹೋದರೆ ಶಬ್ದಾತೀತ ಪರಬ್ರಹ್ಮ ಪದವಿಯನ್ನು ಸಾಧಕನು ಪಡೆಯುವನು.

ಎಲ್ಲ ಮಂತ್ರಗಳೂ ವರ್ಣಗಳ ಸಮುದಾಯ. ಈ ವರ್ಣಗಳು ಸ್ವಯಂ ಪರಮಾತ್ಮನ ಶಕ್ತಿಸ್ವರೂಪಗಳು. ಶಕ್ತಿಯನ್ನೇ **ಮಾತೃಕಾ** ಎಂಬುದಾಗಿಯೂ ಕರೆಯುವರು. ಮಾತೃಕೆಗಳೆಲ್ಲ ಶಿವನ ಸ್ವರೂಪವೇ ಆಗಿರುತ್ತವೆ. ಬ್ರಹ್ಮನಿಂದ ಹಿಡಿದು ಭೂಮಿಯವರೆಗೂ ಎಲ್ಲ ಸೃಷ್ಟಿಯು ಮಾತೃಕೆಗಳಿಂದಲೇ ವ್ಯಾಪ್ತವಾಗಿವೆ. ತಂತ್ರಶಾಸ್ತ್ರದ ಪ್ರಕಾರ ಪ್ರತಿಯೊಂದು ವರ್ಣಕ್ಕೂ ತನ್ನದೇ ಬಣ್ಣ, ಆಕಾರ, ಆಯುಧ, ವಾಹನ, ಶಕ್ತಿ, ಋಷಿ, ಛಂದಸ್ಸೇ ಮೊದಲಾದವುಗಳಿರುತ್ತವೆ. ಮಾತೃಕೆಗಳು ಶಿವನ ಪರಾಹಂತಾ (ಪರತತ್ತ್ವದ ಅಹಂ) ಸ್ವರೂಪವೇ. ***ಮಾಲಿನೀವಿಜಯೋತ್ತರತಂತ್ರ*** ದಲ್ಲಿ *(ಪ್ರಥಮಾಧಿಕಾರ ಶ್ಲೋಕ ೧೯-೨೨)* ಪರಮಾತ್ಮನು ಸೃಷ್ಟಿ, ಸ್ಥಿತಿ ಹಾಗೂ ಸಂಹಾರಗಳಿಗೆ ಅಧಿಕಾರಿಯಾಗಿ ಅಘೋರ, ಪರಮಘೋರ, ಘೋರರೂಪ, ಘೋರಮುಖ, ಭೀಮ, ಭೀಷಣ, ವಮನ ಮತ್ತು ಪಿವನಗಳೆಂಬ ತನ್ನ ಎಂಟು ವಿಜ್ಞಾನಕಲೆಗಳನ್ನು ಪ್ರೇರಿಸಿದನು. ಅವುಗಳನ್ನು ಮಂತ್ರ ಹಾಗೂ ಮಂತ್ರೇಶ್ವರರ ಪದಗಳಲ್ಲಿ ನಿಯೋಜಿಸಿದನು. ಅದರ ನಂತರ ಏಳುಕೋಟಿ ಮಂತ್ರಗಳನ್ನು, ಮಂಡಲಗಳನ್ನು ಸೃಷ್ಟಿಸಿದನು. ಈ ಮಂತ್ರಗಳಲ್ಲಿ ಮಂತ್ರಶಕ್ತಿಯ ಸಂಚಾರವನ್ನು ಮಾಡಿದನು. ಈ ಎಲ್ಲ ಮಂತ್ರಗಳೂ ಎಲ್ಲ ಬಗೆಯ ಫಲಗಳನ್ನು ಕೊಡುವಂತೆ ಮಾಡಿದನು ಎಂದು ಮಂತ್ರದ ಉತ್ಪತ್ತಿಕ್ರಮವನ್ನು ವಿವರಿಸಲಾಗಿದೆ. ಪ್ರಣವದ ಅಕಾರ, ಉಕಾರ , ಮಕಾರ, ನಾದ ಹಾಗೂ ಬಿಂದುಗಳೆಂಬ ಐದು ಕಲೆಗಳಿಂದ ಎಲ್ಲ ವರ್ಣಗಳ ಉಗಮವಾಯಿತು. ಆದ್ದರಿಂದ ಪ್ರಣವಕ್ಕೆ ಅತ್ಯುತ್ಕೃಷ್ಟವಾದ ಸ್ಥಾನವಿದೆ.

**ಪ್ರಣವಂ ಸರ್ವದೇವಾಖ್ಯಂ ಸರ್ವದೇವಮಯಂ ವಿದುಃ।**
**ಸರ್ವೇಷಾಂ ಚೈವ ಮಂತ್ರಾಣಾಂ ಪ್ರಣವಃ ಪ್ರಾಣ ಉಚ್ಯತೇ ॥**

*(ವಾತುಲಶುದ್ಧಾಖ್ಯ ತಂತ್ರಮ್, ೬ನೆ ಪಟಲ, ೨ನೆ ಮಂತ್ರ)*

ಪ್ರಣವವನ್ನು ಸರ್ವದೇವತಾ ಎನ್ನುವರು. ಏಕೆಂದರೆ ಎಲ್ಲ ದೇವತೆಗಳೂ ಆ ಒಂದೇ ಪ್ರಣವದ ವಿಕಾರವಷ್ಟೆ. ಎಲ್ಲ ಮಂತ್ರಗಳಿಗೆ ಪ್ರಣವವೇ ಪ್ರಾಣವಾಗಿರುತ್ತದೆ.

ಮಾಯಾಶಕ್ತಿಯು ಅಚಿಂತ್ಯ ಹಾಗೂ ದಾಟಲು ಅಶಕ್ಯ. ಅದನ್ನೂ ದೂರ ಮಾಡುವ ಮಂತ್ರಶಕ್ತಿಯು ಮಾಯೆಗಿಂತಲೂ ಹೆಚ್ಚು ಶಕ್ತಿಯನ್ನು ಹೊಂದಿರುತ್ತದೆ. ಆದ್ದರಿಂದಲೇ ಸನತ್ಕುಮಾರತಂತ್ರದಲ್ಲಿ **'ಅಸಾಧ್ಯಂ ಸಾಧಯೇನ್ ಮಂತ್ರೀ ದೇವಾನಾಮಪಿ ದುರ್ಲಭಮ್।'** *(೫ನೇ ಪಟಲ, ೩ನೆ ಶ್ಲೋಕ)* ಮಂತ್ರವುಳ್ಳವನು ದೇವತೆಗಳಿಗೂ ದುರ್ಲಭವಾದುದನ್ನು, ಅಸಾಧ್ಯವಾದುದನ್ನೂ ಸಾಧಿಸಿಬಿಡುವನು ಎಂದಿದೆ.

**ಮಂತ್ರಶಕ್ತಿಯ ಅಭಿವ್ಯಕ್ತಿಗೆ ಪೂರಕ ಅಂಶಗಳು:** ಮಂತ್ರಸಿದ್ಧಿಗೆ ಕೆಲವು ಮನೋಭಾವದ ಅವಶ್ಯಕತೆಯಿರುತ್ತದೆ.

**ದೇವತಾಗುರುಮಂತ್ರಾಣಾಮೈಕ್ಯಮವಶ್ಯಕಾರಿಣಃ ।**
**ಶ್ರದ್ಧಯಾ ಜಾಯತೇ ಸಿದ್ಧಿರಿಹ ಲೋಕೇಪರತ್ರ ಚ॥**

*(ದ್ವಿತೀಯಮುಂಡಮಾಲಾತಂತ್ರಮ್ ೬ನೆ ಪಟಲ, ಶ್ಲೋಕ ೫೫-೫೬)*

''ಯಾವ ಸಾಧಕನು ಶ್ರದ್ಧೆಯಿಂದ ಕೂಡಿದವನಾಗಿ ಮಂತ್ರದ ಅಧಿಷ್ಠಾತೃದೇವತೆ, ದೀಕ್ಷೆ ನೀಡಿದ ಗುರು ಹಾಗೂ ತಾನು ಜಪಿಸುತ್ತಿರುವ ಮಂತ್ರ– ಈ ಮೂರೂ ಒಂದೇ, ಬೇರೆಯಲ್ಲವೇ ಅಲ್ಲವೆಂಬುದಾಗಿ ಭಾವಿಸುತ್ತಾನೆಯೋ ಅವನಿಗೆ ಮಾತ್ರ ಮಂತ್ರದಿಂದ ಈ ಲೋಕದ ಹಾಗೂ ಪರಲೋಕದ ವಿಷಯಗಳಲ್ಲಿ ಸಿದ್ಧಿಯುಂಟಾಗುತ್ತದೆ.'' ಗುರುವಿನಿಂದ ಪಡೆದ ಮಂತ್ರವನ್ನು ಯಾರ ಮುಂದೆಯೂ ಪ್ರಕಟಪಡಿಸದೆ ಇರುವುದು ಬಹಳ ಮುಖ್ಯ.

**ಗುರುಂ ಪ್ರಕಾಶಯೇತ್ ವಿದ್ವಾನ್ ನ ತು ಮಂತ್ರಂ ಕದಾಚನ ।**
**ಅಕ್ಷಮಾಲಾಂ ಚ ವಿದ್ಯಾಂ ಚ ನ ಕದಾಚಿತ್ ಪ್ರಕಾಶಯೇತ್॥**

*(ಅಲ್ಲೇ , ೨ನೆ ಪಟಲ, ಶ್ಲೋಕ ೫೩)*

''ಒಂದು ವೇಳೆ ತನ್ನ ಗುರುವಿನ ಹೆಸರನ್ನು ಪ್ರಕಟಪಡಿಸಿದರೂ ಪರವಾಗಿಲ್ಲ (ಶಾಸ್ತ್ರದಲ್ಲಿ ನಿಜವಾಗಿ ಗುರುವಿನ ಹೆಸರನ್ನು ಹೇಳುವುದು ನಿಷಿದ್ಧ); ಆದರೆ, ಮಂತ್ರವನ್ನು, ತನ್ನ ಜಪಮಾಲೆಯನ್ನು ಹಾಗೂ ವಿದ್ಯೆಯನ್ನು (ಸ್ತ್ರೀಮಂತ್ರಕ್ಕೆ ವಿದ್ಯೆಯೆಂದು ಹೆಸರು) ಪ್ರಕಟಪಡಿಸಲೇ ಕೂಡದು'' ಎನ್ನುತ್ತದೆ ತಂತ್ರ. ಮಂತ್ರವೆನ್ನುವುದು ಭಗವಂತನ ಹೆಸರು. ಒಬ್ಬಾತನ ಹೆಸರನ್ನು ಕೂಗಿ ಕರೆದಾಗ ಹೇಗೆ ಆತನು ಕರೆದವನ ಹತ್ತಿರ ಹೋಗುವನೋ, ಹಾಗೆ ಭಗವಂತನು ಮಂತ್ರಜಪ ಮಾಡುವವನ ಕರೆಗೆ ಓಗೊಡುವನು –

**ಆಹ್ವಾನತಃ ಸ್ವನಾಮ್ನಾ ತು ಜನಃ ಸನ್ನಿಹಿತೋ ಯಥಾ ।**
**ತಥಾ ಮಂತ್ರಪ್ರಯೋಗೇಣ ಶಿವಃ ಸನ್ನಿಹಿತೋ ಭವೇತ್ ॥**

*(ವಾತುಲಶುದ್ಧಾಖ್ಯ ತಂತ್ರಮ್, ೫ನೆ ಪಟಲ, ೮ನೆ ಶ್ಲೋಕ).*

ಆದ್ದರಿಂದ ಭಾವಪೂರ್ಣವಾಗಿ ಮಂತ್ರವನ್ನು ಜಪಿಸಬೇಕೆಂದು ತಿಳಿದುಬರುತ್ತದೆ.

**ಕಲ್ಪಕೋಟಿಜಪೇನಾಪಿ ಪೂಜಾಯಾಃ ಶತಕೇನ ಚ ।**
**ನ ಸಿದ್ಧಿರ್ಜಾಯತೇ ಸುಭ್ರು ಯದಿ ಭಾವೋ ನ ಜಾಯತೇ ॥**

*(ಬೃಹನ್ನೀಲತಂತ್ರಮ್, ೪ನೆ ಪಟಲ, ೧೧೩ನೆ ಶ್ಲೋಕ)*

''ಹೇ ಸುಂದರವಾದ ಹುಬ್ಬುಳ್ಳವಳೇ! ಭಾವವಿಲ್ಲದಿದ್ದರೆ ಅಸಂಖ್ಯ ಜಪ ಪೂಜೆಗಳನ್ನು ಮಾಡಿದರೂ ಸಿದ್ಧಿಯುಂಟಾಗುವುದಿಲ್ಲ'' ಎಂಬ ತಂತ್ರವಾಕ್ಯವೇ ಇದಕ್ಕೆ ಪುಷ್ಟಿ.

ಮಂತ್ರವು ಸಿದ್ಧಿಸಬೇಕಾದರೆ ತನ್ನ ಮಂತ್ರದ ಋಷಿ, ದೇವತೆ, ಛಂದಸ್ಸು ಹಾಗೂ ವಿನಿಯೋಗವನ್ನು ಕುರಿತು ಸಾಧಕನು ಅರಿತಿರಬೇಕಾಗುತ್ತದೆ ಹಾಗೂ ಸಂಕಲ್ಪಿಸುವಾಗ ಉಚ್ಚರಿಸಬೇಕಾಗುತ್ತದೆ. ***ಬೃಹದ್ಯೋಗೀಯಾಜ್ಞವಲ್ಕ್ಯಸ್ಮೃತಿ*** ಯಲ್ಲಿ,

**ಆರ್ಷಂ ಛಂದಶ್ಚ ದೈವತ್ಯಂ ವಿನಿಯೋಗಸ್ತಥೈವ ಚ ।**
**ವೇದಿತವ್ಯಂ ಪ್ರಯತ್ನೇನ ಬ್ರಾಹ್ಮಣೇನ ವಿಪಶ್ಚಿತಾ ॥**
**ಅವಿದಿತ್ವಾ ತು ಯಃ ಕುರ್ಯಾದ್ಯಾಜನಮಧ್ಯಾಪನಂ ಜಪಮ್।**
**ಹೋಮಮನ್ಯಚ್ಚ ಯತ್ಕಿಂಚಿತ್ ತಸ್ಯ ಚಾಲ್ಪಂ ಫಲಂ ಭವೇತ್ ॥**

*(೧ನೆ ಅಧ್ಯಾಯ ೨೭ನೆ ಶ್ಲೋಕ)*

-ಎಂದಿದೆ. ಆ ಮಂತ್ರಚೈತನ್ಯವನ್ನು ತನ್ನ ಜೀವನದಲ್ಲಿ ಸಾಕ್ಷಾತ್ತಾಗಿ ಕಂಡವನೇ ಋಷಿ. ಆ ಮಂತ್ರದ ವಾಚಕವಾದ ಚೈತನ್ಯವೇ ದೇವತೆ. ಗಾಯತ್ರ್ಯಾದಿಗಳೇ ಛಂದಸ್ಸುಗಳು. ಯಾವ ಛಂದಸ್ಸಿನಲ್ಲಿ ಆ ಋಷಿಗೆ ಸಾಕ್ಷಾತ್ಕಾರವಾಯಿತೋ ಅದೇ ಆ ಮಂತ್ರದ ಛಂದಸ್ಸು. ಆ ಮಂತ್ರವನ್ನು ಯಾವ ಪ್ರಯೋಜನಕ್ಕಾಗಿ ಸಿದ್ಧಿಸಿಕೊಳ್ಳಬೇಕೆಂದು ಜಪಿಸುವೆವೋ ಅದೇ ವಿನಿಯೋಗ. ಮಂತ್ರವನ್ನು ಒಬ್ಬ ಯೋಗ್ಯ ಗುರುವಿನಿಂದ ದೀಕ್ಷೆ ಪಡೆದೇ ಜಪಿಸಿದರೆ ಸಿದ್ಧಿಸುತ್ತದೆ. ಗುರುವಿನಲ್ಲಿ ಅತ್ಯಂತ ಶ್ರದ್ಧೆಯಿರಬೇಕು.

**''ಗುರೋರ್ದೇಹಂ ಸಮಾಶ್ರಿತ್ಯ ಮಂತ್ರದೇಹೋಽವತಿಷ್ಠತೇ ।**
**ತತಃ ಸರ್ವೇಣ ಭಾವೇನ ಗುರುಂ ಮಂತ್ರೇಣ ಪೂಜಯೇತ್ ॥''**

''ಗುರುವಿನ ಶ್ರೀದೇಹವನ್ನು ಆಶ್ರಯಿಸಿಯೇ ಮಂತ್ರದೇಹವು ನಿಂತುಕೊಂಡಿದೆ. ಆದ್ದರಿಂದ ಮಂತ್ರದ ಮೂಲಕ ಎಲ್ಲ ಬಗೆಯಿಂದಲೂ ಗುರುವನ್ನು ಪೂಜಿಸಬೇಕು''

*ಸನತ್ಕುಮಾರತಂತ್ರಮ್ (೫ನೆ ಪಟಲ, ೬ನೆಮಂತ್ರ)*

ಸಾಮಾನ್ಯವಾಗಿ ನಮಗೆ ಒಂದು ಸಂಶಯವಿರುತ್ತದೆ. ಒಂದು ವೇಳೆ ನನಗೆ ಸಿಕ್ಕಿರುವ ಮಂತ್ರವು ಸಿದ್ಧ ಮಂತ್ರವೇ ಅಲ್ಲವೇ ಎಂಬುದಾಗಿ. ಅದಕ್ಕೆ ಸನತ್ಕುಮಾರತಂತ್ರವು ಹೇಳುತ್ತದೆ,

**''ಅನ್ಯೇಷು ಸಾಧಿತಾ ಮಂತ್ರಾಃ ಸರ್ವೇ ಚ ಫಲದಾಯಕಾಃ ।**
**ಗೃಹೀತಸ್ಯ ಫಲಂ ದಾತಾ ಮಂತ್ರೋ ಯದ್ಯಪ್ಯಸಾಧಿತಃ ॥''**

– ''ಇನ್ನೊಬ್ಬರಲ್ಲಿ ಫಲ ನೀಡಿದ ಎಲ್ಲ ಮಂತ್ರಗಳೂ ಜಪಿಸುವವನಿಗೆ ಫಲ ನೀಡಿಯೇ ನೀಡುತ್ತವೆ. ಒಂದು ವೇಳೆ ಮಂತ್ರವು ಈ ಹಿಂದೆ ಸಾಧಿಸಲ್ಪಡದೆ ಇದ್ದರೂ, ಈಗ ಅದನ್ನು ಪಡೆದುಕೊಂಡವನಿಗೆ ಫಲವನ್ನಂತೂ ನೀಡುತ್ತದೆ.'' *(ಪಟಲ ೫, ೪ನೇ ಶ್ಲೋಕ)*

ಮಂತ್ರವನ್ನು ಚೈತನ್ಯಗೊಳಿಸಬೇಕಾದರೆ ಸಾಧಕನು ಜಪಿಸುವ ಮಂತ್ರದ ಮೊದಲು 'ಕ್ಲೀಂ ಶ್ರೀಂ ಹ್ರೀಂ' ಹಾಗೂ ಅಕಾರದಿಂದ ಕ್ಷಕಾರದವರೆಗೆ ಅನುಸ್ವಾರದಿಂದ ಕೂಡಿದ ಮಾತೃಕೆಗಳನ್ನು (ಅಂದರೆ ಅಂ, ಆಂ, ಇಂ, ಈಂ...ಹಂ, ಲಂ ,ಕ್ಷಂ) ಉಚ್ಚರಿಸಬೇಕು. ನಂತರ ತನ್ನ ಮಂತ್ರವನ್ನು ಸಾಧಕನು ಉಚ್ಚರಿಸಿ ಅದರ ನಂತರ ಪುನಃ 'ಕ್ಲೀಂ ಶ್ರೀಂ ಹ್ರೀಂ' ಹಾಗೂ ಅಕಾರದಿಂದ ಕ್ಷಕಾರದವರೆಗೆ ಅನುಸ್ವಾರದಿಂದ ಕೂಡಿದ ಮಾತೃಕೆಗಳನ್ನು ಹಿಂದಿನಂತೆಯೆ ಉಚ್ಚರಿಸಬೇಕು. ಹೀಗೆ ೧೦೮ ಬಾರಿ ಉಚ್ಚರಿಸಿದರೆ ಸಾಧಕನ ಮಂತ್ರವು ಚೈತನ್ಯವಾಗುತ್ತದೆ.

ಮಂತ್ರದ ಶಿರವನ್ನೂ, ಪಲ್ಲವವನ್ನೂ ಅರಿತುಕೊಳ್ಳದೆ ಇದ್ದಲ್ಲಿ ಕಾಮ್ಯಪ್ರಯೋಗಗಳಲ್ಲಿ ಮಂತ್ರಸಿದ್ಧಿಯಾಗದು. ಪ್ರಣವವೇ ಮಂತ್ರದ ಶಿರಸ್ಸು. ಮಂತ್ರದ ವಾಸಸ್ಥಾನವೇ ಪಲ್ಲವ. ಶಿರಸ್ಸು ಮತ್ತು ಪಲ್ಲವವನ್ನು ಒಳಗೊಂಡ ಮಂತ್ರವು ಎಲ್ಲ ಫಲಗಳನ್ನೂ ನೀಡುತ್ತದೆ. ವಶೀಕರಣ, ಆಕರ್ಷಣ ಹಾಗೂ ಹೋಮಗಳಲ್ಲಿ 'ಸ್ವಾಹಾ' ಎಂಬ ಪಲ್ಲವವು ಸಿದ್ಧಿಯನ್ನು ನೀಡಿದರೆ, 'ವೌಷಟ್' ಎಂಬ ಪಲ್ಲವದಿಂದ ಕೂಡಿದ ಮಂತ್ರವು ಪುಷ್ಟಿಯೇ ಮೊದಲಾದ ಕರ್ಮಗಳಲ್ಲಿ ಸಿದ್ಧಿಯನ್ನು ನೀಡುತ್ತದೆ. ಮಾರಣಪ್ರಯೋಗಗಳಲ್ಲಿ 'ಹುಂ' ಎಂಬುದು ಪಲ್ಲವವಾಗುತ್ತದೆ. ಉಚ್ಚಾಟನದಲ್ಲಿ 'ಫಟ್' ಎಂಬುದು ಪಲ್ಲವವಾಗುತ್ತದೆ. 'ವಷಟ್' ಎಂಬ ಪಲ್ಲವವು ಮಹಾಭಯವನ್ನೂ ಹೋಗಲಾಡಿಸುತ್ತದೆ.

**ಮಂತ್ರಗಳ ದಶಸಂಸ್ಕಾರಗಳು:** ಸಾಧಕನು ತಾನು ಜಪಿಸುವ ಮಂತ್ರಕ್ಕೆ ಹತ್ತು ಸಂಸ್ಕಾರಗಳನ್ನು ಮಾಡಬೇಕಾಗುತ್ತದೆ.

**''ಜನನಂ ಜೀವನಂ ಪಶ್ಚಾತ್ತಾಡನಂ ಬೋಧನಂ ತಥಾ ।**
**ಅಥಾಭಿಷೇಕೋ ವಿಮಲೀಕರಣಾಪ್ಯಾಯನೇ ಪುನಃ ॥**
**ತರ್ಪಣಂ ದೀಪನಂ ಗುಪ್ತಿರ್ದಶೈತಾ ಮಂತ್ರಸಂಸ್ಕ್ರಿಯಾಃ ।''**

*(ಮಂತ್ರಯೋಗಸಂಹಿತಾ)*

ಮಾತೃಕಾಯಂತ್ರದಿಂದ ಮಂತ್ರಗಳ ಉದ್ಧರಣ (ಹೊರಗೆ ತೆಗೆಯುವುದು) **'ಜನನ'**ವೆನಿಸಿಕೊಳ್ಳುತ್ತದೆ. ಈ ಮಾತೃಕಾಯಂತ್ರವನ್ನು ಶಕ್ತಿ ಆರಾಧನೆಗಾಗಿ ಕೇಸರಗಳಿಂದಲೂ, ವಿಷ್ಣು ಆರಾಧನೆಗೆ ಚಂದನದಿಂದಲೂ ಮತ್ತು ಶಿವನ ಆರಾಧನೆಗೆ ಭಸ್ಮದಿಂದಲೂ ಬರೆಯಬೇಕು. ಶುಭಪೀಠವೇ ಮೊದಲಾದವುಗಳಲ್ಲಿ ಮಾತೃಕಾ ಕಮಲವನ್ನು ರಚಿಸಬೇಕು. ನಂತರ ಕೊಡುವ ಮಂತ್ರದ ಒಂದೊಂದು ಅಕ್ಷರವನ್ನೂ ಇದರಿಂದ ಹೊರತೆಗೆಯಬೇಕು. ಪ್ರಣವದೊಳಗೆ ಸೇರಿಸಿಕೊಂಡು ಮಂತ್ರವನ್ನು ಜಪ ಮಾಡುವುದೇ **'ಜೀವನ'**ವೆನಿಸಿಕೊಳ್ಳುತ್ತದೆ. ಹೀಗೆ ಮಂತ್ರವನ್ನು ೧೦೦ ಬಾರಿ ಜಪಿಸ ಬೇಕು. ಮಂತ್ರವರ್ಣಗಳನ್ನು ಭೂರ್ಜವೃಕ್ಷದ ತೊಗಟೆಯ ಮೇಲೆ ಬರೆದು, ಚಂದನದ ನೀರಿನಿಂದ ವಾಯುಬೀಜವಾದ 'ಯಂ' ನ್ನು ಉಚ್ಚರಿಸುತ್ತ ನೂರು ಬಾರಿ ಹೊಡೆಯುವುದು **'ತಾಡನ'**ವೆನಿಸಿಕೊಳ್ಳುತ್ತದೆ. ಹಾಗೆ ಬರೆದ ಮಂತ್ರವನ್ನು ಕರವೀರ ಪುಷ್ಪದಿಂದ ವಹ್ನಿಬೀಜವನ್ನು (ರಂ) ಉಚ್ಚರಿಸುತ್ತ ಹೊಡೆಯುವುದೇ **'ಬೋಧನ'**ವೆನಿಸುವುದು. ಭೂರ್ಜಮರದ ತೊಗಟೆಯ ಮೇಲೆ ಬರೆದ ಮಂತ್ರವನ್ನು ೧೦೮ ಬಾರಿ ಅರಳಿಮರದ ಚಿಗುರಿನಿಂದ ಅಭಿಷೇಕ ಮಾಡುವುದೇ **'ಅಭಿಷೇಕ'**ವೆನಿಸಿಕೊಳ್ಳುತ್ತದೆ. ಪ್ರಣವದಿಂದ ಮನಸ್ಸಿನಲ್ಲಿ ಧ್ಯಾನಿಸಿದ ಮಂತ್ರದ ಸಹಜ, ಆಗಂತುಕ ಹಾಗೂ



ಮಾಯೀಯಮಲಗಳನ್ನು ಸುಡುವುದೇ '**ವಿಮಲೀಕರಣ**'ವೆನಿಸಿಕೊಳ್ಳುತ್ತದೆ. ಕುಶದ ನೀರಿನಿಂದ ೧೦೮ ಬಾರಿ ಮಂತ್ರದ ಮೇಲೆ ಪ್ರೋಕ್ಷಿಸುವುದು '**ಆಪ್ಯಾಯನ**'ವೆನಿಸಿಕೊಳ್ಳುತ್ತದೆ. ಕೊಡುವ ಮಂತ್ರವನ್ನು ನೀರಿನಿಂದ ೧೦೮ ಬಾರಿ ತರ್ಪಣ ಬಿಡುವುದೇ '**ತರ್ಪಣ**' ವೆನಿಸಿಕೊಳ್ಳುತ್ತದೆ. ತಾರ ಮಂತ್ರ, ಮಾಯಾ ಹಾಗೂ ರಮಾ ಬೀಜದೊಂದಿಗೆ ಮಂತ್ರವನ್ನು ಕೂಡಿಸುವುದು '**ದೀಪನ**'ವೆನಿಸಿಕೊಳ್ಳುತ್ತದೆ. ತಾನು ಜಪಿಸುತ್ತಿರುವ ಮಂತ್ರವನ್ನು ಪ್ರಕಾಶಪಡಿಸದೆ ಇರುವುದೇ '**ಗೋಪನ**'ವೆನಿಸಿಕೊಳ್ಳುತ್ತದೆ. ಕಾಮ್ಯ ಕರ್ಮಗಳಿಗೆ ಈ ಹತ್ತು ಬಗೆಯ ಸಂಸ್ಕಾರಗಳನ್ನು ಮಾಡಬೇಕು. ***ಮುಕ್ತಿಗಾಗಿ ಮಾಡುವ ಸಾಧನೆಯಲ್ಲಿ ಇವುಗಳ ಅಗತ್ಯವಿಲ್ಲ*** ವೆಂಬ ನಿಯಮವಿರುತ್ತದೆ.

ಮಂತ್ರವನ್ನು ಜಪಿಸಬೇಕಾದರೆ ಕೈಬೆರಳುಗಳನ್ನು ಬಳಸಬಹುದು. ತುಳಸೀಮಾಲೆ, ರುದ್ರಾಕ್ಷಿಮಾಲೆ, ಚಂದನದ ಮಾಲೆಗಳಲ್ಲಿ ಯಾವುದನ್ನಾದರೂ ಬಳಸಬಹುದು. ಕಾಮ್ಯಪ್ರಯೋಗಗಳಲ್ಲಿ, ಮುಖ್ಯವಾಗಿ ಷಟ್ಕರ್ಮಗಳಲ್ಲಿ ಕಮಲದ ಬೀಜ, ಧತ್ತೂರದ ಬೀಜ, ಹವಳವೇ ಮೊದಲಾದವುಗಳನ್ನು ವಿಧಿಯಂತೆಯೇ ಬಳಸಬೇಕು. ಅವುಗಳಲ್ಲಿ ಫಲಕ್ಕೆ, ದೇವತೆಗೆ ತಕ್ಕಂತೆ ವಿವಿಧ ಆಸನಗಳನ್ನೂ ಹೇಳಲಾಗಿದೆ. ಯಾವ ಫಲಕ್ಕೆ ಯಾವ ದಿಕ್ಕಿಗೆ ತಿರುಗಿ ಜಪ ಮಾಡಬೇಕೆಂಬ ನಿಯಮವೂ ಶಾಸ್ತ್ರದಿಂದ ತಿಳಿದು ಬರುತ್ತದೆ. ರಾವಣನು ರಚಿಸಿದ ***ಉಡ್ಡೀಶ ತಂತ್ರ*** ದಲ್ಲಿ *(೨ನೆ ಪಟಲ, ೧೦ನೆ ಶ್ಲೋಕ)* ವಶೀಕರಣ ಕ್ರಿಯೆಯಲ್ಲಿ ಪೂರ್ವಾಭಿಮುಖವಾಗಿಯೂ, ಮಾರಣಕ್ಕೆ ದಕ್ಷಿಣಾಭಿಮುಖವಾಗಿಯೂ, ವಿದ್ಯೆ, ಧನ, ಶಾಂತಿ, ಪುಷ್ಟಿ ಹಾಗೂ ಆಯುಸ್ಸಿಗೆ ಉತ್ತರ ಮುಖಕ್ಕೆ ತಿರುಗಿ ಕುಳಿತು ಜಪಮಾಡಬೇಕೆಂದು ವಿಧಿಸಿರುತ್ತದೆ.

ಬಲಗೈಯ ಬೆರಳುಗಳನ್ನು ನೇರವಾಗಿ ಬಿಡಿಸಿ ಅನಾಮಿಕಾ ಬೆರಳಿನ ಮಧ್ಯಭಾಗದಿಂದ ಎಣಿಕೆ ಶುರು ಮಾಡಿ ತರ್ಜನಿಯ ಕೊನೆಯ ಭಾಗದವರೆಗೆ ಹತ್ತು ಸಂಖ್ಯೆಯನ್ನು ಎಣಿಸತಕ್ಕದ್ದು. ಮಧ್ಯದ ಪರ್ವಗಳನ್ನು ಮುಟ್ಟಕೂಡದು. ಕೈಬೆರಳುಗಳ ಮಧ್ಯದಲ್ಲಿ ಸಂದುಂಟಾಗದಂತೆ ಜೋಡಿಸಬೇಕು. ಮಾಲೆಗಳನ್ನು ತಂತ್ರಶಾಸ್ತ್ರದಂತೆ ಸಂಸ್ಕರಿಸಿಯೇ ಬಳಸಬೇಕು. ಮಾಲೆಗಳಲ್ಲಿರುವ ಮೇರು (ದೊಡ್ಡ ಗಾತ್ರದ ಮಣಿ)ವಿನವರೆಗೆ ಎಣಿಸಿ ಮತ್ತೆ ಮಾಲೆಯನ್ನು ಹಿಂತಿರುಗಿ ಎಣಿಸಬೇಕೇ ಹೊರತು ಮೇರುವನ್ನು ದಾಟಬಾರದು. ಮಾಲೆಯನ್ನು ನೆಲಕ್ಕೆ, ಶರೀರದ ಎದೆಗಿಂತ ಕೆಳಭಾಗಗಳಿಗೆ ತಾಗಿಸಕೂಡದು. ಒಂದು ದಿನವಾದರೂ ಮಾಲೆಯನ್ನು ತಿರುಗಿಸಲೇಬೇಕು. ಇಲ್ಲದಿದ್ದರೆ ಅದನ್ನು ಹಸಿವಿಗೆ ಒಳಪಡಿಸಿದಂತಾಗುತ್ತದೆ.

ಮಂತ್ರವನ್ನು ಗುರುವಿನಿಂದ ದೀಕ್ಷೆ ಪಡೆದುಕೊಳ್ಳಬೇಕಾದರೆ ಚೈತ್ರ ಹಾಗೂ ಮಲಮಾಸಗಳನ್ನು ಬಿಟ್ಟು ಬೇರೆ ಮಾಸಗಳಲ್ಲಿ ಸ್ವೀಕರಿಸಬೇಕು. ಬೇರೆ ಮಾಸಗಳಲ್ಲಿ ಶುಕ್ಲ ಹಾಗೂ ಕೃಷ್ಣಪಕ್ಷಗಳೆರಡೂ ಒಳ್ಳೆಯದಾದರೂ ಶುಕ್ಲಪಕ್ಷ ಉತ್ತಮವಾದುದು. ತಿಥಿಗಳಲ್ಲಿ ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ದಶಮೀ, ಏಕಾದಶೀ, ದ್ವಾದಶೀ ಮತ್ತು ಪೂರ್ಣಿಮೆ ದೀಕ್ಷೆಗೆ ಉತ್ತಮವಾದವುಗಳು. ಉಳಿದ ತಿಥಿಗಳಲ್ಲಿ ದೀಕ್ಷೆ ಸ್ವೀಕರಿಸಬಾರದು. ಶನಿವಾರ ಹಾಗೂ ಮಂಗಳವಾರಗಳನ್ನು ಬಿಟ್ಟು ಬೇರೆ ವಾರಗಳಲ್ಲಿ ದೀಕ್ಷೆ ಸ್ವೀಕರಿಸಬೇಕು. ಅನುರಾಧಾ, ಮೂಲ, ಪೂರ್ವೋತ್ತರಾಷಾಢಾ, ಶತಭಿಷಾ, ಪೂರ್ವೋತ್ತರ ಭಾದ್ರಪದ ಮತ್ತು ರೇವತೀ ನಕ್ಷತ್ರಗಳು ದೀಕ್ಷೆಗೆ ಯೋಗ್ಯವಾಗಿವೆ. ಹಾಗೆಯೇ ವೃಷಭ, ಸಿಂಹ, ಕನ್ಯಾ, ಧನುಷ್ ಮತ್ತು ಮೀನ ಲಗ್ನಗಳು ಉತ್ತಮವಾದವು. ಈ ನಿಯಮ ಪಾಲನೆಯಿಂದ ಮಂತ್ರವು ಬೇಗ ಸಿದ್ಧಿಸುತ್ತವೆ.

**ಹಿತಮಂತ್ರವಿವೇಚನೆ:** ಯಾವ ಮಂತ್ರ ತನಗೆ ಹಿತವನ್ನುಂಟು ಮಾಡುತ್ತದೆ, ಸಿದ್ಧಿಯನ್ನು ನೀಡುವುದು ಎನ್ನುವು

**ಅಕಥಹ ಚಕ್ರ**

| | | | |
|---|---|---|---|
| ೧<br>ಅ ಕ<br>ಥ ಹ | ೨<br>ಉ<br>ಙ ಪ | ೩<br>ಆ<br>ಖ ದ | ೪<br>ಊ<br>ಚ ಫ |
| ೫<br>ಓ<br>ಡ ಬ | ೬<br>ಲೃ<br>ಝ ಮ | ೭<br>ಔ<br>ಢ ಶ | ೮<br>ಲೄ<br>ಞ ಯ |
| ೯<br>ಈ<br>ಘ ನ | ೧೦<br>ೠ<br>ಜ ಭ | ೧೧<br>ಇ<br>ಗ ಧ | ೧೨<br>ಋ<br>ಛ ವ |
| ೧೩<br>ಅಃ<br>ತ ಸ | ೧೪<br>ಐ<br>ಠ ಲ | ೧೫<br>ಅಂ<br>ಣ ಷ | ೧೬<br>ಏ<br>ಟ ರ |

**ಋಣಿ-ಧನಿ ಚಕ್ರ**

| | | | | | | | | | | |
|---|---|---|---|---|---|---|---|---|---|---|
| ೬ | ೬ | ೬ | ೦ | ೩ | ೪ | ೪ | ೦ | ೦ | ೦ | ೩ |
| ಅ ಆ | ಇ ಈ | ಉ ಊ | ಋ ೠ | ಲೃ ಲೄ | ಏ | ಐ | ಓ | ಔ | ಅಂ | ಅಃ |
| ಕ | ಖ | ಗ | ಘ | ಙ | ಚ | ಛ | ಜ | ಝ | ಞ | ಟ |
| ಠ | ಡ | ಢ | ಣ | ತ | ಥ | ದ | ಧ | ನ | ಪ | ಫ |
| ಬ | ಭ | ಮ | ಯ | ರ | ಲ | ವ | ಶ | ಷ | ಸ | ಹ |
| ೨ | ೨ | ೫ | ೦ | ೦ | ೨ | ೧ | ೦ | ೪ | ೪ | ೧ |

ದನ್ನು ಹೇಗೆ ತಿಳಿಯುವುದು ಎಂದರೆ ತಂತ್ರಶಾಸ್ತ್ರಗಳಲ್ಲಿ ಅದಕ್ಕೆ ಕೆಲವು ವಿಧಾನಗಳನ್ನು ನೀಡಿದ್ದಾರೆ. ಯಾವ ಮಂತ್ರ ತನ್ನ ಕುಲಕ್ಕೆ ಸೇರಿದ್ದು, ಯಾವುದು ತನ್ನ ರಾಶಿಗೆ ಸೇರಿದ್ದು, ತನ್ನ ಗಣ, ತನ್ನ ನಕ್ಷತ್ರಗಳಿಗೆ ಸೇರಿದ್ದು, ಯಾವುದು ಸಾಧ್ಯ, ಸಿದ್ಧ, ಸುಸಿದ್ಧ, ಅರಿ ಮಂತ್ರಗಳು- ಇವುಗಳನ್ನು ವಿವೇಚಿಸಲು ಅನುಕೂಲವಾಗುವಂತೆ ತಂತ್ರಶಾಸ್ತ್ರಗಳಲ್ಲಿ ಕೆಲವು ಚಕ್ರಗಳನ್ನು ಹೆಸರಿಸಿದ್ದಾರೆ. ಕುಲಾಕುಲ ಚಕ್ರ, ರಾಶಿಚಕ್ರ, ನಕ್ಷತ್ರಚಕ್ರ, ಅಕಡಮಚಕ್ರ, ಅಕಥಹಚಕ್ರ, ಋಣಿಧನಿಚಕ್ರ-ಇವೇ ಮುಂತಾದವು. ಅವುಗಳಲ್ಲಿ ಮುಖ್ಯವಾಗಿ ಅಕಥಹಚಕ್ರ ಹಾಗೂ ಋಣಿಧನಿಚಕ್ರವನ್ನು ಇಲ್ಲಿ (ಚಿತ್ರದಲ್ಲಿ) ತೋರಿಸಲಾಗಿದೆ.

ಅಕಥಹ ಚಕ್ರದಲ್ಲಿ ಸಾಧಕನು ತನ್ನ ಹೆಸರಿನ ಮೊದಲಕ್ಷರವನ್ನು ಯಾವ ಕೋಷ್ಟಕದಲ್ಲಿದೆಯೆಂದು ಗುರುತಿಸಿ ಅಲ್ಲಿಂದ ಮೊದ ಲ್ಗೊಂಡು ಎಡಗಡೆಯಿಂದ ಬಲಗಡೆಗೆ ಇರುವ ಕೋಣೆಯನ್ನು ನೋಡುತ್ತ ತನ್ನ ಮಂತ್ರದ ಮೊದಲಕ್ಷರವಿರುವ ಮನೆಯವರೆಗೂ ಎಣಿಸಬೇಕು. ಒಂದನೆ ಮನೆಯಲ್ಲಿದ್ದರೆ ಸಿದ್ಧ, ಎರಡನೆ ಮನೆಯ ಲ್ಲಿದ್ದರೆ ಸುಸಿದ್ಧ, ಮೂರನೆಯ ಕೋಣೆಯಲ್ಲಿದ್ದರೆ ಸಾಧ್ಯ ಹಾಗೂ ನಾಲ್ಕನೆಯ ಕೋಣೆಯಲ್ಲಿದ್ದರೆ ಅರಿಯೆಂದು ತಿಳಿಯಬೇಕು. ಸಿದ್ಧ, ಸುಸಿದ್ಧ ಮಂತ್ರಗಳು ಉತ್ತಮವಾದವು. ಸಾಧ್ಯ ಮಂತ್ರವು ಮಧ್ಯಮ ವಾದುದು. ಅರಿಮಂತ್ರವನ್ನು ಸ್ವೀಕರಿಸಬಾರದು. ಎಲ್ಲಿಯವರೆಗೆ ತನ್ನ ಮಂತ್ರದ ಮೊದಲಕ್ಷರ ಸಿಗುವುದಿಲ್ಲವೋ ಅಲ್ಲಿಯವರೆಗೆ ಒಂದರಿಂದ ನಾಲ್ಕರವರೆಗೆ ಎಣಿಸುತ್ತಲೇ ಇರಬೇಕು. ಋಣಿ-ಧನಿ ಚಕ್ರದಲ್ಲಿ ಮಂತ್ರಾಂಕ ಹಾಗೂ ಸಾಧಕಾಂಕಗಳಿರುತ್ತವೆ. ಸಾಧಕನ ಹೆಸರನ್ನು ಸ್ವರ, ವ್ಯಂಜನಗಳಾಗಿ ಬಿಡಿಸಿ ಆಯಾ ಅಕ್ಷರಗಳ ಸಂಖ್ಯೆ ಗಳನ್ನೆಲ್ಲ ಒಟ್ಟು ಸೇರಿಸಿ ಎಂಟರಿಂದ ಭಾಗಿಸಬೇಕು. ಹಾಗೆಯೆ, ಮಂತ್ರದ ಪ್ರತಿಯೊಂದು ಸ್ವರ, ವ್ಯಂಜನಗಳನ್ನು ಬಿಡಿಸಿ ಅವುಗಳ ಸಂಖ್ಯೆಗಳನ್ನು ಒಟ್ಟು ಕೂಡಿಸಿ ಎಂಟರಿಂದ ಭಾಗಿಸಬೇಕು. ಹೀಗೆ ಸಿಕ್ಕಿದ ಶೇಷಗಳಲ್ಲಿ ಮಂತ್ರದ ಸಂಖ್ಯೆ ಸಾಧಕನ ಸಂಖ್ಯೆಗಿಂತ ಹೆಚ್ಚಿದ್ದರೆ ಆ ಮಂತ್ರವು ಋಣಿಯೆನಿಸಿ ಕೊಳ್ಳುತ್ತದೆ. ಅದು ಉತ್ತಮವಾದದ್ದು. ಬೇಗ ಸಿದ್ಧಿಯನ್ನು ತಂದುಕೊಡುತ್ತದೆ. ಮಂತ್ರಶೇಷಕ್ಕಿಂತ ಸಾಧಕ ಶೇಷಸಂಖ್ಯೆಯೇ ಹೆಚ್ಚಿದ್ದರೆ ಧನಿಯೆನಿಸಿಕೊಳ್ಳುತ್ತದೆ. ಬಹಳ ನಿಧಾನ ವಾಗಿ ಇದು ಸಿದ್ಧಿಯನ್ನು ನೀಡುತ್ತದೆ. ಅವೆರಡೂ ಸಮವಾಗಿದ್ದರೂ ಉತ್ತಮವಾಗಿರುತ್ತದೆ. ಒಂದು ವೇಳೆ ಶೇಷಸಂಖ್ಯೆಯು ಶೂನ್ಯ ವಾದರೆ ಸಾಧಕನಿಗೆ ಮೃತ್ಯುವಾಗುತ್ತದೆ.

**ಮಂತ್ರದ ದೋಷಗಳು:** ಭ್ರಮೆಯಿಂದ ಮಂತ್ರದಲ್ಲಿ ಎಂಟು ಬಗೆಯ ದೋಷಗಳು ಜನಿಸಬಹುದು. ಯಾವ ಸಾಧಕನು ತನ್ನ ಮಂತ್ರವನ್ನು ಕೇವಲ ಅಕ್ಷರಗಳೆಂದು ಭಾವಿಸುವನೋ, ಬೇರೆಯವರ ಮಂತ್ರಕ್ಕಿಂತ ತನ್ನ ಮಂತ್ರವು ಹೀನವೆಂದು ಭಾವಿಸುವನೋ ಅದು **ಅಭಕ್ತಿ** ಎಂಬ ದೋಷವೆನಿಸಿಕೊಳ್ಳುತ್ತದೆ. ಆ ಮಂತ್ರವನ್ನು ಹೆಚ್ಚು ಹೆಚ್ಚು ಜಪಿಸು ವುದರಿಂದ ಆ ದೋಷ ಪರಿಹಾರವಾಗುತ್ತದೆ. ಜಪ, ಹವನ ಹಾಗೂ ತಪಸ್ಸಿನಿಂದ ಮಂತ್ರದ ಅಧಿಷ್ಠಾತ್ರೀ ದೇವತೆಯು ಪ್ರಸನ್ನವಾಗುವನು. ಅವನು ಪ್ರಸನ್ನನಾದಾಗ ಭಕ್ತಿಯುಂಟಾಗುತ್ತದೆ. ಮಂತ್ರ ಸಿದ್ಧಿಸಲು ಮತ್ತೆ ವಿಲಂಬವಾಗುವುದಿಲ್ಲ. ಗುರು ಅಥವಾ ಶಿಷ್ಯನ ತಪ್ಪಿನಿಂದಾಗಿ ಮಂತ್ರಾಕ್ಷರಗಳು ಒಂದು ಇನ್ನೊಂದಾಗುವುದೋ, ತಿರುಗು-ಮುರುಗು ಆಗುವುದಕ್ಕೆ **ಅಕ್ಷರಭ್ರಾಂತಿ**ಯೆಂಬ ದೋಷವೆನ್ನುವರು. ಆ ದೋಷವನ್ನು ಹೋಗಲಾಡಿಸಲು ಪುನಃ ಆ ಗುರುವಿನಿಂದಲೋ, ಅವನ ಮಗನಿಂದಲೋ ಅಥವಾ ಇನ್ನಾರಾದರೂ ಸಾಧಕರಿಂದಲೋ ಆ ಮಂತ್ರವನ್ನು ಪಡೆದುಕೊಳ್ಳತಕ್ಕದ್ದು. ಮಂತ್ರದಲ್ಲಿ ಯಾವುದಾದರೂ ವರ್ಣವು ಕಡಿಮೆಯಾದರೆ **ಲುಪ್ತ**ದೋಷವೆನ್ನುವರು. ಮಂತ್ರದಲ್ಲಿ ರುವ ಸಂಯುಕ್ತವರ್ಣದಲ್ಲಿ ಯಾವುದಾದರೂ ಬಿಟ್ಟುಹೋದರೆ **ಛಿನ್ನ** ವೆಂಬ ದೋಷವುಂಟಾಗುತ್ತದೆ. ದೀರ್ಘವರ್ಣದ ಸ್ಥಾನದಲ್ಲಿ ಹ್ರಸ್ವ ವನ್ನು ಉಚ್ಚರಿಸಿದರೆ **ಹ್ರಸ್ವ**ವೆಂಬ ದೋಷವುಂಟಾಗುತ್ತದೆ. ಹಾಗೆಯೆ ಹ್ರಸ್ವವರ್ಣದ ಬದಲು ದೀರ್ಘವನ್ನು ಉಚ್ಚರಿಸಿದರೆ **ದೀರ್ಘ**ವೆಂಬ ದೋಷವಾಗುತ್ತದೆ. ಜಾಗ್ರದವಸ್ಥೆಯಲ್ಲಿಯೇ ತನ್ನ ಮಂತ್ರವನ್ನು ಯಾರ ಬಳಿಯಾದರೂ ಹೇಳಿಬಿಟ್ಟರೆ **ಕಥನ**ವೆಂಬ ದೋಷವುಂಟಾಗು ತ್ತದೆ. ಸ್ವಪ್ನಾವಸ್ಥೆಯಲ್ಲಿ ಮಂತ್ರವನ್ನು ಯಾರ ಬಳಿಯಲ್ಲಾದರೂ ಹೇಳಿಬಿಟ್ಟರೆ **ಸ್ವಪ್ನ-ಕಥನ**ವೆಂಬ ದೋಷವು ಬರುತ್ತದೆ. ಮೇಲೆ ಹೇಳಿದ ಲುಪ್ತ, ಛಿನ್ನ, ಹ್ರಸ್ವ ಮತ್ತು ದೀರ್ಘಗಳೆಂಬ ದೋಷಗಳ ನಿವಾರಣೆ ಪುನಃ ಮಂತ್ರದೀಕ್ಷೆ ತೆಗೆದುಕೊಳ್ಳುವುದರಿಂದ ಆಗುತ್ತದೆ. ಕಥನ ಹಾಗೂ ಸ್ವಪ್ನ-ಕಥನಗಳನ್ನು ನಿವಾರಣೆ ಮಾಡಬೇಕಾದರೆ ತನ್ನ ಗುರುವಿನ ಸಲಹೆಯಂತೆ ಮಾಡಬೇಕು.

**ಪುರಶ್ಚರ್ಯೆ:**

**ಅಕೃತ್ವಾ ತು ಪುರಶ್ಚರ್ಯಾಂ ಮಂತ್ರಂ ಜಪತಿ ನಿತ್ಯಶಃ ||**
**ಕಲ್ಪಕೋಟಿಜಪೇನಾಪಿ ತಸ್ಯ ಸಿದ್ಧಿರ್ನ ಜಾಯತೇ |**
**ಜೀವಹೀನೋ ಯಥಾ ದೇಹಃ ಸರ್ವಕರ್ಮಸು ನ ಕ್ಷಮಃ ||**
**ಪುರಶ್ಚರಣಹೀನೋಽಪಿ ತಥಾ ಮಂತ್ರಃ ಪ್ರಕೀರ್ತಿತಃ |**
**ಜಪಹೋಮೌ ತರ್ಪಣಂ ಚಾಭಿಷೇಕೋ ದ್ವಿಜಭೋಜನಮ್ ||**
**ಪಂಚಕೃತ್ಯಾನಿ ಲೋಕೇಽಸ್ಮಿನ್ ಪುರಶ್ಚರಣಮುಚ್ಯತೇ |**

*(ಬೃಹನ್ನೀಲತಂತ್ರಮ್, ೪ನೇ ಪಟಲಃ, ಶ್ಲೋಕ ೧-೪)*

ಪುರಶ್ಚರ್ಯೆಯನ್ನು ಮಾಡದೆ ಯಾರು ನಿತ್ಯವೂ ಮಂತ್ರವನ್ನು ಜಪಿಸುವರೊ, ಅವರು ಕಲ್ಪಕೋಟಿಸಂಖ್ಯೆ ಜಪ ಮಾಡಿದರೂ ಸಿದ್ಧಿ ಯನ್ನು ಹೊಂದುವುದಿಲ್ಲ. ಹೇಗೆ ಜೀವವಿಲ್ಲದ ದೇಹವು ಯಾವ ಕೆಲಸವನ್ನೂ ಮಾಡಲಾಗದೋ, ಹಾಗೆಯೇ ಪುರಶ್ಚರ್ಯೆಯಿಲ್ಲದ ಮಂತ್ರವು (ಯಾವ ಸಿದ್ಧಿಯನ್ನೂ ನೀಡದೆಂದು) ಹೇಳಲ್ಪಟ್ಟಿದೆ. ಜಪ (ಇಷ್ಟದೇವತೆಯ ಪೂಜೆಯೊಂದಿಗೆ), ಹೋಮ, ತರ್ಪಣ, ಅಭಿ ಷೇಕ (ಇದಕ್ಕೆ ಮಾರ್ಜನೆಯೆಂದೂ ಹೆಸರು), ಬ್ರಾಹ್ಮಣ ಭೋಜನ- ಈ ಐದು ಕರ್ಮಗಳು ಸೇರಿ ಲೋಕದಲ್ಲಿ ಪುರಶ್ಚರ್ಯೆಯೆಂದು ಕರೆಸಿಕೊಳ್ಳುತ್ತದೆ. ಪುರಶ್ಚರ್ಣದ ಕಾಲವೆಂದರೆ ಅದು ಸಾಧಕನಿಗೆ ತಪಸ್ಸಿನ ಕಾಲ. ಉದಾಹರಣೆಗೆ, ಸಾಧಕನ ಮಂತ್ರವು ಐದು ವರ್ಣ ಗಳದ್ದಾಗಿದ್ದರೆ ಐದು ಲಕ್ಷ ಜಪವನ್ನು ಆತನು ದಿನಕ್ಕೆ ಇಂತಿಷ್ಟರಂತೆ ಮಾಡುತ್ತ ಮುಗಿಸಬೇಕು. ಪ್ರತಿನಿತ್ಯವೂ ಬಹಳ ಬೇಗ ಎದ್ದು, ಸ್ನಾನ-ಶೌಚಾದಿಗಳನ್ನು ಮುಗಿಸಿ ಇಷ್ಟದೇವತೆಯ ಪೂಜೆಯನ್ನು ಸಾಂಗವಾಗಿ ನಡೆಸಿ ಜಪಕ್ಕೆ ಕುಳಿತುಕೊಳ್ಳಬೇಕು. ಹವಿಷ್ಯಾನ್ನವನ್ನೇ ಭುಂಜಿಸಬೇಕು. ರಾತ್ರಿಯ ವೇಳೆ ಮಲಗುವಾಗಲೂ ಇಷ್ಟದೇವ ತೆಯ ಸ್ಮರಣೆ ಮಾಡುತ್ತ ಭೂಮಿಯ ಮೇಲೆ ಮಲಗಬೇಕು. ಸದಾ ಚಾರನಿರತನಾಗಿರಬೇಕು. ಸುಳ್ಳನ್ನು ಹೇಳಲೇಕೂಡದು. ಜಪ ಸಂಖ್ಯೆಯ ಹತ್ತನೇ ಒಂದು ಭಾಗ ಹೋಮ ಮಾಡಬೇಕು.

ಹೋಮದ ಹತ್ತನೇ ಒಂದು ಭಾಗ ತರ್ಪಣ, ತರ್ಪಣದ ಹತ್ತನೇ ಒಂದು ಭಾಗ ಮಾರ್ಜನ (ಅಥವಾ ಅಭಿಷೇಕ), ಮಾರ್ಜನದ ಹತ್ತನೇ ಒಂದು ಭಾಗ ಬ್ರಾಹ್ಮಣಭೋಜನವನ್ನು ನೆರವೇರಿಸಬೇಕು. ಪುರಶ್ಚರ್ಯವನ್ನು ಸಿದ್ಧಪೀಠದಲ್ಲಿಯೊ, ಪುಣ್ಯಕ್ಷೇತ್ರದಲ್ಲಿಯೊ, ನದಿದಂಡೆಯಲ್ಲಿಯೊ, ಗುಹೆಯಲ್ಲಿಯೊ, ಪರ್ವತಶಿಖರಗಳಲ್ಲಿಯೊ, ಸಂಗಮ, ಪವಿತ್ರವಾದ ವನಗಳಲ್ಲಿ, ಏಕಾಂತವಾದ ಉದ್ಯಾನ ದಲ್ಲಿಯೊ, ಬಿಲ್ವ, ಅರಳಿ ಅಥವಾ ನೆಲ್ಲಿಮರದ ಕೆಳಗೊ, ದೇವಾಲಯ, ತುಲಸೀವನ, ನೀರಿನಲ್ಲಿ ನಿಂತೋ ಅಥವಾ ಮನೆಯಲ್ಲಿಯೊ ಮಾಡಿದರೆ ಶೀಘ್ರ ಫಲವನ್ನು ನೀಡುತ್ತದೆ. ಮುಖ್ಯವಾಗಿ ಯಾವ ಸ್ಥಳದಲ್ಲಿ ಕುಳಿತರೆ ಮನಸ್ಸು ಆಹ್ಲಾದವಾಗಿರುವುದೊ ಅದು ಜಪಕ್ಕೆ ಯೋಗ್ಯವಾಗಿರುತ್ತದೆ.

**ಮಂತ್ರದ ವೈವಿಧ್ಯಗಳು:** ಒಂದು ಅಕ್ಷರದ ಮಂತ್ರವನ್ನು **'ಪಿಂಡ'** ವೆನ್ನುವರು. ಎರಡಕ್ಷರದ ಮಂತ್ರಗಳಿಗೆ **'ಕರ್ತರೀ'** ಎನ್ನುವರು. ಮೂರು ಅಕ್ಷರದಿಂದ ಒಂಬತ್ತು ಅಕ್ಷರದವರೆಗೆ **'ಬೀಜ'**ವೆಂದು ಕರೆ ಯುವರು. ಹತ್ತರಿಂದ ಇಪ್ಪತ್ತು ವರ್ಣದವರೆಗಿನ ಮಂತ್ರಗಳಿಗೆ 'ಮಂತ್ರ'ವೆಂದೇ ಹೆಸರು. ಇದಕ್ಕಿಂತಲೂ ಹೆಚ್ಚು ಸಂಖ್ಯೆಯ ವರ್ಣ ಗಳುಳ್ಳ ಮಂತ್ರಗಳಿಗೆ 'ಮಾಲಾ'ಎನ್ನುವರು. ಯಾವ ಮಂತ್ರಗಳು 'ವಷಟ್' ಮತ್ತು 'ಫಟ್'ಗಳಿಂದ ಕೊನೆಗೊಳ್ಳುವುದೋ ಅವು ಪುರುಷ ಮಂತ್ರಗಳು. 'ವೌಷಟ್' ಮತ್ತು 'ಸ್ವಾಹಾ'ಗಳಿಂದ ಕೊನೆ ಗೊಳ್ಳುವುವು ಸ್ತ್ರೀ ಮಂತ್ರಗಳು. 'ಹುಂ' ಮತ್ತು 'ನಮಃ' ಗಳಿಂದ ಕೊನೆಗೊಳ್ಳುವವು ನಪುಂಸಕ ಮಂತ್ರಗಳು. ಮಂತ್ರಗಳನ್ನು ಸಾತ್ತ್ವಿಕ, ರಾಜಸ ಹಾಗೂ ತಾಮಸಗಳೆಂದೂ ವಿಂಗಡಿಸಬಹುದು. ಶಾಬರ (ಶಂಬರದ ಅಪಭ್ರಂಶವಿರಲಿಕ್ಕೂ ಸಾಕು) ಹಾಗೂ ಡಾಮರ ಮಂತ್ರ ಗಳೆಂದೂ ಎರಡು ರೀತಿಯಲ್ಲಿ ವಿಂಗಡಿಸುವುದುಂಟು. ಇದರಲ್ಲಿ ಡಾಮರ ಮಂತ್ರಗಳು ಬಹಳ ಬೇಗ ಸಿದ್ಧಿಸಿದರೂ ಅವುಗಳ ಫಲ ಸ್ಥಾಯಿಯಲ್ಲ. ಮಂತ್ರಗಳು ಕ್ರೂರ, ಸೌಮ್ಯ ಹಾಗೂ ಮಿಶ್ರಗಳೆಂದು ಮೂರು ಬಗೆಯಾಗಿಯೂ ಇರುತ್ತವೆ.

ಉಪಾಸನೆಯ ದೇವತೆಗಳ ಭೇದದಿಂದ ಬೀಜಮಂತ್ರಗಳು ಬೇರೆ ಯಾಗುತ್ತವೆ. ಅನೇಕ ಮೂಲಬೀಜಗಳಲ್ಲಿ ಎಂಟು ಪ್ರಮುಖ ಬೀಜ ಮಂತ್ರಗಳು ಅಡಕವಾಗಿವೆ. ಹಾಗೆಯೆ ಮೂಲಬೀಜದೊಂದಿಗೆ ಇನ್ನೊಂದು ಬೀಜವು ಅಥವಾ ಒಂದು ಬೀಜದೊಂದಿಗೆ ಮತ್ತೊಂದು ಬೀಜವು ಸೇರಿದರೆ ಬೇರೆ ಬೇರೆಯ ಮಂತ್ರಶಕ್ತಿಗಳ ಅಭಿವ್ಯಕ್ತಿ ಯಾಗುತ್ತವೆ. ಎಲ್ಲ ಮಂತ್ರಗಳು ಶಬ್ದಬ್ರಹ್ಮವಾದ ಪ್ರಣವದಿಂದಲೇ ತಮ್ಮ ಶಕ್ತಿಯನ್ನು ಪಡೆದುಕೊಳ್ಳುತ್ತವೆ. ಮುಖ್ಯವಾಗಿ ಗುರುಬೀಜ, ಶಕ್ತಿಬೀಜ, ಕಾಮಬೀಜ, ಯೋಗಬೀಜ, ತೇಜೋಬೀಜ, ಶಾಂತಿ ಬೀಜ, ರಮಾಬೀಜ ಹಾಗೂ ರಕ್ಷಾಬೀಜಗಳೆಂದು ಎಂಟು ಬೀಜಗಳಿವೆ. ಅವೆಲ್ಲವೂ ಎಲ್ಲ ಉಪಾಸನೆಗಳಲ್ಲಿ ಬಹಳ ಉಪಯುಕ್ತವಾದರೂ ನಾಲ್ಕೂ ಯೋಗಗಳಲ್ಲಿ ನಿಷ್ಣಾತರಾದ ಯೋಗಿಗಳಿಗೆ ಮಾತ್ರ ಅವುಗಳ ಸರಿಯಾದ ಜೋಡನೆಗಳ ರಹಸ್ಯ ತಿಳಿಯಬಲ್ಲದು. ಐಂ ಎಂಬುದು ಗುರುಬೀಜ. ಕ್ಲೀಂ ಎಂಬುದು ಕಾಮಬೀಜ. ಕ್ರೀಂ ಎಂಬುದು ಯೋಗಬೀಜ. ಹ್ರೀಂ ಎಂಬುದು ಶಕ್ತಿಬೀಜ. ಶ್ರೀಂ ಎಂಬುದು ರಮಾಬೀಜ. ತ್ರೀಂ ಎಂಬುದು ತೇಜೋಬೀಜ. ಸ್ತ್ರೀಂ ಎಂಬುದು ಶಾಂತಿಬೀಜ. ಹ್ಲೀಂ ಎಂಬುದು ರಕ್ಷಾಬೀಜ.

ಸಾಧಕನಿಗೆ ಮಂತ್ರಸಿದ್ಧಿಯಾಗುವುದಕ್ಕೆ ಮೊದಲು ಕೆಲವು ಚಿಹ್ನೆ ಗಳು ಕಂಡುಬರುತ್ತವೆ. ***ವಕ್ರತುಂಡಕಲ್ಪ*** ದ ಪ್ರಕಾರ ಮನಸ್ಸಿನ ಪ್ರಸನ್ನತೆ, ಮನಸ್ಸಿನಲ್ಲಿ ತೃಪ್ತಿ, ಅಲ್ಪಭೋಜನ, ನಿದ್ರೆ ಬಹಳ ಕಡಿಮೆ ಯಾಗುವುದು ಹಾಗೂ ಸ್ವಪ್ನದಲ್ಲಿ ಜಲಾಶಯವನ್ನೋ, ಮಾಗಿದ ಹಣ್ಣನ್ನೋ ಕಾಣುವುದು. ಭೈರವತಂತ್ರದ ಪ್ರಕಾರ ಎಲ್ಲೆಲ್ಲೂ ಸಾಧಕನು ಪ್ರಕಾಶವನ್ನು ಕಾಣುತ್ತಾನೆ, ಅಥವಾ ಅವನ ಶರೀರ ಪ್ರಕಾಶಮಯವಾಗಿ ಕಾಣುತ್ತದೆ, ಅಥವಾ ತನ್ನ ಶರೀರವು ದೇವತಾ ಮಯವಾಗಿ ಕಾಣುತ್ತದೆ. ಇನ್ನೊಂದು ತಂತ್ರದಲ್ಲಿ ಮಂತ್ರಸಿದ್ಧಿ ಯಾಗುವ ಕ್ರಮವನ್ನು ಹೀಗೆ ಹೇಳಿದ್ದಾರೆ. ಸಾಧಕನಿಗೆ ಮೊದಲ ಮೂರು ವರ್ಷಗಳು ತಪ್ಪದೆ ಪದೇ ಪದೇ ವಿಘ್ನಗಳುಂಟಾಗುತ್ತವೆ! ಒಂದು ವೇಳೆ ಸಾಧಕನು ಶರೀರದಿಂದ, ಮನಸ್ಸಿನಿಂದ ಮತ್ತು ಮಾತಿನಿಂದ ಉದ್ವೇಗವನ್ನು ಹೊಂದದೆ ಇದ್ದಲ್ಲಿ ಮೂರನೇ ವರ್ಷದ ನಂತರ ಮಂತ್ರವು ತನ್ನಿಂದತಾನೇ ಸಿದ್ಧಿಸುತ್ತದೆ!

**ಉಪಸಂಹಾರ:** ಬಹುಶಃ ಸಾಗರವನ್ನಾದರೂ ಈಜಿ ದಡ ಸೇರಬಹುದೇನೊ, ಆದರೆ ಮಂತ್ರಶಾಸ್ತ್ರದಲ್ಲಿ ನಿಷ್ಣಾತನಾಗುವುದು ಅಸಾಧ್ಯವೇ ಸರಿ! ಭಗವತ್ಕೃಪೆಯಿದ್ದರೆ ಯಾವುದಾದರೂ ಒಂದು ಮಂತ್ರವೆಂಬ ನೌಕೆಯಿಂದ ಭವವನ್ನು ದಾಟುವ ಕೆಲಸವನ್ನಂತೂ ಸುಲಭವಾಗಿ ಮಾಡಬಹುದು. ಮೇಲೆ ಹೇಳಿದ ವಿವರಗಳು ಸಾಮಾನ್ಯ ರೀತಿಯದ್ದು. ಪ್ರತಿಯೊಬ್ಬ ಸಾಧಕನಿಗೆ ಪ್ರತಿಯೊಬ್ಬ ಗುರುವಿನ ಅನುಗ್ರಹ ಒಂದೊಂದು ಬಗೆಯಾಗಿ ಆಗುವುದರಿಂದ ವಿಧಿವಿಧಾನಗಳು ಅನಂತವಾಗಿದ್ದು, ಗುರುವು ಶಿಷ್ಯನ ಯೋಗ್ಯತೆ ಯನ್ನು ನೋಡಿಕೊಂಡು ಕೆಲವೊಂದನ್ನು ವಿಧಿಸುತ್ತಾನೆ, ಕೆಲವೊಂದು ವಿಧಿಯನ್ನು ಸಡಿಲಿಸಲೂಬಹುದು. ಕಲಿಯುಗದಲ್ಲಿ ಮಂತ್ರಜಪ ದಿಂದ ಸಿದ್ಧಿ ಪಡೆಯುವುದು ಸುಲಭಮಾರ್ಗ. ಇದರಲ್ಲಿ ನಮ್ಮ ಶ್ರದ್ಧೆ, ಉತ್ಸಾಹ, ತಾಳ್ಮೆ, ದೃಢತೆಗಳು ಯಾವ ಮಟ್ಟದಲ್ಲಿವೆಯೊ ಫಲವೂ ಹಾಗೆಯೆ ಉಂಟಾಗುತ್ತದೆ. ಶಬ್ದ ತತ್ತ್ವವನ್ನುಪಯೋಗಿಸಿ ಮನುಷ್ಯ ಇಹ-ಪರದಲ್ಲಿ ಏನನ್ನು ಬೇಕಾದರೂ ಪಡೆಯಬಹುದೆಂದರೆ ಅದು ಮಂತ್ರಜಗತ್ತಿನ ಚಮತ್ಕಾರವೇ ಅಹುದು! ❖

'ಜೈಕಾಳಿ' ಎನ್ನುತ್ತ ಹೃದಯರತ್ನಾಕರನ
ಅಗಾಧ ಆಳಕ್ಕೆ ಮುಳುಗು ಮನವೇ ॥

ಮೊದಲೆರಡು ಸಲ ನೀನು ವಿಫಲನಾದರೆ ಒಳಗೆ
ಬರಿ ಶೂನ್ಯವೆಂದಿದನು ತೆಗಳಬೇಡ
ದೃಢಮನದ ಸಂಯಮದಿ ಕುಲಕುಂಡಲಿನಿ ಕೂಲ-
ದೊಳಗಿಳಿದು ಅನುಭವವ ಪಡೆದು ನೋಡ!

ಜ್ಞಾನಸಾಗರದೊಳಗೆ ಶಾಂತಿ ಮುಕ್ತಾಫಲದ
ಭಂಡಾರವಿದೆ ಹೋಗು ಅದನು ಗಳಿಸು.
ಆಹಾರ ಲೋಭದಲಿ ಅಲೆವ ಅರಿವರ್ಗಗಳ
ವಿವೇಕ ಲೇಪನದಿ ದೂರಗೊಳಿಸು.

ರಾಮಪ್ರಸಾದನನು ಕೇಳು ಹೇಳುವನವನು;
ಅಂತರಂಗದೊಳಿರುವ ಅನಂತ ರತ್ನವನು
ಮುಳುಗಿ ಮೇಲಕೆ ತಂದು ನೀನು ಧರಿಸು.

*-ರಾಮಪ್ರಸಾದ್ ಸೇನ್*

# ಪಂಚಾಕ್ಷರೀ ಮಂತ್ರ ಮಹಿಮೆ

ಸ್ವಾಮಿ ತೀರ್ಥಕರಾನಂದ



**ಶೈವಾಗಮ, ಶೈವ ಸಿದ್ಧಾಂತ, ವೀರಶೈವ ಪರಂಪರೆಗಳಲ್ಲಿ ಸಾಧನೆ ಹಾಗೂ ಆರಾಧನೆಯ ಅಂಗವಾಗಿ ಪಂಚಾಕ್ಷರೀ ಮಂತ್ರಕ್ಕೆ ವಿಶೇಷವಾದ ಮಹತ್ವ ವಿದೆ; ಇದರ ಹೊರತಾಗಿಯೂ ಕೂಡ ಪಂಚಾಕ್ಷರೀ ಮಂತ್ರಕ್ಕೆ ವಿಶಿಷ್ಟವಾದ ಸ್ಥಾನವಿದೆ. ಈ ಸರ್ವವ್ಯಾಪಕ ಮಂತ್ರವನ್ನು ಕುರಿತಂತೆ ಮಹತ್ವದ ವಿಚಾರಗಳನ್ನು ತಿಳಿಸಿಕೊಡುವ ಲೇಖಕರು ಶೈವ ಪರಂಪರೆಗಳ ಬಗ್ಗೆ ವಿಶೇಷ ಅಧ್ಯಯನ ಮಾಡಿದ್ದು, ಪ್ರಸ್ತುತ ಮೈಸೂರು ರಾಮಕೃಷ್ಣ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

ಪ್ರಣವಸಹಿತ ಶಿವಪಂಚಾಕ್ಷರೀ ಮಹಾಮಂತ್ರವೇ 'ಓಂ ನಮಃ ಶಿವಾಯ.'

**ನಮಃ ಶಬ್ದಂ ವದೇತ್ ಪೂರ್ವಂ ಶಿವಾಯೇತಿ ತತಃ ಪರಮ್ ।**
**ಮಂತ್ರಃ ಪಂಚಾಕ್ಷರೋಹ್ಯೇಷಃ ಸರ್ವ ಶ್ರುತಿಶಿರೋಗತಃ ॥**

''ನಮಃ ಶಿವಾಯ – ಇದುವೇ ಪಂಚಾಕ್ಷರ ಮಹಾಮಂತ್ರವು, ಇದು ಸಕಲ ವೇದಗಳ ಶಿರೋಮಣಿಯಾಗಿರುತ್ತದೆ.''

ಈ ಮಂತ್ರದಲ್ಲಿಯ 'ನಮಃ' ಶಬ್ದವು ಜೀವಾತ್ಮನ ವಾಚಕವು ಹಾಗೂ 'ಶಿವ' ಶಬ್ದವು ಪರಮಾತ್ಮನ ವಾಚಕವು. ಇದರಲ್ಲಿಯ 'ಅಯ' ಶಬ್ದವು ಅವೆರಡರ ಅಭೇದವನ್ನು ಬೋಧಿಸುವಂತಹದಾಗಿದೆ. ಹೀಗೆ ಜೀವ-ಶಿವರ ಅಭೇದವನ್ನು ಬೋಧಿಸುವ ಈ ಮಂತ್ರದ ನಿರಂತರ ಜಪದಿಂದ ಜೀವ-ಶಿವರ ಸಾಮರಸ್ಯವು ಸಹಜವಾಗಿ ಸಿದ್ಧಿಸುತ್ತದೆ.

**ಓಂಕಾರ ಪೂರ್ವೋ ಮಂತ್ರೋಽಯಂ ಪಂಚಾಕ್ಷರಮಯಃ ಪರಃ ।**
**ಶೈವಾಗಮೇಷು ವೇದೇಷು ಷಡಕ್ಷರ ಇತಿ ಸ್ಮೃತಃ ॥**

''ಪಂಚಾಕ್ಷರವೆಂದು ಪ್ರಸಿದ್ಧವಾಗಿರುವ ಈ ಶ್ರೇಷ್ಠವಾದ ಮಂತ್ರವೇ 'ಓಂ'ಕಾರದಿಂದ ಕೂಡಿಕೊಂಡಾಗ ವೇದಾಗಮಗಳಲ್ಲಿ ಅದಕ್ಕೆ 'ಷಡಕ್ಷರ' ಎಂಬುದಾಗಿ ಕರೆಯಲಾಗಿದೆ (ಅಥವಾ ಪ್ರಣವ ಪಂಚಾಕ್ಷರೀ).''

**ತಸ್ಯಾಭಿಧಾನ ಮಂತ್ರೋಽಯಮಭಿಧೇಯಶ್ಚ ಸಂಸ್ಮೃತಃ।**
**ಅಭಿಧಾನಾಭಿಧೇಯತ್ವಾತ್ ಮಂತ್ರಾತ್ ಸಿದ್ಧಃ ಪರಃ ಶಿವಃ ॥**

''ಪಂಚಾಕ್ಷರ ಮಹಾಮಂತ್ರವು ಶಿವನನ್ನು ಕರೆಯುವ ಅಭಿಧಾನ (ಹೆಸರು)ವಾಗಿದೆ. ಅಂತೆಯೇ ಶಿವನು ಅದರಿಂದ ಕರೆಯಲ್ಪಡುತ್ತಾನೆ. ಆದ್ದರಿಂದ ಅವನು ಅಭಿಧೇಯನು ಈ ರೀತಿಯಾಗಿ ಮಂತ್ರ ಮತ್ತು ಶಿವನಲ್ಲಿ ಅಭಿಧಾನ-ಅಭಿಧೇಯ ಭಾವ ಸಂಬಂಧವಿರುವುದರಿಂದ ಈ ಮಂತ್ರದಿಂದಲೇ ಪರಶಿವನ ಸಾಕ್ಷಾತ್ಕಾರವಾಗುವುದು.''

ಈ ಮಂತ್ರದ ಮಹಿಮೆಯು ವೇದ, ಆಗಮ, ಪುರಾಣ ಮತ್ತು ಇತಿಹಾಸ ಗ್ರಂಥಗಳಲ್ಲಿ, ಅದರಂತೆ ಇತ್ತೀಚಿನ ಆಧುನಿಕ ಆಧ್ಯಾತ್ಮಿಕ ಸಾಹಿತ್ಯದಲ್ಲಿಯೂ ಪ್ರತಿಪಾದಿಸಲ್ಪಟ್ಟಿರುವುದನ್ನೂ ಕಾಣುತ್ತೇವೆ.

**ಶಿವ ತತ್ತ್ವಾತ್ ಪರಂ ನಾಸ್ತಿ ಯಥಾ ತತ್ತ್ವಾಂತರಂ ಮಹತ್ ।**
**ತಥಾ ಪಂಚಾಕ್ಷರೀ ಮಂತ್ರಾನ್ನಾಸ್ತಿ ಮಂತ್ರಾಂತರಂ ಮಹತ್॥**

''ಶಿವತತ್ತ್ವಕ್ಕಿಂತ ಶ್ರೇಷ್ಠವೂ ಮಹಿಮಾನ್ವಿತವೂ ಆದ ಬೇರೊಂದು ತತ್ತ್ವವು ಹೇಗೆ ಇರುವುದಿಲ್ಲವೋ ಹಾಗೆಯೇ ಶಿವ ಪಂಚಾಕ್ಷರೀ ಮಂತ್ರಕ್ಕಿಂತಲೂ ಮಹಿಮಾನ್ವಿತವಾದ ಮಂತ್ರವು ಬೇರೊಂದಿರುವುದಿಲ್ಲ.''

**ಜ್ಞಾತೇ ಪಂಚಾಕ್ಷರೀ ಮಂತ್ರೇ ಕಿಂ ವಾ ಮಂತ್ರಾಂತರೈಃ ಫಲಮ್ ।**
**ಜ್ಞಾತೇ ಶಿವೇ ಜಗನ್ಮೂಲೇ ಕಿಂ ಫಲಂ ದೇವತಾಂತರೈಃ ॥**

''ಜಗತ್ತಿಗೆ ಮೂಲ ಕಾರಣನಾದ ಶಿವನನ್ನು ತಿಳಿದುಕೊಂಡ ಬಳಿಕ ಬೇರೆ ಬೇರೆ ದೇವರುಗಳನ್ನು ತಿಳಿದುಕೊಳ್ಳುವ ಆವಶ್ಯಕತೆಯು ಇಲ್ಲದಿರುವಂತೆ ಪಂಚಾಕ್ಷರೀ ಮಹಾಮಂತ್ರವನ್ನು ತಿಳಿದುಕೊಂಡ ಬಳಿಕ ಉಳಿದ ಮಂತ್ರಗಳನ್ನು ತಿಳಿದುಕೊಳ್ಳುವ ಆವಶ್ಯಕತೆ ಇರುವುದಿಲ್ಲ.''

ಈ ಜಗತ್ತು ತತ್ತ್ವಾತ್ಮಕವಾದದ್ದು. ಆ ತತ್ತ್ವಗಳು ಮೂವತ್ತಾರು ಪ್ರಕಾರಗಳಾಗಿವೆ. ಇವುಗಳಲ್ಲಿ ಶಿವತತ್ತ್ವವು ಮೊದಲನೆಯದಾದರೆ ಭೂಮಿತತ್ತ್ವವೇ ಕೊನೆಯದು. ಹೀಗೆ ಶಿವಾದಿ ಭೂಮ್ಯಂತರಗಳಾದ ಮೂವತ್ತಾರು ತತ್ತ್ವಗಳಲ್ಲಿ ಶಿವತತ್ತ್ವವು ಶ್ರೇಷ್ಠವಾಗಿರುವಂತೆ ಎಲ್ಲ ಮಂತ್ರಗಳಲ್ಲಿ ಪಂಚಾಕ್ಷರೀ ಮಹಾಮಂತ್ರವೇ ಶ್ರೇಷ್ಠವಾದುದಾಗಿದೆ. ಪರಮಾತ್ಮನಿಗಿರುವ ಸಹಸ್ರನಾಮಗಳಲ್ಲಿ 'ಶಿವ' ಎಂಬ ನಾಮವು ಮಂಗಲಕರವೂ ಸರ್ವೋತ್ತಮವೂ ಆಗಿದೆ. ಈ ಶಿವನಾಮವು ನಾಲ್ಕು ವೇದಗಳ ಸಾರಸರ್ವಸ್ವವೆಂಬ ವಿಷಯವು,

**ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ ।**
**ತತ್ರ ಪಂಚಾಕ್ಷರೀ ತಸ್ಯಾಂ ಶಿವ ಇತ್ಯಕ್ಷರದ್ವಯಮ್ ॥**

–ಈ ಪುರಾಣವಚನದಲ್ಲಿ ಸ್ಪಷ್ಟೀಕರಿಸಲಾಗಿದೆ. ಇದರ ತಾತ್ಪರ್ಯವೇನೆಂದರೆ – ಹದಿನೆಂಟು ವಿದ್ಯೆಗಳಲ್ಲಿ ಶ್ರುತಿಯು (ನಾಲ್ಕು ವೇದಗಳು), ಶ್ರುತಿಯಲ್ಲಿ (ಅಂದರೆ ನಾಲ್ಕು ವೇದಗಳಲ್ಲಿ) ಶ್ರೀರುದ್ರವೂ, ಶ್ರೀರುದ್ರದಲ್ಲಿ ಎಂಟನೇ ಅನುವಾಕವೂ, ಎಂಟನೇ ಅನುವಾಕದಲ್ಲಿ 'ನಮಃ ಶಿವಾಯ ಚ' ಪಂಚಾಕ್ಷರವೂ ಮತ್ತು ಆ ಪಂಚಾಕ್ಷರದಲ್ಲಿ 'ಶಿವ' ಎಂಬ ಎರಡಕ್ಷರಗಳೂ ಸರ್ವೋತ್ಕೃಷ್ಟವೆಂದು ತಿಳಿಸಲಾಗಿದೆ.

'ಶಿವ' ಎಂಬ ಎರಡಕ್ಷರಗಳು ನಾಲ್ಕೂ ವೇದಗಳ ಸಾರಸ್ವರೂಪವಾಗಿವೆ. '(ಶ್+ಇ=ಶಿ, ವ್+ಅ=ವ)=ಶಿವ' ಈ ಎರಡಕ್ಷರ

ಗಳನ್ನು ವಿಭಜಿಸಿದಾಗ ಎರಡು ಸ್ವರಗಳೂ ಎರಡು ವ್ಯಂಜನಗಳು ಕಂಡುಬರುತ್ತವೆ. ಇವುಗಳಲ್ಲಿ 'ಅ' ವರ್ಣದಿಂದ ಋಗ್ವೇದ ಮತ್ತು ಸಾಮವೇದಗಳು ಪ್ರಾರಂಭವಾಗುತ್ತವೆ. ಆದ್ದರಿಂದ 'ಅ' ವರ್ಣದಲ್ಲಿ ಈ ಎರಡು ವೇದಗಳ ಸಾರವು ಸಮಾವೇಶಗೊಳ್ಳುತ್ತವೆ. ಇದರಂತೆ 'ಇ' ವರ್ಣದಿಂದ ಯಜುರ್ವೇದದ ಪ್ರಾರಂಭವು ಹಾಗೂ 'ಶ' ಕಾರದಿಂದ ಅಥರ್ವಣವೇದದ ಪ್ರಾರಂಭವಾಗುತ್ತದೆ. ಆದಕಾರಣ 'ಇ'ಕಾರದಲ್ಲಿ ಯಜುರ್ವೇದದ ಸಾರವು ಮತ್ತು 'ಶ'ಕಾರದಲ್ಲಿ ಅಥರ್ವಣ ವೇದದ ಸಾರವು ಸಮಾಹಿತವಾಗಿದೆ. ಅದರಂತೆ 'ವ'ಕಾರದಿಂದ ವ್ಯಾಕರಣಶಾಸ್ತ್ರವು ಪ್ರಾರಂಭವಾಗುವ ಕಾರಣ 'ವ'ಕಾರದಲ್ಲಿ ವ್ಯಾಕರಣಶಾಸ್ತ್ರವು ಸಮಾವೇಶಗೊಂಡಿದೆ. ಹೀಗೆ 'ಶಿವ' ಎಂಬ ಎರಡಕ್ಷರಗಳ ಗರ್ಭದಲ್ಲಿ ವೇದ-ವೇದಾಂಗಗಳ ಸಾರವು ಅಡಕವಾಗಿದೆ. ಇಂತಹ ಈ ಎರಡಕ್ಷರಗಳು ಪಂಚಾಕ್ಷರ ಮಹಾ ಮಂತ್ರದಲ್ಲಿ ಸನ್ನಿಹಿತವಾಗಿರುವುದರಿಂದ ಈ ಮಂತ್ರವು ಉಳಿದೆಲ್ಲ ಮಂತ್ರಗಳಿಗಿಂತ ಅತ್ಯಂತ ಮಹತ್ತ್ವವುಳ್ಳದ್ದಾಗಿದೆ.

**ಸಪ್ತಕೋಟಿಷು ಮಂತ್ರೇಷು ಮಂತ್ರಃ ಪಂಚಾಕ್ಷರೋ ಮಹಾನ್ ।**
**ಬ್ರಹ್ಮ ವಿಷ್ಣ್ವಾದಿ ದೇವೇಷು ಯಥಾ ಶಂಭುರ್ಮಹತ್ತರಃ ॥**

''ಬ್ರಹ್ಮ ವಿಷ್ಣು ಮೊದಲಾದ ದೇವತೆಗಳಲ್ಲಿ ಶಿವನು ಸರ್ವೋತ್ತಮನಾಗಿರುವಂತೆ ಏಳು ಕೋಟಿ ಮಂತ್ರಗಳಲ್ಲಿ ಪಂಚಾಕ್ಷರ ಮಹಾ ಮಂತ್ರವು ಶ್ರೇಷ್ಠವಾದುದಾಗಿದೆ.''

**ಅಶೇಷ ಜಗತಾಂ ಹೇತುಃ ಪರಮಾತ್ಮಾ ಮಹೇಶ್ವರಃ ।**
**ತಸ್ಯವಾಚಕ-ಮಂತ್ರೋಽಯಂ ಸರ್ವಮಂತ್ರೈಕಕಾರಣಮ್ ॥**

''ಸಕಲ ಬ್ರಹ್ಮಾಂಡಗಳ ಉತ್ಪತ್ತಿ ಸ್ಥಿತಿ ಮತ್ತು ಲಯಗಳಿಗೆ ಶಿವನು ಮೂಲ ಕಾರಣನಾಗಿರುವಂತೆ ಶಿವನ ವಾಚಕವಾದ ಈ ಪಂಚಾಕ್ಷರ ಮಹಾಮಂತ್ರವು ಸಕಲ ಮಂತ್ರಗಳಿಗೆ ಆದಿಕಾರಣವಾಗಿದೆ.''

**ಪುರಾಸಾನಂದ ಯೋಗೀಂದ್ರಃ ಶಿವಜ್ಞಾನ ಪರಾಯಣಃ ।**
**ಪಂಚಾಕ್ಷರಂ ಸಮುಚ್ಚಾರ್ಯ ನಾರಕಾನುದತಾರಯತ್ ॥**

''ಶ್ರೀಪಂಚಾಕ್ಷರ ಮಹಾಮಂತ್ರದ ಮಹಿಮೆಯು ಅಪಾರವಾದುದು. ಈ ಮಂತ್ರವನ್ನು ಜಪಿಸಿ ಅನೇಕ ಜನರು ಸದ್ಗತಿಯನ್ನು ಪಡೆದಿರುವರು. ಈ ಮಂತ್ರ ಬಹುಜನ ಪಾಪಿಗಳನ್ನು ಉದ್ಧರಿಸಿದ ಅನೇಕ ಉದಾಹರಣೆಗಳುಂಟು. ಪೂರ್ವಕಾಲದಲ್ಲಿ ಶಿವಜ್ಞಾನಿಯಾದ ಸಾನಂದ ಗಣೇಶ್ವರನು ಪಂಚಾಕ್ಷರ ಮಹಾಮಂತ್ರವನ್ನು ಉಚ್ಚರಿಸಿ, ಇಪ್ಪತ್ತೆಂಟು ಕೋಟಿ ಪ್ರಕಾರದ ನಾಯಕ ನರಕಿಗಳನ್ನು ಉದ್ಧರಿಸಿದನು.''

**ಸಿದ್ಧ್ಯಾ ಪಂಚಾಕ್ಷರಸ್ಯಾಸ್ಯ ಶತಾನಂದಃ ಪುರಃ ಮುನಿಃ ।**
**ನರಕಂ ಸ್ವರ್ಗಮಕರೋತ್ ಸಂಗಿರಸ್ಯಾಪಿ ಪಾಪಿನಃ ॥**

''ಪೂರ್ವಕಾಲದಲ್ಲಿ ಶತಾನಂದನೆಂಬ ಮಹರ್ಷಿಯು ಈ ಪಂಚಾಕ್ಷರ ಮಹಾಮಂತ್ರದ ಸಿದ್ಧಿಯಿಂದ ಸಂಗಿರನೆಂಬ ಪಾಪಿಯ ಸಲುವಾಗಿ ನರಕವನ್ನೇ ಸ್ವರ್ಗವನ್ನಾಗಿ ಮಾಡಿದನು.''

**ಉಪಮನ್ಯುಃ ಪುರಾಯೋಗೀ ಮಂತ್ರೇಣಾನೇನ ಸಿದ್ಧಿಮಾನ್ ।**
**ಲಬ್ಧವಾನ್ ಪರಮೇಶಾನಾಚ್ಛೈವಶಾಸ್ತ್ರಪ್ರವಕ್ತತಾಮ್ ॥**

''ಪಂಚಾಕ್ಷರ ಮಹಾಮಂತ್ರದಿಂದ ಸಿದ್ಧಿಯನ್ನು ಪಡೆದ ಉಪಮನ್ಯು ಎಂಬ ಹೆಸರಿನ ಶಿವಯೋಗಿಯು ಪೂರ್ವಕಾಲದಲ್ಲಿ ಶಿವನಿಂದ ಶೈವಶಾಸ್ತ್ರದ ಆಚಾರ್ಯ ಪದವಿಯನ್ನು ಪಡೆದುಕೊಂಡನು.''

**ವಸಿಷ್ಠ ವಾಮದೇವಾದ್ಯಾ ಮುನಯೋ ಮುಕ್ತಕಿಲ್ಬಿಷಾಃ ।**
**ಮಂತ್ರೇಣಾನೇನ ಸಂಸಿದ್ಧಾ ಮಹಾತೇಜಸ್ವಿನೋಽಭವನ್ ॥**

''ಪಾಪನಿರ್ಮುಕ್ತರಾದ ವಸಿಷ್ಠ ವಾಮದೇವಾದಿ ಮಹರ್ಷಿಗಳು ಈ ಪಂಚಾಕ್ಷರ ಮಹಾಮಂತ್ರ ಜಪದಿಂದ ಅನೇಕ ಸಿದ್ಧಿಗಳನ್ನು ಪಡೆದವರಾಗಿದ್ದರಲ್ಲದೇ ಶಾಪಾನುಗ್ರಹ ಸಮರ್ಥರೂ ಆಗಿದ್ದರು.''

**ಬ್ರಹ್ಮಾದೀನಾಂ ಚ ದೇವಾನಾಂ ಜಗತ್ ಸೃಷ್ಟ್ಯಾದಿ ಕರ್ಮಣಿ ।**
**ಮಂತ್ರಸ್ಯಾಸ್ಯೈವ ಮಾಹಾತ್ಮ್ಯಾತ್ ಸಾಮರ್ಥ್ಯಮುಪಜಾಯತೇ ॥**

''ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳು ಈ ಪಂಚಾಕ್ಷರ ಮಹಾಮಂತ್ರದ ಜಪದ ಪ್ರಭಾವದಿಂದಲೇ ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಸಂಹಾರ ಕ್ರಿಯೆಗಳನ್ನು ಮಾಡಲು ಸಮರ್ಥರಾಗಿದ್ದಾರೆ.''

**ಕಿಮಿಹ ಬಹುಭಿರುಕ್ತೈರ್ಮಂತ್ರಮೇವಂ ಮಹಾತ್ಮಾ**
**ಪ್ರಣವಸಹಿತಮಾದೌ ಯಸ್ತು ಪಂಚಾಕ್ಷರಾಖ್ಯಾಂ ।**
**ಜಪತಿ ಪರಮಭಕ್ತ್ಯಾ ಪೂಜಯನ್ ದೇವದೇವಮ್ ।**
**ಸ ಗತದುರಿತಬಂಧೋ ಮೋಕ್ಷಲಕ್ಷ್ಮೀಂ ಪ್ರಯಾತಿ ॥**

''ಈ ಪಂಚಾಕ್ಷರ ಮಹಾಮಂತ್ರದ ವಿಷಯವಾಗಿ ಬಹಳ ಮಾತುಗಳನ್ನಾಡುವುದರಿಂದ ಏನು ಪ್ರಯೋಜನ? ದೇವಾಧಿದೇವ ನಾದ ಮಹಾದೇವನನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತ ಯಾವ ಶಿವಭಕ್ತನು ಪ್ರಣವಯುಕ್ತವಾದ ಈ ಪಂಚಾಕ್ಷರ ಮಹಾಮಂತ್ರವನ್ನು ಜಪಿಸುವನೋ ಅವನು ಪಾಪಬಂಧನದಿಂದ ಬಿಡುಗಡೆ ಹೊಂದಿ ಮೋಕ್ಷಸಾಮ್ರಾಜ್ಯವನ್ನು ಪಡೆಯುತ್ತಾನೆ.''

*'ಶಿವರಹಸ್ಯ'* ದಲ್ಲಿ ಸ್ವತಃ ಶಿವನು ಯಮನನ್ನುದ್ದೇಶಿಸಿ ಹೇಳಿದ್ದೇನೆಂದರೆ 'ನನ್ನ ನಾಮಜಪದಲ್ಲಿ ತಲ್ಲೀನರಾದ ಭಕ್ತರ ಗೊಡವೆಗೆ ನೀನೆಂದಿಗೂ ಹೋಗಬೇಡ. ನಿನ್ನ ಜೀವನದಲ್ಲಿ ಕಲ್ಯಾಣದ ಅಪೇಕ್ಷೆ ನಿನಗಿದ್ದರೆ ಆ ಶಿವಭಕ್ತರನ್ನು ನೀನು ಪೂಜೆ ಮಾಡು' ಎಂಬುದಾಗಿ ಶಿವನು ಉಪದೇಶಿಸಿದ್ದಾನೆ.

*'ಬ್ರಹ್ಮವೈವರ್ತಪುರಾಣ'* ದ ಬ್ರಹ್ಮಖಂಡದಲ್ಲಿ ಶ್ರೀಕೃಷ್ಣ ಪರಮಾತ್ಮನು, '' 'ಶಿವ' ನಾಮದ ಅನುರಾಗದಿಂದಾಗಿ ಆ ನಾಮವನ್ನು ಜಪಿಸುವವನನ್ನು ನಾನು ಸದಾ ಹಿಂಬಾಲಿಸುತ್ತೇನೆ. 'ಶಿವ' ಶಬ್ದವು ಕಲ್ಯಾಣ ಪ್ರದವಾಗಿದೆ. ಬಂಧು-ಬಾಂಧವರನ್ನು, ಧನಕನಕಾದಿಗಳನ್ನು ಕಳೆದು ಕೊಂಡ ವ್ಯಕ್ತಿಯು ಶಿವಪಂಚಾಕ್ಷರ ಮಹಾಮಂತ್ರದ ಜಪದಿಂದ ಪುನಃ ಕಲ್ಯಾಣ ಪರಂಪರೆಯನ್ನು ಹೊಂದುತ್ತಾನೆ. 'ಶಿವ' ಎನ್ನುವ ಎರಡಕ್ಷರಗಳಲ್ಲಿ ಪಾಪನಾಶಕವೂ ಮುಕ್ತಿದಾಯಕವೂ ಆದ ಅರ್ಥವು ಅಡಗಿ ಕೊಂಡಿದೆ. ಅಂತೆಯೇ ಕಡುಪಾಪಿಯೂ ಈ ಮಂತ್ರದ ಜಪದಿಂದ ಪಾಪವಿಮುಕ್ತನಾಗಿ ಕೈವಲ್ಯವನ್ನು ಹೊಂದುವನು'' ಮುಂತಾಗಿ ಶಿವನಾಮಯುಕ್ತವಾದ ಪ್ರಣವ ಪಂಚಾಕ್ಷರ ಮಹಾಮಂತ್ರ ಮಹತಿಯನ್ನು ಕೊಂಡಾಡಿದ್ದಾನೆ.

*(ಆಧಾರ: ಶ್ರೀಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ, ಭಾಗ-೧)* ❖

# ಉಪನಿಷತ್ತುಗಳಲ್ಲಿ ನಾಮ, ಜಪದ ಮಹತ್ತ್ವ

ರಾಜೇಶ್ವರಿ ಕೃಷ್ಣ



**ವೇದಗಳ ಕೊನೆಯ ಭಾಗಗಳಾಗಿರುವ ಉಪನಿಷತ್ತುಗಳು ಜ್ಞಾನಮಾರ್ಗವನ್ನು ಪ್ರತಿಪಾದಿಸುವ ದರ್ಶನಗಳಿಗೆ ತಾತ್ತ್ವಿಕ ಹಿನ್ನೆಲೆಯನ್ನು ಒದಗಿಸಿಕೊಟ್ಟಿವೆ. ಅಂತೆಯೇ, ಭಕ್ತಿಪರಂಪರೆಯನ್ನು ಹುಟ್ಟುಹಾಕಿದ ವಿವಿಧ ದರ್ಶನಗಳಿಗೂ ಅವು ಮೂಲವಾದವು. ಉಪನಿಷತ್ತುಗಳಲ್ಲಿ ಕಂಡುಬರುವ ಭಗವಂತನ ನಾಮದ ವೈಶಿಷ್ಟ್ಯವನ್ನು ಕುರಿತಂತೆ ಈ ಲೇಖನದಲ್ಲಿ ಬೆಳಕು ಚೆಲ್ಲುವ ಲೇಖಕಿ ಬೆಂಗಳೂರು ನಿವಾಸಿ. ಇವರ ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ ಅರ್ಜುನ, ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ –

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ॥** *(೧೦-೧೭)*

(ಹೇ ಯೋಗೀಶ್ವರ! ನಾನು ನಿರಂತರ ಚಿಂತನೆ ಮಾಡುತ್ತ ಯಾವ ಪ್ರಕಾರವಾಗಿ ನಿನ್ನನ್ನು ಅರಿಯಲಿ? ಮತ್ತು ಭಗವಂತನೆ, ನೀನು ಯಾವ ಯಾವ ಭಾವಗಳಿಂದ ನನ್ನ ಮೂಲಕ ಚಿಂತಿಸಲ್ಪಡಲು ಯೋಗ್ಯನಾಗಿರುವೆ?)

ಇದಕ್ಕೆ ಉತ್ತರರೂಪವಾಗಿ ಕೃಷ್ಣನು ತನ್ನ ಅನಂತವಾದ ವಿಭೂತಿಯನ್ನೂ, ನಾಮ-ರೂಪದ ಮಾಹಾತ್ಮ್ಯೆಯನ್ನೂ ಸವಿಸ್ತಾರವಾಗಿ ಹೇಳುತ್ತಾನೆ.

ನಾಮ ಎಂದರೆ ಹೆಸರು. ವ್ಯವಹಾರದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಒಂದು ಹೆಸರಿರುತ್ತದೆ. ಆ ಹೆಸರಿನಿಂದ ಕರೆದಾಗಲೆಲ್ಲ ಅವನು 'ಓ'ಗೊಡುತ್ತಾನೆ. ಅಂತೆಯೇ ನಾವು ಪರಮಾತ್ಮನನ್ನೂ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತೇವೆ. ಯಾವ 'ನಾಮ'ದಿಂದ ಕರೆದರೂ ಅವನು 'ಓ'ಗೊಡುತ್ತಾನೆ. ಏಕೆಂದರೆ ನಮ್ಮ ಹೆಸರಿನಲ್ಲಿರುವ 'ನಮ್ಮತನ' ದಂತೆ ದೇವರ ಹೆಸರಿನಲ್ಲಿ ದೇವತ್ವವಿರುತ್ತದೆ. ನಮ್ಮ ಲೌಕಿಕ ಬದುಕಿನಲ್ಲಿ ಅನುಭವಿಸುವ ಹಲವಾರು ತಳಮಳಗಳನ್ನು ಕಡಿಮೆ ಮಾಡಲು, ಭ್ರಾಂತಿಯನ್ನು ದೂರ ಮಾಡಿ ಮನಸ್ಸನ್ನು ಸ್ಥಿರಗೊಳಿಸಲು ಅನಾದಿ ಕಾಲದಿಂದ ಸತ್ಸಂಗ-ಸದ್ವಿಚಾರ, ನಾಮಸ್ಮರಣೆ, ಜಪಾನುಷ್ಠಾನವನ್ನು ಸೂಚಿಸಲಾಗಿದೆ. ಎಲ್ಲ ಸನ್ನಿವೇಶಗಳಲ್ಲಿ ಹೇಗೆ ಭಗವಂತನ ನಾಮಸ್ಮರಣೆ ಒಂದು ಸುಲಭ ಸಾಧನವಾಗಬಲ್ಲದು, ಅದರಿಂದ ಎಂಥ ಉತ್ತಮ ಫಲಗಳು ದೊರಕುತ್ತವೆ ಎಂದು ಶ್ರೀರಾಮಕೃಷ್ಣ ಪರಮಹಂಸರು ಅತ್ಯಂತ ಮನೋಜ್ಞವಾಗಿ ನಿರೂಪಿಸಿದ್ದಾರೆ.

**ಸಾಧನ ಸಂಪತ್ತು:** ಭಗವಂತನ ನಾಮದ ಆವಶ್ಯಕತೆಯು ಮುಖ್ಯವಾಗಿ ಎರಡು ಕಾರಣಗಳಿಂದ ಇರುತ್ತದೆ – ಪ್ರಪಂಚದ ಸ್ವರೂಪವನ್ನು ತಿಳಿಯುವುದಕ್ಕಾಗಿ ಹಾಗೂ ಭಗವಂತನ ಪ್ರಾಪ್ತಿಗಾಗಿ. ಮೂಲತಃ ಮನುಷ್ಯರಾಗಿ ಹುಟ್ಟಿದ ಪ್ರತಿಯೊಬ್ಬರಲ್ಲೂ ಭಗವಂತನ ಪ್ರಾಪ್ತಿಯ ಬಯಕೆ ಇದ್ದೇ ಇರುತ್ತದೆ. ಆದರೆ ಅದರ ಬಗ್ಗೆ ಸ್ಪಷ್ಟವಾದ ತಿಳಿವಳಿಕೆ ಇಲ್ಲದೆ, ಆ ಸಾಮರ್ಥ್ಯದ ವಿಕಾಸಕ್ಕೆ ಸೂಕ್ತ ದಾರಿ ಗೋಚರಿಸುವುದಿಲ್ಲ. ನಮ್ಮಲ್ಲಿ ಬಹುಪಾಲು ಜನರಿಗೆ 'ಭಗವಂತ ನಮ್ಮಿಂದ ಪ್ರತ್ಯೇಕವಾಗಿ, ದೂರದಲ್ಲೆಲ್ಲೋ ಇದ್ದಾನೆ; ಹೆಚ್ಚಿನ ಸ್ಥಾನದಲ್ಲಿರುವ ಅವನನ್ನು ಮೆಚ್ಚಿಸಲು ನಾನು ಕರ್ತೃವಾಗಿ ಕರ್ಮಗಳನ್ನು ಮಾಡುತ್ತಲೇ ಇರಬೇಕು' ಎಂಬ ಭಾವನೆ ಬೇರೂರಿರುತ್ತದೆ. ಅದು ನಮಗೆ ಸಮಾಧಾನ – ತೃಪ್ತಿಯನ್ನೂ ನೀಡುತ್ತದೆ. ಈ ನಿಟ್ಟಿನಲ್ಲಿ ಭಾರತೀಯ ತತ್ತ್ವಶಾಸ್ತ್ರದ ಮೇರುಶಿಖರಗಳೆನಿಸಿರುವ ಉಪನಿಷತ್ತುಗಳು (ವೇದಗಳ ಕೊನೆಯ ಭಾಗದಲ್ಲಿ ಬರುವ 'ವೇದಾಂತ') ಪರಮಾತ್ಮ ತತ್ತ್ವದ ಬಗ್ಗೆ ಸ್ಪಷ್ಟವಾದ ತಿಳಿವಳಿಕೆ ನೀಡಿ, ಭಗವಂತನ ಅನುಸಂಧಾನಕ್ಕೆ ಮಾರ್ಗಗಳನ್ನೂ ಸೂಚಿಸುತ್ತವೆ. ಉಪನಿಷತ್ತುಗಳು ಪ್ರತಿಪಾದಿಸಿರುವಂತೆ, ಇರುವುದು ಒಂದೇ ಪರಮಾತ್ಮ ತತ್ತ್ವ. 'ಇರುವಿಕೆ'ಯ ರೂಪದಲ್ಲಿರುವ (ಅಸ್ತಿ) ಈ ಪರಮಾತ್ಮ ತತ್ತ್ವವೇ ನಾಮರೂಪಗಳಾಗಿ ತೋರುತ್ತದೆ. ('ನಾಮರೂಪಗಳ ವ್ಯಾಕರಣ'). ಭಗವತ್ಸ್ವರೂಪವು ಅವ್ಯಕ್ತವಾಗಿರಬಹುದು ಅಥವಾ ವ್ಯಕ್ತವಾಗಿರಬಹುದು. ಅದು ವಿವಿಧ ನಾಮ-ರೂಪಗಳ ಮೂಲಕ ತೆರೆದುಕೊಳ್ಳುತ್ತ ಹೋದಂತೆ ಪ್ರಪಂಚವಾಗಿ ಪರಿಣಮಿಸುತ್ತದೆ. ಕೇವಲ ಜ್ಞಾನಸ್ವರೂಪವಾಗಿರುವ ಈ ತತ್ತ್ವವನ್ನು ವೇದಾಂತದಲ್ಲಿ 'ಪರಬ್ರಹ್ಮ' ಅಥವಾ 'ಸದ್ವಸ್ತು' ಎಂದು ಸೂಚಿಸಲಾಗಿದೆ. ಇದೇ ಚೈತನ್ಯ ರೂಪದಿಂದ ಪ್ರಪಂಚವನ್ನೆಲ್ಲಾ ವ್ಯಾಪಿಸಿದೆ ಹಾಗೂ ನಮ್ಮೊಳಗೂ (ಅಂತರ್ಯಾಮಿಯಾಗಿ) ಸ್ಥಿತವಾಗಿದೆ. ಆದ್ದರಿಂದ 'ತತ್ತ್ವತಃ ನಾನೂ ಆ ಜ್ಞಾನಸ್ವರೂಪವೇ ಆಗಿದ್ದೇನೆ' (ಬ್ರಹ್ಮಾತ್ಮೈಕ್ಯತೆ) ಎಂದು ಅರಿತು ಕೊಳ್ಳುವುದೇ ಭಗವದನುಸಂಧಾನ – ಇದೇ ವೇದಾಂತದಲ್ಲಿ

ಅಂತಿಮ ಲಕ್ಷ್ಯವಾಗಿರುತ್ತದೆ (ಆತ್ಯಂತಿಕ ಮೋಕ್ಷ). ಆದರೆ ಈ ತತ್ತ್ವಾನುಸಂಧಾನ ಎಲ್ಲರಿಗೂ ಒಂದೇ ಬಾರಿಗೆ, ಸುಲಭವಾಗಿ ಸಾಧ್ಯವಿಲ್ಲವಾದ್ದರಿಂದ ಉಪನಿಷತ್ತುಗಳು ನಮ್ಮನ್ನು ಆ ಪರಮಾರ್ಥದೆಡೆಗೆ ಹಂತ-ಹಂತವಾಗಿ, ಸೋಪಾನಮಾರ್ಗದಿಂದ ಕರೆದೊಯ್ಯುತ್ತವೆ. ಭೂಮಿಕೆಯನ್ನು ಸಿದ್ಧಗೊಳಿಸುವ ಭಾಗವಾಗಿ ಆರಂಭದ ಹಂತದಲ್ಲಿ ಚಿತ್ತಶುದ್ಧಿಯನ್ನೂ, ಏಕಾಗ್ರತೆಯನ್ನೂ ಸಾಧಿಸಬೇಕಾಗುತ್ತದೆ. ಇದಕ್ಕಾಗಿ ನಾಮ-ಜಪ, ಧ್ಯಾನ-ಉಪಾಸನೆಗಳನ್ನು ವಿಧಿಸಲಾಗಿದೆ. ಶ್ರವಣ-ಮನನ-ನಿದಿಧ್ಯಾಸನಗಳನ್ನು ಸಾಕ್ಷಾತ್ ಸಾಧನಗಳೆಂದು ಸೂಚಿಸಲಾಗಿದೆ. ಉಪನಿಷತ್ತುಗಳು ನಮಗೆ ನಾಮ-ಜಪಗಳ ಮಹತ್ವವನ್ನು ಅತ್ಯಂತ ಮನೋಜ್ಞವಾಗಿ ತಂದುಕೊಡುತ್ತವೆ - ಆದರೆ ಭಗವದನುಸಂಧಾನವೆಂಬ ಅಂತಿಮ ಲಕ್ಷ್ಯದತ್ತ ಸಾಗಲು ಅವುಗಳನ್ನು ಹೆಚ್ಚಾಗಿ ಆಲಂಬನೆಯ ರೂಪದಲ್ಲಿ ಸೂಚಿಸಲಾಗಿದೆ. ಇದನ್ನೇ ಶ್ರೀ ಶಂಕರಾಚಾರ್ಯರು **'ಚಿತ್ತಸ್ಯ ಶುದ್ಧಯೇ ಕರ್ಮ ನ ತು ವಸ್ತೂಪಲಬ್ಧಯೇ'** ಎಂದು ವಿವರಿಸಿದ್ದಾರೆ. (''ಕರ್ಮದಿಂದ ಚಿತ್ತಶುದ್ಧಿಯಾಗುವುದೇ ಹೊರತು ಆತ್ಮವಸ್ತುವನ್ನು ಪಡೆಯಲಾಗುವುದಿಲ್ಲ'' - *ವಿವೇಕ ಚೂಡಾಮಣಿ).* ಆದರೆ ಈ ಪ್ರತಿಪಾದನೆಯಲ್ಲಿ ಮೂಲ ವಸ್ತುವನ್ನಾಗಲಿ, ಸಗುಣ-ಸಾಕಾರವನ್ನಾಗಲಿ ಕಡೆಗಣಿಸಿಲ್ಲ ಎಂಬುದು ಗಮನಾರ್ಹ. ಹೆಚ್ಚಿನ ಸಾಮಾನ್ಯೀಕರಣದ ಅನ್ವೇಷಣೆಯಿಂದ, 'ಇರುವುದು ಒಂದೇ ವಸ್ತು - ಅದೇ ಸತ್ಯ - ಅದೇ ನಾಮ, ರೂಪಗಳಿಂದ ಬೇರೆ ಬೇರೆಯಾಗಿ ತೋರಿಕೊಳ್ಳುತ್ತದೆ' ಎಂದು ವೇದಾಂತ ನಿರೂಪಿಸುತ್ತದೆ. ಶ್ರೀರಾಮಕೃಷ್ಣರಿಗೆ ಸಗುಣ-ನಿರ್ಗುಣಗಳೆರಡೂ ಪ್ರಿಯ, ಆದರಣೀಯ - 'ಅವನು ಅಸ್ತಿ-ನಾಸ್ತಿಗಳನ್ನು ಮೀರಿದವನು' ಎನ್ನುತ್ತಿದ್ದರು. ಈ ಸಮನ್ವಯ ಸಾಧನೆಯೇ ವೇದಾಂತದ ಒಂದು ಮುಖ್ಯ ಲಕ್ಷಣ.

**ಓಂಕಾರದ ಶ್ರೇಷ್ಠತೆ :** ಈ ಹಿನ್ನೆಲೆಯಲ್ಲಿ , ಉಪನಿಷತ್ತುಗಳಲ್ಲಿ 'ಓಂಕಾರ'ಕ್ಕೆ ಆಲಂಬನೆಯ ರೂಪದಲ್ಲಿ ಬಹಳ ಮಹತ್ವವಿದೆ. ಇಲ್ಲಿ ಓಂಕಾರವು ಪರಮಾತ್ಮನಿಗೆ ನಾಮವೂ ಹೌದು, ಪ್ರತೀಕವೂ ಹೌದು. ಈ ಓಂಕಾರದಿಂದಲೇ ಸೃಷ್ಟಿಯ ಉಗಮವಾಗಿದೆ. ಇದು ಎಲ್ಲದರಲ್ಲಿ ಸಮಾನವಾಗಿರುವ 'ಇರುವಿಕೆ'ಯ ಗುಣವನ್ನು ನಾಮವಾಗಿ ಸೂಚಿಸುತ್ತದೆ. ಆದರೆ 'ಓಂ' ಎನ್ನುವುದು ಕೇವಲ ಒಂದು ನಾಮ ಅಥವಾ ಸ್ವರವಲ್ಲ - ಅದು ಪರಮಾತ್ಮನ ಸ್ವರೂಪವೇ ಆಗಿದೆ. ಈ ಬೀಜಾಕ್ಷರದಲ್ಲಿ ಬ್ರಹ್ಮಾಂಡದ ಉಸಿರೇ ಅಡಗಿದೆ. ಇಂಥ ಓಂಕಾರದ ಶ್ರೇಷ್ಠತೆಯನ್ನು ಹಲವಾರು ಉಪನಿಷತ್ತುಗಳು ನಮಗೆ ತಂದುಕೊಡುತ್ತವೆ. ಅಥರ್ವವೇದಕ್ಕೆ ಸೇರಿದ ***ಮಾಂಡೂಕ್ಯೋಪನಿಷತ್ತಿ***ನ ಮೊದಲನೆಯ ಮಂತ್ರದಲ್ಲಿ, **'ಓಮಿತ್ಯೇತದಕ್ಷರಮಿದಗ್ಂ ಸರ್ವಂ... ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ....'** - ಎಲ್ಲವೂ ಓಂಕಾರವೇ ಎಂದು ವ್ಯಾಖ್ಯಾನಿಸಲಾಗಿದೆ. ಈ ಉಪನಿಷತ್ತಿಗೆ ಬರೆದಿರುವ ಕಾರಿಕೆಗಳಲ್ಲಿ ಗೌಡಪಾದರು ಓಂಕಾರದ ಸ್ವರೂಪದ ಬಗ್ಗೆ ವಿಶದವಾಗಿ ಚರ್ಚಿಸಿ, ಇಂಥ ಓಂಕಾರವನ್ನು ಅರಿತವನು ತನ್ನ ಆತ್ಮಭಾವವನ್ನೇ ಹೊಂದುತ್ತಾನೆ ಎಂದು ಪ್ರತಿಪಾದಿಸಿದ್ದಾರೆ. ಈ ಓಂಕಾರವನ್ನು ಉದ್ಗೀಥವೆಂದೂ, ಪ್ರಣವವೆಂದೂ ಉಪಾಸಿಸಬೇಕೆಂದು ***ಛಾಂದೋಗ್ಯೋಪನಿಷತ್ತಿ***ನಲ್ಲಿ ಬೋಧಿಸಲಾಗಿದೆ. ***ಕಠೋಪನಿಷತ್ತಿ***ನಲ್ಲಿ ಬರುವ ಯಮ-ನಚಿಕೇತರ ಸಂವಾದದಲ್ಲಿ ಓಂಕಾರದ ಮಹಿಮೆ ಅದ್ಭುತವಾಗಿ ಬೆಳಗುತ್ತದೆ. ಶಿಷ್ಯನಾದ ಬಾಲಕ ನಚಿಕೇತನ ಪ್ರಶ್ನೆಗೆ ಉತ್ತರಿಸುತ್ತ, ಯಮಧರ್ಮರಾಯನು ಹೇಳುತ್ತಾನೆ - ''ಎಲ್ಲ ವೇದಗಳೂ ಯಾವ ಪದವನ್ನು ಪ್ರತಿಪಾದಿಸುತ್ತವೆಯೋ, ಎಲ್ಲ ತಪಸ್ಸುಗಳೂ ಯಾವುದನ್ನು ಕುರಿತು ಹೇಳುತ್ತವೆಯೋ, ಯಾವುದನ್ನು ಬಯಸುತ್ತ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ, ಆ ಪದವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ. 'ಓಂ' ಎಂಬುದೇ ಅದು.''

**ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಂ ।**
**ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥**

''ಈ ಆಲಂಬನೆಯು ಶ್ರೇಷ್ಠವಾದದ್ದು - ಪರವಾದದ್ದು. ಈ 'ಅಕ್ಷರ'ವನ್ನು ತಿಳಿದವನಿಗೆ ಬಯಸಿದ್ದು ಲಭಿಸುತ್ತದೆ ; ಅವನು ಬ್ರಹ್ಮಲೋಕದಲ್ಲಿ ಮಹಿಮೆಯನ್ನು ಹೊಂದುತ್ತಾನೆ.''

***ಛಾಂದೋಗ್ಯ*** ಹಾಗೂ ***ಪ್ರಶ್ನೋಪನಿಷತ್ತಿ***ನ ಭಾಷ್ಯದಲ್ಲಿ 'ಓಂಕಾರವು ಪರಮಾತ್ಮನಿಗೆ ಅತ್ಯಂತ ಸಮೀಪವಾದ ಹೆಸರು - ಆಲಂಬನೆ' ಎಂದು ಶ್ರೀ ಶಂಕರಾಚಾರ್ಯರು ಸ್ಪಷ್ಟಪಡಿಸಿದ್ದಾರೆ -

**ಓಮಿತ್ಯೇತದಕ್ಷರಂ ಪರಮಾತ್ಮನಃ ಅಭಿಧಾನಂ ನೇದಿಷ್ಠಮಃ । ತಸ್ಮಿನ್ ಹಿ ಪ್ರಯುಜ್ಯಮಾನೇ ಸ ಪ್ರಸೀದತಿ ಪ್ರಿಯನಾಮಗ್ರಹಣ ಇವ ಮೋಕ್ಷಃ ॥**

ಓಂಕಾರವೇ ಅಪರಬ್ರಹ್ಮ, ಓಂಕಾರವೇ ಪರಬ್ರಹ್ಮ, ನಮ್ಮ ಹೃದಯದೊಳಗಿರುವ ಈಶ್ವರನೂ ಹೌದು. ಆದ್ದರಿಂದ ಹೇಗೆ ಈ ಆಲಂಬನೆಯೊಂದಿಗೆ ಆ ಪರಮಪುರುಷನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂದು ***ತೈತ್ತಿರೀಯ, ಬೃಹದಾರಣ್ಯಕ*** ಮುಂತಾದ ಉಪನಿಷತ್ತುಗಳಲ್ಲಿ ನಿರೂಪಿಸಲಾಗಿದೆ. ***ಮುಂಡಕೋಪನಿಷತ್ತಿ***ನಲ್ಲಿ ಒಂದು ಸುಂದರ ಉಪಮೆಯೊಂದಿಗೆ, ಹೇಗೆ ಪ್ರಣವವೆಂಬ ಧನುಸ್ಸಿನಿಂದ ಬ್ರಹ್ಮವೆಂಬ ಲಕ್ಷ್ಯವನ್ನು ಸಾಧಿಸಬೇಕೆಂದು ಹೇಳಲಾಗಿದೆ - **'ಪ್ರಣವೋ ಧನುಃ ಶರೋ ಹ್ಯಾತ್ಮಾ । ಬ್ರಹ್ಮತಲ್ಲಕ್ಷ್ಯಮುಚ್ಯತೇ... ॥'**

ಇದೇ ರೀತಿ ಉಪನಿಷತ್ತುಗಳಲ್ಲಿ ವಿವಿಧೆಡೆ, ಸವಿಶೇಷದಿಂದ ನಿರ್ವಿಶೇಷದೆಡೆಗೆ ಮುಂದುವರಿಯುವ ಮಾರ್ಗಸೂಚಿಯಲ್ಲಿ, 'ನಾಮ' ದ ಪ್ರಸ್ತಾಪ ಬರುತ್ತದೆ. ***ಕೇನೋಪನಿಷತ್ತಿ***ನ ನಾಲ್ಕನೆಯ ಖಂಡದಲ್ಲಿ, ಅಂತರ್ಯಾಮಿ ರೂಪದಿಂದ ಎಲ್ಲ ಪ್ರಾಣಿಗಳ ಆತ್ಮನಾಗಿರುವ ಬ್ರಹ್ಮವನ್ನು **'ತದ್ವನ'** ಎಂಬ ನಾಮದಿಂದ ಉಪಾಸಿಸಬೇಕು ಎಂದು ಹೇಳಲಾಗಿದೆ ('ವನನೀಯ' - ಭಜಿಸಲ್ಪಡತಕ್ಕದ್ದು). ಛಾಂದೋಗ್ಯದ ಏಳನೆಯ ಅಧ್ಯಾಯದಲ್ಲಿ ನಾರದ-ಸನತ್ಕುಮಾರರ ಸಂವಾದ ಬರುತ್ತದೆ. ಅಲ್ಲಿಯೂ ಗುರುಗಳಾದ ಸನತ್ಕುಮಾರರು ಇಡೀ ಪ್ರಪಂಚವನ್ನು ವ್ಯಾಪಿಸಿರುವ 'ನಾಮ'ವೆಂಬ ವಸ್ತುವಿನ ಉಪಾಸನೆಗೆ ತಕ್ಕ ಫಲ ಇರುತ್ತದೆ. ಆದರೆ ಅಂತಿಮವಾಗಿ ಆತ್ಮವು ಅಭಿಧಾನ (ನಾಮ), ಅಭಿಧೇಯಗಳಿಗೆ (ರೂಪ) ಮೀರಿದ ತತ್ತ್ವ ಎಂದು ನಿರೂಪಿಸುತ್ತಾರೆ. ಇದನ್ನೇ ಶ್ರೀ ಶಂಕರಾಚಾರ್ಯರು ತಮ್ಮ ***ಮಾಂಡೂಕ್ಯೋಪನಿಷದ್ಭಾಷ್ಯ***ದಲ್ಲಿ - **'...ಅಭಿಧಾನಾಭಿಧೇಯೋರೇಕತ್ವ ಪ್ರತಿಪತ್ತ್ಯರ್ಥಃ'** ಎಂದು ವಿವರಿಸಿದ್ದಾರೆ. ***ಪ್ರಶ್ನೋಪನಿಷತ್ತಿ***ನಲ್ಲಿ ಸೃಷ್ಟಿಕ್ರಮದ ಬಗ್ಗೆ ಹೇಳುವಾಗ 'ಷೋಡಶಕಲಾ ಪುರುಷ'ನ ವಿವರಣೆ ಬರುತ್ತದೆ. ಈ ಹದಿನಾರು ಕಲೆಗಳಲ್ಲಿ ಕೊನೆಯದೇ 'ನಾಮ'- ಸಮಸ್ತ ವಸ್ತುಗಳ ಹೆಸರುಗಳು. ಈ ನಾಮ-ರೂಪಗಳೆಲ್ಲ ನಾಶವಾದ

ಮೇಲೆ (ವಿದ್ಯೆಯಲ್ಲಿ ಲಯವಾದ ಮೇಲೆ) ಅಂತಿಮವಾಗಿ ಉಳಿಯುವ ತತ್ತ್ವವೇ 'ಪುರುಷ' ಎನಿಸುತ್ತಾನೆ. ಅಂದರೆ ನಿಜವಾಗಿ ನಾಮ ರೂಪಗಳೆಲ್ಲ ಆ ಪೂರ್ಣತತ್ತ್ವದಲ್ಲೇ ತೋರುತ್ತಾ ಇವೆ. ನಿರಂತರ ನಾಮಸ್ಮರಣೆಯಿಂದ ನಿತ್ಯ, ಸ್ವಯಂಪೂರ್ಣ, ಆನಂದಮಯವಾದ ಪರಮಾತ್ಮನ ಗುಣಗಳೇ ನಮ್ಮ ಮನಸ್ಸಿನಲ್ಲಿ ತುಂಬಿಕೊಂಡು, ನಿರ್ಗುಣೋಪಾಸನೆಗೆ ದಾರಿಯಾಗುತ್ತದೆ. 'ನಾನು', 'ರಾಮ-ಕೃಷ್ಣ' ಮರೆಯಾಗುತ್ತಾರೆ – ಪರಮಾತ್ಮನೊಬ್ಬನೇ ಅನುಭವದಲ್ಲಿ ಶೇಷ ಉಳಿಯುತ್ತಾನೆ. ಇದನ್ನೇ ***ಮುಂಡಕೋಪನಿಷತ್ತು*** ಒಂದು ಸುಂದರ ಉಪಮೆಯೊಂದಿಗೆ ಹೇಳುತ್ತದೆ –

**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ**
**ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।**
**ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ**
**ಪರಾತ್ ಪರಂ ಪುರುಷಮುಪೈತಿ ದಿವ್ಯಂ ॥**

('ಹೇಗೆ ಹರಿಯುತ್ತಿರುವ ನದಿಗಳು ನಾಮ-ರೂಪಗಳನ್ನು ಬಿಟ್ಟು ಸಮುದ್ರದಲ್ಲಿ ಅದೃಶ್ಯವಾಗುವುವೋ ಹಾಗೆಯೇ ವಿದ್ವಾಂಸನು ನಾಮ-ರೂಪಗಳಿಂದ ಬಿಡುಗಡೆಯನ್ನು ಹೊಂದಿ ಪರಾತ್ಪರನೂ ದಿವ್ಯನೂ ಆದ ಪುರುಷನನ್ನು ಹೊಂದುವನು.')

**ಜಪಾತ್ ಸಿದ್ಧಿಃ :** ಪರಮಾತ್ಮ ತತ್ತ್ವದ ಅನುಸಂಧಾನ ಮಾರ್ಗದಲ್ಲಿ ಅಂತಃಕರಣ ಶುದ್ಧಿಗಾಗಿ ಉಪನಿಷತ್ತುಗಳು ಸೂಚಿಸುವ ಒಂದು ಮುಖ್ಯ ಸಾಧನ – ಜಪ. ಭಗವದ್ಗೀತೆಯ ವಿಭೂತಿಯೋಗದಲ್ಲಿ (೧೦ನೇ ಅಧ್ಯಾಯ) ಶ್ರೀಕೃಷ್ಣ, ''**ಯಜ್ಞಾನಾಂ ಜಪಯಜ್ಞೋಽಸ್ಮಿ**'' ಎಂದಿದ್ದಾನೆ. ಇನ್ನೇನನ್ನು ಮಾಡದಿದ್ದರೂ ಬರಿ ಜಪದಿಂದಲೇ ಸಿದ್ಧಿ ಯಾಗುವುದು ಎನ್ನುತ್ತದೆ ***ಮನುಸ್ಮೃತಿ*** (ಜ-ಜನ್ಮ ನಾಶಃ, ಪ-ಪಾಪ, ಪುಣ್ಯಕ್ಷಯಃ).

ಗಾಯತ್ರಿ ಜಪವನ್ನು ಅರಿಯದವರು ಯಾರು? ಓಂಕಾರದಲ್ಲಿ ಸಂಪುಟೀಕರಣವಾಗಿ, ಮೂರು ವ್ಯಾಹೃತಿಗಳನ್ನೊಳಗೊಂಡು ಬೆಳಗುವ 'ಗಾಯತ್ರಿ'ಯನ್ನು ಉಪನಿಷತ್ತುಗಳ ಸಾರ ಎನ್ನ ಬಹುದು. ಈ ಜಪವನ್ನು ಬೇರೆ ಬೇರೆ ರೀತಿಯಲ್ಲಿ ನೆರವೇರಿಸಬಹುದು. ಮಂತ್ರಗಳನ್ನು ಬಿಡಿಬಿಡಿಯಾಗಿ ಬೇರೆಯವರಿಗೂ ಕೇಳುವಂತೆ ಉಚ್ಚರಿಸುವುದು (ವೈಖರಿ), ಶಬ್ದೋಚ್ಚಾರಣೆ ಇಲ್ಲದೆ ಮೆಲ್ಲನೆ ಜಪ ಮಾಡುವುದು (ಉಪಾಂಶು) ಹಾಗೂ ಮನಸ್ಸಿನಲ್ಲಿ ಮಾತ್ರ ಮಂತ್ರಾರ್ಥವನ್ನು ಮನನ-ನಿದಿಧ್ಯಾಸನದ ರೂಪದಲ್ಲಿ ಅನುಸಂಧಾನ ಮಾಡುವುದು (ಮಾನಸಿಕ ಜಪ). ಜಪದಲ್ಲಿ ಸಾಮಾನ್ಯವಾಗಿ ಗುರೂಪದಿಷ್ಟವಾದ ಮಂತ್ರವನ್ನು ಅರ್ಥಾನುಸಂಧಾನದಿಂದ ಕ್ರಮ ಬದ್ಧವಾಗಿ, ನಿರ್ದಿಷ್ಟ ಸಂಖ್ಯೆಯಲ್ಲಿ ಆವರ್ತನೆ ಮಾಡುವುದಿರುತ್ತದೆ. ಇದರಿಂದ ಸದಾ ಧಾವಂತದಲ್ಲಿರುವ ನಮ್ಮ ಮನಸ್ಸು ಸ್ಥಿರವಾಗುತ್ತದೆ. ದೋಷಗಳಿಂದ (ಮಲ, ವಿಕ್ಷೇಪ, ಆವರಣ) ಮುಕ್ತವಾಗಿ ಚಿತ್ತ ಶುದ್ಧಿಯಾಗುತ್ತದೆ; ಏಕಾಗ್ರತೆ ಮೂಡುತ್ತದೆ. ಇದೇ ಜಪವನ್ನು ಕೇವಲ ಭಗವಂತನ ಅನುಸಂಧಾನಕ್ಕಾಗಿ, ನಿಷ್ಕಾಮ ಭಾವನೆಯಿಂದ ಮಾಡುತ್ತ ಬಂದಾಗ, ಅದರಿಂದ ಸದ್ಬುದ್ಧಿ-ಸನ್ಮಾರ್ಗ ಲಭಿಸುತ್ತದೆ ಎಂದಿದ್ದಾರೆ ಸ್ವಾಮಿ ವಿವೇಕಾನಂದರು. ಉಪನಿಷತ್ತುಗಳು ತೋರಿಸಿರುವ ಈ ಮಾರ್ಗದಲ್ಲಿ ಮುಂದುವರಿದಂತೆ ಸಹಜವಾಗಿ ಈ ಜಪಕರ್ಮವು ಧ್ಯಾನಕ್ಕೆ ಎಡೆ ಮಾಡಿಕೊಡುತ್ತದೆ. ಆ ಧ್ಯಾನವೇ ಸಾಕ್ಷಾತ್ಕಾರಕ್ಕೆ ಮುಖ್ಯ ಸಾಧನವಾಗುತ್ತದೆ. (ಮಂತ್ರ-ನಾಮವನ್ನು ಸತತವಾಗಿ ಪಾರಾಯಣ ಮಾಡುವುದು ಜಪ; ಆ ಮಂತ್ರದಲ್ಲಿರುವ ದೈವಸ್ವರೂಪವನ್ನೂ, ಕಲ್ಯಾಣಗುಣ ವಿಭೂತಿಗಳನ್ನೂ ಕಂಡುಕೊಳ್ಳಲು ನೆರವೇರಿಸುವ ಸಾಧನವೇ ಧ್ಯಾನ.) ಕ್ರಮೇಣ ಪ್ರತೀಕವು ಮರೆಯಾಗಿ ಭಗವಂತನ ಅಸ್ತಿತ್ವದ ಭಾಸ ಮಾತ್ರ ಉಳಿಯುತ್ತದೆ. ಮನೋದ್ರವ್ಯದಲ್ಲಿ ಅರಿವು, ಅರಿಯುವವನು, ಅರಿಯುವ ವಸ್ತು – ಎಲ್ಲವೂ ಒಂದಾಗುತ್ತದೆ. ವೇದಾಂತ ಇದನ್ನೇ ***ಬ್ರಹ್ಮಾತ್ಮೈಕ್ಯತೆ*** ಅಥವಾ **ಆತ್ಯಂತಿಕ ಮೋಕ್ಷ** ಎಂದು ಸೂಚಿಸುತ್ತದೆ. ಉಪನಿಷತ್ತುಗಳಲ್ಲಿ ನಾಮ, ಜಪ ಮುಂತಾದ ಸಾಧನಗಳನ್ನೆಲ್ಲ ಈ 'ಸಾಧ್ಯ'ಕ್ಕೆ ಪೂರಕವಾಗಿ ಹೇಳಲಾಗಿದೆ – '**ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾ ಆತ್ಮಾನಂ ಅನ್ವಿಷ್ಯ....**' *(ಪ್ರಶ್ನೋಪನಿಷತ್, ೧-೧೦).* ***ಛಾಂದೋಗ್ಯ***ದ ಕೊನೆಯಲ್ಲಿ *(೮.೧೩.೧)* ಜಪ-ಧ್ಯಾನಕ್ಕಾಗಿಯೇ '**ಶ್ಯಾಮಾಚ್ಛಬಲಂ ಪ್ರಪದ್ಯೇ**' ಎಂಬಂಥ ಕೆಲವು ವಿಶಿಷ್ಟ ಮಂತ್ರಗಳನ್ನು ಹೇಳಲಾಗಿದೆ. ಈ ಮಂತ್ರಗಳು ಪಾವನವಾಗಿವೆ ಎಂದೂ, ಅವನ್ನು ಜಪಿಸಬೇಕು ಎಂಬ ಕಾರಣದಿಂದಲೂ, ಇಲ್ಲಿ ಸೂಚಿಸಲಾಗಿದೆ (ಅಂತಃಕರಣ ಶುದ್ಧವಾಗಿ ಹಾರ್ದ ಬ್ರಹ್ಮೋಪಾಸನೆಗೆ ನೆರವಾಗುತ್ತದೆ) ಎಂದು ಶ್ರೀ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಬರೆದಿದ್ದಾರೆ – '**...ಪಾವನೋ ಜಪಾರ್ಥಶ್ಚ (ಆ)ಧ್ಯಾನಾರ್ಥೋ ವಾ.**' ***ಬೃಹದಾರಣ್ಯಕೋಪನಿಷತ್ತಿ***ನಲ್ಲಿ ಪ್ರಾಣೋಪಾಸಕನಿಗೆ ಜಪಕರ್ಮಗಳನ್ನು ವಿಧಿಸುವಾಗ, **ಅಭ್ಯಾರೋಹ ಜಪ**ದ ಬಗ್ಗೆ ಹೇಳಲಾಗಿದೆ. ಈ ಜಪವು ಉದ್ಗೀಥಕ್ಕೆ ಸಂಬಂಧಿಸಿದ್ದು, ಸಾಧಕನಾದವನು ಈ ಜಪಕರ್ಮದಿಂದ ದೇವಭಾವಕ್ಕೆ ತನ್ನನ್ನು ಅಭಿಮುಖವಾಗಿ ಏರಿಸಿಕೊಳ್ಳುತ್ತಾನಾದ್ದರಿಂದ (ಇದು) ಅಭ್ಯಾ ರೋಹ(ವೆನಿಸುತ್ತದೆ)' ಎಂದು ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ವಿವರಿಸಿದ್ದಾರೆ – '**ಆಭಿಮುಖ್ಯೇನ ಆರೋಹತ್ಯನೇನ ಜಪಕರ್ಮಣಾ ಏವಂವಿತ್ ದೇವಭಾವಮಾತ್ಮಾನಮ್ ಇತಿ ಅಭ್ಯಾರೋಹಃ**' (ದೇಹಭಾವದಿಂದ ದೇವಭಾವಕ್ಕೆ ಏರಿಸುತ್ತದೆ). ಇದಕ್ಕೆ ಪೂರಕವಾಗಿ '**ಅಸತೋ ಮಾ ಸದ್ಗಮಯ..**' ಎಂಬ ಸುಪ್ರಸಿದ್ಧ ಪ್ರಾರ್ಥನೆಯೂ ಇಲ್ಲಿಯೇ ಬರುತ್ತದೆ.

ಉಪನಿಷತ್ತುಗಳಲ್ಲಿ ಪರಮಾತ್ಮದರ್ಶನ ಎಂದರೆ ಪರಮಾತ್ಮನನ್ನು 'ಜ್ಞಾನಸ್ವರೂಪ' ಎಂದು ಅರಿತುಕೊಳ್ಳುವುದು ('ಚಿತ್ಸದಾಹಂ' – ಶುದ್ಧ ಜ್ಞಾನ ಸ್ವರೂಪ). ಅದೇ ಚೈತನ್ಯರೂಪದಿಂದ ಎಲ್ಲೆಡೆ ವ್ಯಾಪಿಸಿದ್ದು, ನಮ್ಮೊಳಗೂ ಸ್ಥಿತವಾಗಿದೆ. ಎಲ್ಲವನ್ನೂ ಪ್ರಕಾಶಿಸುತ್ತಿದೆ. ಆದರೆ ಈ ನಿರ್ವಿಶೇಷ ಬ್ರಹ್ಮತತ್ತ್ವವು ಸಂಕೀರ್ಣವಾದದ್ದು, ಸೂಕ್ಷ್ಮವಾದದ್ದು. ಆದ್ದರಿಂದ ಅದು ಯೋಗ್ಯ ಅಧಿಕಾರಿಯನ್ನೂ, ಸತತವಾದ ಮತ್ತು ಸಮಗ್ರವಾದ ಪ್ರಯತ್ನವನ್ನೂ ಅಪೇಕ್ಷಿಸುತ್ತದೆ. ಆದ್ದರಿಂದಲೇ ಉಪನಿಷತ್ತುಗಳಲ್ಲಿ ಗುರು-ಶಿಷ್ಯ ಸಂಬಂಧವನ್ನೂ ಒತ್ತಿ ಹೇಳಲಾಗಿದೆ. ಈ ವಿಚಾರ ಮಾರ್ಗದಲ್ಲಿ ನಾಮ, ಜಪ, ಸತ್ಸಂಗಗಳು (ಪರೋಕ್ಷ) ಸಹಕಾರಿ ಸಾಧನಗಳಾಗಿರುತ್ತವೆ (Means to an end and not an end in itself). ಇಂಥ ಮಹತ್ವದ ಸಾಧನೆಗಳನ್ನು ವಿಧಿಸಿ, ಬೋಧಿಸಿ ಶ್ರುತಿಯು ನಮ್ಮನ್ನು ಸಂಪೂರ್ಣವಾಗಿ ಆಶೀರ್ವದಿಸಿ, ಕಾಪಾಡಿದೆ. ಅಧ್ಯಾತ್ಮ ಸಾಧಕರಿಗೆ, ಮೋಕ್ಷಾರ್ಥಿಗಳಿಗೆ ಅಂತಿಮ ಲಕ್ಷ್ಯದತ್ತ ಮುನ್ನಡೆಯಲು ಇದು ಅದಮ್ಯ ಬಲವನ್ನೂ, ಪ್ರೇರಣೆಯನ್ನೂ ಒದಗಿಸಿ, ಬೆಳಕಿನ ರಾಜಮಾರ್ಗದಲ್ಲಿ ಕರೆದೊಯ್ಯುತ್ತದೆ. ❖

# ಪುರಾಣಗಳಲ್ಲಿ ನಾಮ ಮಹಿಮೆ

ಹ.ರಾ.ನಾಗರಾಜಾಚಾರ್ಯ

**ಯಾವುದೇ ಧರ್ಮ ಸಮಾಜದ ಎಲ್ಲ ಸಮುದಾಯಗಳಲ್ಲೂ ವ್ಯಾಪಕವಾಗಿ ಹರಡಲು ಅತ್ಯಂತ ಪ್ರಭಾವಶಾಲಿಯಾಗಿ ಕೆಲಸ ಮಾಡುವ ಮಾಧ್ಯಮವೇ ಪುರಾಣಗಳು. ಭಕ್ತಿಯನ್ನು ಜನಸಾಮಾನ್ಯರ ಮನದಲ್ಲಿ ಮೂಡಿಸುವ ಕಾರ್ಯವನ್ನು ಮಾಡಿರುವ ನಮ್ಮ ಪುರಾಣಗಳಲ್ಲಿ ಭಗವನ್ನಾಮ ಮಹಿಮೆಯ ವರ್ಣನೆಯನ್ನು ಸಾಕಷ್ಟು ವಿಸ್ತಾರವಾಗಿಯೇ ಮಾಡಲಾಗಿದೆ. ಈ ವಿಷಯವನ್ನು ಕುರಿತು ಇಲ್ಲಿ ವಿವೇಚನೆ ನಡೆಸಿರುವ ಲೇಖಕರು ಸಂಸ್ಕೃತ ವಿದ್ವಾಂಸರು ಹಾಗೂ ಬೆಂಗಳೂರು ರಾಮಕೃಷ್ಣ ಮಠದ ಆತ್ಮೀಯ ಭಕ್ತರು. ಬೆಂಗಳೂರಿನ ಹರಿದಾಸ ಸಂಘದ ಅಧ್ಯಕ್ಷರಾಗಿರುವ ಅವರು ಕರ್ನಾಟಕ ಸರ್ಕಾರದಿಂದ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದಿರುತ್ತಾರೆ.**

**ಭ**ಗವಂತ ಮತ್ತು ಭಗವಂತನ ನಾಮಕ್ಕೆ ವ್ಯತ್ಯಾಸವಿಲ್ಲ. ಅದು ಅಭೇದ, ಅವನ ನಾಮವನ್ನು ಉಚ್ಚರಿಸುವ ವ್ಯಕ್ತಿಯ ಚಿತ್ತಕ್ಕೆ ಶಾಂತಿ ನೀಡಿ, ತೃಪ್ತಿ ನೀಡಿ, ಸಮಾಧಾನಗೊಳಿಸಿ ಆ ವ್ಯಕ್ತಿಯ ಅಂತಃಶಕ್ತಿಯನ್ನು ವೃದ್ಧಿಸುತ್ತದೆ.

ದೇವರೆಂದರೆ ಕೇವಲ ಒಂದು ವ್ಯಕ್ತಿಯಲ್ಲ , ಅನಂತ ಕಲ್ಯಾಣ ಗುಣದ ಸಮುಚ್ಚಯ. ಭಗವಂತನನ್ನು ಭಜಿಸುವುದೆಂದರೆ ಸದ್ಗುಣಗಳನ್ನು ಕೊಂಡಾಡುವುದೆಂದೇ ಅರ್ಥ. ಅವನ ಉತ್ತಮ ಗುಣಗಳನ್ನು ನೆನೆಯುತ್ತಾ, ಹೇಳುತ್ತಾ ಇರುವುದರಿಂದ ನಮ್ಮಲ್ಲಿ ಆ ಗುಣಗಳು ಮೂಡಿ ಅವು ನಮ್ಮಲ್ಲಿ ಅಭಿವ್ಯಕ್ತವಾಗುತ್ತದೆ, ನಮಗರಿವಿಲ್ಲದೇ ನಮ್ಮನ್ನು ಉತ್ತಮ ಚೇತನರನ್ನಾಗಿ ಪರಿವರ್ತಿಸುತ್ತದೆ, ಇದೇ **ನಾಮದ ಮಹಿಮೆ.** ಭಕ್ತಿಯಿಂದ ವ್ಯಕ್ತಿತ್ವದ ವಿಕಾಸವಾಗುವುದೇ ಹೊರತು ವ್ಯಕ್ತಿತ್ವದ ವಿನಾಶವಾಗದು. ಭಗವಂತನನ್ನು ಜನನ ಮರಣ ವಿದೂರ ಎಂದು ಭಜಿಸಿ ನಾವು ಜನನ ಮರಣದಿಂದ ದೂರವಾಗಬೇಕು, ಅವನು ಸಚ್ಚಿದಾನಂದನೆಂದು ನೆನೆದು ನಮ್ಮ ಸ್ವರೂಪಾನಂದ ಅರಿಯಬೇಕು. ಅವನೇ ನಮ್ಮ ಬಿಂಬ, ನಾವು ಅವನ ಪ್ರತಿಬಿಂಬವೆಂಬ ಅವಿನಾಭಾವ ಜಾಗೃತವಾಗಬೇಕು. ಅದೇ ನೈಜಭಕ್ತಿ. ದೇವರನ್ನು ಕೇವಲ ಪೂಜಿಸಿದರೆ ಸಾಲದು, ಅವನನ್ನು ಪ್ರೀತಿಸಬೇಕು, ಅದಕ್ಕೆ ಮಾಧ್ಯಮವೇ ಅವನ ನಾಮಗಳು. ಭಗವಂತನನ್ನು ಭಜಿಸಿದರೆ ಸಾಲದು, ಭಗವಂತನ ಬಂಟನಾಗಬೇಕೆಂಬುದೇ ಸನಾತನ ಸಂದೇಶ.

ನಮ್ಮ ಪುರಾಣಗಳು ಎಷ್ಟು ಪುರಾತನವೋ ಅಷ್ಟೇ ನಿತ್ಯನೂತನ, ಎಷ್ಟು ಹಳೆಯವೋ ಅಷ್ಟೇ ಹೊಸತು. ಯುಗಯುಗಕ್ಕೂ ಕಾಲ ಕಾಲಕ್ಕೂ ತನ್ನ ಸತ್ಯ ಸಂದೇಶ ನೀಡುತ್ತಲೇ ಇದೆ. ಯುಗದ ಮತ್ತು ಕಾಲದ ಪ್ರಭಾವದಿಂದ ತತ್ತರಿಸಿ ಹೋಗುತ್ತಿರುವ ಸಜೀವಿಗಳಿಗೆ ಪ್ರಸ್ತುತ ತಮ್ಮ ಸಾತ್ವಿಕತೆಯನ್ನು ಕಾಪಾಡಿಕೊಳ್ಳಲು ನೀಡಿದ ಸಂಜೀವಿನಿಯಂತಹ ಶ್ರೇಷ್ಠ ಸಂದೇಶ ಭಗವಂತನ 'ನಾಮ.' ನಾಮಮಹಿಮೆಯನ್ನು ನಮ್ಮ ಶ್ರೇಷ್ಠ ಪುರಾಣಗಳು ಅತ್ಯಂತ ಗೌರವದಿಂದ ಕೊಂಡಾಡಿವೆ. ಅದರಲ್ಲಿ ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ.

**ವಿಷ್ಣು ಪುರಾಣ:** ಭಗವಾನ್ ವೇದವ್ಯಾಸರು ತಮ್ಮ ಶಿಷ್ಯರಾದ ಋಷಿ ಮುನಿಗಳಿಗೆ ಗಂಗಾತಟದಲ್ಲಿ ಹೀಗೆ ಉಪದೇಶಿಸುತ್ತಾರೆ:

**ಯತ್ಕೃತೇ ದಶಭಿರ್ವರ್ಷೈಸ್ತ್ರೇತಾಯಾಂ ಹಾಯನೇನ ತತ್ ದ್ವಾಪರೇ ತಚ್ಚ ಮಾಸೇನ ಹ್ಯಹೋರಾತ್ರೇಣ ತತ್ಕಲೌ** *(ಷಷ್ಠಾಂಶ–೨ನೇ ಅಧ್ಯಾಯ)*



'ಎಲೈ ಋಷಿಗಳೇ ಕೃತಯುಗದಲ್ಲಿ ತಪಸ್ಸು , ಬ್ರಹ್ಮಚರ್ಯ, ಜಪ – ಮುಂತಾದವನ್ನು ಹತ್ತು ವರ್ಷಗಳವರೆಗೆ ಆಚರಿಸಿದರೆ ಯಾವ ಫಲವು ಪ್ರಾಪ್ತವಾಗುವುದೋ ಅದು ತ್ರೇತಾಯುಗದಲ್ಲಿ ಒಂದು ವರ್ಷ ಆಚರಿಸಿದರೆ ದೊರೆಯುತ್ತದೆ. ಆ ಫಲವು ದ್ವಾಪರ ಯುಗದಲ್ಲಿ ಒಂದು ತಿಂಗಳು ಆಚರಿಸಿದರೆ ಲಭಿಸುತ್ತದೆ. ಕಲಿಯುಗದಲ್ಲಿ ಕೇವಲ ಒಂದು ಅಹೋ ರಾತ್ರಿ ಭಗವದ್ ಚಿಂತನೆ ಮಾಡಿದರೆ ಅದೇ ಫಲವನ್ನು ಮನುಷ್ಯನು ಪಡೆಯುತ್ತಾನೆ.'

**ಧ್ಯಾಯನ್ ಕೃತೇ ಯಜನ್ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ॥**

''ಕೃತಯುಗದಲ್ಲಿ ಕೇಶವನನ್ನು ಧ್ಯಾನಿಸುವುದರಿಂದ, ತ್ರೇತಾಯುಗದಲ್ಲಿ ಯಜ್ಞಗಳಿಂದ, ದ್ವಾಪರಯುಗದಲ್ಲಿ ಅರ್ಚನೆಯಿಂದ ಲಭಿಸುವ ಪುಣ್ಯಫಲವನ್ನು ಕಲಿಯುಗದಲ್ಲಿ 'ನಾಮ' ಕೀರ್ತನೆ ಮಾತ್ರದಿಂದ ಮಾನವನು ಪಡೆಯುವನು.'' ಯಜ್ಞಾದಿಗಳಿಗೆ ಪ್ರಶಸ್ತವಾದ ದೇಶ, ಕಾಲ, ಶಕ್ತಿ ಪವಿತ್ರತೆ ಮುಂತಾದವು ಕಲಿಯುಗದಲ್ಲಿ ದುರ್ಲಭವಾಗಿರುವುದರಿಂದ ಭಗವನ್ನಾಮ ಸಂಕೀರ್ತನೆಯಿಂದಲೇ ಅನಾಯಾಸವಾಗಿ ಅವುಗಳ ಫಲವನ್ನು ಪಡೆದುಕೊಳ್ಳಬಹುದು.

ಪರಾಶರರು ಮೈತ್ರೇಯ ಋಷಿಗೆ –

**ಅತ್ಯಂತ ದುಷ್ಟಸ್ಯ ಕಲೇರಯಮೇಕೋ ಮಹಾನ್ ಗುಣಃ**
**ಕೀರ್ತನಾದೇವ ಕೃಷ್ಣಸ್ಯ ಮುಕ್ತ ಬಂಧಃ ಪರಂವ್ರಜೇತ್ ॥**

''ಕಲಿಯುಗವು ಅತ್ಯಂತ ದುಷ್ಟವಾದರೂ ಅದರಲ್ಲಿ ಮಹತ್ತರವಾದೊಂದು ಗುಣವಿದೆ. ಏನೆಂದರೆ ಶ್ರೀಕೃಷ್ಣನಾಮ ಕೀರ್ತನೆಯಿಂದಲೇ ಮನುಷ್ಯನು ಬಂಧ ಮುಕ್ತನಾಗಿ ಪರಮಪದವನ್ನು ಪಡೆಯುವನು.'' *(ತೃತೀಯಾಂಶ, ೭ನೇ ಅಧ್ಯಾಯ)*

ಪರಾಶರರು ಮೈತ್ರೇಯ ಋಷಿಗೆ ಯಮಧರ್ಮನು ತನ್ನ ಭಟನಿಗೆ ಆಜ್ಞಾಪಿಸಿದ ವಿಷಯವನ್ನು ತಿಳಿ ಹೇಳುತ್ತಾ '**ಕಮಲನಯನ ವಾಸುದೇವ ವಿಷ್ಣೋ ಧರಣೀಧರಾಚ್ಯುತ ಶಂಕಚಕ್ರಪಾಣೇ। ಭವ ಶರಣಮಿತೀರಯಂತಿ ಯೇ ವೈ ತ್ಯಜ್ಯಾ ಭಟ ದೂರತರೇಣ ತಾನ ಪಾಪಾನ್ ಸೋಽನ್ಯಲೋಕ್ಯಃ । ಕಿಂಕರಾಃ ಪಾಶದಣ್ಡಾಶ್ಚ ನ ಯಮೋ ನ ಚ ಯಾತನಾಃ ಸಮರ್ಥಾಸ್ತಸ್ಯ ಯಸ್ಯಾತ್ಮಾ ಕೇಶವಾಲಂಬನಸ್ಸದಾ ॥** ''ಎಲೈ ಭಟನೇ ಯಾರು 'ಹೇ ಕಮಲನಯನ, ವಾಸುದೇವ, ವಿಷ್ಣೋ ಧರಣೀಧರ, ಅಚ್ಯುತ, ಶಂಖ ಚಕ್ರ ಪಾಣಿಯೇ' ಎಂದು ಹೇಳುತ್ತಿರುವವರೋ ಅಂತಹ ಪುಣ್ಯಾತ್ಮರನ್ನು, ದೂರದಲ್ಲಿ ಬಿಟ್ಟು ಹೊರಟುಹೋಗು. ಆ ಪುರುಷಶ್ರೇಷ್ಠನು ವೈಕುಂಠಾದಿ ಲೋಕಗಳಿಗೆ ಹೋಗತಕ್ಕವನು, ಯಾವನು ನಿರಂತರವಾಗಿ ಭಗವಂತನ ನಾಮವನ್ನು ಸ್ಮರಿಸುತ್ತಿರುತ್ತಾನೋ ಆತನನ್ನು ಯಮ ಕಿಂಕರರಾಗಲಿ ಪಾಶದಂಡಗಳಾಗಲಿ ಯಮನಾಗಲಿ, ಯಮಯಾತನೆಗಳಾಗಲಿ ಏನೂ ಮಾಡಲಾರವು'' ಎನ್ನುತ್ತಾರೆ.

ಪರಾಶರರು ಮತ್ತೆ ವಿವರಿಸುತ್ತ,

**ಸ್ವಲ್ಪೇನ ಹಿ ಪ್ರಯತ್ನೇನ ಧರ್ಮಸ್ಸಿಧ್ಯತಿ ವೈ ಕಲೌ ।**
**ನರೈರಾತ್ಮಗುಣಾಂಭೋಭಿಃ ಕ್ಷಾಲಿತಾಖಿಲಕಿಲ್ಬಿಷೈಃ**

''ಕಲಿಯುಗದಲ್ಲಿ ಪರಮಾತ್ಮನ ನಾಮಸ್ಮರಣೆಯೆಂಬ ಜಲದಿಂದ ಮಾನವರು ಸಕಲ ಪಾಪಗಳನ್ನು ತೊಳೆದುಕೊಂಡು ಶುದ್ಧರಾಗಿ ಅತ್ಯಲ್ಪ ಪ್ರಯತ್ನದಿಂದಲೇ ಧರ್ಮವನ್ನು ಗಳಿಸುತ್ತಾರೆ.'' *(ಷಷ್ಠಾಂಶ ೨ನೇ ಅ.)*

ಭಾಗವತದಲ್ಲಿ ಯಮಧರ್ಮ ತನ್ನ ದೂತರಿಗೆ –

**ಪ್ರಾಯೇಣ ವೇದ ತದಿದಂ ನ ಮಹಾಜನೋಽಯಂ।**
**ದೇವ್ಯಾ ವಿಮೋಹಿತಮತಿರ್ಬತ ಮಾಯಯಾಲಮ್ ॥**
**ತ್ರಯ್ಯಾಂ ಜಡೀಕೃತಮತಿರ್ಮಧು ಪುಷ್ಪಿತಾಯಾಂ ।**
**ವೈತಾನಿಕೇ ಮಹತಿ ಕರ್ಮಣಿ ಯುಜ್ಯಮಾನಃ ॥**
**ಜಿಹ್ವಾ ನ ವಕ್ತಿ ಭಗವದ್ಗುಣ ನಾಮಧೇಯಂ ।**
**ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಮ್ ॥** *(೬.೩.೨೫-೨೯)*

– ಎನ್ನುತ್ತಾನೆ. ಇದರ ಅರ್ಥ, ''ಯಾರ ನಾಲಿಗೆಯು ಭಗವಂತನ ದಿವ್ಯವಾದ ಗುಣಗಳನ್ನು ಮತ್ತು ನಾಮಗಳನ್ನು ಉಚ್ಚರಿಸುವುದಿಲ್ಲವೋ ಅಂತಹ ಪಾಪಿಗಳನ್ನು ಮಾತ್ರ ನರಕಕ್ಕೆ ಕರೆತನ್ನಿರಿ. ದೊಡ್ಡ ದೊಡ್ಡ ವಿದ್ವಾಂಸರ ಮನಸ್ಸು ಕೆಲವೊಮ್ಮೆ ಭಗವಂತನ ಮಾಯೆಗೆ ಮರುಳಾಗಿಬಿಡುವುದು. ಆಶ್ಚರ್ಯವೆಂದರೆ ಪರಿಪಕ್ವವಾದ ಫಲದ ಕಡೆಗೆ ಮನಸ್ಸನ್ನು ಒಯ್ಯದೇ ಆಕರ್ಷಕವಾದ ಹೂವಿನಂತಿರುವ ವೇದವಾಣಿಯ ಮೋಹಕ್ಕೆ ಒಳಗಾಗಿ, ಅವರು ಯಜ್ಞ-ಯಾಗಾದಿ ರೂಪವಾದ ದೊಡ್ಡ ದೊಡ್ಡ ಕರ್ಮಗಳಲ್ಲಿಯೇ ಆಸಕ್ತರಾಗಿರುತ್ತಾರೆ. ಪರಮಫಲವನ್ನು ಕೊಡುವ ಅತ್ಯಂತ ಸುಗಮವಾಗಿರುವ ಈ ಭಗವನ್ನಾಮದ ಮಹಿಮೆಯ ಕಡೆಗೆ ಗಮನವನ್ನು ಕೊಡುವುದಿಲ್ಲ.''

ವಿದೇಹ ರಾಜನಾದ ನಿಮಿಗೆ ಕರಭಾಜನೆಂಬ ಋಷಿ ತಿಳಿಸಿದ್ದು –

**ಕಲಿಂ ಸಭಾಜಯಂತ್ಯಾರ್ಯಾ ಗುಣಜ್ಞಾಃ ಸಾರಭಾಗಿನಃ ।**
**ಯತ್ರ ಸಂಕೀರ್ತನೇನೈವ ಸರ್ವಃ ಸ್ವಾರ್ಥೋಽಭಿಲಭ್ಯತೇ॥**
**ನಹ್ಯತಃ ಪರಮೋ ಲಾಭೋ ದೇಹಿನಾಂ ಭ್ರಾಮ್ಯತಾಮಿಹ।**
**ಯತೋ ವಿಂದೇತ ಪರಮಾಂ ಶಾಂತಿಂ ನಶ್ಯತಿ ಸಂಸೃತಿಃ ॥**
**ಕೃತಾದಿಷು ಪ್ರಜಾ ರಾಜನ್ ಕಲಾವಿಚ್ಛಂತಿ ಸಂಭವಮ್।**
**ಕಲೌ ಖಲು ಭವಿಷ್ಯಂತಿ ನಾರಾಯಣ ಪರಾಯಣಃ ॥**

*(೧೧.೫.೩೬-೩೮)*

''ಗುಣಜ್ಞರೂ ಸಾರಗ್ರಾಹಿಗಳೂ ಆದ ಹಿರಿಯರು ನಾಲ್ಕು ಯುಗಗಳಲ್ಲಿ ಕಲಿಯುಗವನ್ನು ಹೆಚ್ಚಾಗಿ ಮನ್ನಿಸುತ್ತಾರೆ. ಏಕೆಂದರೆ ಕಲಿಯುಗದಲ್ಲಿ ಸರ್ವ ಜಾತಿಯವರೂ ಭಗವಂತನ ನಾಮ ಸಂಕೀರ್ತನದಿಂದಲೇ ಅಭೀಷ್ಟವನ್ನು ಪಡೆಯಬಲ್ಲರು, ಶಾಂತಿಯನ್ನು ಹೊಂದಬಲ್ಲರು. ಸಂಸಾರದಲ್ಲಿ ಅಲೆದಾಡುತ್ತಿರುವ ಜನರಿಗೆ ನಾಮ ಕೀರ್ತನಕ್ಕಿಂತ ಪರಮ ಲಾಭಕರವಾದದ್ದು ಇನ್ನೊಂದಿಲ್ಲ. ಕೃತಾದಿ ಯುಗಗಳಲ್ಲಿದ್ದ ಪ್ರಜೆಗಳು ಕಲಿಯುಗದಲ್ಲಿ ಹುಟ್ಟೋಣವೆಂದು ಆಶಿಸುತ್ತಾರೆ. ಅವರು ಕಲಿಯುಗದಲ್ಲಿ ಶ್ರೀಮನ್ ನಾರಾಯಣನ ಭಕ್ತರಾಗಿ ಅವನ ನಾಮ ಜಪಿಸುತ್ತಾ ಮುಕ್ತರಾಗುವರು.''

**ಸ್ವಪಾದಮೂಲಂ ಭಜತಃ ಪ್ರಿಯಸ್ಯ ತ್ಯಕ್ತಾನ್ಯಭಾವಸ್ಯ ಹರಿಃ ಪರೇಶಃ**
**ವಿಕರ್ಮ ಯಚ್ಚೋತ್ಪತಿತಂ ಕಥಂಚಿದ್ ಧುನೋತಿ ಸರ್ವಂ ಹೃದಿ ಸನ್ನಿವಿಷ್ಟಃ।**
*(೧೧.೫.೪೨)*

''ದೇಹಾದಿಯಾಗಿ ಅನ್ಯ ವಸ್ತುಗಳಲ್ಲಿ ಮೋಹವನ್ನು ತೊರೆದು ತನ್ನ ಪಾದಮೂಲವನ್ನೇ ಭಜಿಸತಕ್ಕ ಪ್ರಿಯನಾದ ಭಕ್ತನಲ್ಲಿ ಸರ್ವೋತ್ತಮನಾದ ಶ್ರೀಹರಿಯು ನೆಲೆಸಿರುತ್ತಾನೆ. ಒಂದು ವೇಳೆ ಆ ಭಕ್ತನು ಪ್ರಮಾದದಿಂದ ಯಾವುದಾದರೂ ನಿಷಿದ್ಧ ಕಾರ್ಯವನ್ನು ಮಾಡಿದರೂ ಎಣಿಸದೇ ಆ ದೋಷವನ್ನು ಪರಿಹರಿಸುತ್ತಾನೆ.''

ನಾರದರು ಮುಂದುವರಿದು –

**ವೈರೇಣ ಯಂ ನೃಪತಯಃ ಶಿಶಿಪಾಲ ಪೌಂಡ್ರ**
**ಶಾಲ್ವಾದಯೋ ಗತಿ-ವಿಲಾಸ-ವಿಲೋಕನಾದ್ಯೈಃ ।**
**ಧ್ಯಾಯಂತ ಆಕೃತಧಿಯಃ ಶಯನಾಸನಾದೌ**
**ತತ್ಸಾಮ್ಯ ಮಾಪುರನುರಕ್ತಧಿಯಾಂ ಪುನಃ ಕಿಮ್ ॥** *(೧೧.೫.೪೮)*

''ಮಲಗಿರುವಾಗಲೂ, ಕುಳಿತಾಗಲೂ, ವೈರ ಬುದ್ಧಿಯಿಂದ ಶ್ರೀಕೃಷ್ಣನನ್ನು ಸ್ತುತಿಸುತ್ತಿದ್ದ ಶಿಶುಪಾಲ, ಪೌಂಡ್ರ, ಸಾಲ್ವ ಮೊದಲಾದ ನೃಪಾಲರೇ ಅವನ ನಾಮ ಸ್ಮರಣೆಯಿಂದಾಗಿ ಸಾರೂಪ್ಯ ಮುಕ್ತಿಯನ್ನು ಹೊಂದಿದ್ದಾರೆ. ಇನ್ನು ಭಗವಂತನನ್ನು ಅನುರಕ್ತರಾಗಿ ಭಜಿಸಿದರೆ?''

ಶ್ರೀಕೃಷ್ಣ ಉದ್ಧವನಿಗೆ –

**ಜ್ಞಾತ್ವಾಜ್ಞಾತ್ವಾಥ ಯೇ ವೈ ಮಾಂ ಯಾವಾನ್ ಯಶ್ಚಾಸ್ಮಿ ಯಾದೃಶಃ ।**
**ಭಜಂತನನ್ಯ ಭಾವೇನ ತೇ ಮೇ ಭಕ್ತತಮಾ ಮತಾಃ ॥** *(೧೧.೧೧.೩೩)*

''ನನ್ನ ಮಹಿಮೆ, ಸ್ವರೂಪವನ್ನು ತಿಳಿಯಲಿ ತಿಳಿಯದಿರಲಿ ಯಾವನು ನನಗೆ ಶರಣಾಗಿ ನನ್ನನ್ನು ಅನನ್ಯ ಭಾವದಿಂದ ಭಜಿಸುತ್ತಾನೋ ಅವನೂ ನನ್ನ ಪರಮ ಭಕ್ತನೇ.''

ಸೂತ ಪುರಾಣಿಕರು ಶೌನಕಾದಿಗಳಿಗೆ –

**ತದಶ್ಮಸಾರಂ ಹೃದಯಂ ಬತೇದಂ।**
**ಯದ್ಗೃಹ್ಯಮಾಣೈ ಹರಿನಾಮಧೇಯೈಃ ॥**
**ನ ವಿಕ್ರಿಯೇತಾಥ ಯದಾವಿಕಾರೋ ।**
**ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥** *(೨.೩.೨೪)*

''ಶ್ರೀಹರಿಯ ದಿವ್ಯನಾಮಗಳ ಶ್ರವಣ, ಸಂಕೀರ್ತನೆಗಳು ನಡೆಯುತ್ತಿದ್ದರೂ ಯಾವನ ಹೃದಯವು ಕರಗುವುದಿಲ್ಲವೋ. ಅದರ ಪರಿಣಾಮವಾಗಿ ಕಣ್ಣುಗಳಲ್ಲಿ ಆನಂದ ಬಾಷ್ಪಗಳು ಒಸರುವುದಿಲ್ಲವೋ, ಹರ್ಷದ ರೋಮಾಂಚನ ಉಂಟಾಗುವುದಿಲ್ಲವೋ, ಅದು ವಾಸ್ತವವಾಗಿ ಹೃದಯವಲ್ಲ ಕಬ್ಬಿಣದ ತುಂಡೆಂದು ತಿಳಿಯಬೇಕು.''

ಶುಕ ಮಹರ್ಷಿಗಳು ಪರೀಕ್ಷಿತ ರಾಜನಿಗೆ –

**ಸಾಂಕೇತ್ಯಂ ಪಾರಿಹಾಸ್ಯಂ ವಾಸ್ತೋಭಂ ಹೇಲನಮೇವ ವಾ ।**
**ವೈಕುಂಠನಾಮಗ್ರಹಣಮಶೇಷಾಘಹರಂ ವಿದುಃ ॥**
**ಪತಿತಃ ಸ್ಖಲಿತೋ ಭಗ್ನಃ ಸಂದಷ್ಟಸ್ತಪ್ತ ಆಹತಃ ।**
**ಹರಿರಿತ್ಯವಿಶೇನಾಹ ಪುಮಾನ್ನಾರ್ಹತಿ ಯಾತನಾಮ್ ॥**

*(೬ನೇ ಸ್ಕಂಧ ಅ. ೨)*

''ಪರಿಹಾಸ್ಯಕ್ಕಾಗಲಿ, ರಾಗದ ಆಲಾಪನೆ ಮುಂತಾದವುಗಳನ್ನು ಪುಷ್ಟೀಕರಿಸಲಾಗಲಿ ಅಣಕಿಸುವುದಕ್ಕಾಗಲಿ ಯಾವುದೇ ಕಾರಣದಿಂದ ಉಚ್ಚರಿಸಿದರೂ ಭಗವಂತನ ನಾಮವು ಪಾಪವನ್ನು ತೊಲಗಿಸುತ್ತದೆ. ಮೇಲಿನಿಂದ ಬಿದ್ದ ಸಮಯ, ಕಾಲುಜಾರಿ ಎಡವಿದ ಸಮಯ, ಮೈಮುರಿಯುವ ಕಾಲ, ಬಿಸಿಲು–ಬೆಂಕಿ ಮುಂತಾದವುಗಳ ಕಾವು ತಟ್ಟಿದ ಸಮಯ, ಏಟು ಬಿದ್ದ ಸಮಯದಲ್ಲಾಗಲಿ ಯಾರೇ ಆದರೂ ತನ್ನ ಇಚ್ಛೆ ಪ್ರಯತ್ನಗಳಿಲ್ಲದೆ 'ಹರಿ' ಎಂದು ಉಚ್ಚರಿಸಿದರೂ ಸಾಕು ಆತನು ಯಮನ ಯಾತನೆಗೆ ಪಾತ್ರನಾಗುವುದಿಲ್ಲ.'' ತಿಳಿದೋ ಅಥವಾ ತಿಳಿಯದೆಯೋ ಹೇಗೆ ಹೊತ್ತಿಸಿದರೂ ಬೆಂಕಿ ಕಟ್ಟಿಗೆಯನ್ನು ಸುಟ್ಟುಹಾಕುವಂತೆ ಭಗವಂತನ ನಾಮವನ್ನು ತಿಳಿದೋ – ತಿಳಿಯದೆಯೋ ಹೇಗೆ ಉಚ್ಚಾರ ಮಾಡಿದರೂ ಅದು ಎಲ್ಲ ಪಾಪಗಳನ್ನು ನಾಶಪಡಿಸುವುದು. ಹೇಗೆ ಅಮೃತದ ಗುಣವೀರ್ಯಗಳನ್ನು ಅರಿಯದೇ ಸೇವಿಸಿದರೂ ಅದನ್ನು ಕುಡಿದವನನ್ನು ಅವಶ್ಯವಾಗಿ ಅದು ಅಮರನನ್ನಾಗಿಸುವುದಿಲ್ಲವೇ! ಹಾಗೆಯೇ ಅದರ ಮಹಿಮೆಗಳನ್ನು ತಿಳಿಯದೇ ಉಚ್ಚಾರ ಮಾಡಿದರೂ ಭಗವನ್ನಾಮವು ಅಘಗಳನ್ನು ನಿರ್ಮೂಲಗೊಳಿಸುವುದೆಂಬುದು ಸತ್ಯ.

**ನಾರಾಯಣಾಖಿಲ ಗುರೋ ಭಗವನ್ನಮಸ್ತೇ** *(ಸ್ಕಂಧ ೮ – ಅ. ೩)*

''ನಾರಾಯಣನೇ ಜಗದ್ಗುರುವೇ ಭಗವಂತನೇ ನಿನಗೆ ನಮೋ ನಮಃ!'' ಎಂದು ಮೊಸಳೆಯ ಬಾಯಿಗೆ ಸಿಕ್ಕಿಕೊಂಡ ಗಜೇಂದ್ರನು ಮಾಡಿದ ನಾಮೋಚ್ಚಾರಣೆಯಿಂದ ಆ ಸ್ಥಳಕ್ಕೆ ಧಾವಿಸಿದ ದಯಾಮಯನಾದ ನಾರಾಯಣನು ಗರುಡನಿಂದ ಥಟ್ಟನೆ ಕೆಳಗಿಳಿದು ತನ್ನ ಚಕ್ರಾಯುಧದಿಂದ ಮೊಸಳೆಯ ಬಾಯನ್ನು ಸೀಳಿಹಾಕಿ ಗಜರಾಜನನ್ನು ಮೊಸಳೆಯ ಹಿಡಿತದಿಂದ ಮುಕ್ತಗೊಳಿಸಿ ಸಂರಕ್ಷಿಸಿದ ಘಟನೆಯೇ ಇದಕ್ಕೆ ಸಾಕ್ಷಿ.

ಅತ್ಯಂತ ಭ್ರಷ್ಟನಾಗಿ ಅನಾಚಾರಿಯಾಗಿದ್ದರೂ ಕಡೇ ಘಳಿಗೆಯಲ್ಲಿ ದೈನ್ಯತೆಯಿಂದ ತನ್ನ ಮಗನನ್ನು ಕರೆಯುವ ಕಾರಣದಿಂದ ''ನಾರಾಯಣ'' ಎಂದ ಮಾತ್ರಕ್ಕೆ ಯಮಪಾಶದಿಂದ ಮುಕ್ತನಾದ ಅಜಾಮಿಳನ ವ್ಯಾಖ್ಯಾನ ಭಾಗವತದಲ್ಲೇ ಉಲ್ಲೇಖವಾಗಿದೆ. ಯಾರನ್ನೋ ಕರೆಯುವ ಉದ್ದೇಶದಿಂದ ಭಗವಂತನ ನಾಮ ಉಚ್ಚರಿಸಲ್ಪಟ್ಟರೂ ಆ ವ್ಯಕ್ತಿಯನ್ನೇ ಶುದ್ಧಿಗೊಳಿಸುವ ಪರುಷಮಣಿ ಆ ನಾಮದ ಮಹಿಮೆ.

ಶುಕ ಮಹರ್ಷಿಗಳು ಒತ್ತಿ ಹೇಳುತ್ತಾರೆ –

**ಕೃಷ್ಣೇತಿ ಮಂಗಲಂ ನಾಮ ಯಸ್ಯ ವಾಚೀ ಪ್ರವರ್ತತೇ ।**
**ಭಸ್ಮೀಭವನ್ತಿ ಸದ್ಯಸ್ತು ಮಹಾಪಾತಕ ಕೋಟಯಃ ॥**
**ಸರ್ವೇಷಾಮಪಿ ಯಜ್ಞಾನಾಂ ಲಕ್ಷಣಾನಿ ವ್ರತಾನಿ ಚ ।**
**ತೀರ್ಥಸ್ನಾನಾನಿ ಸರ್ವಾಣಿ ತಪಾಂಸ್ಯನಶನಾನಿ ಚ ॥**
**ವೇದಪಾಠ ಸಹಸ್ರಾಣಿ ಪ್ರಾದಕ್ಷಿಣ್ಯಂ ಭುವಃ ಶತಮ್ ।**
**ಕೃಷ್ಣನಾಮ ಜಪಸ್ಯಾಸ್ಯ ಕಲಾಂ ನಾರ್ಹನ್ತಿ ಷೋಡಶೀಮ್॥**

''ಯಜ್ಞ, ವ್ರತ, ತೀರ್ಥಸ್ನಾನ, ತಪಸ್ಸು, ನಿರಂತರ ವೇದಪಾರಾಯಣ, ಭೂಮಂಡಲ ಪ್ರದಕ್ಷಿಣೆ ಇವೆಲ್ಲಕ್ಕೂ ಸಿಗುವ ಪುಣ್ಯಕ್ಕಿಂತ ಮಿಗಿಲಾದ ಶಕ್ತಿ ಭಗವಂತನ ಮಂಗಲನಾಮಕ್ಕಿದೆ. ಅವನ ಮಂಗಲ ನಾಮವು ಯಾವನ ಬಾಯಿಂದ ಉಚ್ಚರಿಸಲ್ಪಡುತ್ತದೆಯೋ ಅವನ ಅನೇಕ ಜನ್ಮಗಳ ಬ್ರಹ್ಮಹತ್ಯಾದಿ ಮಹಾ ಪಾತಕಗಳೂ ತತ್ಕಾಲದಲ್ಲಿ ಸುಟ್ಟು ಭಸ್ಮವಾಗಿ ಬಿಡುತ್ತವೆ.''

ನಾರದರು ಧ್ರುವ ಕುಮಾರನಿಗೆ –

**ಜಪಶ್ಚ ಪರಮೋ ಗುಹ್ಯಃ ಶ್ರೂಯತಾಂ ಮೇ ನೃಪಾತ್ಮಜ।**
**ಯಂ ಸಪ್ತರಾತ್ರಂ ಪ್ರಪಠನ್ಪುಮಾನ್ಪಶ್ಯತಿ ಖೇಚರಾನ್ ॥**
**ಓಂ ನಮೋ ಭಗವತೇ ವಾಸುದೇವಾಯ ಮನ್ತ್ರೇಣಾನೇನ ದೇವಸ್ಯ।**

*(ಸ್ಕಂಧ–೪.೮.೫೩–೫೪)*

''ಭಗವಂತನ ಈ ಗುಹ್ಯವಾದ ನಾಮವನ್ನು ಆರು ರಾತ್ರಿಗಳವರೆಗೆ ಶುದ್ಧ ಮಸಸ್ಕನಾಗಿ ಜಪ ಮಾಡುವುದರಿಂದ ಮನುಷ್ಯನು ಆಕಾಶದಲ್ಲಿ ಸಂಚರಿಸುವ ಸಿದ್ಧರನ್ನು ಸಂದರ್ಶಿಸಲು ಸಾಧ್ಯವಾಗುವುದು. ''

ಈ ನಾಮದ ಮಹಿಮೆಯಿಂದ ಧ್ರುವಕುಮಾರ ಸಾಕ್ಷಾತ್ ಶ್ರೀಹರಿಯನ್ನೇ ಪ್ರತ್ಯಕ್ಷ ಮಾಡಿಕೊಂಡದ್ದು ಅವಿಸ್ಮರಣೀಯ.

ಸ್ಕಾಂದ ಪುರಾಣದಲ್ಲಿ ಸತಿದೇವಿ ತಂದೆ ದಕ್ಷ ಪ್ರಜಾಪತಿಗೆ –

**ಯದ್ದ್ವ್ಯಕ್ಷರಂ ನಾಮ ಗಿರೇರಿತಂ ನೃಣಾಂ ।**
**ಸಕೃತ್ಪ್ರಸಂಗಾದಘಮಾಶು ಹನ್ತಿತತ್** *(ಸ್ಕಂಧ ೪–ಅ.೪)*

''ಶಿವ ಎಂಬ ಎರಡು ಅಕ್ಷರಗಳ ನಾಮಧೇಯವು ಪ್ರಾಸಂಗಿಕವಾಗಿ ಒಂದು ಬಾರಿ ಬಾಯಿಂದ ಬಂದರೂ ಆ ಮನುಷ್ಯರ ಸಮಸ್ತ ಪಾಪಗಳೂ ಒಡನೆಯೇ ನಾಶ ಹೊಂದುತ್ತವೆ.''

ಲೋಮಶ ಮಹರ್ಷಿಗಳು ಶೌನಕಾದಿಗಳಿಗೆ –

**ಶಿವೇತಿ ದ್ವ್ಯಕ್ಷರಂ ನಾಮಯೈರ್ಹ್ಯದೀರಿತಮದ್ಯವೈ ।**
**ತೇ ವೈ ಮನುಷ್ಯರೂಪೇಣ ರುದ್ರಾ ಏವ ನ ಸಂಶಯಃ**
**ತೇ ಧನ್ಯಾಸ್ತೇ ಮಹಾತ್ಮಾನಃ ಕೃತಕೃತ್ಯಾಸ್ತಥೈವ ಚ ।**
**ದ್ವ್ಯಕ್ಷರಂ ನಾಮ ಯೇಷಾಂ ಚ ಜಿಹ್ವಾಗ್ರೇ ಸಂಸ್ಥಿತಂ ಸದಾ ॥**

*(ಅಧ್ಯಾಯ ೧೭)*

''ಶಿವ ಎಂಬ ಎರಡಕ್ಷರದ ಹೆಸರು ಯಾರ ಹೃದಯದಲ್ಲಿ ಹೇಳಿಕೊಳ್ಳಲ್ಪಡುತ್ತಿರುತ್ತದೆಯೋ ಅವರು ಮನುಷ್ಯ ರೂಪದಿಂದಿರುವ ರುದ್ರರೇ ಎಂಬುದರಲ್ಲಿ ಸಂಶಯವಿಲ್ಲ. ಯಾರ ನಾಲಿಗೆಯಲ್ಲಿ ಶಿವ ಎಂಬ ಎರಡಕ್ಷರದ ಹೆಸರು ಜಪಿಸಲ್ಪಡುತ್ತಿರುತ್ತದೆಯೋ ಅವರೇ ಧನ್ಯರು, ಅವರೇ ಮಹಾತ್ಮರೂ, ಅವರೇ ಕೃತಕೃತ್ಯರು.''

ಜೈಮಿನಿ ಮಹರ್ಷಿಗಳು –

**ಕೀರ್ತಯಂತೇ ಭಗವತೋ ನಾಮ ಕಲ್ಮಷನಾಶನಂ । ನಾರಾದಾದೀಂಶ್ಚ ಗಂಧರ್ವಾನ್ದಿವ್ಯಗಾನ-ಮನೋಹರಾನ್ ದತ್ತಾವಧಾನಂ ಶ್ರವಣೇ ಲೀಲಯೈವಾನುಕಂಪಿನಂ ॥** *(೬ ಅ.)*

''ಸಮಸ್ತ ಕಲ್ಮಶಗಳನ್ನು ನಾಶಗೊಳಿಸುವ ಶಕ್ತಿ ಭಗವನ್ನಾಮಕ್ಕಿದೆ. ನಾರದಾದಿ ಬ್ರಹ್ಮರ್ಷಿಗಳು ಹಾಗೂ ಗಂಧರ್ವರು ಮಾಡುತ್ತಿರುವ ದಿವ್ಯನಾಮ ಕೀರ್ತನೆಗಳನ್ನು ಸಂತೋಷದಿಂದ ಕಿವಿಗೊಟ್ಟು ಕೇಳುತ್ತಾ ಶ್ರೀ ಶ್ರೀನಿವಾಸನು ಅನುಗ್ರಹಿಸಿದನು. ಏಕೆಂದರೆ ಭಗವಂತ ಕೀರ್ತನಾಪ್ರಿಯನು.''

ಪುಂಡರೀಕನು ಗೋವಿಂದನಿಗೆ –

**ನಾರಾಯಣೇತಿ ತ್ವನ್ನಾಮ ಕೀರ್ತಿತಂ ತು ಯದೃಚ್ಛಯಾ ।**
**ತ್ವತ್ತೋಽಧಿಕಂ ಜಗನ್ನಾಥ ಚತುರ್ವರ್ಗೈಕ-ಸಾಧನಂ ॥**

''ಸ್ವಾಮಿಯೇ ಆಕಸ್ಮಿಕವಾಗಿ ಒಮ್ಮೆ ಮಾತ್ರ ನುಡಿದ ನಾರಾಯಣ ಎಂಬ ನಿನ್ನ ನಾಮವು ಧರ್ಮಾರ್ಥ ಕಾಮ, ಮೋಕ್ಷಗಳನ್ನು ಸಾಧಿಸುವುದರಲ್ಲಿ ನಿನಗಿಂತಲೂ ಅಧಿಕವಾದುದು.''

ಅಂಬರೀಷನು ಶ್ರೀನಿವಾಸನಿಗೆ –

**ದೇವ ತ್ವನ್ನಾಮ ಕೀರ್ತ್ಯಾಪಿ ಜಾಯಂತೇ ಸರ್ವಸಿದ್ಧಯಃ ।**
**ಕೌತುಕಾತ್ತ್ವಾಂ ಹಿ ಮೃಗ್ಯಂತಿ ವಿದ್ವಾಂಸೋ ಬುದ್ಧಿಶಾಲಿನಃ ॥**

''ದೇವ ! ನಿನ್ನ ನಾಮ ಸಂಕೀರ್ತನದಿಂದ ಸಕಲ ಸಿದ್ಧಿಗಳು ಉಂಟಾಗುತ್ತವೆ. ಆದರೆ ಜ್ಞಾನಿಗಳಾದ ಪಂಡಿತರು ಅಂತಹ ನಿನ್ನ ನಾಮ ಸ್ಮರಣೆಯನ್ನು ಮಾಡದೆ ಮೂಢರಾಗಿ ಕೌತುಕದಿಂದ ನಿನ್ನನ್ನು ಎಲ್ಲೆಲ್ಲಿಯೋ ಹುಡುಕುತ್ತಾರೆ.''

## ಗರುಡ ಪುರಾಣ

ನಾರಾಯಣನು ಗರುಡನಿಗೆ –

**ರೋಗಿಣೋಽಂತಿಕಮಾಸಾದ್ಯ ಶೋಚನೀಯಂ ನ ಬಾಂಧವೈಃ ।**
**ಸ್ಮರಣೀಯಂ ಪವಿತ್ರಂ ಮೇ ನಾಮಧೇಯಂ ॥**

*( ಅಧ್ಯಾಯ ೮ )*

''ರೋಗಿಯ ಕಾಲವು ಸಮೀಪಿಸಲು ಬಾಂಧವರು ಶೋಕಿಸಬಾರದು. ಆಗ ಪರಮಾತ್ಮನ ಪವಿತ್ರ ನಾಮಗಳನ್ನು ಉಚ್ಚರಿಸಬೇಕು.''

**ಹರಿರ್ಹರತಿ ಪಾಪಾನಿ ದುಷ್ಟ ಚಿತ್ತೈರಪಿ ಸ್ಮೃತಃ ।**
**ಅನಿಚ್ಛಯಾಪಿ ಸಸ್ಪೃಷ್ಟೋ ದಹತ್ಯೇವಹಿ ಪಾವಕಃ ॥**

''ತಿಳಿಯದೇ ಬೆಂಕಿಯನ್ನು ಮುಟ್ಟಿದರೂ ಅದು ಹೇಗೆ ಸುಡುವುದೋ ಅದರಂತೆ ದುಷ್ಟ ಚಿತ್ತದಿಂದಲಾದರೂ ಮಂಗಲನಾಮ ಸ್ಮರಿಸಿದರೆ ಶ್ರೀಹರಿಯು ಪಾಪಗಳನ್ನು ನಾಶಪಡಿಸುವನು.''

**ಹರೇರ್ನಾಮ್ನಶ್ಚ ಯಾ ಶಕ್ತಿಃ ಪಾಪನಿರ್ಹರಣೇ ದ್ವಿಜ ।**
**ತಾವತ್ಕರ್ತುಂ ಸಮರ್ಥೋ ನ ಪಾತಕಂ ಪಾತಕೀ ಜನಃ ।**

''ಹರಿನಾಮ ಶಕ್ತಿಯು ಪಾಪಗಳನ್ನು ನಿರ್ವಿಶೇಷ ಮಾಡುವುದರಲ್ಲಿ ಎಷ್ಟು ಪ್ರಬಲವೆಂದರೆ ಅಷ್ಟು ಪಾಪಗಳನ್ನು ಮಾಡಲು ಪಾಪಿಯು ಸಮರ್ಥನಾಗುವುದಿಲ್ಲ.''

**ಕೃಷ್ಣ ನಾಮ್ನಾ ನ ನರಕಂ ಪಶ್ಯಂತಿ ಗತಕಿಲ್ಬಿಷಾಃ ।**
**ಯಮಂ ಚ ತದ್ಭಟಾಂಶ್ಚೈವ ಸ್ವಪ್ನೇಽಪಿ ನ ಕದಾಚನ ।**

''ಶ್ರೀಕೃಷ್ಣ ನಾಮೋಚ್ಚಾರಣೆಯಿಂದ ಪಾಪರಹಿತರಾದ ಭಕ್ತರು ನರಕವನ್ನೇ ನೋಡುವುದಿಲ್ಲ. ಮತ್ತು ಯಮರಾಜನನ್ನಾಗಲಿ ಯಮದೂತರನ್ನಾಗಲಿ ಸ್ವಪ್ನದಲ್ಲಿಯೂ ಕಾಣಲಾರರೆಂದ ಮೇಲೆ ಪ್ರತ್ಯಕ್ಷ ಹೇಗೆ ನೋಡಿಯಾರು?''

**ಕಿಂಕರೇಭ್ಯೋ ಯಮಃ ಪ್ರಾಹಾನಯಧ್ವಂ ನಾಸ್ತಿಕಂ ಜನಮ್।**
**ನೈವಾನಯತ ಭೋ ದೂತಾ ಹರಿರ್ನಾಮಸ್ಮರನ್ ನರಮ್**

''ಎಲೈ ದೂತರೇ ಜಗತ್ತಿನಲ್ಲಿದ್ದ ನಾಸ್ತಿಕರನ್ನು ಮಾತ್ರ ಯಮಲೋಕಕ್ಕೆ ತನ್ನಿರಿ, ಆದರೆ ಹರಿನಾಮವನ್ನು ಉಚ್ಚರಿಸುವವರನ್ನು ಎಂದಿಗೂ ತರಬೇಡಿರಿ ಎಂದು ಯಮನು ತನ್ನ ದೂತರಿಗೆ ಹೇಳಿದ್ದಾನೆ.''

## ಭವಿಷ್ಯೋತ್ತರ ಪುರಾಣ

ಶ್ರೀನಿವಾಸ ತೋಂಡಮಾನರಾಜನಿಗೆ –

**ನಮಃ ಶ್ರೀ ವೇಂಕಟೇಶಾಯ ನಮೋ ಬ್ರಹ್ಮೋದರಾಯಚ ।**
**ನಮೋ ನಾಥಾಯ ಕಾಂತಾಯ ರಮಾಯಾಃ ಪುಣ್ಯಮೂರ್ತಯೇ॥**
**ಇತಿ ಸ್ತುತ್ವಾ ಶ್ರೀನಿವಾಸಂ ಕಮನೀಯ-ಕಲೇವರಮ್ ।**
**ಸಂತುಷ್ಟಃ ಪ್ರಾಹ ಗೋವಿಂದಃ ಶ್ರೀಮಂತಂ ರಾಜಸತ್ತಮಮ್ ।**
**ರಾಜನ್ಮೇ ಮಂಗಲಂ ಸ್ತೋತ್ರಂ ಕೃತಂ ಪರಮ ಪಾವನಮ್ ।**
**ತೇಷಾಂ ತು ಮಮ ಸಾಲೋಕ್ಯಂ ಭವಿಷ್ಯತಿ ನ ಸಂಶಯಃ ॥**

*(೧೪ನೇ ಅ.)*

''ರಾಜನೇ ನೀನು ಮಾಡಿದ ಮಂಗಲಕರವಾದ ನನ್ನ ನಾಮದ ಸ್ತುತಿಯನ್ನು ಕೇಳಿ ಆನಂದವಾಯಿತು. ಯಾರು ಈ ನಾಮಗಳಿಂದ ನನ್ನನ್ನು ಉಪಾಸಿಸುವರೋ ಅವರಿಗೆ ಸಾಲೋಕ್ಯವೆಂಬ ನನ್ನ ಲೋಕದಲ್ಲಿ ವಾಸ ಮಾಡುವ ಮುಕ್ತಿ ದೊರೆಯುವುದರಲ್ಲಿ ಸಂಶಯವೇ ಇಲ್ಲ.''

ಮಹಾಭಾರತದಲ್ಲಿ ಪರಾಶರರು ಜನಕರಾಜನಿಗೆ –

**ಏತೇ ಮಹರ್ಷಯಃ ಸ್ತುತ್ವಾ**
**ವಿಷ್ಣುಮೃಗ್ಭಿಃ ಸಮಾಹಿತಾಃ।**
**ಅನರ್ಹಾಶ್ಚಾರ್ಹತಾಂ ಪ್ರಾಪ್ತಾಃ**
**ಸಂತ ಸ್ತುತ್ವಾ ತಮೇವ ಹ ॥** *(ಶಾಂತಿಪರ್ವ)*

''ಗೌರವಕ್ಕೆ ಅನರ್ಹರಾದವರು ಕೂಡ ಪರಮ ಕಾರುಣಿಕನಾದ ಶ್ರೀಹರಿಯ ನಾಮವನ್ನು ಜಪಿಸಿ ಸಂತರು ಪೂಜನೀಯರಾದರು.''

**ಗೋವಿಂದ ದ್ವಾರಕಾವಾಸಿನ್**
**ಕೃಷ್ಣ ಗೋಪೀಜನಪ್ರಿಯ ।**
**ಹೇ ನಾಥ ಹೇ ರಮಾನಾಥ**
**ವ್ರಜನಾಥಾರ್ತಿನಾಶನ ॥** *(ಸಭಾಪರ್ವ)*

ತುಂಬಿದ ಕುರುಸಭೆಯಲ್ಲಿ ಅವಮಾನಕ್ಕೊಳಗಾದ ಅನಾಥಳಾಗಿದ್ದ, ದಿಕ್ಕುಕಾಣದ ಸಾಧ್ವಿಮಣಿ ದ್ರೌಪದಿಗೆ ಭಗವಂತನಾದ

ಶ್ರೀಕೃಷ್ಣನು ಸ್ಮೃತಿಪಥದಲ್ಲಿ ಕಂಗೊಳಿಸಿದನು. ಒಡನೆಯೇ ಅನನ್ಯ ಮನಸ್ಕಳಾಗಿ, ಶರಣಾಗತಳಾಗಿ ಅವನ ನಾಮೋಚ್ಚಾರಣೆಯಿಂದ ಪ್ರಾರ್ಥಿಸಿದಾಗ ಸರ್ವೋತ್ತಮನಾದ ಗೋವಿಂದನು ಅಲ್ಲಿ ಎಲ್ಲರಿಗೂ ಅದೃಶ್ಯನಾಗಿದ್ದು, ದ್ರೌಪದಿಗೆ ಅಕ್ಷಯಾಂಬರವನಿತ್ತು ಮಾನ ಸಂರಕ್ಷಿಸಿದುದು ಅವನ ನಾಮದಲ್ಲಿರುವ ಆಕರ್ಷಣ ಶಕ್ತಿಯ ದ್ಯೋತಕ.

ದುರ್ಗೆ ಯುಧಿಷ್ಠಿರನಿಗೆ ಹೇಳುತ್ತಾಳೆ –

**ಯೇ ಚ ಸಂಕೀರ್ತಯಿಷ್ಯನ್ತಿ ಲೋಕೇ ವಿಗತಕಲ್ಮಷಾಃ ।**
**ತೇಷಾಂ ತುಷ್ಟಾ ಪ್ರದಾಸ್ಯಾಮಿ ರಾಜ್ಯಮಾಯುರ್ವಪುಃ ಸುತಮ್ ।**
**ಯೇ ಸ್ಮರಿಷ್ಯನ್ತಿ ಮಾಂ ರಾಜನ್ಯಥಾಹಂ ಭವತಾ ಸ್ಮೃತಾ ।**
**ನ ತೇಷಾಂ ದುರ್ಲಭಂ ಕಿಂಚಿದಸ್ಮಿನ್ಲೋಕೇ ಭವಿಷ್ಯತಿ॥** *(ವಿರಾಟ ಪರ್ವ)*

''ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಯಾರು ಸ್ತುತಿ ಮಾಡುತ್ತಾರೋ ಅವರ ವಿಷಯದಲ್ಲಿ ನಾನು ಸಂತುಷ್ಟಳಾಗಿ ಅವರಿಗೆ ಆಯುಷ್ಯ, ಆರೋಗ್ಯ, ಸಂಪತ್ತನ್ನು ದಯಪಾಲಿಸುತ್ತೇನೆ. ಈ ಲೋಕದಲ್ಲಿ ಅವರಿಗೆ ದುರ್ಲಭವಾದುದು ಯಾವುದೂ ಇರುವುದೇ ಇಲ್ಲ, ನನ್ನ ನಾಮ ಸ್ಮರಿಸುವವರಿಗೆ ಸಕಲ ಸಿದ್ಧಿಯನ್ನು ದೊರಕಿಸಿಕೊಟ್ಟು ರಕ್ಷಿಸುತ್ತೇನೆ.''

**ಅಂತ ಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ।**
**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥** *(ಗೀತೆ, ಅ.೮)*

''ಯಾರು ಅಂತ್ಯಕಾಲದಲ್ಲಿ ನನ್ನ ನಾಮವನ್ನು ಸ್ಮರಿಸುತ್ತಾ ದೇಹತ್ಯಾಗ ಮಾಡುವನೋ ಅವನು ಮುಕ್ತನಾಗಿ ನನ್ನ ಸಾರೂಪ್ಯ ಪಡೆಯುವುದರಲ್ಲಿ ಯಾವ ಸಂಶಯವೂ ಇಲ್ಲ, ಆದರೆ ಕೇವಲ ನನ್ನನ್ನು ನಿರಂತರ ಸ್ಮರಿಸುವ ಭಕ್ತನಿಗೆ ಮಾತ್ರ ನಾನು ಅಂತ್ಯಕಾಲದಲ್ಲಿ ಸುಲಭವಾಗಿ ನನ್ನ ಸ್ಮರಣೆಯುಂಟಾಗುವಂತೆ ಮಾಡುತ್ತೇನೆ. ಅಂಥವನಿಗೆ ನಾನು ಸುಲಭ ಪ್ರಾಪ್ತನು.''

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಮ್ ಯೋಗಕ್ಷೇಮಂ ವಹಾಮ್ಯಹಮ್॥**
*(ಗೀತೆ, ೯ನೇ ಅಧ್ಯಾಯ)*

''ಯಾರು ದೃಢಭಕ್ತಿಯಿಂದ ಸದಾ ನನ್ನನ್ನು ಕೀರ್ತಿಸುತ್ತಾ ನನ್ನ ಪ್ರಾಪ್ತಿಗಾಗಿ ಹಂಬಲಿಸುವರೋ, ಇನ್ನಿತರ ವಿಷಯಗಳಲ್ಲಿ ಆಸಕ್ತರಾಗದೆ ನನ್ನನ್ನೇ ಚಿಂತನೆ ಮಾಡುತ್ತಾರೋ ಅವರ ಯೋಗಕ್ಷೇಮವನ್ನು ನಾನೇ ವಹಿಸಿಕೊಳ್ಳುತ್ತೇನೆ.''

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸಮಂತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ॥** *(ಗೀತೆ, ಅ.೯)*

''ಎಷ್ಟೇ ಕೆಟ್ಟ ಮನುಷ್ಯನಾದರೂ ಸಹ ಸಕಲ ವಿಕಲ್ಪಗಳನ್ನು ತ್ಯಜಿಸಿ ನನ್ನನ್ನೇ ಭಜಿಸಿದರೆ ಅವನು ನಿಜಕ್ಕೂ ಧನ್ಯ. ಅವನನ್ನು ಸಾಧುವೆಂದು ತಿಳಿಯಬೇಕು. ನನ್ನ ಭಕ್ತರು ದುರಾಚಾರಿಗಳಾದರೂ ನನ್ನ ನಾಮಸ್ಮರಣೆಯಿಂದ ಶುದ್ಧರಾದ ಅವರಿಗೆ ಶಾಂತಿ ಸುಖ ದೊರೆಯುವುದು.''

**ತೇಷಾಂ ಸತತಯುಕ್ತಾನಾಮ್ ಭಜತಾಂ ಪ್ರೀತಿಪೂರ್ವಕಂ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥**
*(ಗೀತೆ, ಅಧ್ಯಾಯ ೧೦)*

''ಯಾರು ಸತತವಾಗಿ ನನ್ನನ್ನು ಪ್ರೀತಿಯಿಂದ ಭಜಿಸುತ್ತಾರೋ ಅವರಿಗೆ ಮುಕ್ತಿಯನ್ನು ಪಡೆಯುವ ಜ್ಞಾನವನ್ನು ನಾನೇ ದಯಪಾಲಿಸಿ ಅನುಗ್ರಹಿಸುತ್ತೇನೆ.''

## ವಾಲ್ಮೀಕಿ ರಾಮಾಯಣ

**ತತೋ ದೇವರ್ಷಿಃ ಗಂಧರ್ವಾಃ ಸರುದ್ರಾಃ ಸಾಪ್ಸರೋಗಣಾಃ ।**
**ಸ್ತುತಿಭಿರ್ದಿವ್ಯರೂಪಾಭಿಸ್ತುಷ್ಟುವುರ್ಮಧುಸೂದನಮ್ ॥** *(ಬಾಲ.)*

''ದೇವರ್ಷಿಗಳು, ಗಂಧರ್ವರೂ, ಏಕಾದಶರುದ್ರರೂ, ಅಪ್ಸರಸ್ತ್ರೀಯರೂ ಶ್ರೀಮನ್ನಾರಾಯಣನ ದಿವ್ಯನಾಮವನ್ನು ಸ್ತುತಿಸಲು ಸಂತುಷ್ಟನಾದ ಶ್ರೀಹರಿಯು ಅವರ ರಕ್ಷಣೆಗಾಗಿ ಮಾನವನಾಗಿ ಅವತರಿಸಲು ನಿಶ್ಚಯಿಸಿದನು.''

**ರಾಮೋನಾಮ ವಿಶೇಷಜ್ಞಃ ಶ್ರೇಷ್ಠಃ ಸರ್ವಧನುಷ್ಮತಾಮ್ ।**
**ಸ್ವಯಂ ಪ್ರಹರ್ಷಂ ಪರಮಂ ಜಗಾಮ ಸರ್ವಾತ್ಮನಾ**
**ರಾಮಮನುಸ್ಮರಂತೀ** *(ಸುಂದರ ಕಾಂಡ, ೬)*

''ನೂರು ಯೋಜನ ಸಮುದ್ರೋಲ್ಲಂಘನ ಮಾಡಿ ಸೀತಾನ್ವೇಷಣೆಯಲ್ಲಿ ಆತಂಕ ಪಟ್ಟಿದ್ದ ಆಂಜನೇಯನಿಗೆ ಸೀತೆಯ ಸನ್ನಿಧಾನದಲ್ಲಿ ರಾಮನಾಮ ಸ್ಮರಿಸುತ್ತಲೇ ಸ್ಫೂರ್ತಿ ಪಡೆದ, ಅವನಲ್ಲಿ ವಿಶೇಷ ಉತ್ಸಾಹ ಮೂಡಿ ಬಂದು ಪರಮ ಹರ್ಷಿತನಾದ.''

**ರಾಮೇತಿ ರಾಮೇತಿ ಸದೈವ ಬುದ್ಧ್ಯಾ**
**ವಿಚಿಂತ್ಯ ವಾಚಾ ಬ್ರುವತೀ ತಮೇವ ।**
**ಸಾ ತಸ್ಯ ವಚನಂ ಶ್ರುತ್ವಾ ರಾಮಕೀರ್ತನ ಹರ್ಷಿತಾ ।**
**ಉವಾಚ ವಾಕ್ಯಂ ವೈದೇಹೀ ಹನುಮಂತಂ ದ್ರುಮಾಶ್ರಿತಮ್ ॥**
*(ಸುಂದರಕಾಂಡ)*

''ಲಂಕೆಯ ಅಶೋಕವನದಲ್ಲಿ ಕಳೆದ ಹತ್ತು ತಿಂಗಳಿನಿಂದ ಅನಾಥಳಾಗಿ ದೈನ್ಯತೆಯಿಂದ ದುಃಖಿತಪ್ತಳಾಗಿದ್ದ ಸೀತಾಮಾತೆ ಶ್ರೀರಾಮನ ದಿವ್ಯನಾಮವನ್ನು ಕೇಳಿದ ಕೂಡಲೆ ಆನಂದದಿಂದ ಚೈತನ್ಯಭರಿತಳಾದಳು.''

**ರಾಮೋಧಿಪಿ ಮುನಿಭಿಃ ಸಾರ್ಧಂ ಪಾರ್ಥಿವೈಶ್ಚ ಮಹಾತ್ಮಭಿಃ ।**
**ಶ್ರುತ್ವಾ ತದ್ಗೀತ ಮಾಧುರ್ಯಂ ಪರಿಗೀಯ ಮಾನಮ್ ಶುಶ್ರಾವ**
**ತತ್ತಾಲ ಲಯೋಪಪನ್ನಂ ಸರ್ಗಾನ್ವಿತಂ ಸುಸ್ವರ ಶಬ್ದಯುಕ್ತಮ್ ॥**

''ತನ್ನ ಚರಿತೆಯ ನಾಮಸಂಕೀರ್ತನೆಯನ್ನು ತಾಳಬದ್ಧವಾಗಿ ಸುಶ್ರಾವ್ಯವಾಗಿ ಭಕ್ತಿಯಿಂದ ಹಾಡುತ್ತಿದ್ದ ಲವಕುಶರಿಂದ ಸ್ವತಃ ಶ್ರೀರಾಮಚಂದ್ರಪ್ರಭುವೇ ಋಷಿಮುನಿ, ವಾನರ ಸಮೇತನಾಗಿ ಬಹಳ ದಿನಗಳವರೆಗೆ ತನ್ಮಯತೆಯಿಂದ ಕೇಳಿ ಪುಲಕಿತನಾದ ಭಗವಂತನನ್ನೇ ಅವನ ದಿವ್ಯನಾಮ ಆಕರ್ಷಿಸುತ್ತದೆ.''

ಬ್ರಹ್ಮದೇವರು ಶ್ರೀರಾಮನಿಗೆ–

**ಭಕ್ತಾ ಹಿ ಭಜಿತವ್ಯಾಶ್ಚ ತ್ಯಕ್ತಾತ್ಮಾನಶ್ಚ ತತ್ಕೃತೇ।**
**ಲೋಕಾನ್ ಸಾಂತಾನಿಕಾನ್ನಾಮ ಯಾಸ್ಯಂತಿಮೇ ಸಮಾಗತಾಃ ॥**
*(ಉತ್ತರಕಾಂಡ)*

''ಯಾರು ಭಕ್ತಿಯಿಂದ ನಿನ್ನನ್ನೇ ಭಜಿಸುತ್ತ ಪ್ರಾಣವನ್ನು ತ್ಯಜಿಸುವರೋ ಅವರು ಬ್ರಹ್ಮಲೋಕದ ಸಮೀಪವಿರುವ ಸಾಂತಾನಿಕ ಲೋಕದಲ್ಲಿ ನೆಲೆಸಿ ಆನಂದಿಸುವರು.''

ಫಲಶ್ರುತಿಯಲ್ಲಿ ವಾಲ್ಮೀಕಿ ಮಹರ್ಷಿಗಳು –

**ಚಿಂತಯೇದ್ರಾಘವಂ ನಿತ್ಯಂ ಶ್ರೇಯಃ ಪ್ರಾಪ್ತುಂ ಯ ಇಚ್ಛತಿ ।**

''ತಮ್ಮ ಜೀವಿತದಲ್ಲಿ ಯಾರು ಶ್ರೇಯಸ್ಸನ್ನು ಬಯಸುವರೋ ಅವರು ನಿತ್ಯ ನಿರಂತರ ರಾಮನಾಮ ಭಜಿಸಬೇಕು. ''

**ನ ದೇಶಕಾಲನಿಯಮಃ ಶೌಚಾಶೌಚವಿನಿರ್ಣಯಃ ।**
**ಪರಂ ಸಂಕೀರ್ತನಾದೇವ ರಾಮ ರಾಮೇತಿ ಮುಚ್ಯತೇ ॥**

''ರಾಮ ನಾಮ ಜಪಿಸಲು ದೇಶ, ಕಾಲ, ನಿಯಮ, ಅಶೌಚ ಇದಾವುದೂ ಆತಂಕವಲ್ಲ. ವರ್ಣಾಶ್ರಮ ಲಿಂಗಾದಿ ನಿಯಮಗಳೂ ಇಲ್ಲ, ರಾಮನಾಮದ ಉಚ್ಚಾರಣೆಯೇ ಅವನನ್ನು ಶುದ್ಧಗೊಳಿಸಿ ಬಿಡುತ್ತದೆ ಎಂಬುದು ಋಷಿ ವಾಕ್ಯ.''

ಇದಕ್ಕೆ ಪೂರಕವಾದ ಇನ್ನೊಂದು ಪ್ರಚಲಿತವಾದ ವಾಕ್ಯ–

**ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋಽಪಿವಾ ।**
**ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥**

''ವ್ಯಕ್ತಿ ತಾನು ಎಷ್ಟೇ ಅಪವಿತ್ರ ಸ್ಥಿತಿಯಲ್ಲಿದ್ದರೂ ಭಗವಂತನ ನಾಮ ಸ್ಮರಿಸಿದ ಕೂಡಲೇ ತ್ರಿಕರಣ ಶುದ್ಧಿಯನ್ನು ಹೊಂದುತ್ತಾನೆ. ಭಗವಂತನ ನಾಮ ಎಷ್ಟು ಸರಳವೆಂದರೆ ''ನಾರಾಯಣ'' ಎಂಬ ಹೆಸರಿನ ಪದಗಳೇ ಪಾಪಶುದ್ಧಿಗೆ ಸಾಕು. ಆ ಪದಗೊಳಡನೆ 'ನಮಃ' 'ಭಜಾಮಿ' ಇತ್ಯಾದಿ ಕ್ರಿಯಾಪದಗಳನ್ನು ಜೋಡಿಸುವ ಆವಶ್ಯಕತೆಯೂ ಇಲ್ಲ.

**ಆಶ್ಚರ್ಯೇ ವಾ ಭಯೇ ಶೋಕೇ ಕ್ಷತೇ ವಾ ಮಮ ನಾಮ ಯಃ ।**
**ವ್ಯಾಜೇನ ವಾ ಸ್ಮರೇದ್ಯಸ್ತು ಸ ಯಾತಿ ಪರಮಾಂ ಗತಿಮ್ ॥**

*(ಪದ್ಮ ಪುರಾಣ)*

''ಭಗವನ್ನಾಮದ ಕೀರ್ತನೆಯಿಂದ ಮಾತ್ರವಲ್ಲದೇ ಶ್ರವಣ ಸ್ಮರಣಗಳಿಂದಲೂ ಅದೇ ಮಹಾಫಲವು ದೊರೆಯುವುದು. ''ಏಕದಾಪಿ ಸಕೃದುಚ್ಚರಿತಂ'' ಎಂಬಂತೆ ದಿವ್ಯನಾಮವನ್ನು ಒಂದು ಬಾರಿ ಉಚ್ಚರಿಸಿದರೂ ಪಾಪ ಪರಿಹಾರವಾಗುವುದು. ಹೀಗಿರುವಾಗ ಮತ್ತೆ ಮತ್ತೆ ನಾಮಸಂಕೀರ್ತನೆಯನ್ನು ಏಕೆ ಮಾಡಬೇಕೆಂದರೆ, ಮುಂದೆ ಪಾಪಗಳು ಉಂಟಾಗದಿರಲೆಂದು.''

**ವರ್ತಮಾನಂ ಚ ಯತ್ಪಾಪಂ ಯದ್ ಭೂತಂ ಯದ್ಭವಿಷ್ಯತಿ ।**
**ತತ್ಸರ್ವಂ ನಿರ್ದಹತ್ಯಾಶು ಗೋವಿಂದಾಮಲ ಕೀರ್ತನಮ್॥**

''ಸ್ವಾಮಿಯ ನಾಮವನ್ನು ಉಚ್ಚರಿಸುವುದರಿಂದ ಮೂರೂ ಕಾಲಗಳ ಎಲ್ಲ ಪಾಪಗಳು ತೊಳೆದು ಹೋಗುವುವು.''

ಅಗಸ್ತ್ಯ ಮಹರ್ಷಿಗಳ ನುಡಿ –

**ನಾರಾಯಣೋ ನಾಮ ನರೋ ನರಾಣಾಂ**
**ಪ್ರಸಿದ್ಧ ಚೋರಃ ಕಥಿತಃ ಪೃಥಿವ್ಯಾಂ**
**ಅನೇಕ ಜನ್ಮಾರ್ಜಿತ ಪಾಪ ಸಂಚಯಂ**
**ಹರತ್ಯಶೇಷಃ ಸ್ಮೃತಮಾತ್ರ ಏವ ॥**

''ನಾರಾಯಣನೆಂದು ಕರೆಯಲ್ಪಡುವವನು ಭೂಲೋಕದಲ್ಲಿ ಹೆಸರುವಾಸಿಯಾದ ಕಳ್ಳನೆಂದು ಜ್ಞಾನಿಗಳು ಹೇಳುತ್ತಾರೆ. ಏಕೆಂದರೆ ಜನರು ಅನೇಕ ಜನ್ಮಗಳಲ್ಲಿ ಸಂಗ್ರಹಿಸಿದ ಪಾಪರಾಶಿಯನ್ನು ಕೇವಲ ಅವನ ಸ್ಮರಣೆಯಿಂದಲೇ ಸಂಪೂರ್ಣವಾಗಿ ಅಪಹರಿಸುತ್ತಾನೆ. (ನಾಶ ಮಾಡುತ್ತಾನೆ.)''

**ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ ।**
**ಪುಮಾನ್ವಿಮುಚ್ಯತೇ ಸದ್ಯಃ ಸಿಂಹತ್ರಸ್ತಮೃಗೈರಿವ ॥**

''ಸಿಂಹಗರ್ಜನೆಗೆ ಹೆದರಿ ಮೃಗಗಳು ಓಡಿ ಹೋಗುವಂತೆ ತಿಳಿದೋ ತಿಳಿಯದೆಯೋ ಹರಿನಾಮ ಸಂಕೀರ್ತನೆ ಮಾಡಲು ಮಾನವರ ಪಾಪರಾಶಿಗಳು ಓಡಿ ಹೋಗುವುವು.''

ಬ್ರಹ್ಮದೇವರ ನುಡಿ –

**ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।**
**ತಥಾಽಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್॥**

''ನರಕವನ್ನು ತಪ್ಪಿಸುವ ಜಪಿಸಲು ಸುಲಭವಾದ ನಾರಾಯಣ ಮಂತ್ರವಿದೆ. ನಾಲಿಗೆ ನಮ್ಮ ಅಧೀನದಲ್ಲಿದೆ ಹೀಗಿದ್ದರೂ ಜನರು ಪವಿತ್ರನಾಮ ಜಪಿಸದೇ ಅತಿ ದುಸ್ಸಹವಾದ ನರಕದಲ್ಲಿ ಬೀಳುವುದೆಂತ ಆಶ್ಚರ್ಯ!''

ಭಗವಾನ್ ವೇದವ್ಯಾಸರ ನುಡಿ –

**ಅಚ್ಯುತಾನಂತ ಗೋವಿಂದ ನಾಮೋಚ್ಚಾರಣ ಭೀಷಿತಾಃ ।**
**ನಶ್ಯಂತಿ ಸಕಲಾಃ ರೋಗಾಃ ಸತ್ಯಂಸತ್ಯಂ ವದಾಮ್ಯಹಂ**

''ಅಚ್ಯುತ, ಅನಂತ, ಗೋವಿಂದ, ಎಂಬ ನಾಮ ಸಂಕೀರ್ತನೆಯಿಂದ ಹೆದರಿದ ಎಲ್ಲಾ ರೋಗಗಳು ದೂರವಾಗುವುವು. ಇದು ಸತ್ಯ. ನಾನು ಸತ್ಯವಾದುದನ್ನೇ ಹೇಳುತ್ತಿದ್ದೇನೆ.

**ಸತಾಮಪಿ ನಾಮೋಚ್ಚಾರಣಾದೇಃ ಭಗವನ್ನಾಮವತ್ ।**
**ಅಘನಿರ್ವರ್ತಕ ತ್ವಾದಿತಿಭಾವಃ ।** *(ವೀರರಾಘವೀಯ)*

''ಭಗವನ್ನಾಮೋಚ್ಚಾರಣೆಯು ಹೇಗೋ ಹಾಗೆ ಭಗವದ್ ಭಕ್ತರಾದ ಮಹಾತ್ಮರ ನಾಮೋಚ್ಚಾರಣೆಯನ್ನು ಉಚ್ಚರಿಸುವುವವರ ಪಾಪಗಳನ್ನು ಕಳೆಯುತ್ತದೆ.''

ಇದರ ಸಂದೇಶದಂತೆ ಭಗವದ್ ಕಾರ್ಯಕ್ಕಾಗಿಯೇ ಅವತರಿಸಿದ ದಿವ್ಯತ್ರಯರಾದ ಶ್ರೀರಾಮಕೃಷ್ಣ ಪರಮಹಂಸರು, ಶ್ರೀಮಾತೆ ಶಾರದಾದೇವಿ ಹಾಗೂ ಸ್ವಾಮಿ ವಿವೇಕಾನಂದರ ನಾಮಸಂಕೀರ್ತನೆ ಗುಣಗಾನ ಮಾಡಿದಾಗಲೂ ಅದೇ ಫಲವು ನಮಗೆ ಲಭಿಸುವುದು.

ಶ್ರೀ ರಾಮಕೃಷ್ಣರ ಆದೇಶದಂತೆ ಭಗವದ್ ಭಕ್ತನು ಪಾಪನಾಶದ ಕಡೆಗೆ ಹೆಚ್ಚು ಗಮನ ಕೊಡದೆ ಭಕ್ತಿ ಭಾವವು ದೃಢವಾಗಲಿ, ಭಗವದ್ ಪ್ರೇಮವು ಹೆಚ್ಚುತ್ತಿರಲಿ, ಭಗವಂತನ ದಿವ್ಯ ಸನ್ನಿಧಾನದಲ್ಲೇ ತನ್ನ ಮನಸ್ಸು ಸುಳಿದಾಡುತ್ತಿರಲೆಂಬ ಆಶಯದಿಂದಲೇ ಹೆಚ್ಚು ಹೆಚ್ಚಾಗಿ ಅವನ ಮಧುರವಾದ ನಾಮಗಳನ್ನು ಉಚ್ಚರಿಸುತ್ತಿರಬೇಕು.

ಎಲ್ಲರೂ ಮುಕ್ತಿಯನ್ನು ಅರಸುತ್ತಾರೆ. ಮುಕ್ತಿ ಭಕ್ತಿಯ ದಾಸಿ. ಭಗವಂತನ ನಾಮವೇ ಭಕ್ತಿಯ ಪ್ರತಿರೂಪ. ನಾವು ಜೀವಿಸುತ್ತಿರುವ ಈ ಮರ್ತ್ಯಲೋಕಕ್ಕೂ ಮುಕ್ತಿಲೋಕಕ್ಕೂ ಇರುವ ಏಕೈಕ ಕೊಂಡಿ – ಮೆಟ್ಟಿಲೆಂದರೆ ''**ಭಗವನ್ನಾಮ.**'' ❖

### ವಚನ ನಾಮಾಮೃತ

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ನೆನಹು ತುಂಬಿ
ಕೂಡಲಸಂಗಮದೇವಾ, ನಿಮ್ಮ ಚರಣಕಮಲದೊಳಗಾನು ತುಂಬಿ!

*–ಬಸವಣ್ಣ*

# ದಾಸ ಸಾಹಿತ್ಯದಲ್ಲಿ ಸ್ಮರಣ ಭಕ್ತಿ

**ಡಾ. ಟಿ.ಎನ್.ನಾಗರತ್ನ**



ಕರ್ನಾಟಕದಲ್ಲಿ ಭಕ್ತಿಪರಂಪರೆಯನ್ನು ಉಚ್ಛ್ರಾಯ ಸ್ಥಿತಿಗೆ ಕೊಂಡೊಯ್ದ ಮಹನೀಯರಲ್ಲಿ ಹರಿದಾಸರ ಕೊಡುಗೆ ವಿಶಿಷ್ಟವಾದದ್ದು. ಹರಿದಾಸ ಪರಂಪರೆ ಭಗವಂತನ ನಾಮವನ್ನು ಜನರ ಮನೆಮನೆಗೂ ತಲುಪಿಸಿ, ಸಾಮಾನ್ಯರ ಹೃದಯದಲ್ಲೂ ಭಗವಂತನಲ್ಲಿ ಅಭಿರುಚಿ ಮೂಡಿಸುವ ಮಹತ್ಕಾರ್ಯವನ್ನು ಮಾಡಿದ ಬಗೆಯನ್ನು ವಿವರಿಸುವ ಲೇಖಕಿ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯ ವಿಭಾಗದ ಮುಖ್ಯಸ್ಥರಾಗಿ ನಿವೃತ್ತಿ ಹೊಂದಿದ್ದು, ದಾಸ ಸಾಹಿತ್ಯದಲ್ಲಿ ಆಳವಾದ ಅಧ್ಯಯನ ಮಾಡಿದ್ದಾರೆ.

**ಸು**ಮಾರು ೫೦೦೦ ವರ್ಷಗಳಿಗೂ ಹಿಂದಿನ ಇತಿಹಾಸವಿರುವ ಭಕ್ತಿಯ ಪರಿಕಲ್ಪನೆ ಸಿಂಧೂ ನಾಗರಿಕತೆಯ ಸಂಶೋಧನೆಯಿಂದ ವ್ಯಕ್ತವಾಗಿದ್ದು, ಅಲ್ಲಿ ದೇವರೂ ದೇವಾಲಯಗಳೂ ಅಸ್ತಿತ್ವದಲ್ಲಿದ್ದಿರಬೇಕೆಂಬ ನಂಬಿಕೆಗೆ ಇಂಬುಗೊಡುತ್ತದೆ. ಆ ಸಮಯದಲ್ಲಿ ಮೂರ್ತಿಪೂಜೆ ಮಾಡುವಷ್ಟು ಬೆಳೆದಿರಬೇಕಾದರೆ ಭಕ್ತಿಭಾವದ ಸಂಚಾರ ಜನಮನದಲ್ಲಿ ಇನ್ನೂ ಹಿಂದೆಯೇ ಆಗಿರಬೇಕು. ಪ್ರಕೃತಿಯ ವೈಚಿತ್ರ್ಯಗಳು, ಭೀಕರತೆಗಳನ್ನು ಕಂಡ ಆದಿಮಾನವ ಭಯ ಪಟ್ಟಿರಬೇಕು. ಅಂತೆಯೇ ಆಕೆಯ ಮೃದುಮಧುರ ಲಾಸ್ಯವನ್ನು ಕಂಡು, ಸೌಂದರ್ಯವನ್ನನುಭವಿಸಿ, ತಂಗಾಳಿ ಹಕ್ಕಿಗಳ ಇಂಚರಗಳಿಗೆ ಮನಸೋತು ಸಂತೋಷಪಟ್ಟು, ಅವೆಲ್ಲವುಗಳ ಒಂದು ಲಯಬದ್ಧ ಹೊಂದಾಣಿಕೆಗೆ ಆಶ್ಚರ್ಯಪಟ್ಟಿರಲೂ ಸಾಕು – ಈ ಎಲ್ಲ ಮಾನಸಿಕ ತುಮುಲಗಳ ಫಲವಾಗಿ ಭಕ್ತಿಭಾವ ಉದಯಿಸಿತೆನ್ನಬೇಕು. ಹೀಗೆ ಆವಿರ್ಭವಿಸಿದ ಭಕ್ತಿಭಾವ ವೇದೋಪನಿಷತ್ತುಗಳಲ್ಲಿ ಮೈದುಂಬಿ, ಸೂತ್ರಗಳ ಕಾಲದಲ್ಲಿ ವಿಕಸಿಸಿ ಭಗವದ್ಗೀತೆಯಲ್ಲಿ ಓತಪ್ರೋತವಾಗಿ ಪ್ರವಹಿಸಿದೆ.

ಭಕ್ತಿಯ ಅನುಭವ ಒಂದೇ ಆದರೂ ಅಭಿವ್ಯಕ್ತಿಯಲ್ಲಿ ವೈವಿಧ್ಯವಿರುವುದನ್ನು ಕಾಣಬಹುದು. '**ನಾರದ ಭಕ್ತಿ ಸೂತ್ರ**' ಮತ್ತು '**ಶಾಂಡಿಲ್ಯ ಸೂತ್ರ**'ಗಳು ಭಕ್ತಿಯ ಸ್ವರೂಪದ ಬಗ್ಗೆ ವಿಶ್ಲೇಷಣೆ ನಡೆಸಿವೆ. ಅವುಗಳ ಪ್ರಕಾರ 'ಭಕ್ತಿ'ಎಂದರೆ ಯಾರೊಬ್ಬರ ಬಗೆಗಿರುವ ಪರಮ ಪ್ರೀತಿ. ಅದು ಭಗವಂತನೆಡೆಗೆ ಹರಿದಾಗ ಭಗವದ್ಭಕ್ತಿಯೆನ್ನಿಸಿಕೊಳ್ಳುತ್ತದೆ – ಈಶ್ವರ ನಲ್ಲಿ ಪರಮ ಪ್ರೀತಿಯನ್ನಿಡುವುದೇ ಭಕ್ತಿ.

'ನಾರದ ಭಕ್ತಿಸೂತ್ರ'ದಲ್ಲಿ ಭಕ್ತಿಯನ್ನು ಗುಣಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ ಹೀಗೆ ಹನ್ನೊಂದು ಆಸಕ್ತಿಗಳೆಂದು ವಿಭಾಗಿಸಿ ವಿವೇಚಿಸಲಾಗಿದೆ. ಅಂದರೆ ಭಗವಂತನಲ್ಲಿ ಆಸಕ್ತರಾದವರು ಈ ಮೇಲಿನ ಯಾವ ರೀತಿಯಿಂದಲಾದರೂ ಸಾಧನೆ ಮಾಡಬಹುದು. ಹಾಗೆಯೇ ಭಾಗವತದಲ್ಲಿ ಶ್ರವಣ, ಕೀರ್ತನ, ಸ್ಮರಣವೇ ಮೊದಲಾದ ಒಂಭತ್ತು ವಿಧವಾದ ಭಕ್ತಿಗಳನ್ನು ಹೆಸರಿಸಿ,

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ ॥**

ಅವುಗಳ ಮೂಲಕ ಭಕ್ತ ತನ್ನ ಸಾಧನೆಯ ಮಾರ್ಗದಲ್ಲಿ ಮುಂದುವರಿಯಬಹುದೆಂಬುದನ್ನು ಸೂಚಿಸಿದೆ. ಈ ಎರಡೂ ಗ್ರಂಥಗಳಲ್ಲಿ ಹೇಳಿರುವ ಭಕ್ತಿಯ ಬಗೆಗಳಲ್ಲಿ ಸ್ಮರಣಭಕ್ತಿಯೂ ಒಂದು. ಭಗವಂತನಿಗೆ ಸಂಬಂಧಿಸಿದ ವಿಷಯಗಳನ್ನು ಶ್ರದ್ಧೆಯಿಂದ ಕೇಳಿ ('ಶ್ರವಣಭಕ್ತಿ'), ಅವನ ಅನಂತ ಗುಣರೂಪಾದಿಗಳನ್ನು ಸ್ತುತಿಸಿ, ('ಕೀರ್ತನಭಕ್ತಿ'), ಆ ಮೂಲಕ ಸಂಗ್ರಹಿಸಿದ ಭಗವನ್ನಾಮ ರೂಪಗುಣಾದಿಗಳನ್ನು **ಮತ್ತೆ ಮತ್ತೆ ನೆನೆಯುವುದು ಸ್ಮರಣಭಕ್ತಿ**. ಸ್ಮರಣಭಕ್ತಿಯಲ್ಲಿ ನಾಮಸ್ಮರಣೆಗೆ ವಿಶೇಷಸ್ಥಾನವಿದೆ. ಭಗವನ್ನಾಮಸ್ಮರಣೆಯನ್ನು ಇಂತಹ ಸ್ಥಳದಲ್ಲೇ ಇಂತಹ ಕಾಲದಲ್ಲೇ ಮಾಡಬೇಕೆಂಬ ನಿಯಮಗಳಿಲ್ಲ. ನಡೆವಾಗ, ನುಡಿವಾಗ, ಬಿಕ್ಕುವಾಗ, ಆಕಳಿಸುವಾಗ, ಉಂಡುಟ್ಟು ಸುಖಪಡುವಾಗ, ಕಷ್ಟದಿಂದ ಕಂಗೆಟ್ಟಾಗ – ಯಾವಾಗ ಯಾರು ಎಲ್ಲಿ ಬೇಕಾದರೂ ಹರಿನಾಮಸ್ಮರಣೆ ಮಾಡಬಹುದು; ಫಲವನ್ನು ಪಡೆಯಬಹುದು.

ಹರಿದಾಸರಿಗಂತೂ ಹರಿನಾಮಸ್ಮರಣೆ ಮಧುವಿಗಿಂತಲೂ ಮಧುರ. ಶ್ರೀಪಾದರಾಜರು ಸ್ಮರಣಭಕ್ತಿಯನ್ನು ಕುರಿತು ಒಂದು ಸೊಗಸಾದ ಉಗಾಭೋಗವನ್ನೇ ರಚಿಸಿಬಿಟ್ಟಿದ್ದಾರೆ : **ಮನೆಯಿಂದ ಸಂತೋಷ ಕೆಲವರಿಗೆ ಲೋಕದೊಳು**
**ಧನದಿಂದ ಸಂತೋಷ ಕೆಲವರಿಗೆ ಲೋಕದೊಳು**

**ವನಿತೆಯಿಂ ಸಂತೋಷ ಕೆಲವರಿಗೆ ಲೋಕದೊಳು**
**ತನಯರಿಂ ಸಂತೋಷ ಕೆಲವರಿಗೆ ಲೋಕದೊಳು**
**ಇನಿತು ಸಂತೋಷವವರವರಿಗಾಗಲಿ ನಿನ್ನ**
**ನೆನಹೆನಗೆ ಸಂತೋಷ ರಂಗವಿಠಲರೇಯ**

ವ್ಯಾಸರಾಯರು ತಮ್ಮ ಚಂಚಲ ಮನಸ್ಸನ್ನು ಹಳಿಯುತ್ತಾ,

**ಛೀ ಛೀ ಮನವೆ ನಾಚದ ತನುವೆ**
**ನೀಚವೃತ್ತಿಯ ಬಿಟ್ಟು ನೆನೆಕಂಡ್ಯ ಹರಿಯ**
. . . .          . . . . .
**ಪಣ್ಣೆಂದು ಭ್ರಮಿಸಿ ಪತಂಗ ದೀಪದಿ ಬಿದ್ದು**
**ಉಣ್ಣದುರಿವುದ ನೀ ಕಂಡು ಕಂಡರಿಯಾ**
**ಬಣ್ಣದಬಲೆಯರ ರೂಪಿಗೆ ಮರುಳಾಗಿ**
**ಮಣ್ಣು ತಿನ್ನದೆ ಮಾಧವನ್ನ ನೀ ಸ್ಮರಿಸೋ**

ಎಂದು ಹೇಳುವ ಮೂಲಕ ನಮ್ಮೆಲ್ಲರಿಗೂ ನಾಮಸ್ಮರಣೆಯ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಪುರಂದರದಾಸರು, '**ಕರುಣಿಸೋ ರಂಗ ಕರುಣಿಸೋ ! ಇರುಳು ಹಗಲು ನಿನ್ನ ಸ್ಮರಣೆ ಮರೆಯದಂತೆ**' ಎಂದು ಬೇಡಿಕೊಳ್ಳುವರು. '**ಹರಿಯನ್ನು ನೆನೆದ ದಿವಸ ಶುಭ ಮಂಗಳ, ಆವಾಗಲೂ ಹರುಷ, ಸ್ಮರಣೆಯಿಂದ ಮುಕ್ತಿಪ್ರಾಪ್ತಿ**'ಯೆಂಬುದು ಹರಿದಾಸರೆಲ್ಲರ ನಂಬಿಕೆ. ಹರಿಸ್ಮರಣೆಗೆ ದೇಶಕಾಲಗಳ ಕಟ್ಟಿಲ್ಲ. ಹರಿ ಸ್ಮರಣೆ ಬಂದ ಕಾಲವೇ 'ಪುಣ್ಯಕಾಲ.' ಅದೇ 'ಪುಣ್ಯದೇಶ.' ಹರಿ ಸ್ಮರಣೆ ಮಾಡುತ್ತಿರುವ ಭಕ್ತನನ್ನು ಯಮದೂತರು ಮುಟ್ಟಲಂಜುವರು. ಅಷ್ಟೇಕೆ, 'ಸ್ಮರಣೆಯೇ ಅಪವರ್ಗ' – ಪ್ರಸನ್ನವೆಂಕಟದಾಸರ ಪ್ರಕಾರ. 'ನಾಮವೊಂದೇ ಯಮನಾಳ್ಗಳನೊದೆದು । ಅಜಮಿಳನಿಗೆ ಸುಕ್ಷೇಮವಿತ್ತ'ದ್ದು. ಅಂತಹ ಹರಿನಾಮ ಸಂಕೀರ್ತನೆ ಸ್ಮರಣಾದಿಗಳನ್ನು ಅನುದಿನ ಮಾಡುವವರ ಪುಣ್ಯ ಹಿರಿದೆನ್ನುತ್ತದೆ ದಾಸವಾಣಿ:

**ರಾಮನಾಮ ಪಾಯಸಕೆ ಕೃಷ್ಣನಾಮ ಸಕ್ಕರೆ**
**ವಿಠಲನಾಮ ತುಪ್ಪವ ಕಲೆಸಿ ಬಾಯಿ ಚಪ್ಪರಿಸಿರೋ**

–ಎಂದು ಕರೆಕೊಟ್ಟಿದ್ದಾರೆ, ಪುರಂದರದಾಸರು. 'ರಾಮಾ' ಎನ್ನುವ ಎರಡಕ್ಷರದ ಮಹಿಮೆಯನ್ನು ಹನುಮ ಸುಗ್ರೀವಾದಿ ಪರಮಭಕ್ತರು ಬಲ್ಲರು. ಅಂತಹ ಮಹಿಮೋಪೇತವಾದ ನಾಮಸ್ಮರಣೆಯೊಂದೇ ಸಾಲದೆ ಮುಕ್ತಿಪಡೆಯಲು? 'ಹರಿನಾಮಾಮೃತ ಪಾನ ಮಾಡಿರಿ; ದುರಿತಗಳಿಂದ ದೂರಾಗಿರಿ' ಎನ್ನುವುದೇ ಜನ ಸಾಮಾನ್ಯರಿಗೆ ಹರಿದಾಸರ ಸಂದೇಶ. ಅದಕ್ಕೆ ಪೂರಕವಾಗಿ: 'ಅಂದಜಾಮಿಳಗೆ ಸ್ಮರಣೆಮಾತ್ರದಲ್ಲಿ ಮುಕುತಿ ಕೊಡಲಿಲ್ಲವೆಶ್ರೀಹರಿ ?' ಎಂದು ಕೇಳುತ್ತಾ, ಪರಮಪಾತಕಿಯಾದ ಅಜಾಮಿಳ ತನ್ನ ಕೊನೆಗಾಲದಲ್ಲಿ ಯಮ ದೂತರನ್ನು ಕಂಡು ಹೆದರಿ, ತನ್ನ ಮಗನನ್ನು 'ನಾರಣಾ' ಎಂದು ಕರೆದ ಮಾತ್ರಕ್ಕೇ ಕರುಣಾ ಮಯನಾದ ಶ್ರೀಹರಿ, ಅವನು ನಾರಾಯಣನಾದ ತನ್ನನ್ನೇ ಸ್ಮರಿಸಿ ಕರೆದನೆಂದು ಭಾವಿಸಿ ಅವನಿಗೆ ಮೋಕ್ಷವಿತ್ತನೆಂಬ, ಭಾಗವತದಲ್ಲಿ ಬರುವ ರೋಚಕವಾದ ಕತೆಯನ್ನು ಉದಾಹರಿಸುತ್ತ ಸ್ಮರಣಭಕ್ತಿಯ ಶಕ್ತಿಯನ್ನು, ಹರಿನಾಮ ಮಹಿಮೆಯನ್ನು ಮತ್ತೆ ಮತ್ತೆ ಎತ್ತಿ ಹೇಳಿದ್ದಾರೆ. ನಾಮ ಸ್ಮರಣೆಗೆ ಮಂತ್ರಸಿದ್ಧಿಯುಂಟು ದಾಸರ ದೃಷ್ಟಿಯಲ್ಲಿ. ಹಾಗಾಗಿ 'ರಾಮ ಮಂತ್ರವ ಜಪಿಸೋ ಹೇ ಮನುಜ । ಆ ಮಂತ್ರ ಈ ಮಂತ್ರ ಜಪಿಸಿ ಕೆಡಲುಬೇಡ' ಎಂದು ಜನರಿಗೆ ರಾಮಮಂತ್ರವನ್ನು ಉಪದೇಶಿಸಿರುವರು. 'ಸುಲಭದಿಂದಲಿ ಮೋಕ್ಷ ಸೂರೆಗೊಂಬುವ' ಮಂತ್ರವದು! ಭವಸಾಗರವನ್ನು ದಾಟಿಸುವ, ಭಯನಿವಾರಣ ಮಂತ್ರ.

ವಿಜಯದಾಸರು ಹೇಳುವಂತೆ ಹರಿನಾಮ ದರಿದ್ರನಿಗೆ ಲಕ್ಷ್ಮಿ, ದುರಿತ ಅಘಾವಳಿಗೆ ಪವನ; ಭವರೋಗಕ್ಕೆ ವೈದ್ಯ; ಅಜ್ಞಾನವೆಂಬ ಕತ್ತಲೆಗೆ ಸೂರ್ಯ; ತನುಮನ ಮಲಿನ ತೊಳೆವ ಗಂಗೆ; ಭಕ್ತರಿಗೆ ವಜ್ರಪಂಜರ; ವಿಪತ್ತು ಪರಿಹಾರ ಮಾಡುವಂಥದ್ದು. ಎಲ್ಲ ಎಲ್ಲವೂ ಹೌದು. ಸಕಲ ಸಂಕಷ್ಟ ಹರ. ಸ್ಪರ್ಶ ಮಣಿಯಿದ್ದಂತೆ. ಇಂತಹ ಹರಿನಾಮಸ್ಮರಣೆಯ ಸಾಧನೆಯೂ ಸರಳ, ನೇರ.

**ಕೃಷ್ಣ ಕೃಷ್ಣ ಕೃಷ್ಣ ಎಂದು ಮೂರು ಬಾರಿ ನೆನೆಯಿರೋ ಸಂ**
**ತುಷ್ಟನಾಗಿ ಮುಕುತಿಕೊಟ್ಟು ಮಿಕ್ಕಬಾರ ಹೊರುವನೋ**

– ಎನ್ನುತ್ತಾರೆ, ವ್ಯಾಸರಾಯರು. ಬನ್ನಿ … ಪ್ರಯತ್ನಿಸೋಣ.❖

ರಾಮಮಂತ್ರವ ಜಪಿಸೋ । ಹೇ ಮನುಜ ।
ರಾಮಮಂತ್ರವ ಜಪಿಸೋ॥

ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡಬೇಡ
ಸೋಮಶೇಖರ ತನ್ನ ಭಾಮಿನಿಗೊರೆದಿಹ ॥

ಕುಲಹೀನನಾದರೂ ಕೂಗಿ ಜಪಿಸುವ ಮಂತ್ರ
ಸರಿವ ಭೀತಿಯೊಳು ಉಚ್ಚರಿಪ ಮಂತ್ರ ।
ಹಲವು ಪಾಪಂಗಳ ಹದಗೆಡಿಸುವ ಮಂತ್ರ
ಸುಲಭದಿಂದಲಿ ಸ್ವರ್ಗ ಸೂರೆಗೊಳ್ಳುವ ಮಂತ್ರ ॥

ಸಕಲ ವೇದಗಳಿಗೆ ಸಾರವೆನಿಸುವ ಮಂತ್ರ
ಮುಕುತಿ ಮಾರ್ಗಕೆ ಇದೇ ಮೂಲಮಂತ್ರ ।
ಭಕುತಿರಸಕೆ ಭವ್ಯ ಮಾರ್ಗ ತೋರುವ ಮಂತ್ರ
ಸುಖನಿಧಿ ಪುರಂದರವಿಟ್ಠಲನ ಮಹಾಮಂತ್ರ ॥

* * *

ಸುಖದ ಅವಸಾನದಲಿ ಈ ನಾಮ ಗಾಯನವು
ಶ್ರೀಕೃಷ್ಣ ದಿವ್ಯನಾಮ ।
ದುಃಖಾವಸಾನದಲಿ ಈ ನಾಮವೇ ಜಪವು
ಶ್ರೀಕೃಷ್ಣ ದಿವ್ಯನಾಮ ॥
ಸಕಲ ಸುಖಗಳ ಕೊಟ್ಟು ಸದ್ಗತಿಯನೀವುದಿದು
ಶ್ರೀಕೃಷ್ಣ ದಿವ್ಯನಾಮ ।
ಸುಖನಿಧಿ ಅರವಿಂದನಾಭ ಪುರಂದರವಿಠಲ
ನೊಲುಮೆಯಿದು ದಿವ್ಯನಾಮ ॥

*–ಪುರಂದರದಾಸರು*

# ಆಳ್ವಾರರು ಮತ್ತು ನಾಮಮಹಿಮೆ

ಡಾ. ಎನ್.ಕೆ. ರಾಮಶೇಷನ್



ಭಾರತದಲ್ಲಿ ಅತ್ಯಂತ ಪ್ರಾಚೀನ ಕಾಲದಲ್ಲೇ ಭಕ್ತಿಪರಂಪರೆ ಆರಂಭಗೊಂಡಿತು. ತಮಿಳುನಾಡಿನ ಹನ್ನೆರಡು ಮಂದಿ ಆಳ್ವಾರರ ಜೀವನ ಹಾಗೂ ಕೃತಿಗಳಲ್ಲಿ ಭಕ್ತಿಯ ಮೊದಲ ಭಾವನೆಗಳನ್ನು ನಾವು ಕಾಣಬಹುದಾಗಿದೆ. ಆಳ್ವಾರರ ಕೃತಿಗಳಲ್ಲಿ ಕಂಡುಬರುವಂತೆ ನಾಮಮಹಿಮೆಯನ್ನು ಕುರಿತು ಬರೆದಿರುವ ಲೇಖಕರು ಮೈಸೂರು ನಿವಾಸಿಗಳು; ಕನ್ನಡ ಮತ್ತು ಸಂಸ್ಕೃತ ಎರಡರಲ್ಲೂ ವಿದ್ವಾಂಸರಾಗಿರುವ ಶ್ರೀಯುತರು ಶ್ರೀವೈಷ್ಣವ ಪರಂಪರೆಯನ್ನು ಕುರಿತು ವಿಶೇಷ ಅಧ್ಯಯನ ಮಾಡಿದ್ದಾರೆ ಹಾಗೂ ಅನೇಕ ಕೃತಿಗಳನ್ನು ರಚನೆ ಮಾಡಿದ್ದಾರೆ.

**ಅವಿಕಾರಯ ಶುದ್ಧಾಯ ನಿತ್ಯಾಯ ಪರಮಾತ್ಮನೇ**
**ಸದೈಕ ರೂಪ ರೂಪಾಯ ವಿಷ್ಣವೇ ಪ್ರಭವಿಷ್ಣವೇ**

ಎಂಬುದಾಗಿ ಮಹನೀಯರಾದ ಕುರುಕುಲ ಪಿತಾಮಹರಾದ ಶ್ರೀಭೀಷ್ಮರು ದೇವದೇವೋತ್ತಮನಾದ ಶ್ರೀಕೃಷ್ಣ-ಪಾಂಡವರ ಸಮ್ಮುಖದಲ್ಲಿ ಆ ನವನೀತ ಚೋರನ ಕೃಪೆಯಿಂದ ದಿವ್ಯಚೈತನ್ಯ ಪಡೆದು, ಅರ್ಜುನ ಶರಾಘಾತ ಅಳಲನ್ನು ಮರೆತು, ಶ್ರೀಕೃಷ್ಣನನ್ನು ತಮ್ಮ ಬಳಲಿದ ಕಂಗಳಲ್ಲಿ ದರ್ಶಿಸುತ್ತ ಇಡೀ ವಿಷ್ಣುಸಹಸ್ರನಾಮವನ್ನು ಹಾಡಿರುವುದು ಎಲ್ಲರೂ ತಿಳಿದಿರುವ ಮೌಲಿಕ ವಿಚಾರವೇ ಆಗಿದೆ. ಸಾವಿರಾರು ವರ್ಷ-ಋತು ಕಳೆದಿವೆ, ಆದರೆ, ಶ್ರೀ ವಿಷ್ಣುಸಹಸ್ರ **ನಾಮಮಹಿಮೆ** ಮಾತ್ರ ಆಸ್ವಾದಿಸುವ ಡಿಂಗರಿಗರ – ಪ್ರಪನ್ನರ ತನುಮನಗಳಿಗೆ ನೆಮ್ಮದಿ, ತುಷ್ಟಿ, ಪುಷ್ಟಿ, ಸಂತೃಪ್ತಿದಾಯಿ ಆಗಿರುವುದರಿಂದಲೇ ಈ ಅತ್ಯಾಧುನಿಕ ಧಾವಂತ (software) ಯುಗ ದಲ್ಲಿಯೂ ನಾಮಮಹಿಮೆಗೆ ಪ್ರಾಧಾನ್ಯ.

**''ಜಪತಪಾನುಷ್ಠಾನವಿಲ್ಲ ಕುಪಿತಗಾಮಿಯಾದೆನಲ್ಲ**
**ಕೃಪೆಯ ಮಾಡಿ ಕ್ಷಮಿಸಬೇಕೋ ಉಪೇಂದ್ರನೇ'',**

**''ಈಶ ನಿನ್ನ ಚರಣಭಜನೆ ಆಸೆಯಿಂದ ಮಾಡುವೆನು**
**ದೋಷರಾಶಿ ನಾಶಮಾಡೋ ಶ್ರೀಶ ಕೇಶವ''**

**''ಶರಣುಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ**
**ನಿನ್ನ ಚರಣಸ್ಮರಣೆ ಕರುಣಿಸಯ್ಯ ನಾರಾಯಣಾ. . ''**

**''ಮರೆಯದಲೆ ಹರಿಯನಾಮ ಬರೆದು ಓದಿ ಕೇಳ್ದವರಿಗೆ**

**ಕರೆದು ಮುಕುತಿ ಕೊಡುವ ನಮ್ಮ ಆದಿಕೇಶವ, ನೆಲೆಯಾದಿಕೇಶವ''**
–ಎಂದು ಹಾಡಿದ ಕನಕದಾಸರು ಪ್ರಸ್ತಾಪಿಸುವುದೇ ನಾಮ ಮಹಿಮೆಯನ್ನು.

**ತಪಃಸ್ವಾಧ್ಯಾಯ ನಿರತಂ ತಪಸ್ವೀ ವಾಗ್ವಿದಾಂವರಮ್।**
**ನಾರದಂ ಪರಿಪಪ್ರಚ್ಛ ವಾಲ್ಮೀಕಿಃ ಮುನಿಪುಂಗವಂ॥**

''ಯಾರು ಎಲ್ಲ ರೀತಿಯಲ್ಲಿಯೂ ಶ್ರೇಷ್ಠನೆನಿಸಿರುವನು, ಯಾರ ಶ್ರೀನಾಮ ಜಪ, ತಪ, ಶಮ–ದಮ ಮತ್ತು ಈ ಇಹದ ಬದುಕನ್ನು ಸಹ್ಯ ಆಗಿಸಿ, ಅಂತಿಮದಲ್ಲಿ ಉತ್ತಮ ಮುಕ್ತಿ ದಯಪಾಲಿಸುವನೋ ಅಂಥ ಪೂತಾತ್ಮ – ಭಗವಂತನೇ ಆದವನು ಯಾರು?'' ಎಂದು ಪ್ರಶ್ನಿಸಿದ ವಾಲ್ಮೀಕಿಗೆ ನಾರದ ತಿಳಿಯ ಹೇಳಿದ : ''ಋಷಿ ರಚಿಸಿದ ಶ್ರೀರಾಮಾಯಣ ಕೇವಲ ''ಆದಿಕಾವ್ಯಮಿದಂ ಪ್ರೋಕ್ತಂ'' ಮಾತ್ರ ಆಗದೆ, ಮಾನವಕೋಟಿ (ಚೇತನಾಚೇತನವನ್ನು ಒಳಗೊಂಡಂತೆ) ಯಾವತ್ತೂ ನೆಮ್ಮದಿಯಿಂದ ಬದುಕಿ – ಬದುಕನ್ನು ಸಾರ್ಥಕ್ಯವಾಗಿಸಲು ಅಗತ್ಯವಾದ ಅನೇಕ ಮೌಲ್ಯಗಳನ್ನು ಇಡಿಕಿಡುವ ಶ್ರೀರಾಮನಾಮ ತಾರಕ–ಮಹಿಮೆಯನ್ನು ನೀಡಿದೆಯಲ್ಲವೆ?'' ಶ್ರೀಪಾರ್ವತೀದೇವಿಯಂಥ ಜಗದ್ಧಾತ್ರಿಯು ತನ್ನ ವಲ್ಲಭ ಶ್ರೀಪರಮೇಶ್ವರನನ್ನು– ಶಂಕರನನ್ನು– ಪಂಡಿತರು ಏನೇನೋ ಜಪಿಸುತ್ತಾರೆ, ಪಠಿಸುತ್ತಾರೆ, ಹಾಡುತ್ತಾರೆ. ನನ್ನಂಥವಳು ಯಾವ ಉಪಾಯದಿಂದ ಶ್ರೀವಿಷ್ಣುಸಾಸಿರನಾಮ ಹೇಳಲಾದೀತು, ''ಶ್ರೋತುಮಿಚ್ಛಾಮಿ ಅಹಂ ಪ್ರಭೋ'' ಎನ್ನುವ ತುಂಬು ವಿನಯ ಗಮನಿಸುವಂತೆಯೇ, ಈ ಶಂಕರನು ಅಷ್ಟೇ ಪ್ರೀತಿಯಿಂದ,

**ಶ್ರೀ ರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ।**
**ಸಹಸ್ರನಾಮ ತತ್ತುಲ್ಯಂ ರಾಮನಾಮವರಾನನೇ ॥**

ಎಂದು ಸುಲಭ ಸೂತ್ರವನ್ನೇ ನಮಗೆ ನೀಡಿ ಉದ್ಧರಿಸಿರುವನಲ್ಲ!! (ಇಲ್ಲಿ ಗುರುವಿನ ಬೆಳಕೂ ಇದೆ. ರಾಮ, ರಾಮ, ರಾಮ, ಎಂದು ಮೂರಾವರ್ತಿ ಹೇಳಿದರೆ ಸಾಕು, ಎಂದರೆ ಅಷ್ಟು ದಿಟವೇ ನಾಮಜಪ ಮಹಿಮಾಗುಣ, ಹಾಗೂ ಆ ಶ್ರೀರಾಮನಾಮ ನೀಡುವ ಸತ್ ಚೈತನ್ಯ? ''ಯರಲವ'' ಎನ್ನುವ ಅಕ್ಷರಮಾಲಿಕೆಯಲ್ಲಿ 'ರ' ಎರಡನೆ ಅಕ್ಷರ. ''ಪಫಬಭಮ'' ಎನ್ನುವಲ್ಲಿ 'ಮ' ಐದನೆಯ ಅಕ್ಷರ. ರಾಮ = ೨ X ೫ = ೧೦; ಮತ್ತೆ ಎಂಟಾವರ್ತಿ ರಾಮ, ರಾಮ, ೧೦ X ೧೦ ಅಂದರೆ, ಒಟ್ಟು ರಾಮ, ರಾಮ, ರಾಮ, ಎಂದರೆ ೧೦ X ೧೦ X ೧೦ = ೧೦೦೦. ಸಾವಿರನಾಮ ಪಠಿಸಿದ ಪುಣ್ಯ ಮೂರಾವರ್ತಿ ರಾಮ ಎಂದರೇ ಒದಗಿ ಬಂದಿತು!! ಇದು ನಾಮದ ಮಹಿಮೆ ಸ್ವಾಮಿ!)

ಅದೇ ರೀತಿ ಭಕ್ತಿಗೊಲಿವ, ''ಮಮ ಪ್ರಾಣಾ ಹಿ ಪಾಂಡವಾಃ'' ಎಂದೇ ಸಾರಿದ, ಒಲಿದು ನುತಿಸುವರಿಗೊಲಿವ, ''ಶ್ರೀಕೃಷ್ಣ'' ನಾಮ ಮಹಿಮೆಯನ್ನು ಎಲ್ಲ ದಾಸ–ಸಂತ–ಕವಿ–ಋಷಿ–ದೇವತೆಗಳೂ ಹಾಡಿದ್ದಾರೆಂಬುದು ಗಮನೀಯ. ಜನ್ಮ ಸಂಸಾರ ಬಂಧನ ವಿಮುಕ್ತಿಗೊಳಿಸುವ ಸುಲಭೋಪಾಯವೇ ಶ್ರೀ ಹರಿನಾಮ ಮಹಿಮೆ – ಭಾಗವತ ಸಾರಿ ಸಾರುತ್ತಿರುವ,

**''ಶ್ರವಣಂಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಂ ॥''**

ನಾರದರ ಭಕ್ತಿಸೂತ್ರಗಳ ''ಏಕಾದಶಾಸಕ್ತಿ''ಯ ಸೂತ್ರದಲ್ಲಿ ಆ ಮಹಾನ್ ಅವರು ಕೇಂದ್ರೀಕರಿಸುವುದೇ ''ನಾಮಮಹಿಮೆ'' ಕುರಿತು.

**ನಾಮಸ್ಮರಣಾದನ್ಯೋಪಾಯಂ ನಹಿ ಪಶ್ಯಾಮೋ ಭವತರಣೇ**
**ರಾಮಹರೇ ಕೃಷ್ಣಹರೇ ತವ ನಾಮ ವದಾಮಿ ಸದಾ ನೃಹರೇ॥**

''ಕಾವ್ಯ ಶಾಸ್ತ್ರ ವಿನೋದೇನ'' ಪಂಡಿತರಿಗಾಗಲಿ, ನನ್ನಂಥ 'ಎಳೆ' ಅಜ್ಞಾನಿಗೆ ''ನಾಮಜಪ ಪಠನೇನ'' ಸಾಕು, ಆ ಶ್ರೀ ಹರಿಗುರುನಾಮ ಮಹಿಮೆ, ತಾರಕ ಮಂತ್ರವೇ ಆದೀತು.

**ಅಚ್ಯುತಾನಂತ ಗೋವಿಂದ ನಾಮೋಚ್ಚಾರಣ ಭೇಷಜಾತ್ ॥**
**ನಶ್ಯಂತಿ ಸಕಲಾಃ ರೋಗಾಃ ಸತ್ಯಂ ಸತ್ಯಂ ಬ್ರವೀಮ್ಯಹಮ್॥**

*(ಸಮಯೋಚಿತ ಪದ್ಯ ಮಾಲಿಕಾ)*

''ಮೂರು ನಾಮಗಳು – ಅಚ್ಯುತ, ಅನಂತ, ಗೋವಿಂದ ಇವುಗಳನ್ನು ಪದೇ ಪದೇ ಉಚ್ಚರಿಸೋಣ, ಅದೇ ದಿವ್ಯೌಷಧ – ಎಲ್ಲ ರೋಗಗಳಿಗೂ ಭೇಷಜ, ಇದು ಸತ್ಯ, ಸತ್ಯ''ವೆಂದೇ ಸುಭಾಷಿತಕಾರ ನಮಗಾಗಿ ಸಾರುತ್ತಿದ್ದಾನೆ.

**ಅಜ್ಞಾನಾತ್ ಅಥವಾ ಜ್ಞಾನಾತ್ ಉತ್ತಮ ಶ್ಲೋಕನಾಮಯತ್ ।**
**ಸಂಕೀರ್ತಿತಂ ಅಘಂ ಪುರಸೋ ದಹೇದೇಧೋ ಯಥಾನಲಃ ॥**

*(ಭಾಗವತ, – ೬–೨–೧೮)*

ತಿಳಿದೋ ತಿಳಿಯದೆಯೋ ಭಗವಂತನ ನಾಮವನ್ನು ಉಚ್ಚರಿಸಿದರೆ, ಬೆಂಕಿಯು ಸೌದೆಯನ್ನು ಸುಡುವ ಹಾಗೆ. ಶ್ರೀನಾಮವು ನಮ್ಮಂಥವರ ಪಾಪ–ದುರಿತಗಳನ್ನು – ಸುಟ್ಟು ನಾಶಗೈದೀತು.

ಆಚಾರ್ಯ ಶ್ರೀ ಆದಿಶಂಕರರು ತಮ್ಮ ***ಅಪರಾಧಕ್ಷಮಾಪಣ ಸ್ತೋತ್ರ***ದಲ್ಲಿ ಅನೇಕ ಕಡೆ ನಾಮಮಹಿಮೆ ಕುರಿತೇ ಹಾಡಿದ್ದಾರೆ:

**ಅರೇ ಭಜ ಹರೇಃ ನಾಮ ಕ್ಷೇಮಧಾಮ ಕ್ಷಣೇ ಕ್ಷಣೇ ।**
**ಬಹಿಃ ಸರತಿ ನಿಃಶ್ವಾಸೇ ವಿಶ್ವಾಸಃ ಕಃ ಪ್ರವರ್ತತೇ ॥**

***ಗುರುಕೌಮುದೀ*** ಹಾಡುತ್ತದೆ: 'ಅಯ್ಯಾ , ಮಂಗಲಾಯತನನು ಶ್ರೀಹರಿ, ಅವನ ನಾಮವನ್ನು ಪ್ರತಿಕ್ಷಣ ಜಪಿಸು.'

ಹೊರಗೆ ಹೊರಟ ನಿನ್ನುಸಿರು (ನಿಶ್ವಾಸ) ಮತ್ತೆ ಒಳಗೆ ಬರುವುದೆಂಬ (ಉಚ್ಛ್ವಾಸ) ನಂಬಿಕೆಯಾದರೂ ಎಲ್ಲಿದೆ? (ಈಗ ಪದೇಪದೇ ಕೇಳುತ್ತೇವಲ್ಲ, heart attack, heart failure, breathed the boot ಎಂಬುವ ವ್ಯಾಖ್ಯಾನಗಳನ್ನು ! ನಾಮ ಮಹಿಮೆ ಇಂಥ ದುರಂತವನ್ನು ನೀಗಿಸೀತೇನೊ!)

ಶ್ರೀಕೃಷ್ಣನಾಮದಲ್ಲಿ ವಿಹರಿಸದಿದ್ದರೆ, ಕಲಿತ ವಿದ್ಯೆ ವಿದ್ಯೆಯೇ ಅಲ್ಲ ಎನ್ನುತ್ತಾರೆ ಯಾಮುನಾಚಾರ್ಯರು(ಆಳವಂದಾರ್), ತಮ್ಮ ***ಸ್ತೋತ್ರರತ್ನ*** ಸ್ತುತಿಯಲ್ಲಿ, ಆದರೆ, ಅಲ್ಲಿ ಕಿಂ ತರ್ಕೇಣ ಎಂಬುವುದು ಮುಖ್ಯ. ವಾದತರ್ಕಕ್ಕೆ ಆತನೊಲಿಯ, ಆದರೆ **''ಪ್ರೇಮಮುದಿತ ಮನಸೇ ಕಹೋ ರಾಮ ರಾಮ ರಾಮ್''** ಎಂದರೆ, ಆ ನಾಮ ಮಹಿಮೆ, ಕೈಹಿಡಿದೆಳೆದಾಗ ಮೈ ತಾನೇ ಬರುವಂತೆ ಆತನನ್ನು ನಮ್ಮೆಡೆಗೇ ಕರೆತಂದೀತು! ಇದು ನಾಮದ ಮಹಿಮೆ. '**ಸ್ಮೃತ್ವಾ ಹರೇಃ ಭಾಗವತ ಪ್ರಧಾನಃ**' ಎನ್ನುತ್ತದೆ, ನಾಮಮಹಿಮೆ ಕುರಿತೇ ಹಾಡುವ ಶ್ರೀಮದ್ಭಾಗವತದ ೧೭,೦೦೦ ಶ್ಲೋಕಗಳು! 'ಪುನರಪಿ ಜನನಂ ಪುನರಪಿ ಮರಣಂ' ತಪ್ಪಿಸಿಕೊಳ್ಳಲು ನಾಮಸ್ಮರಣೆಯನ್ನು ಸಾಂದ್ರಗೊಳಿಸುವ

ನಾಮಮಹಿಮೆಯು ಕಾರಕ, ಪ್ರೇರಕ, ಪ್ರಚೋದಕ! ಭಗವದ್ನಾಮ ಮಹಿಮೆ, ನಾಮಜಪದ ಮಹತ್ವ, ಮಂತ್ರದ ಮಹಿಮೆ, ಮಂತ್ರದೀಕ್ಷೆ (Initiation), ಸಾಧನೆಯಲ್ಲಿ ನಾಮಜಪಗೈಯುತ್ತಾ ಗೈಯುತ್ತಾ ''ಅಜಪಾವಸ್ಥೆ'' ತಲುಪಬೇಕು. ಅದು ತನ್ನಿಂತಾನೇ ಜಪನಾಮ ಮಹಿಮೆ ಒದಗಿಸುವ ಪರಿವೇಷವಾಗುತ್ತದೆ! ಪ್ರಾಚೀನ ಅಪೌರುಷೇಯ - ವೇದಾಗಮ ಉಪನಿಷತ್ತುಗಳ ದರ್ಶನದಿಂದ ಹಿಡಿದು ಅತ್ಯಾಧುನಿಕ ಶ್ರೀರಾಮಕೃಷ್ಣರವರೆಗೆ, ಇನ್ನೂ ಈಗಿನ ಗುಂಪುಗುಂಪಾಗಿ ಇರುವ ಗುರುಸಮುದಾಯ ಎಲ್ಲರೂ ಭಗವನ್ನಾಮ ಮಹಿಮೆ, ಹಿರಿಮೆ ಗರಿಮೆಗಳನ್ನು ಕುರಿತೇ ಸಾರುತ್ತಿದ್ದಾರೆಂಬುವುದು ಸುವಿದಿತ.

ಹನ್ನೆರಡು ಜನ ಆಳ್ವಾರರೂ, ''ಶ್ರೀಮನ್ನಾರಾಯಣನೇ ನಮಕ್ಕೇ ಪರೈತರುವಾನ್'' - ಶ್ರೀಮನ್ನಾರಾಯಣನೇ ನಮಗೆ ಪರವನ್ನೂ ಉತ್ತಮಗತಿಯನ್ನೂ ಪ್ರಸಾದಿಸುತ್ತಾನೆ ಎಂಬುದಾಗಿ ದೃಢ ಪ್ರಪತ್ತಿ (absolute unconditional surrender)ಮೂಲಕ ನಂಬಿದವರು. ಈ ಹನ್ನೆರಡು ಜನ ಆಳ್ವಾರರೂ ಒಟ್ಟಾರೆ ಹಾಡಿರುವ ದ್ರಾವಿಡ ದಿವ್ಯಪ್ರಬಂಧ ಐದನೆಯ ವೇದ, ದಿವ್ಯ ಪ್ರಬಂಧ, ನಾಲಾಯಿರ ದಿವ್ಯ ಪ್ರಬಂಧ, ತಿರುವಾಯ್ಮೊಳಿ(ಸಿರಿವದನದ ನುಡಿ) ನಾಲ್ಕು ಸಾವಿರ ಸಾಲಿನ ''ಪಾಶುರ'' (ಪದ್ಯ)ಗಳುಳ್ಳ ಭಕ್ತಿಕಾವ್ಯ ಗುಚ್ಛವೆನ್ನಬಹುದು.

ಭಗವಂತನ ಭಕ್ತಿಸಾಮ್ರಾಜ್ಯದಲ್ಲಿ ಅದ್ದಿ ಮುಳುಗಿದವರೇ ಆಳ್ವಾರರು, ಭಕ್ತಿಸಾಮ್ರಾಜ್ಯವಾಳುವವರೇ ಆಳ್ವಾರರು.

**ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ**
**ಶ್ರೀಭಕ್ತಿಸಾರ ಕುಲಶೇಖರ ಯೋಗಿವಾಹಾನ್।**
**ಭಕ್ತಾಂಘ್ರಿರೇಣು ಪರಕಾಲಯತೀಂದ್ರಮಿಶ್ರಾನ್**
**ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಮ್॥**

ಎಂಬುವ ಶ್ಲೋಕ ಹಾಡುವಂತೆ, ಪೊಯ್‌ಹೈ, ಪೂದತ್ತ, ಪೇಯ್, ಶ್ರೀ ವಿಷ್ಣುಚಿತ್ತ ಅಥವಾ ಪೆರಿಯಾಳ್ವಾರ್, ಅವರ ಸಾಕುಮಗಳಾಗಿ ಶ್ರೀರಂಗನಾಥನನ್ನೇ ಮದುವೆಯಾಗುವ ಪಣತೊಟ್ಟು ಶ್ರೀರಂಗನಲ್ಲೇ ಲೀನಳಾಗಿ ತಿರುಪ್ಪಾವೈ ಹಾಡಿರುವ ಆಂಡಾಳ್, ಭಕ್ತಿಸಾರರು, ಕುಲಶೇಖರರು, ತಿರುಪಾಣಿ (ಯೋಗಿವಾಹನ - ಅಂತ್ಯಜನಾದರೂ ತನ್ನ ಅಂತಸ್ಸಾಧನೆಯಿಂದ ಶ್ರೀರಾಮನನ್ನು ಹಾಡಿ ಅವನ ಪಾದ ಗಳಲ್ಲಿಯೇ ಲೀನನಾದ) ತೊಂಡರಡಿಪ್ಪೊಡಿ ಆಳ್ವಾರ್ (ಭಕ್ತರ ಪಾದ ಧೂಳಿ ಎಂಬುವ ವಿಷಯವುಳ್ಳಾತ) ಮಧುರಕವಿಯಾಳ್ವಾರ್, ತಿರುಮಳಿಶೈ ಆಳ್ವಾರ್, ಹಾಗೂ ಪರಕಾಲನ್ ಅಥವಾ ತಿರುಮಂಗೈ ಆಳ್ವಾರ್ (ಈಗಲೂ ನಾವು ದರ್ಶಿಸುವ ಶ್ರೀರಂಗನಾಥನ ಏಳು ಪ್ರಾಕಾರಗಳ ಭವ್ಯದೇವಾಲಯ ನಿರ್ಮಿಸಿದಾತ - ಮುಕ್ತಿನಾಥ ಕ್ಷೇತ್ರದಿಂದ ದಕ್ಷಿಣದಿಶೆ ಪರ್ಯಂತ ಪರ್ಯಟನೆಗೈದು, ಎಲ್ಲೆಡೆ ತನ್ನ ನಾರಣನನ್ನೇ ನಾಮವೈವಿಧ್ಯದಿಂದ ಹಾಡಿದಾತ).

ಈ ಎಲ್ಲ ಆಳ್ವಾರರು ಭಗವಂತನ ನಾಮ ಮಹಿಮೆಯನ್ನು ಕುರಿತೇ ಪ್ರಬಂಧಗಳ ಮೂಲಕ ಹಾಡಿದರು. ತಿರುವಂದಾದಿಗಳು, ತಿರುವೃತ್ತಗಳು, ಮಡಲ್, ಹೀಗೆ ದ್ರಾವಿಡ ಛಂದಸ್ಸಿನಲ್ಲಿಯೇ ಹಾಡಿರುವ ಸೊಗಸು ಇವರದು.

ಈ ಲೇಖನದ ಕಿರಿದಾದ ವ್ಯಾಪ್ತಿಯಲ್ಲಿ ನಾಲಾಯಿರ ಕುರಿತು ವಿಸ್ತಾರವಾಗಿ ಅಭಿವ್ಯಕ್ತಿಸುವುದು ಆನೆಯನ್ನು ಕನ್ನಡಿಯಲ್ಲಿ ಹಿಡಿದು ಪ್ರತಿಬಿಂಬಿಸಲೆಳಸುವ ಪ್ರಯತ್ನಕ್ಕೂ ಮಿಗಿಲು ಶ್ರಮವೇ ಎಂದರೆ ಉತ್ಪ್ರೇಕ್ಷೆಯಲ್ಲ. ಪ್ರಪತ್ತಿ - ಶರಣಾಗತಿಯೇ ಪ್ರಬಂಧ ಸ್ವಾರಸ್ಯ. ತಾನು ದಾಸ, ಭಗವಂತ ಈಶ; ಭಗವಾನ್ 'ಶೇಷಿ', ಜೀವಾತ್ಮ 'ಶೇಷ', ಈ ಶೇಷ-ಶೇಷಿ ಭಾವನೆ ಪ್ರಬಂಧದ ತಿರುಳು (ಮಧ್ವಸಿದ್ಧಾಂತದಲ್ಲಿ ಬಿಂಬರೂಪೀ ಪರಮಾತ್ಮ, ಪ್ರತಿಬಿಂಬ ಜೀವಾತ್ಮವೆನ್ನುವಂತೆ).

ಪರಮಾತ್ಮನ ನಾಮಸ್ಮರಣೆ, ನಾಮಮಹಿಮೆ ವಿಧವಿಧ ಕಥನ ಗಳನ್ನು ಉಲ್ಲೇಖಿಸುತ್ತಾ ಹಾಡಿರುವ ಆಳ್ವಾರರು ಆ ಭಗವಂತನ ಸ್ಪರ್ಶನಾನುಭವ ಪಡೆದವರು, ಪರಭಕ್ತಿ ಪರಜ್ಞಾನ ಸ್ವತಃ ಆಳ್ವಾರರಲ್ಲಿ ವಿಕಸನವಾಯ್ತು.

**ನಿನ್ರುಂ ನಿಲಂ ಅಂಗೈನೀರ್ ಏತ್ತು ಮೂವಡಿಯಾಲ್**
**ಶೆನ್ರು ದಿಶೆಯಳಂದ ಶಂಗಣ್‌ಮಾರ್ಕು ಎನ್ರುಂ**
**ಪಡೈ ಆಳಿಪುಳ್‌ಊರ್ದಿ ಪಾಂಬಣೆಯಾನ್‌ಪಾದಂ**
**ಅಡೈ ಆಳಿನೆಂಚೇ !! ಅರಿ (ಮುದಲ್‌ತಿರುವಂದಾದಿ -೨೧)**

''ನಾವು ಪರಮಾತ್ಮನನ್ನು ಯಾವ ರೂಪ, ಯಾವುದೇ ನಾಮದಿಂದ ಆರಾಧಿಸೋಣ, ಹಾಡೋಣ. ಅವನೇ ಒದಗುವ ಮಹಿಮೆ ಆ ನಾಮಕ್ಕೆ ಇದೆ'' ಎಂದು ಸಾರುತ್ತಾರೆ ಪೊಯ್‌ಹೈ ಆಳ್ವಾರರು. ಪ್ರಹ್ಲಾದ, ನಾರದ, ಧ್ರುವ, ಅಂಬರೀಷ, ವಿಭೀಷಣ (ಹೆಸರಿಗಷ್ಟೇ ರಾಕ್ಷಸ), ರುಕ್ಮಾಂಗದ, ವ್ಯಾಸರು, ಶುಕರು, ಶೌನಕರು, ಶ್ರೀರಾಮಾಯಣ (ತೆನ್‌ಇಲಂಗೈ ಕೋಳಿಮಾನ್) ದಕ್ಷಿಣದ ಲಂಕೆಗೈದಿ ರಾವಣನನ್ನು ಕೊಂದಾತನ ನಾಮಮಹಿಮೆ ಹನುಮಂತ, ಶಬರಿಯೇ ಬಲ್ಲರು ಎಂದು ಹಾಡುತ್ತಾರೆ.

''ತಮರುಹಂದದು ಎಪ್ಪೇರ್ ಮತ್ತಪ್ಪೇರ್'' ಯಾವುದೇ ಹೆಸರು, ನಾಮದಲ್ಲಿ ಅವನನ್ನು ಪೂಜಿಸುವ ಅಪೇಕ್ಷೆಪಡುವರೋ ಆ ನಾರಣನು ಹಾಗೆಯೇ ಅವರಿಗೆ ತನ್ನನ್ನು ತೋರ್ಪಡಿಸುವನು.

ಪೂದತ್ತಾಳ್ವಾರರು ತಮ್ಮ ಎರಡನೆಯ ನೂರು ಅಂದಾದಿ ಪದ್ಯಗಳಲ್ಲಿ ಭಕ್ತಿಯೆಂಬುವ ಹಣತೆಯಿಂದ 'ಶ್ರೀಮನ್ನಾರಣನನ್ನು ಕಂಡೆ, ಆ ಬೆಳಕನ್ನು ಕಂಡೆ' ಎಂದು ಹಾಡಿದ್ದಾರೆ.

''ನಾರಣನ್ ಪೇರ್ ಓದಿ'' ನಾರಾಯಣನ ನಾಮ ಸ್ಮರಿಸು, ಅವನ ಶ್ರೀನಾಮದಿಂದ ತುಂಬಿದ ಸಭೆಯಲ್ಲಿ ಸುಶೀಲೆ ದ್ರೌಪದಿಗೆ ಆಗಬೇಕಿದ್ದ ದುರ್ಘಟನೆ - ಗೋವಿಂದನಾಮದಿಂದ ಪರಿಹಾರವಾಯ್ತಲ್ಲವೇ? ಶ್ರೀಸಹಿತನಾದ ಶ್ರೀಮನ್ನಾರಾಯಣನ ನಾಮ ಮಹಿಮೆ ಅನ್ಯಾದೃಶ, ಅಸದಳ.

ಶ್ರೀಹರಿ, ಶ್ರೀಮನ್ನಾರಾಯಣ, ''ಓಂ ನಮೋ ನಾರಾಯಣಾಯ'' ಎಂಬುವ ಅಷ್ಟಾಕ್ಷರೀ ನಾಮ; ''ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ, ಶ್ರೀಮತೇ ನಾರಾಯಣಾಯ ನಮಃ'' ಎಂಬುವ ಮಂತ್ರದ್ವಯ; ಜತೆಗೆ,

**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ।**
**ತಸ್ಮಾತ್ ಕಾರುಣ್ಯ ಭಾವೇನ ರಕ್ಷ ರಕ್ಷ ಜಗತ್ಪತೇ॥** - ಎಂಬುವ ಈ ಮೂರು ಮಂತ್ರತ್ರಯೀ - ಹಾಡುವುದೇ ನಾಮಮಹಿಮೆಯ

ಕುರಿತಂತೆ. ''ತೂರ್ಣತ್ತಿಲ್ (ಕಂಬದಲ್ಲಿ) ಅವತರಿತ್ತಾನ್ ಸಿಂಗಂ'' – ಜಡಕಾಯದಲ್ಲಿ ನರಸಿಂಹನವತಾರದಿಂದ ಶ್ರೀಹರಿ ಅವತರಿಸಿದ್ದು ರಾಕ್ಷಸಸಂಹಾರ, ಪ್ರಹ್ಲಾದಪರಿಪಾಲನ – ನಾಮಮಹಿಮೆಯನ್ನು ಪ್ರಹ್ಲಾದ ಹಾಡಿದ್ದರೆಂದು ತಾನೆ ಈ ಅಪ್ರಾಕೃತ ಘಟನೆ ಸಂಭವಿಸಿದ್ದು!! ಈ ಹೊತ್ತೂ ನಾವು 'ಅಹೋಬಿಲ' ಕ್ಷೇತ್ರದಿಂದ 'ಪಾವನಾ' ಕ್ಷೇತ್ರದ ತನಕ ನವನಾರಸಿಂಹ ದರ್ಶನ ಮಾಡುವಲ್ಲಿ ನಾಮ ಜಪವೂ ಅತ್ಯಗತ್ಯ.

**ತೊಟ್ಟುಪಡೈಯುಟ್ಟುಂ ಕೋಲಿಂದವೆನ್ರಿಯಾನ್**
**ಅಟ್ಟಚುಯಕರತ್ತಾ ನನ್ರಾನ್ರು, ಕುಟ್ಟತ್ತಂ**
**ಕ್ಕೊಳ್ಮುದಲೈ ಕುಂಚ, ಕೊಳಿರಿತ್ತೆರಿನ್ದಶಕ್ಕಾರತ್ತಾನ್**

ತಾಳ್ಮದಲೇ ನಂಗಳ್ಳುಚ್ಚಾರ್‌ವು ಎಂಬುವಲ್ಲಿ ಗಜೇಂದ್ರನು ಸರೋವರದಲ್ಲಿ ಜಲಪಾನ ಮಾಡಹೋದಾಗ ಮೊಸಳೆ ಹಿಡಿದು ಕೊನೆಗೆ ಆನೆಯು 'ಆದಿಮೂಲಾ' ಎಂದು ಘೀಳಿಟ್ಟಾಗ, ಗರುಡ ವಾಹನನಾಗಿ ಏಂಟುಕೋಳ ಈ ನಾರಣನು ಬಂದು ಸುದರ್ಶನಚಕ್ರ ಪ್ರಯೋಗಿಸಿ ನಕ್ರನನ್ನು ಕೊಂದನಲ್ಲ! ನಾಮ ಮಹಿಮೆ ಎಂತಹುದೋ!

ಕುಲಶೇಖರ ಆಳ್ವಾರರು ನಾಮಮಹಿಮೆ – ಸೌಲಭ್ಯವನ್ನು ಕುರಿತೇ 'ಮುಕುಂದಮಾಲೆ' ಎಂಬ ಸೊಗಸಾದ ಭಕ್ತಿರಸಸ್ಯಂದಿ ಸ್ತೋತ್ರ ಹಾಡಿದ್ದಾರೆ. 'ಮಂತ್ರಂ ಸಪ್ರಣವಂ ಪ್ರಣಾಮಸಹಿತಂ' ಓಂಕಾರ ಸಹಿತ ನಮನಗೈಯುತ 'ಓಂ ನಮೋ ನಾರಾಯಣಾಯ' ಎಂಬುವ ಅಷ್ಟಾಕ್ಷರೀ ನಾಮವನ್ನು ಮತ್ತೆ ಮತ್ತೆ ಹೇಳು, ಒಳ್ಳೆಯದಾಗುತ್ತದೆ ಎಂದು ಹಾಡಿದ್ದಾರೆ.

ನಮ್ಮಾಳ್ವಾರರ ಪರಮಾತ್ಮಾನುಭವ ಶ್ರೀಮನ್ನಾರಾಯಣನ ನಾಮಮಹಿಮೆಯ ಕುರಿತು ಹಾಡಿದ್ದರಿಂದಲೇ! ತಿರುವಿರುತ್ತಮ್, ತಿರುವಾಶಿರಿಯಂ, ಪೆರಿಯ ತಿರುವಂದಾದಿ, ತಿರುವಾಯ್‌ಮೊಳಿ, ಈ ನಾಲ್ಕು ಪ್ರಬಂಧಗಳೂ, ಋಕ್, ಯಜಸ್ಸು, ಅಥರ್ವ, ಸಾಮವೇದಕ್ಕೆ ಸಮವೆಂದು ಭಾವಿಸುತ್ತಾರೆ. ತಾವು ನಂಬಿದ ಶ್ರೀನಾರಣನನ್ನು ಪಿತಾ, ಮಾತಾ, ಆಚಾರ್ಯ ಎಂದೆಲ್ಲ ಹಾಡುತ್ತಾರೆ. ನಾಯಕ ನಾಯಕಿ ಭಾವದಲ್ಲಿ ತಿರುವಾಯ್‌ಮೊಳಿ ಪ್ರಬಂಧ ಹಾಡುತ್ತಾರೆ:

**ಎನ್ನಕ್ಕಾರಾವಮುದಾಯೆನ ದಾವಿಯೈಯಿನ್ನುಯಿರೈ,**
**ಮನಕ್ಕಾರಾಮೈಮನಿಯುಂಡಿಟ್ಟಾಯಿನಿಯುಂಡೋಳಿಯಾಯ್,**
**ಪುನಕ್ಕಾಯಾ ನಿರತ್ತಪುಂಡರೀಕಕ್ಕಾಣ್ ಶೆಂಗನಿವಾಯ್,**
**ಉನಕ್ಕೇರ್ಕುಮ್ ಕೋಲಮಲರ್‌ಪ್ಪಾವೈಕ್ಕನ್ಬಾಕಿಯವೆನ್ನನ್ಬೇಯೋ**

ಅತಸೀಕುಸುಮಗಾತ್ರ ನೀನು, ಪುಂಡರೀಕಾಕ್ಷನೀನು, ಬಿಂಬಾಧರ ನಿನಗೆ ತಕ್ಕ ಸೌಂದರ್ಯವುಳ್ಳ ಪದ್ಮೋದ್ಭವೆ ಶ್ರೀ ಲಕ್ಷ್ಮೀದೇವಿಗೆ ಪ್ರಿಯವಲ್ಲಭ ನನ್ನ ಪ್ರೇಮಮೂರ್ತಿ – ನಿನ್ನನ್ನೇ ನಾಮವಿಶೇಷಗಳ ಮೂಲಕ ಪ್ರಶಂಸೆಯ ಸ್ತುತಿಯನ್ನು ಹಾಡುತ್ತೇನೆ.

ಪರಮಾತ್ಮ ಆಳ್ವಾರರ ಪ್ರಾರ್ಥನೆಗೆ ಮಾರುಹೋಗಿ ಪ್ರತ್ಯಕ್ಷನಾದಾಗ, ಅವನಿಗೆಲ್ಲಿಯಾದರೂ ಕೆಟ್ಟಕಂಗಳ ದೃಷ್ಟಿ ತಾಕೀತೋ ಎಂದು ಮಂಗಳಾಶಾಸನ – ನಾಮಮಹಿಮೆ ಹಾಡಿದರು ಪೆರಿಯಾಳ್ವಾರರು.

ತಿರುಮಂಗೈ ಕಳ್ಳರಕುಲದವ – ನಾಟ್ಕವಿ ಪೆರುಮಾಳ್ – ಆಶು, ವಿಸ್ತಾರ, ಮಧುರ, ಚಿತ್ರ– ಹೀಗೆ ನಾಲ್ಕು ವಿಧದ ತಮಿಳುಗೀತ ರಚನೆಯ ಪ್ರತಿಭಾವಂತರಿವರು.

ಸಾವಿರಾರು ಪಾಶುರಗಳ ನಾಲ್ಕು ಪ್ರಬಂಧಗಳನ್ನು ತಿರುಮಂಗೈ ಆಳ್ವಾರ್ ಹಾಡಿದ್ದಾರೆ. ಇದರಲ್ಲಿ ಪೆರಿಯ ತಿರುಮೋಳಿ – ಬಹುಶ್ರುತ– ಎಲ್ಲವೂ ಭಗವನ್ನಾಮ ಮಹಿಮೆ ಕುರಿತವೇ. ಜತೆಗೆ ಬದುಕಿನ ದಟ್ಟ ಅನುಭವ – ಅಲ್ಲಿಯ ನೋವು – ಶ್ರೀಮನ್ನಾರಾಯಣನ ದಿವ್ಯ ಕೃಪೆಯಿಂದ ಮಾತ್ರ ಸಂಸಾರತಾರಣ ಆದೀತು! ರಾಮಾಯಣ, ಮಹಾಭಾರತ, ಭಾಗವತ, ಎಲ್ಲವನ್ನೂ ತಮ್ಮ ಪಾಶುರಗಳ ಸಾಲ್ಗಳಲ್ಲಿ ಕಥನರೂಪದಲ್ಲಿ ಹಾಡಿರುವ ಆಳ್ವಾರರು ಆ ದಿವ್ಯನಾಮ ಮಹಿಮೆ ಎಷ್ಟು ಅಸಾದೃಶವೆಂದು ಅಭಿವ್ಯಕ್ತಿಸಿದ್ದಾರೆ.

**ಕುಲಂತರುಂ ಶೆಲ್ವಂ ತಂದಿಡುಂ ಅಡಿಯಾನ್ ಪಡು ತಯಿರಾಯಿನ ವೆಲ್ಲಾಂ''**

ನಾರಾಯಣ ನಾಮಮಹಿಮೆ ಕುಲವನ್ನು ಸತ್ಕುಲವಾಗಿಸುವುದು, ಅಖಂಡ ಐಸಿರಿಯನ್ನು ತರುವುದು, ಭಕ್ತರ (ಅಡಿಯಾನ್) ದುಃಖಗಳನ್ನು ನಾಶ ಪಡಿಸುವುದು.

**''ಶೊಲ್ಲೈನಾನ್ ಕಂಡುಕೊಂಡೇನ್ ನಾರಾಯಣಾ ಎನ್ರುಂ ನಾಮಂ॥''**

'ನಾಮಸ್ಮರಣೆ – ನಾರಾಯಣನೆಂಬುವ ಸೊಲ್ಲು ಎಲ್ಲವೂ ಅನುಗ್ರಹ ತರುವ ಸಂಪನ್ನತೆಯುಂಟು ಮಾಡುವುದೆಂದು ನಾನರಿತೆ' ಎನ್ನುತ್ತಾರೆ ತಿರುಮಂಗೈ.

ಆಳ್ವಾರರು ಕೇವಲ ತತ್ತ್ವನಿರೂಪಕರಷ್ಟೇ ಅಲ್ಲ. ಅವರು ಉಚ್ಚರಿಸಿ ಉದ್ಘೋಷಿಸುವ ಶ್ರೀಮನ್ನಾರಾಯಣ ನಾಮಮಹಿಮೆ ಅಲ್ಲಿ ಹರಳುಗಟ್ಟಿರುವ ಅನುಭವಸರಣಿ. ಮಾನವನಿರುವುದು. ಕೇವಲ ಉಪಭೋಗ – ಸ್ವಾರ್ಥಕ್ಕೆ ಅಲ್ಲ, ಕಾಣದ, ಆದರೆ ನೆಮ್ಮದಿ ನೀಡುವ ಭಗವಂತನ ಕೈಂಕರ್ಯಕ್ಕಾಗಿ. ಅದಕ್ಕೆ ಅತ್ಯಂತ ಸುಲಭವಾದ ಮಾರ್ಗ ಭಕ್ತಿಮಾರ್ಗ – ಅವನ ದಿವ್ಯನಾಮ ಮಹಿಮೆ ಕುರಿತು ಪ್ರಶಂಸೆ ಹಾಡುವುದು!

''ಕಾದುದೀತನ ನಾಮವು ಆ ಪ್ರಹ್ಲಾದನ ಆಸರು ಬೇಸರನು'', ''ನಾಮಧಾರಿಗಳತುಳ ಬಲರೆಂದ'', ''ಗತಿವಿಹೀನರಿಗೆ ಅಕಟ ನೀನೆ ಗತಿಯಲ್ಲೆ ಗೋವಿಂದ'' ಎಂದು ಗೋಳಿಟ್ಟ ದ್ರೌಪದಿಗೆ ಗೋವಿಂದ ನಾಮ ಮಹಿಮೆಯಿಂದ ತಾನೆ ಅಕ್ಷಯಾಂಬರಪ್ರದಾನವಾದದ್ದು? ಆಳ್ವಾರರುಗಳು ಹಾಡಿದ ಶ್ರೀನಾಮಗಳ ಸಮೂಹವಾದ ದಿವ್ಯ ಪ್ರಬಂಧಗಳ ಇಡೀ ವಾಙ್ಮಯವು ಭಗವನ್ನಾಮ ಮಹಿಮೆ ಕುರಿತೇ ಚಿಂತನೆಗೈಯುತ್ತವೆ. ಇದರಿಂದ ನಮ್ಮ ಬದುಕೂ ಹಸನಾಗುತ್ತದೆ. ತಮಿಳು ಭಾಷೆಯೆಂಬುವುದು ಇಲ್ಲಿ ಬಾಧಕ ಆಗದೆ, ಪ್ರಬಂಧಗಳ ಭಾವ – ಅಂತರಂಗ – ಆಳ್ವಾರರು ನಂಬಿ ನುತಿಸಿದ ಶ್ರೀಮನ್ನಾರಾಯಣ ದಿವ್ಯನಾಮಾಮೃತ – ಹಾಗೂ ಆ ನಾಮ ಮಹಿಮೆ ಎರಡನ್ನೂ ಬಣ್ಣಿಸುವ ಕಾವ್ಯವೇ ಆಗುತ್ತದೆ. ಇಲ್ಲಿ ಪಠಣ – ಭಕ್ತಿ ಮುಖ್ಯ. ಮನದ ವೈಶಾಲ್ಯ ಅತ್ಯಗತ್ಯ. ❖

# ರಾಮನಾಮದ ಮಹತ್ವ

**ಎಚ್.ಎಲ್.ಸೀತಾದೇವಿ**



**ದ**ಶಾವತಾರಗಳಲ್ಲಿ ನಮ್ಮ ಬದುಕಿಗೆ ಅತ್ಯಂತ ಸಮೀಪವಾದದ್ದು ರಾಮಾವತಾರ. ರಾಮೋಪಾಸನೆ ನಮ್ಮಲ್ಲಿ ಅನೂಚಾನವಾಗಿ, ಒಂದು ಪರಂಪರೆಯಾಗಿಯೇ ಬೆಳೆದು ಬಂದಿದೆ. ನಮ್ಮ ಉದ್ಧಾರಕ್ಕೆ ಅದು ಅತ್ಯಗತ್ಯವೂ ಹೌದು.

ಬದುಕಿನ ಆಸೆ, ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು, ಇಷ್ಟ ಪ್ರಾಪ್ತಿ, ಅನಿಷ್ಟ ನಿವಾರಣೆಗೆ ನಾವು ಅವಲಂಬಿಸುವ ಸಾಧನವೇ ಉಪಾಸನೆ. ಉಪಾಸನೆಯಲ್ಲಿ ನಾಲ್ಕು ವಿಧ. ಪಠಣ, ಸಂಕೀರ್ತನ, ಧ್ಯಾನ ಮತ್ತು ಪೂಜೆ.

**'ಧರ್ಮಮಾರ್ಗಂ ಚರಿತ್ರೇಣ ಜ್ಞಾನಮಾರ್ಗಂ ಚ ನಾಮತಃ ।**
**ತಥಾ ಧ್ಯಾನೇನ ವೈರಾಗ್ಯಂ ಐಶ್ವರ್ಯಂ ಸ್ವಸ್ಯಪೂಜನಾತ್ ॥'**

– ಎನ್ನುವಂತೆ ರಾಮಚರಿತ್ರೆಯನ್ನು ಓದುವುದರಿಂದ ಧರ್ಮ ಮಾರ್ಗಿ ಅರ್ಥಾತ್ ಸನ್ಮಾರ್ಗಿಯಾಗಬಹುದು. ನಾಮ ಜಪದಿಂದ ಮುಕ್ತಿಗೆ ಕಾರಣವಾದ ಜ್ಞಾನ ಪ್ರಾಪ್ತಿಯಾಗುತ್ತದೆ. ರಾಮಧ್ಯಾನದಿಂದ ವೈರಾಗ್ಯ ಬಂದರೆ, ಪೂಜೆ ಮಾಡುವುದರಿಂದ ಸಕಲೈಶ್ವರ್ಯ ಪ್ರಾಪ್ತಿಯಾಗುತ್ತದೆ. ಅದಕ್ಕೇ ಅಲ್ಲವೇ ಆಚಾರ್ಯ ಶಂಕರರು **'ನಾಮ ಸ್ಮರಣಾದನ್ಯೋಪಾಯಂ ನ ಹಿ ಪಶ್ಯಾಮೋ ಭವತರಣೇ'** ಎಂದಿರುವುದು? ಈ ಭವಸಾಗರವನ್ನು ದಾಟಲು ದೇವರ ನಾಮ ಸ್ಮರಣೆ ಬಿಟ್ಟರೆ ಬೇರೆ ದಾರಿ ಇಲ್ಲ. ಹಾಗಾಗಿಯೇ ನಾಮೋಪಾಸನೆಗೆ ವಿಶೇಷ ಮಹತ್ವ ಬಂದಿರುವುದು. ನವವಿಧ ಭಕ್ತಿಯಲ್ಲಿ ನಾಮ ಸಂಕೀರ್ತನೆಯೂ ಒಂದು. ನಾಮ ಜಪದಿಂದ ಚಿತ್ತಶುದ್ಧಿ , ಏಕಾಗ್ರತೆ ಹಾಗೂ ಮಾನಸಿಕ ನೆಮ್ಮದಿ ದೊರೆಯುತ್ತದೆ.

**ಭಾರತದ ಆಧ್ಯಾತ್ಮಿಕ ಪಂಥಗಳಲ್ಲಿ ರಾಮನಾಮದ ಮಹತ್ವ ವಿಶಿಷ್ಟವಾಗಿದೆ. ಆದಿಕವಿ ವಾಲ್ಮೀಕಿಯಿಂದ ಹಿಡಿದು ಆಧುನಿಕ ಯುಗದವರೆಗೂ ಶ್ರೀರಾಮಚಂದ್ರನ ದಿವ್ಯವ್ಯಕ್ತಿತ್ವದೊಂದಿಗೆ ಜೊತೆಜೊತೆಯಾಗಿ ಬರುವ ಅವನ ದಿವ್ಯನಾಮವನ್ನು ಕುರಿತು ಬರೆದಿರುವ ಲೇಖಕಿ 'ಕನ್ನಡಪ್ರಭ' ಪತ್ರಿಕೆಯಲ್ಲಿ ಉಪಸಂಪಾದಕಿಯಾಗಿ, ಆಕಾಶವಾಣಿಯಲ್ಲಿ ವಾರ್ತಾಪ್ರಸಾರಕರಾಗಿ ಸೇವೆ ಸಲ್ಲಿಸಿದ್ದಾರೆ. ಸಾಹಿತ್ಯಾಸಕ್ತರೂ, ಉತ್ತಮ ಲೇಖಕಿಯೂ ಆಗಿರುವ ಇವರು ಈಗ ಮೈಸೂರು ನಿವಾಸಿಗಳಾಗಿದ್ದಾರೆ.**

ಹೀಗೆ ನಾಮೋಪಾಸನೆ ಮಾಡಲು ಅತ್ಯಂತ ಸುಲಭವಾದ ವಿಶಿಷ್ಟ ಮಂತ್ರ ಶ್ರೀರಾಮ ಮಂತ್ರ. **'ಓಂ ನಮೋ ನಾರಾಯಣಾಯ'** ಎಂಬ ಅಷ್ಟಾಕ್ಷರೀ ಮಹಾ ಮಂತ್ರದ **'ರಾ'** ಹಾಗೂ **' ಓಂ ನಮಃ ಶಿವಾಯ '** ಎಂಬ ಪಂಚಾಕ್ಷರೀ ಮಂತ್ರದ **'ಮ'** ಮತ್ತು ಶಾಕ್ತ ಮಂತ್ರಗರ್ಭಿತವಾದ **'ಶ್ರೀ'**ಕಾರಗಳು ಸೇರಿ ಶ್ರೀರಾಮ ಮಹಾಮಂತ್ರವಾಗಿದೆ. ಇದು ನಾರಾಯಣ, ಶಿವ, ಶಕ್ತಿತತ್ತ್ವಗಳ ಸಂಗಮ. ಐಹಿಕ, ಆಮುಷ್ಮಿಕ – ಎರಡೂ ಫಲಗಳನ್ನು ಕೊಡುವ ತಾರಕ ಮಂತ್ರ. ಅದಕ್ಕೇ–

**ಸಪ್ತಕೋಟಿ ಮಹಾಮಂತ್ರಾಃ ಚಿತ್ತವಿಭ್ರಮಕಾರಕಾಃ ।**
**ಏಕ ಏವ ಪರೋ ಮಂತ್ರೋ ರಾಮ ಇತ್ಯಕ್ಷರ ದ್ವಯಮ್ ॥**

– ಎನ್ನುವುದು. ಅಂದರೆ ಮನಸ್ಸನ್ನು ಪರವಶಗೊಳಿಸುವ ಏಳುಕೋಟಿ ಮಹಾಮಂತ್ರಗಳಲ್ಲಿ ಅತ್ಯಂತ ವಿಶಿಷ್ಟವಾದ, ಮಹತ್ತರ ವಾದ ಏಕೈಕ ಮಂತ್ರ ಶ್ರೀರಾಮ ಮಂತ್ರವಾಗಿದೆ ಎಂದರ್ಥ. ಈ ಮಂತ್ರದ ಪ್ರಭಾವದಿಂದಲೇ ಆದಿಶೇಷ, ಇಡೀ ಬ್ರಹ್ಮಾಂಡದ ಭಾರವನ್ನು ಹೊರಲು ಸಮರ್ಥನಾದದ್ದು, ಅಗಸ್ತ್ಯರು ಸಮುದ್ರಪಾನ ಮಾಡಲು, ವಿಂಧ್ಯಪರ್ವತವನ್ನು ನಿಗ್ರಹಿಸಲು ಸಾಧ್ಯವಾದದ್ದು. ಹೆಚ್ಚು ಹೇಳುವುದೇಕೆ, ಅತ್ಯಂತ ದುಷ್ಟನಾದ, ಕಡು ಕ್ರೂರಿಯಾದ, ದಾರಿಗಳ್ಳನಾದ ಬೇಡನೊಬ್ಬ ಮಹಾಮುನಿಯಾಗಿ, ವಾಲ್ಮೀಕಿಯಾಗಿ ಪರಿವರ್ತಿತನಾದದ್ದು.

ಈ ಬಗ್ಗೆ **ತತ್ತ್ವಸಂಗ್ರಹ ರಾಮಾಯಣ**ದಲ್ಲಿ ಒಂದು ಕಥೆ ಇದೆ. ಒಮ್ಮೆ ಶಿವ, ಪಾರ್ವತಿಯರು ಸಲ್ಲಾಪದಲ್ಲಿ ತೊಡಗಿದ್ದಾಗ, 'ರಾಮನಾಮವನ್ನು ಅನವರತ ಜಪಿಸುವುದರ ಫಲವೇನು? ರಾಮ ನಾಮ ಸಂಕೀರ್ತನೆಯಿಂದ ಯಾರು ಬೇಕಾದರೂ ಮುಕ್ತಿ ಹೊಂದಬಹುದೇ?' ಎಂದು ಪಾರ್ವತಿ ಕೇಳುತ್ತಾಳೆ. ಆಗ ಶಿವ ಈ ಕಥೆಯನ್ನು ಹೇಳುತ್ತಾನೆ:

ಮಹಾತೇಜಸ್ವಿಗಳಾದ ಸಪ್ತರ್ಷಿಗಳು ಒಮ್ಮೆ ಹಿಮಾಲಯದ ಕಡೆಗೆ ಹೊರಟಿದ್ದರು. ದಾರಿಯಲ್ಲಿ ದಟ್ಟವಾದ ಕಾಡು. ಅಲ್ಲಿ ಭಯಂಕರವಾದ ಕ್ರೂರ ಮೃಗಗಳು, ಅವಕ್ಕಿಂತಲೂ ಕ್ರೂರರಾದ ದರೋಡೆ

ಕೋರರಿದ್ದರು. ಸಪ್ತರ್ಷಿಗಳು ಆ ದಾರಿಯಲ್ಲಿ ಹೋಗುತ್ತಿದ್ದಾಗ ಆ ದರೋಡೆಕೋರರ ಮುಂದಾಳು ಹಠಾತ್ತಾಗಿ ಇವರ ದಾರಿಗಡ್ಡ ವಾಗಿ ಬಂದು ನಿಂತ. ಅವನೋ ಅತ್ಯಂತ ನೀಚ, ಕ್ರೂರಿ. ಧರ್ಮ–ಕರ್ಮ ಎಂದರೆ ಏನೆಂಬುದನ್ನೇ ತಿಳಿಯದವನು. ಕೈಯಲ್ಲಿದ್ದ ಕತ್ತಿಯನ್ನು ಝಳಪಿಸುತ್ತಾ, ''ನಿಮ್ಮಲ್ಲಿರುವುದನ್ನೆಲ್ಲಾ ಸುಮ್ಮನೆ ಕೊಟ್ಟುಬಿಡಿ. ಇಲ್ಲದಿದ್ದರೆ.....'' ಎಂದು ಅಬ್ಬರಿಸಿದ.

ಸಪ್ತರ್ಷಿಗಳು ಒಂದಿಷ್ಟೂ ವಿಚಲಿತರಾಗದೆ, ಅವನನ್ನು ಕನಿಕರ ದಿಂದ ನೋಡುತ್ತಾ, ''ಅಯ್ಯಾ, ನಾವು ಹೇಳಿಕೇಳಿ ಸಂನ್ಯಾಸಿಗಳು, ಸರ್ವಸಂಗ ಪರಿತ್ಯಾಗಿಗಳು. ಈ ದಂಡ, ಕಮಂಡಲ, ಜಪಮಾಲೆ ಗಳನ್ನು ಬಿಟ್ಟರೆ ನಮ್ಮ ಹತ್ತಿರ ಬೇರೆ ಏನೂ ಇಲ್ಲ'' ಎಂದರು.

''ಧನಕನಕಗಳನ್ನು ಎಲ್ಲಿ ಮುಚ್ಚಿಟ್ಟಿದ್ದೀರಿ?'' ಮತ್ತೆ ಬಂತು ಪ್ರಶ್ನೆ.

''ಅಯ್ಯಾ, ಮೈಮೇಲಿನ ಬಟ್ಟೆಗಳನ್ನು ಬಿಟ್ಟರೆ ನಮ್ಮಲ್ಲಿ ಇನ್ನೇನೂ ಇಲ್ಲ'' ಬಂತು ಉತ್ತರ. ಆ ದರೋಡೆಕೋರನಿಗೆ ನಂಬಿಕೆ ಬರಲಿಲ್ಲ. ''ಮರ್ಯಾದೆಯಿಂದ ಕೇಳುತ್ತಿದ್ದೇನೆ. ಇರುವು ದನ್ನೆಲ್ಲಾ ಕೊಟ್ಟುಬಿಡಿ, ಇಲ್ಲದಿದ್ದರೆ ನಿಮ್ಮನ್ನೆಲ್ಲಾ ಕೊಂದು ದೋಚಿ ಕೊಂಡು ಹೋಗುತ್ತೇನೆ'' ಎಂದು ಅಬ್ಬರಿಸಿದ.

ಸಪ್ತರ್ಷಿಗಳು ಶಾಂತರಾಗಿ ಪ್ರಶ್ನಿಸಿದರು, ''ಎಲ್ಲಿಗೆ?''

''ಇನ್ನೆಲ್ಲಿಗೆ? ಮನೆಗೆ. ನೀವೇನೋ ಸರ್ವಸಂಗ ಪರಿತ್ಯಾಗಿ ಗಳು. ಆದರೆ ನನಗೆ ಮನೆಮಠ ಇದೆಯಲ್ಲಾ. ಹೆಂಡತಿ, ಮಕ್ಕಳನ್ನು ಸಾಕ ಬೇಕಲ್ಲಾ?'' ಎಂದಾತ ಉತ್ತರಿಸಿದ.

''ಅದಕ್ಕಾಗಿ ಇಂಥ ನೀಚ ಕೆಲಸವೇ?''

''ನೀಚವೋ, ಹೀನವೋ, ನನಗೊಂದೂ ಗೊತ್ತಿಲ್ಲ. ನನಗೆ ತಿಳಿದ ಕಸುಬು ಇದೊಂದೇ.''

''ಹಾಗಿದ್ದಲ್ಲಿ ನಿನಗೆ ರೌರವ ನರಕ ಖಚಿತ.''

ಸಪ್ತರ್ಷಿಗಳ ಮಾತಿನಿಂದ ಇದೇ ಮೊದಲ ಬಾರಿಗೆ ಆ ದರೋಡೆಕೋರನಿಗೆ ಸ್ವಲ್ಪ ಭಯವಾಯಿತು. ಇದುವರೆಗೂ ಯಾರೂ ಅವನೊಡನೆ ನಿಂತು ಮಾತನಾಡಿದ್ದೇ ಇಲ್ಲ. ನೋಡಿ ದರೇ ಅಂಜಿ, ಇದ್ದದ್ದನ್ನೆಲ್ಲಾ ಕೆಳಗಿಟ್ಟು ಕಾಲಿಗೆ ಬುದ್ಧಿ ಹೇಳು ತ್ತಿದ್ದರು. ಆದರೆ ಈ ಜಟಾಧಾರಿಗಳಾದರೋ ಹೆದರುವುದಿರಲಿ, ನನಗೇ ಬೆದರಿಕೆ ಹಾಕುತ್ತಿದ್ದಾರಲ್ಲಾ? ನಾನು ಮಾಡುತ್ತಿರುವುದು ಸರಿಯೋ, ತಪ್ಪೋ ಎಂಬ ಜಿಜ್ಞಾಸೆ ಕಾಡಲಾರಂಭಿಸಿತು.

ಅದೇ ಸರಿಯಾದ ಸಮಯವೆಂದು ಸಪ್ತರ್ಷಿಗಳು, ''ಅಯ್ಯಾ, ನೀನು ದೋಚಿದ ಒಡವೆ, ವಸ್ತುಗಳಿಗೆ ನಿನ್ನ ಹೆಂಡತಿ, ಮಕ್ಕಳು, ಬಂಧುಬಾಂಧವರು ಪಾಲುದಾರರು ಹೌದಾ?'' ಎಂದು ಕೇಳಿದರು.

''ಹೌದು'' ಎಂಬ ಉತ್ತರ ಬಂತು. ''ಹಾಗಾದರೆ ನಿನ್ನ ಪಾಪ ಪುಣ್ಯ ಗಳಲ್ಲಿ ಅವರೂ ಭಾಗಿದಾರರೆ?''

''ಆಗಿರಲೇಬೇಕಲ್ಲಾ'' ಎಂದ ದರೋಡೆಕೋರ. ''ಸುಮ್ಮನೆ ಹೇಳಬೇಡ. ಹೋಗಿ ಅವರನ್ನೇ ಕೇಳಿಕೊಂಡು ಬಾ'' ಎಂದರು ಸಪ್ತರ್ಷಿಗಳು. ''ಸರಿ, ನಾನು ಬರುವವರೆಗೂ ಎಲ್ಲಿಗೂ ಹೋಗ ಬಾರದು, ಇಲ್ಲೇ ಇರಬೇಕು'' ಎಂದು ಅವರಿಗೆ ಎಚ್ಚರಿಕೆ ಇತ್ತು, ಅವನು ಮನೆಗೆ ಹೋದ. ನೇರವಾಗಿ ಹೆಂಡತಿ, ಮಕ್ಕಳು, ಬಂಧು ಬಾಂಧವರನ್ನು ಒಬ್ಬೊಬ್ಬರನ್ನಾಗಿ ಕರೆದು ವಿಚಾರಿಸಿದ. ಆದರೆ ಯಾರೊಬ್ಬರೂ ಅವನ ಪಾಪದಲ್ಲಿ ಭಾಗಿಯಾಗಲು ಸುತರಾಂ ಒಪ್ಪಲೇ ಇಲ್ಲ. ಹೆಂಡತಿ, ಮಕ್ಕಳನ್ನು ಸಾಕುವುದು ಮನೆಯ ಯಜಮಾನನ ಕರ್ತವ್ಯ. ಅದಕ್ಕಾಗಿ ಅವನು ವಾಮಮಾರ್ಗ ಹಿಡಿದರೆ ಅವನೇ ಜವಾಬ್ದಾರ. ಅದರಲ್ಲಿ ನಮ್ಮ ಪಾಲು ಏನೂ ಇಲ್ಲ ಎಂದು ಅವರೆಲ್ಲಾ ಧೂಳು ಕೊಡವಿದಂತೆ ಅವನ ಮಾತನ್ನು ಝಾಡಿಸಿಬಿಟ್ಟರು.

ತನ್ನವರು ಎಂದುಕೊಂಡವರ ಮಾತಿನಿಂದ ದರೋಡೆಕೋರನಿಗೆ ದಿಗ್ಭ್ರಮೆಯಾಯಿತು. ಅದೇ ಅವನ ಜ್ಞಾನೋದಯಕ್ಕೆ ಕಾರಣ ವಾಯಿತು. ಸತ್ಯದ ಸಾಕ್ಷಾತ್ಕಾರಕ್ಕೆ ಸಾಧನವಾಯಿತು. ಅವನಲ್ಲಿ ವೈರಾಗ್ಯ ಮೂಡಿತು. ಅವನು ನೇರವಾಗಿ ಸಪ್ತರ್ಷಿಗಳ ಬಳಿಗೆ ಬಂದು, ತನ್ನನ್ನು ಉದ್ಧರಿಸುವಂತೆ ಪ್ರಾರ್ಥಿಸಿದ.

ಅವರೆಲ್ಲಾ ತಮ್ಮ ತಮ್ಮಲ್ಲೇ ಸಮಾಲೋಚಿಸಿ, ಆತನ ಪಾಪಹರಣಕ್ಕೆ ಮಂತ್ರೋಪದೇಶವೊಂದೇ ಪರಿಹಾರ ಎಂಬ ನಿರ್ಧಾರಕ್ಕೆ ಬಂದರು. ಆದರೆ ಅವನು ಅದೆಷ್ಟು ಪಾಪಕೃತ್ಯಗಳನ್ನು ಮಾಡಿದ್ದನೆಂದರೆ ಅವನಿಗೆ ನೇರವಾಗಿ ಮಂತ್ರೋಪದೇಶ ಮಾಡು ವಂತಿರಲಿಲ್ಲ. ಹಾಗಾಗಿ ತಿರುಗು ಮುರುಗಾಗಿ ಶ್ರೀರಾಮ ಮಂತ್ರ ವನ್ನು ಬೋಧಿಸಲು ತೀರ್ಮಾನಿಸಿದರು.

'' 'ಮರಾ, ಮರಾ ಮರಾ' ಎಂದು ಹಗಲಿರುಳು ಎಡೆಬಿಡದೆ ಜಪಿಸು. ನಿನ್ನ ಜೀವನ ಸಾರ್ಥಕವಾಗುತ್ತದೆ'' ಎಂದು ಹೇಳಿ ಸಪ್ತರ್ಷಿಗಳು ಮುಂದಕ್ಕೆ ಪ್ರಯಾಣ ಬೆಳೆಸಿದರು.

ದರೋಡೆಕೋರ, ಹಸಿವು, ಬಾಯಾರಿಕೆ, ಕೊನೆಗೆ ಉಸಿ ರಾಟದ ಪರಿವೆಯೂ ಇಲ್ಲದೆ ಏಕಮನಸ್ಕನಾಗಿ 'ಮರಾ, ಮರಾ, ಮರಾ' ಎಂದು ಜಪಿಸುತ್ತಾ, ಆ ದಿವ್ಯವಾದ ರಾಮಮಂತ್ರದಲ್ಲಿ ತಲ್ಲೀನನಾಗಿ ಬಿಟ್ಟ. ಅವನ ಮೇಲೆ ಹುತ್ತ ಬೆಳೆಯಿತು. ಮುಂದೆ ಎಷ್ಟೋ ವರ್ಷಗಳ ನಂತರ ಸಪ್ತರ್ಷಿಗಳು ಅದೇ ಮಾರ್ಗವಾಗಿ ಬಂದರು. ಹುತ್ತದಿಂದ ರಾಮನಾಮದ ದಿವ್ಯನಾದ ಹೊರ ಹೊಮ್ಮುತ್ತಿರುವುದನ್ನು ಕೇಳಿ ಬೆರಗಾದರು. ಅವರಿಗೆ ಹಿಂದಿನದ್ದೆಲ್ಲಾ ಜ್ಞಾಪಕಕ್ಕೆ ಬಂತು. ಬ್ರಹ್ಮಾನಂದದಲ್ಲಿ ಮುಳುಗಿದ್ದ, ಸಂಪೂರ್ಣ ಸಾತ್ವಿಕನಾಗಿದ್ದ ಆ ದರೋಡೆಕೋರನನ್ನು, ''ವಾಲ್ಮೀಕೀ, ಹೊರಗೆ ಬಾ. ಇನ್ನು ಮುಂದೆ ನೀನು ಬ್ರಹ್ಮರ್ಷಿಯಾಗು' ಎಂದು ಆಶೀ ರ್ವದಿಸಿದರು.

ಅತ್ಯಂತ ಕಡುಕ್ರೂರಿಯಾಗಿದ್ದ ದರೋಡೆಕೋರನೊಬ್ಬ ಬ್ರಹ್ಮರ್ಷಿಯಾಗಿ ಬದಲಾಗಲು ಕಾರಣವಾದದ್ದು ರಾಮಮಂತ್ರ. ಇದು ಶ್ರೀರಾಮನಾಮದ ಮಹಿಮೆ. ಅದಕ್ಕೇ ಹೇಳುವುದು–

**ರಾಮನಾಮ ಸಮಂ ತತ್ತ್ವಂ ನಾಸ್ತಿ ವೇದಾಂಗೋಚರಮ್ ।**
**ಯತ್ಪ್ರಸಾದಾತ್ಪರಾಂಸಿದ್ಧಿಂಸಂಪ್ರಾಪ್ತಾಃಮುನಯೋಽಮಲಾಮ್॥**
– ಎಂದು.

ರಾಮನಾಮಕ್ಕೆ ಸಮನಾದ ತತ್ತ್ವ ಯಾವುದೂ ಇಲ್ಲ. ಋಷಿ ಮುನಿಗಳು ಈ ನಾಮ ಜಪದಿಂದಲೇ ಪರಾಸಿದ್ಧಿ ಪಡೆದರು. 'ರಾಮ' ಎಂಬ ಎರಡಕ್ಷರದಿಂದಲೇ ದೇವತೆಗಳ ದರ್ಶನವಾಗುತ್ತದೆ, ಮುಕ್ತಿ ಸಿಗುತ್ತದೆ ಎನ್ನುತ್ತಾರೆ ಬಲ್ಲವರು.

'ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು ಪಾಮರರು ತಾವೇನ ಬಲ್ಲರಯ್ಯಾ? ರಾ ಎಂದ ಮಾತ್ರದಲಿ ರಕ್ತಮಾಂಸದೊಳಿದ್ದ ಕಾಯಸ್ಥಿಗತವಾದ ಮಹಾಪಾಪವನು ದೂರವನೆ ಮಾಡಿ ಮಹರಾಯ ಮುಕುತಿಯನೆ ಕೊಡುವ' ಎಂದಿದ್ದಾರೆ ದಾಸವರೇಣ್ಯರು.

'ರಾಮ, ರಾಮ, ರಾಮ' ಎಂದು ಮೂರು ಸಲ ಹೇಳಿದರೂ ಸಾಕು, ವಿಷ್ಣುಸಹಸ್ರನಾಮ ಪಾರಾಯಣದ ಫಲ ಸಿಗುತ್ತದೆ. ರಾಮನಾಮವನ್ನು ಒಮ್ಮೆ ಬರೆದರೆ ಮೂರು ಬಾರಿ ಜಪ ಮಾಡಿದ ಪುಣ್ಯ ಬರುತ್ತದೆ. ನಾಮ ಸಂಕೀರ್ತನೆ, ಭಜನೆ, ನಾಮಸ್ಮರಣೆ – ಹೇಗೇ ರಾಮನನ್ನು ನೆನೆದರೂ ಬದುಕು ಸಾರ್ಥಕವಾಗುತ್ತದೆ. 'ರಾಮ' ಎಂಬ ಹೆಸರಿನ ಮಹಿಮೆ ರಾಮನನ್ನೂ ಮೀರಿದೆ. ಅದು ರಾಮಾವತಾರಕ್ಕಿಂತ ಹಿರಿದು.

ರಾಮನನ್ನು ನಂಬಿ ಇಹಪರ ಸೌಖ್ಯಗಳನ್ನು ಪಡೆದ ಹಲವಾರು ಸಾಧುಸಂತರು ನಮ್ಮಲ್ಲಿ ಆಗಿಹೋಗಿದ್ದಾರೆ. ರಾಮನಾಮ ಸ್ಮರಣೆ, ರಾಮಭಜನ ಸಂಪ್ರದಾಯವನ್ನು ಪ್ರಸಾರ ಮಾಡಿದವರಲ್ಲಿ ಸಂತ ತುಲಸೀದಾಸ, ಕಬೀರದಾಸ, ಸಮರ್ಥ ರಾಮದಾಸ, ತುಕಾರಾಮ ಚೈತನ್ಯ, ಬ್ರಹ್ಮಚೈತನ್ಯರು ಪ್ರಮುಖರು.

ಗೋಂದಾವಳಿ ಮಹಾರಾಜ್ ಎಂದೇ ಖ್ಯಾತರಾಗಿದ್ದ ಶ್ರೀ ಬ್ರಹ್ಮಚೈತನ್ಯರು ತಮ್ಮ ಸಂಪರ್ಕಕ್ಕೆ ಬಂದವರಿಗೆಲ್ಲಾ ರಾಮ ನಾಮೋಪದೇಶ ಮಾಡಿ, ಅವರಲ್ಲಿದ್ದ ದೋಷ, ಕಳಂಕಗಳನ್ನು ದೂರ ಮಾಡುತ್ತಿದ್ದರು. ಒಂದು ಸ್ವಾರಸ್ಯವಾದ, ಉಲ್ಲೇಖಾರ್ಹ ಪ್ರಸಂಗವನ್ನು ನಾನಿಲ್ಲಿ ಹೇಳಬಯಸುತ್ತೇನೆ. ಒಮ್ಮೆ ಬ್ರಹ್ಮ ಚೈತನ್ಯರು ಶಿಷ್ಯ ಪರಿವಾರದೊಡನೆ ಪಂಡರಾಪುರಕ್ಕೆ ಹೊರಟಿದ್ದರು. ದಾರಿ ಸಾಗುತ್ತಿದ್ದಂತೆ ರಾತ್ರಿಯಾಯಿತು. ಅವರೆಲ್ಲ ನಿರ್ಜನ ಪ್ರದೇಶದಲ್ಲಿದ್ದ ಛತ್ರವೊಂದರಲ್ಲಿ ಬಿಡಾರ ಮಾಡಿದರು. ಅಲ್ಲಿ ಕಳ್ಳಕಾಕರ, ಡಕಾಯಿತರ ಹಾವಳಿ ವಿಪರೀತ. ಪರಿವಾರದಲ್ಲಿದ್ದವರೆಲ್ಲರೂ ಹೆದರಿ ನಡುಗುತ್ತಿದ್ದರು. ಚೈತನ್ಯರು ಮಾತ್ರ 'ರಾಮ ಸರ್ವರಕ್ಷಕ' ಎಂಬ ನಂಬಿಕೆಯಿಂದ ನಿಶ್ಚಿಂತರಾಗಿದ್ದರು.

ಊಟದ ವ್ಯವಸ್ಥೆಯಾಗುತ್ತಿದ್ದಾಗ ಏಕಾಏಕಿಯಾಗಿ ಕಲ್ಲುಗಳ ಮಳೆ ಸುರಿಯಲಾರಂಭಿಸಿತು. ಶಿಷ್ಯ ಪರಿವಾರದ ಜಂಘಾಬಲವೇ ಉಡುಗಿಹೋಯಿತು. ಅಂಜಿಕೆಯಿಂದ ದಿಕ್ಕು ತೋಚದಂತಾಗಿದ್ದ ಶಿಷ್ಯ ಸಮುದಾಯಕ್ಕೆ ಚೈತನ್ಯರು ಅಭಯ ನೀಡಿ, ರಾಮನಾಮ ಜಪವನ್ನು ಆರಂಭಿಸಿದರು. ಕೆಲವೇ ಕ್ಷಣಗಳಲ್ಲಿ ಎಂಟ್ಹತ್ತು ಡಕಾಯಿತರು ಅವರ ಮುಂದೆ ಪ್ರತ್ಯಕ್ಷರಾದರು. ಚೈತನ್ಯರು ಒಂದಿಷ್ಟೂ ಎದೆಗುಂದದೆ, 'ನಿಮ್ಮ ನಾಯಕ ವಿಠೋ ರಾಮೋಸಿ ಎಲ್ಲಿ? ಕರೆಯಿರಿ ಅವನನ್ನು' ಎಂದರು.

ಕ್ರೌರ್ಯವೇ ಮೂರ್ತಿವೆತ್ತಂತೆ ಇದ್ದ ವಿಠೋ ರಾಮೋಸಿ ಬಂದ. ಕೈಯಲ್ಲಿ ದೊಡ್ಡ ಬಡಿಗೆ, ನೋಡಿದರೇ ಹೆದರಿಕೆ ಹುಟ್ಟಿಸುವಂಥ ಆಕಾರ. ಚೈತನ್ಯರು ಮಕ್ಕಳನ್ನು ಅನುನಯಿಸುವಂತೆ ಅವನನ್ನು ಮೃದುವಾಗಿ ಪ್ರಶ್ನಿಸಿದರು – ''ಅಯ್ಯಾ, ಎಷ್ಟು ದಿನದಿಂದ ಈ ಕಾಯಕ ಮಾಡುತ್ತಿದ್ದೀಯ?''

''೧೦-೧೨ ವರ್ಷಗಳಿಂದ.''

''ಸಾಕಷ್ಟು ಸಂಪಾದಿಸಿರಬೇಕಲ್ಲಾ?''

''ಎಲ್ಲಿ ಬಂತು? ನಮ್ಮ ಸಂಪಾದನೆಗೆ ಪಾಲುದಾರರು ಬೇಕಾದಷ್ಟು ಮಂದಿ ಇದ್ದಾರೆ. ಪೊಲೀಸರು, ಅಧಿಕಾರಿಗಳಿಗೂ ಹಂಚಬೇಕಲ್ಲಾ.''

''ನೀನು ಮಾಡುತ್ತಿರುವುದು ಒಳ್ಳೆಯ ಕೆಲಸವೆ?''

''ಇಲ್ಲ, ಪಾಪದ ಕೆಲಸವೇ. ಆದರೂ ಹೊಟ್ಟೆ ಹೊರೆಯಬೇಕಲ್ಲಾ'' ಎಂದ ಆತ.

ಆಗ ಚೈತನ್ಯರು ''ಈ ದುಷ್ಟ ಕೆಲಸವನ್ನು ಬಿಟ್ಟುಬಿಡು. ಏನಾದರೂ ವ್ಯಾಪಾರ ಮಾಡು. ನಾನೂ ಸ್ವಲ್ಪ ಹಣ ಕೊಡುತ್ತೇನೆ. ಶ್ರೀರಾಮ ನಿನ್ನನ್ನು ಅನುಗ್ರಹಿಸುತ್ತಾನೆ'' ಎಂದರು.

ಕ್ಷಣಕಾಲ ಯೋಚಿಸಿದ ಆ ಡಕಾಯಿತರ ನಾಯಕ, ''ಸರಿ, ನಿಮ್ಮ ಹಣವೇನೂ ಬೇಡ. ನನ್ನಲ್ಲಿರುವ ಹಣದಿಂದಲೇ ವ್ಯಾಪಾರ ಮಾಡುತ್ತೇನೆ'' ಎಂದ.

ಬ್ರಹ್ಮಚೈತನ್ಯರು ಆ ಡಕಾಯಿತರನ್ನೆಲ್ಲಾ ಆ ರಾತ್ರಿ ತಮ್ಮ ಅತಿಥಿಗಳನ್ನಾಗಿ ಉಳಿಸಿಕೊಂಡು, ಶ್ರೀರಾಮಪೂಜೆ, ಭಜನೆಗಳಾದ ನಂತರ ಊಟ ಹಾಕಿಸಿ, ಕಳಿಸಿಕೊಟ್ಟರು.

ಮುಂದಿನ ಎರಡು ವರ್ಷಗಳಲ್ಲಿ ವಿಠೋ ರಾಮೋಸಿಯ ನಡವಳಿಕೆ ಪೂರ್ಣವಾಗಿ ಮಾರ್ಪಾಡಾಗಿ ಹೋಯಿತು. ಅವನ ಮುಖದಲ್ಲಿ ಸಾತ್ವಿಕ ಕಳೆ, ನಡೆನುಡಿಯಲ್ಲಿ ಮಾರ್ದವತೆ ಎದ್ದು ತೋರಲಾರಂಭಿಸಿತು. ಇದು ಶ್ರೀ ಬ್ರಹ್ಮಚೈತನ್ಯರು ಅವನಿಗಿತ್ತ ಶ್ರೀರಾಮ ನಾಮೋಪದೇಶದ ಫಲ.

ಶ್ರೀರಾಮ ನಾಮ ಸ್ಪರ್ಶಮಣಿ ಇದ್ದಂತೆ. ತನ್ನ ಸಂಪರ್ಕಕ್ಕೆ ಬಂದವರನ್ನೆಲ್ಲಾ ಪರಿವರ್ತಿಸಿಬಿಡುತ್ತದೆ. ಅದು ಮಂತ್ರದಷ್ಟೇ ಪ್ರಭಾವಶಾಲಿ. ತಾರಕ ನಾಮ. ಮಂಗಳಗಳ ನಿಧಿ. ಕಲಿಮಲ ನಿವಾರಕ. ಮುಮುಕ್ಷುಗಳ ವಿಶ್ರಾಮ ಸ್ಥಾನ. ಜೀವನವನ್ನು ಪಾವನಗೊಳಿಸುವ ಧರ್ಮದ ಬೀಜ. ಅದನ್ನು ನೆಚ್ಚಿದವರಿಗೆ ಇಹಪರಗಳ ಭಯವಿಲ್ಲ.

ಅದು ಹಿಂದೆ ಮಾತ್ರವಲ್ಲ, ಇಂದಿಗೂ, ಎಂದೆಂದಿಗೂ ಅಷ್ಟೇ ಪ್ರಭಾವಶಾಲಿಯಾಗಿದೆ ಎಂಬುದಕ್ಕೆ ನಮ್ಮ ಮುತ್ತಾತನವರ

ಜೀವನದಲ್ಲಿ ನಡೆದ ಈ ಘಟನೆಯೇ ಸಾಕ್ಷಿ. ಈ ಪ್ರಸಂಗವನ್ನು ನಮ್ಮ ತಂದೆ ಆಗಾಗ ನಮಗೆಲ್ಲಾ ಹೇಳುತ್ತಿರುತ್ತಾರೆ.

ನಮ್ಮ ತಂದೆಯವರ ತಾತ ಶ್ರೀಕರಾಳ ಭಟ್ಟರು. ಆಚಾರವಂತ ಬ್ರಾಹ್ಮಣ. ಪೌರೋಹಿತ್ಯ ವೃತ್ತಿ. ಅವರ ಮಗನ ಮದುವೆಯ ಸಂದರ್ಭದಲ್ಲಿ ನಡೆದದ್ದು ಈ ಪವಾಡ. ಅವರದು ಮದ್ದೂರು ತಾಲೂಕಿನ ಹುರಗಲವಾಡಿ ಗ್ರಾಮ. ಮಗನ ಮದುವೆಯ ಒಡವೆ, ವಸ್ತ್ರ ಖರೀದಿಗೆ ಹೇಗೋ ಕಷ್ಟಪಟ್ಟು ಐದುನೂರು ರೂ. ಹೊಂದಿಸಿಕೊಂಡು ಮೈಸೂರಿಗೆ ಹೊರಟಿದ್ದರು. ದಾರಿಯಲ್ಲಿ ಬೆಸಗರಹಳ್ಳಿಗೆ ಹೋಗಿ, ಸಂಬಂಧಿಕರೊಬ್ಬರಿಗೆ ಆಹ್ವಾನವಿತ್ತು, ಮದ್ದೂರಿನಿಂದ ಮುಂದಕ್ಕೆ ರೈಲಿನಲ್ಲಿ ಹೋದರಾಯಿತು ಎಂದು ಕೊಂಡು ನಡೆದೇ ಹೊರಟಿದ್ದರು.

ದೇವರ ನಾಮಜಪ ಮಾಡುತ್ತಾ ಕಾಡುದಾರಿಯಲ್ಲಿ ಹೆಜ್ಜೆ ಹಾಕುತ್ತಿದ್ದರು. ಇನ್ನೂ ಬೆಳಕು ಹರಿದಿರಲಿಲ್ಲ. ಇದ್ದಕ್ಕಿದ್ದಂತೆ ಒಂದು ಕರ್ಕಶವಾದ ಧ್ವನಿ ಬಂತು, ''ಯಾರದು?''

ಇವರು ಸುತ್ತಮುತ್ತ ತಿರುಗಿ ನೋಡುತ್ತಾ ''ನಾನು ಕರಾಳಪ್ಪ. ನೀನ್ಯಾರು?'' ಎಂದು ಪ್ರಶ್ನಿಸಿದರು. ಆಗ ''ನಾನು ಬಸವ. ತಿರುಮಂಗೈ ಆಳ್ವಾರ್ ಶಿಷ್ಯ'' ಎಂಬ ಉತ್ತರ ಬಂತು.

ತಿರುಮಂಗೈ ಆಳ್ವಾರ್, ಆ ಕಾಲದಲ್ಲಿ ಆ ಸೀಮೆಯಲ್ಲಿದ್ದ ಕುಖ್ಯಾತ ದರೋಡೆಕೋರ. ಭಟ್ಟರ ಜಂಘಾಬಲವೇ ಉಡುಗಿ ಹೋಯಿತು. ಆದರೂ ದೇವರಿದ್ದಾನೆ, ಏನಾಗುವುದೋ ಆಗಲಿ ಎಂದುಕೊಂಡರು.

ಮರುಕ್ಷಣದಲ್ಲೇ ಬಸವ ಧೊಪ್ಪನೇ ಮರದಿಂದ ಎದುರಿಗೆ ಧುಮುಕಿ, ''ಏನಿದೆ ಗಂಟಿನಲ್ಲಿ?'' ಎಂದು ಪ್ರಶ್ನಿಸಿದ.

''ಹಣ. ಐದು ನೂರು ರೂ.'' ಸತ್ಯವನ್ನೇ ಹೇಳಿದರು ಭಟ್ಟರು.

''ನೀವೇ ಮರ್ಯಾದೆಯಿಂದ ಕೊಟ್ಟರೆ ಸರಿ, ಇಲ್ಲದಿದ್ದರೆ ತಲೆಯೊಡೆದು ತೆಗೆದುಕೊಳ್ಳುತ್ತೇನೆ'' ಎಂದ ಬಸವ.

ಭಟ್ಟರು ಹಿಂದೆಮುಂದೆ ನೋಡದೆ ಗಂಟನ್ನು ಕೆಳಗಿಟ್ಟು ''ತೆಗೆದುಕೋ'' ಎಂದರು.

ಗಂಟನ್ನು ಎತ್ತಿಕೊಂಡ ಬಸವ, ಭಟ್ಟರ ಜೊತೆಜೊತೆಗೇ ಹೆಜ್ಜೆ ಹಾಕಲಾರಂಭಿಸಿದ. ದಾರಿ ಸಾಗುತ್ತಿದ್ದಂತೆ ಭಟ್ಟರು ''ಬಸವಯ್ಯ, ಈ ದುಡ್ಡನ್ನು ಏನು ಮಾಡುತ್ತೀ? ಇದು ನ್ಯಾಯವಾದ ಸಂಪಾದನೆಯೆ? ಪೊಲೀಸರ ಕೈಗೆ ಸಿಕ್ಕಿಬಿದ್ದರೆ ನಿನ್ನ ಗತಿ ಏನು?'' ಎಂದು ಕೇಳಿದರು.

''ದುಡ್ಡನ್ನು ಏನು ಮಾಡುತ್ತಾರೆ? ಸಂಸಾರ ನಿರ್ವಹಣೆಗೆ ಬಳಸುತ್ತಾರೆ. ಇದು ನ್ಯಾಯವೋ, ಅನ್ಯಾಯವೋ, ನನಗಂತೂ ಗೊತ್ತಿಲ್ಲ. ನನಗೆ ಬರುವುದು ಇದೊಂದೇ ಕೆಲಸ. ಇದರಿಂದಲೇ ಹೆಂಡತಿ, ಮಕ್ಕಳನ್ನು ಸಾಕುತ್ತಿದ್ದೇನೆ'' ಎಂದ ಆತ.

ಸ್ವಲ್ಪ ದೂರ ದಾರಿ ಮೌನವಾಗಿ ಸಾಗಿತು. ಆಮೇಲೆ ಭಟ್ಟರು ಅವನಿಗೆ ರಾಮಾಯಣದ ಕಥೆಯನ್ನು ಹೇಳುತ್ತಾ ಹೋದರು. ಪ್ರಾಚೇತಸ ಋಷಿಯ ಮಗ ಡಕಾಯಿತರ ಕೈಗೆ ಸಿಕ್ಕಿ ಕ್ರೂರ ಡಕಾಯಿತನಾದದ್ದು, ಆಮೇಲೆ ಭಾರದ್ವಾಜ ಋಷಿಗಳ ಅನುಗ್ರಹದಿಂದ ವಾಲ್ಮೀಕಿ ಮಹರ್ಷಿಯಾದದ್ದನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದರು. ಅಷ್ಟರಲ್ಲಿ ಊರು ಸಮೀಪಿಸಿತ್ತು. ಭಟ್ಟರು ''ಬಸವಯ್ಯ, ನಿನಗೆ ಒಳ್ಳೆಯದಾಗಲಿ'' ಎಂದು ಆಶೀರ್ವದಿಸಿ ಮನೆಯ ಕಡೆ ಹೊರಟರು. ಬಸವ ಅವರಿಗೆ ಅಡ್ಡಬಿದ್ದು ''ಬುದ್ಧೀ, ತಪ್ಪಾಯಿತು, ಕ್ಷಮಿಸಿ'' ಎಂದು, ಅವರ ಹಣದ ಗಂಟನ್ನು ಹಿಂತಿರುಗಿಸಿದ.

ಭಟ್ಟರು ''ನಿನಗೆಷ್ಟು ಹಣ ಬೇಕೋ ತೆಗೆದುಕೋ'' ಎಂದರೂ ಕೇಳದೆ, ನಮಸ್ಕರಿಸಿ ಹೊರಟುಹೋದನಂತೆ.

ಇದು ತೀರಾ ಇತ್ತೀಚೆಗೆ, ಒಂದು ನೂರು ವರ್ಷದ ಹಿಂದೆ ನಡೆದ ಘಟನೆ. ರಾಮನಾಮ ಎಷ್ಟು ಪ್ರಭಾವಶಾಲಿ, ಎಂಥ ಪರಿಣಾಮಕಾರಿ ಎಂಬುದಕ್ಕೆ ಇದು ನಿದರ್ಶನ.

ಒಟ್ಟಿನಲ್ಲಿ ಹೇಳುವುದಾದರೆ, ರಾಮನಾಮ ಅಮೃತ ರಸಧಾರೆ. ಈ ಅಮೃತ ರಸಪಾನ ಮಾಡಿದವರಿಗೆ ಜನನ-ಮರಣ, ಶೋಕ-ಮೋಹಗಳ ಭಯವಿಲ್ಲ. ಶುಕ, ಶೌನಕ, ಕೌಶಿಕ ಮುಂತಾದ ಮುನಿಪುಂಗವರೆಲ್ಲಾ ಈ ಅಮೃತ ರಸಪಾನ ಮಾಡಿ, ಮುಕ್ತಿ ಹೊಂದಿದ್ದಾರೆ.

ಜಾತಿ, ಮತಭೇದ, ಸ್ತ್ರೀ-ಪುರುಷ ಎಂಬ ವ್ಯತ್ಯಾಸವಿಲ್ಲದೆ ಎಲ್ಲ ದೇಶ,ಕಾಲಗಳಲ್ಲೂ, ಎಲ್ಲ ಜನರೂ ಸುಲಭವಾಗಿ ಜಪಿಸಬಹುದಾದ ಏಕೈಕ ದಿವ್ಯಮಂತ್ರ '**ಶ್ರೀರಾಮ ಮಂತ್ರ**.' ಅದು ಸಂಸಾರ ತಾರಕ. ಸಕಲೇಷ್ಟದಾಯಕ. ಆ ತಾರಕ ಮಂತ್ರವನ್ನು ನಾವೆಲ್ಲಾ ಸದಾ, ಸರ್ವದಾ, ಅನವರತ ಜಪಿಸುತ್ತಾ ಧನ್ಯರಾಗೋಣ.



**ರಾಮನಾಮ ರಘುವರಕೋ ।**
**ಹೇತು ಕೃಸಾನು ಭಾನು ಹಿಮಕರಕೋ ।**
**ವಿಧಿ ಹರಿ ಹರ ಮಯ ಬೇದಪ್ರಾನಸೋ ।**
**ಅಗುನ ಅನುಪಮ ಗುನನಿಧಾನ ಸೋ ॥**

''ರಾಮನಾಮವು ಅಗ್ನಿ , ಸೂರ್ಯ ಮತ್ತು ಚಂದ್ರರಿಗೆ ಬೀಜಸ್ವರೂಪ. ಬ್ರಹ್ಮ ವಿಷ್ಣು ಈಶ್ವರಮಯ, ವೇದಗಳ ಪ್ರಾಣ, ನಿರ್ಗುಣ ಮತ್ತು ಸಗುಣಗಳ ಆಧಾರ.''

**ಜಾನ ಆದಿ ಕಬಿ ನಾಮ ಪ್ರತಾಪೂ ।**
**ಭಾಯೆವು ಸುದ್ಧ ಕರಿ ಉಲಟಾ ಜಾಪೂ ॥**

''ಆದಿಕವಿ ವಾಲ್ಮೀಕಿ 'ಮರಾ' ಎಂದು ರಾಮನಾಮವನ್ನು ಜಪಿಸಿ ಪವಿತ್ರನಾದನು.''

**ರಾಮ-ನಾಮ-ಮನಿ-ದೀಪ ಧರು ಜೀಹೆ-ದೇಹರೀ-ದ್ವಾರ ।**
**ತುಲಸೀ ಭೀತರ ಬಾಹರವು ಜೌ ಚಾಹಸಿ ಉಜಿಯಾರ ॥**

''ಒಳಗೆ ಮತ್ತು ಹೊರಗೆ ಪ್ರಕಾಶ ಬೇಕೆಂಬ ಇಷ್ಟವಿದ್ದರೆ ಮುಖವೆಂಬ ದ್ವಾರದಲ್ಲಿ ಜಿಹ್ವೆಯೆಂಬ ಹೊಸ್ತಿಲಮೇಲೆ ರಾಮನಾಮವೆಂಬ ಮಣಿದೀಪವನ್ನು ಇಡು.''

*-ತುಲಸೀದಾಸ*

# ನೀನ್ಯಾಕೋ - ನಿನ್ನ ನಾಮದ ಬಲವಿದ್ದರೆ ಸಾಕೋ

ಸ್ವಾಮಿ ಧರ್ಮವ್ರತಾನಂದ

''ಏಕಂ ಸತ್ ವಿಪ್ರಾಃ ಬಹುಧಾ ವದಂತಿ''

*'ಸತ್ಯವೊಂದೇ ಆದರೂ ಜ್ಞಾನಿಗಳು ಅದನ್ನು ವಿವಿಧ ನಾಮದಿಂದ ಕರೆಯುತ್ತಾರೆ.'*



**ಪೀಠಿಕೆ :** ಭಾರತವು ತನ್ನದೇ ಆದ ಸಂಸ್ಕೃತಿ, ಕಲೆ ಮತ್ತು ಧರ್ಮಗಳನ್ನು ಹೊಂದಿದೆ. ಪರಕೀಯರ ದಾಳಿ ಮತ್ತು ತಮ್ಮಲ್ಲೇ ಆದ ಹಲವು ಬದಲಾವಣೆಯಿಂದ ದೇಶ ದೇಶಗಳು ಮರೆಯಾದರೂ, ಭಾರತವು ಮಾತ್ರ ವೇದಗಳ ಕಾಲದಿಂದ ಹಿಡಿದು ಇಂದಿನವರೆಗೂ ಸಂಸ್ಕೃತಿ ಮತ್ತು ಧರ್ಮವನ್ನು ಉಳಿಸಿಕೊಂಡು ಬಂದಿದೆ. ಈ ಕಾರ್ಯದಲ್ಲಿ ಹಲವು ಸಾಧು-ಸಂತರ, ಋಷಿಮುನಿಗಳ, ಹರಿದಾಸರುಗಳ ಸೇವೆಯು ಮಹತ್ವದ್ದು. ಸನಾತನ ಧರ್ಮವನ್ನು ಮತ್ತು ಸಂಸ್ಕೃತಿಯನ್ನು ಸಾಮಾನ್ಯರಿಗೆ ಅರ್ಥವಾಗದ ಭಾಷೆಯಾಗಿದ್ದ ಸಂಸ್ಕೃತದಿಂದ ಸಾಮಾನ್ಯ ಆಡುಭಾಷೆಗೆ ತಂದುದು ಮತ್ತು ಅವರಿಗೆ ತಿಳಿಯುವಂತೆ ಕೀರ್ತನೆಗಳಲ್ಲಿ ಪ್ರಚಾರಮಾಡಿದ್ದು, ಇದರಿಂದ ಸನಾತನ ಭಾರತದ ಉಳಿವು ಇದು ಹರಿದಾಸರ ಹಿರಿಮೆ.

ಕರ್ನಾಟಕದ ಸುವರ್ಣಯುಗವಾದ ವಿಜಯನಗರದ ಅರಸರ ಕಾಲದಲ್ಲಿದ್ದ ವ್ಯಾಸತೀರ್ಥ ಅಥವಾ ವ್ಯಾಸರಾಯರ ಶಿಷ್ಯರಾದ ಪುರಂದರ ದಾಸರು ಇಂತಹವರಲ್ಲಿ ಶ್ರೇಷ್ಠರು. ತಮ್ಮ ಗುರುಗಳಿಂದಲೇ 'ದಾಸರೆಂದರೆ ಪುರಂದರ ದಾಸರಯ್ಯಾ' ಎಂದು ಹೆಸರು ಪಡೆದವರು. ಇವರು ತಮ್ಮ ಕೀರ್ತನೆಯಲ್ಲಿ ಕಠಿಣ ವೇದಾಂತ ತತ್ತ್ವಗಳನ್ನು ಮಕ್ಕಳೂ ಅರ್ಥೈಸಿಕೊಳ್ಳುವಂತೆ ವಿವರಿಸಿ, ಮಧುರವಾದ ರಾಗಗಳಿಗೆ ಅವನ್ನು ಅಳವಡಿಸಿ ಹಾಡಿದ್ದಾರೆ. ಭಕ್ತಿ, ಜ್ಞಾನ, ಕರ್ಮ ಮತ್ತು ಯೋಗಗಳನ್ನು ಅನುಸರಿಸಿ, ಜೀವನದ ಗುರಿಯಾದ ಮೋಕ್ಷವನ್ನು ಹೊಂದಿದ ಹಲವು ಮಹಾತ್ಮರ ಕತೆಗಳನ್ನು ಒಂದೊಂದೇ ವಾಕ್ಯದಲ್ಲಿ, ಅಥವಾ ಸಂಕ್ಷಿಪ್ತವಾಗಿ, ಮತ್ತು ಸಂಪೂರ್ಣ ಕೀರ್ತನೆಯನ್ನೇ ಮೀಸಲಾಗಿಟ್ಟು ಹಾಡಿದ್ದಾರೆ. ಹಲವು ಸಾಧಕರಿಗೆ ಸ್ಪೂರ್ತಿಯನ್ನು ನೀಡುವಲ್ಲಿ ಅವರ ಪದಬಳಕೆಯ ಮತ್ತು ಪ್ರಾಸ ಪ್ರಯೋಗದ ಚಾತುರ್ಯವು ಯಶಸ್ವಿಯಾಗಿದೆ ಮತ್ತು ಮನಮೋಹಕವಾಗಿದೆ. ಈ ವಿಷಯದಲ್ಲಿ 'ವಿದುರನ ಭಾಗ್ಯವಿದು', 'ಕರುಣಾಕರ ನೀನೆಂಬುವುದೇತಕೊ', 'ದೇವಾ ಬಂದಾ ನಮ್ಮ' - ಈ ಕೀರ್ತನೆಗಳು ಕೆಲವು ಉದಾಹರಣೆಗಳು ಮಾತ್ರ.

> **ಕರ್ನಾಟಕದ ಸಂತರುಗಳಲ್ಲಿ ಭಗವಂತನ ನಾಮವನ್ನು ಕುರಿತು ವಿಶೇಷವಾಗಿ ಹಾಡಿ, ನಲಿದು ಭಗವಂತನ ವಿಶೇಷ ಕೃಪೆಗೆ ಪಾತ್ರರಾದ ಪುರಂದರದಾಸರ ಪ್ರಸಿದ್ಧ ಕೀರ್ತನೆ 'ನೀನ್ಯಾಕೋ..' ಹಿಂದಿರುವ ಕಥೆಗಳನ್ನು ಹೆಚ್ಚಿನ ವಿವರಣೆಗಳೊಂದಿಗೆ ವಿಶ್ಲೇಷಿಸಿರುವ ಸ್ವಾಮೀಜಿಯವರು ಉತ್ತಮ ವಾಗ್ಮಿಗಳು, ಸಂಘಟಕರು ಹಾಗೂ ಉತ್ತಮ ಲೇಖಕರು; ಈಗ ಮಂಗಳೂರು ರಾಮಕೃಷ್ಣ ಮಿಷನ್ ಬಾಲಕಾಶ್ರಮದಲ್ಲಿ ಪಾಲಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.**

**ಪುರಂದರದಾಸರು :** ೧೪೮೪ ರ ಆಸುಪಾಸಿನಲ್ಲಿ ಪುರಂದರಘಡದ ಶ್ರೀಮಂತ ರತ್ನಪಡಿ ವ್ಯಾಪಾರಸ್ಥರ ಮನೆಯಲ್ಲಿ ಶ್ರೀನಿವಾಸ ನಾಯಕರು ಜನಿಸಿದರು. ವಿದ್ಯಾವಂತ, ರೂಪವಂತರಾದ ಇವರು ಸರಸ್ವತಿ ಬಾಯಿಯೊಂದಿಗೆ ವಿವಾಹವಾಗಿದ್ದರು. ಆಕೆಯ ಅಚಲ ಭಕ್ತಿಯಿಂದ ನಡೆದ ಒಂದು ಘಟನೆಯು ವ್ಯಾಪಾರಬುದ್ಧಿಯ ಶ್ರೀನಿವಾಸ ನಾಯಕನನ್ನು ಪುರಂದರದಾಸನನ್ನಾಗಿ ಮಾಡಿತು. ಸಂಸಾರಾಸಕ್ತಿಯನ್ನು ಮತ್ತು ಶ್ರೀಮಂತಿಕೆಯನ್ನು ತೊರೆದು ಕುಟುಂಬ ಸಮೇತರಾಗಿ ವ್ಯಾಸರಾಯರಲ್ಲಿ ಶರಣುಹೊಕ್ಕು, ದಾಸ ಸಂಪ್ರದಾಯವನ್ನು ಸ್ವೀಕರಿಸಿದರು. ದಾಸ ಸಂಪ್ರದಾಯದ ರೂಢಿಯಂತೆ ಭಿಕ್ಷಾವೃತ್ತಿ, ಸಾಧನೆ, ಭಜನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಂತೃಪ್ತ ಜೀವನವನ್ನು ನಡೆಸಿದರು.

ಒಂದೆಡೆ ಭೋಗಜೀವನದಲ್ಲಿ ನೆಲೆನಿಂತವರಿಗೆ ತ್ಯಾಗ ಮತ್ತು ಭಕ್ತಿಯ ಮಹಿಮೆ ತೋರಿ, ಅವರನ್ನು ಸನ್ಮಾರ್ಗಕ್ಕೆ ತಂದರೆ, ಮತ್ತೊಂದೆಡೆ ಬಡತನದಲ್ಲಿದ್ದವರಿಗೆ ಧೈರ್ಯ, ಸಾಂತ್ವನ, ಬೆಂಬಲ ನೀಡುವುದರೊಂದಿಗೆ, ಭಗವಂತನಲ್ಲಿ ಆಶ್ರಯವನ್ನು ಹೊಂದುವುದರ ಮೂಲಕ ತಮ್ಮ ಕಷ್ಟಪರಂಪರೆಯಿಂದ ಪಾರಾಗುವ ಮಾರ್ಗವನ್ನು ತೋರಿದರು.

ಸಂಗೀತ ಪರಂಪರೆಯಲ್ಲಿ ಅಸೀಮ ಸಾಧನೆ ತೋರಿ, ಕರ್ನಾಟಕ ಸಂಗೀತ, ಸಾರಸ್ವತ ಲೋಕಕ್ಕೆ ಅಪೂರ್ವ ಕೊಡುಗೆ ನೀಡಿದ ಇವರು, ಸುಮಾರು ೪ ಲಕ್ಷದ ೭೫ ಸಾವಿರ ಕೃತಿಗಳನ್ನು (ಹಾಗೂ ಉಗಾಭೋಗಗಳನ್ನು) ರಚಿಸಿದರು ಎಂಬ ವದಂತಿ ಇದೆ. ಆದರೂ ಇಂದು ಪ್ರಚಲಿತದಲ್ಲಿರುವುದು ಕೆಲವೇ ನೂರುಗಳು ಮಾತ್ರ ಎಂದು ಹಲವು ಲೇಖಕರ ಅಂಬೋಣ.

ಭಕ್ತಿಪಂಥದ ಸಾಧಕರಾಗಿದ್ದ ಇವರು, ನವಭಕ್ತಿಯ ವಿಧಾನಗಳನ್ನು, ಸ್ಮರಣೆ, ಸೇವೆ, ಶರಣಾಗತಿ, ನಾಮದ ಶಕ್ತಿಯ ಜ್ಞಾನವನ್ನು ಜನರಲ್ಲಿ ಹರಡಿದರು. ಇಂತಹ ಸಾಧಕರು ೧೫೬೪ರಲ್ಲಿ , ೮೦ ನೇ ವಯಸ್ಸಿನಲ್ಲಿ ತಮ್ಮ ದೇಹವನ್ನು ತ್ಯಾಗ ಮಾಡಿದರು.

ಅವರ ಒಂದು ಕೀರ್ತನೆಯು ಭಗವಂತನ ನಾಮವು ಅವನಿಗಿಂತ ಶ್ರೇಷ್ಠ ಎಂದು ಸಾರುತ್ತಾ, ಕೇವಲ ನಾಮಸ್ಮರಣೆಯಿಂದಲೇ ಹಲವು ಸಾಧಕರು ತಮ್ಮ ಜೀವನ ಧ್ಯೇಯವನ್ನು, ತಮ್ಮ ಕಷ್ಟನಿವಾರಣೆಯನ್ನು, ಭವಬಂಧನದ ನಾಶವನ್ನು ಹೇಗೆ ಸಾಧಿಸಿದರು ಎಂಬುದನ್ನು ತೋರಿಸಿ ಕೊಡುತ್ತದೆ. ಅದರಲ್ಲಿ ಬರುವ ಭಕ್ತರ ಜೀವನವನ್ನು ಸಂಕ್ಷಿಪ್ತವಾಗಿ ನೋಡಲು ಪ್ರಯತ್ನಿಸೋಣ.

**ಭಗವಂತನ ಭರವಸೆ :** ಭಗವದ್ಗೀತೆಯಲ್ಲಿ ಭಗವಂತ ತನ್ನ ಭಕ್ತರನ್ನು ಹಲವು ರೀತಿಯಾಗಿ ವಿಂಗಡಿಸಿ ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂದು ಹೇಳುತ್ತಾನೆ. ಸಂಕಟದಲ್ಲಿದ್ದರೂ, ಹಣ, ಮಾನ, ಪ್ರಾಣ, ಜ್ಞಾನ ಯಾವುದಕ್ಕಾಗಿಯಾದರೂ ಆಗಲಿ ಅವರು ತನ್ನನ್ನೇ ಶರಣು ಬಂದದ್ದ ರಿಂದ ಅವರೆಲ್ಲ ಶ್ರೇಷ್ಠರೆಂದು ಹೇಳುತ್ತಾನೆ. *(ಗೀತಾ, ೭.೧೬ – ೧೮)*

ಸರ್ವಜೀವಿಗಳ ಹೃದಯದಲ್ಲಿ ನೆಲೆಸಿರುವ ಭಗವಂತ ತನ್ನ ಬಳಿಗೆ ಬರುವವರಿಗೆ ಯಾವುದೇ ನಿಯಮಗಳನ್ನು ಹಾಕದೆ ಕೇವಲ ಅವರು ತನ್ನನ್ನು ಪ್ರೀತಿಸಲಿ ('ಯೇ ಭಜಂತಿ ತು ಮಾಂ ಭಕ್ತ್ಯಾ...' *ಗೀತಾ, ೯.೨೯)* ಎಂದು ಬಯಸುತ್ತಾನೆ. ಭಗವದ್ಗೀತೆಯಲ್ಲಿ , ದುಷ್ಟವ್ಯಕ್ತಿ, ಸ್ತ್ರೀ, ವೈಶ್ಯ, ಶೂದ್ರ, ಬ್ರಾಹ್ಮಣರಾದಿ ಎಲ್ಲರೂ ಮೋಕ್ಷವನ್ನು ಪಡೆಯು ತ್ತಾರೆ *(ಗೀತಾ, ೯.೩೨–೩೩)* ಎಂದು ಹೇಳುತ್ತಾನೆ.

ಅದೇ ರೀತಿ ಭಾಗವತದಲ್ಲಿ ಪ್ರಹ್ಲಾದನು ತನ್ನ ಸಹಪಾಠಿಗಳಿಗೆ ಹೇಳುವ ಮಾತು ಇಲ್ಲಿ ಪ್ರಸ್ತುತ:

**ನಾಲಂ ದ್ವಿಜತ್ವಂ ದೇವತ್ವಂ ಋಷಿತ್ವಂ ವಾಽಸುರಾತ್ಮಜಾಃ।**
**ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥**
**ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ।**
**ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ ವಿಡಂಬನಮ್ ॥**

*(ಭಾಗವತ, ೭.೭.೫೧–೫೨)*

('ಭಗವಂತನನ್ನು ಸಂತೋಷಪಡಿಸಲು, ದ್ವಿಜತ್ವ, ದೇವತ್ವ, ಋಷಿತ್ವ , ಉತ್ತಮ ಶೀಲ, ಶಾಸ್ತ್ರಜ್ಞಾನ, ದಾನ, ತಪಸ್ಸು, ಯಜ್ಞ, ವ್ರತ, ಶೌಚಾದಿಗಳಾವುವೂ ಬೇಕಾಗಿಲ್ಲ. ಶುದ್ಧ ಭಕ್ತಿಸಾಕು.')

ಶ್ರೀರಾಮಕೃಷ್ಣರು ಹೇಳುವಂತೆ, ''ಭಗವನ್ನಾಮದಲ್ಲಿ ರುಚಿ ಯಿರಲಿ, ಭಗವಂತನ ನಾಮವನ್ನು ಜಪಿಸುತ್ತಿರಬೇಕು. ಯಾವುದು ನಾಮವೋ ಅದೇ ಭಗವಂತ. ನಾಮವೂ ನಾಮಿಯೂ ಅಭಿನ್ನ ವೆಂದರಿತು ಸರ್ವದಾ ಪ್ರೀತಿ ಸಹಿತವಾಗಿ ದುರ್ಗಾನಾಮವನ್ನೋ, ಕೃಷ್ಣನಾಮವನ್ನೋ, ಶಿವನಾಮವನ್ನೋ ಜಪಿಸುತ್ತಾ ಭಗವಂತನನ್ನು ಕರೆಯಲೊಲ್ಲೆಯೇಕೆ? ನಾಮವೇನು ಕಮ್ಮಿಯೆ? ಅವನು ಮತ್ತು ಅವನ ನಾಮ ಭಿನ್ನವಲ್ಲ.''

ಈ ಸೃಷ್ಟಿಯಲ್ಲಿ ನಾವು, ನಾಮ ಅಥವಾ ರೂಪ ಇಲ್ಲದೆ ಯಾವು ದನ್ನೇ ಆಗಲಿ ಗುರುತಿಸಲು ಮತ್ತು ಅರಿಯಲು ಸಾಧ್ಯವಿಲ್ಲ. ರೂಪ ದೊಂದಿಗೆ ನಾಮವು, ನಾಮದೊಂದಿಗೆ ರೂಪವು ಒಂದಕ್ಕೊಂದು ಬಿಡದಂತೆ, ವ್ಯತ್ಯಾಸವೇ ಇಲ್ಲದಂತೆ, ಒಂದಾಗಿಬಿಡುತ್ತದೆ. ಬೆಂಕಿ ಮತ್ತು ಅದರ ಬಿಸಿ, ನೀರು ಮತ್ತು ಅದರ ತೊಯ್ಯುವ ಗುಣ, ಇದ್ದಿಲು ಮತ್ತು ಅದರ ಕಪ್ಪು, ಸೂರ್ಯ ಮತ್ತು ಆತನ ಬೆಳಕು ಒಂದನ್ನು ಬಿಟ್ಟು ಮತ್ತೊಂದು ಇರಲಾರದು. ನಿರಾಕಾರ ಬ್ರಹ್ಮ ಎಂದರೂ ಆತನಿಗೂ ಹೆಸರನ್ನು ನೀಡುತ್ತೇವೆ. ಮತ್ತೇನಿಲ್ಲ ಎಂದರೂ ಹೆಸರೇ ನೀಡದಿದ್ದರೂ, ಅನಾಮಿಕ ಎಂದು ಹೆಸರಿಟ್ಟು ಗುರುತಿಸು ತ್ತೇವೆ. ವ್ಯಕ್ತಿಯನ್ನು ಗುರುತಿಸಲಾಗಲಿ, ಮಾತನಾಡಿಸಲಾಗಲಿ ನಾವು ಆತನ ಹೆಸರನ್ನು ಕರೆಯುತ್ತೇವೆ. ಆ ವ್ಯಕ್ತಿಯ ಹೆಸರನ್ನು ಕರೆದಾಗ ಆತ ತಿರುಗಿನೋಡುತ್ತಾನೆ. ಅವನು ತನ್ನನ್ನು ತನ್ನ ಹೆಸರಿನಲ್ಲಿ ಒಂದಾಗಿಸಿ ಬಿಡುತ್ತಾನೆ. ಕೆಲವು ವೇಳೆ ಆತನ ಹೆಸರೇ, ಸ್ವತಃ ಆತನಿಂದಾಗ ಬಹು ದಾದದ್ದಕ್ಕಿಂತ ಹೆಚ್ಚಿನ ಕಾರ್ಯವನ್ನು ಮಾಡಿಬಿಡುತ್ತದೆ.

ನಂಬಿ ಕರೆದೊಡೆ ಓ ಎನ್ನುವ ಭಗವಂತನಿಗೂ ಆತನ ನಾಮಕ್ಕೂ ಯಾವುದೇ ವ್ಯತ್ಯಾಸವಿಲ್ಲ. ಇಂತಹ ಭಗವಂತನ ಭಕ್ತರಲ್ಲಿ ಯಾವ ಭೇದವೂ ಇಲ್ಲ. ಇದನ್ನು ಪುರಂದರ ದಾಸರು ಅತ್ಯಂತ ಉತ್ತಮವಾಗಿ ಮತ್ತು ಸರಳವಾಗಿ ತಮ್ಮ '**ನೀನ್ಯಾಕೊ, ನಿನ್ನ ಹಂಗ್ಯಾಕೋ ರಂಗ । ನಿನ್ನ ನಾಮದ ಬಲವೊಂದಿದ್ದರೆ ಸಾಕೋ**' ಎನ್ನುವ ಕೀರ್ತನೆಯಲ್ಲಿ ಹೇಳಿದ್ದಾರೆ. ಇಲ್ಲಿ ಭಗವಂತ, ತಾನು ಭಗವದ್ಗೀತೆಯಲ್ಲಿ ಹೇಳಿದ ಮೇಲಿನ ಮಾತನ್ನು ಮೀರದೆ ನಡೆಸಿಕೊಟ್ಟ ಆತನ ಮಹಿಮೆಯನ್ನು ಸುಂದರವಾಗಿ ಹಾಡಿದ್ದಾರೆ.

**ದಾಸರು ಕಂಡಂತೆ ನಾಮ ಮಹಿಮೆ – ಭಕ್ತರ ಜೀವನದಲ್ಲಿ :**

**ಅಜ್ಞಾನಾದಥವಾ ಜ್ಞಾನಾದುತ್ತಮ ಶ್ಲೋಕಾನಾಂ ಯತ್**
**ಸಂಕೀರ್ತಿತಮಘಂ ಪುಂಸೋ ದಹೇದೇಧೋ ಯಥಾನಲಃ**

*(ಭಾಗವತ ೬ –೨.೧೮)*

(ಅಗ್ನಿಯು ಕಟ್ಟಿಗೆಯ ರಾಶಿಯನ್ನು ಸುಟ್ಟುಹಾಕುವಂತೆ, ಭಗವ ನ್ನಾಮವು, ಅರಿತು ಅಥವಾ ಅರಿಯದೆಯೋ ಉಚ್ಚರಿಸಿದರೂ, ಮನುಷ್ಯನ ಪಾಪವನ್ನು ದಹಿಸಿ ಹಾಕುತ್ತದೆ)

**–ಕಥೆ ೧–**

**''ಆ ಮರ ಈ ಮರ ಧ್ಯಾನಿಸುತಿರುವಾಗ**
**ರಾಮ ರಾಮ ಎಂಬೋ ನಾಮವೆ ಕಾಯ್ತೋ ।''**

**ವಾಲ್ಮೀಕಿ – ಬೇಡ, ದರೋಡೆ ಕೋರ :** 'ದೋಚುವುದಾದರೆ ಬಾರೋ ದೋಚು ಹರಿನಾಮವನೇ ದೋಚು, ಪ್ರಾಣಪ್ರಯಾಣದ ಕಾಲದಲ್ಲಿ ಪರಿತಪಿಸುವೆ ನೀನು ಕಬೀರಾ ಪರಿತಪಿಸುವೆ ನೀನು'

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಹಿತೋ ಹಿ ಸಹ ॥** *(ಗೀತೆ, ೯.೩೦)*

ರಾಮಾಯಣ ಮಹಾಕಾವ್ಯವನ್ನು ಬರೆದ ಆದಿಕವಿ ಬಿರುದಾಂಕಿತ ಈ ಮುನಿಯು ತನ್ನ ಹಿಂದಿನ ಜೀವನದಲ್ಲಿ ರತ್ನಾಕರ ಎಂಬ ಹೆಸರಿ ನಿಂದ ದರೋಡೆ ನಡೆಸುತ್ತಿದ್ದ, ಸಾಮಾನ್ಯ ಜನರನ್ನು ಕೊಲೆಗೈಯು



ತ್ತಿದ್ದ ಒಬ್ಬ ದರೋಡೆಕೋರ. ಒಂದು ವಿಚಾರದ ಪ್ರಕಾರ ರತ್ನಾಕರನು ಭೃಗು ಮಹರ್ಷಿಗಳ ಗೋತ್ರದ ಬ್ರಾಹ್ಮಣ ವಂಶಸ್ಥನಾಗಿದ್ದ. ಮತ್ತೊಂದರಲ್ಲಿ ಅಂಗೀರಸ ಮುನಿಗಳ ವಂಶಸ್ಥನೆಂದೂ ಹೇಳಲಾಗಿದೆ. ಯಾವುದೋ ಕಾರಣದಿಂದ ಅವನು ಮಗುವಾಗಿದ್ದಾಗ ಸ್ವಂತ ತಂದೆ ತಾಯಿಗಳಿಂದ ದೂರಾಗಿ, ಕಳ್ಳರ ಕೈಗೆ ಸಿಕ್ಕು ದರೋಡೆಕೋರನಾಗಿ ಬೆಳೆಯಬೇಕಾಯಿತು.

ರಾಮಾಯಣದ ಉತ್ತರಕಾಂಡದಲ್ಲಿ ಬರುವ ಆತನ ಕತೆ ಹೀಗಿದೆ:

ಒಮ್ಮೆ ತನ್ನ ದರೋಡೆ ಕಾರ್ಯದಲ್ಲಿ ತೊಡಗಿದ್ದಾಗ ದೇವರ್ಷಿಗಳಾದ ನಾರದರನ್ನು ಆತ ತಡೆದು ನಿಲ್ಲಿಸಿದ. ನಾರದರು ಆತನನ್ನು ಕುರಿತು, ಆತನು ಮಾಡುತ್ತಿರುವುದು ಮಹಾಪಾಪವೆಂದೂ, ಅದಕ್ಕೆ ಪ್ರತಿಫಲವನ್ನು ಆತನು ಅನುಭವಿಸಬೇಕಾಗುವುದೆಂದೂ ಹೇಳಿದರು. ಆಗ ರತ್ನಾಕರ, ತಾನು ತನ್ನ ಕುಟುಂಬದ ನಿರ್ವಹಣೆಗಾಗಿ ಈ ಕಾರ್ಯವನ್ನು ಕೈಗೊಂಡಿರುವುದಾಗಿಯೂ, ತಾನು ದೋಚಿರುವ ವಸ್ತುಗಳಲ್ಲಿ ಪಾಲನ್ನು ಪಡೆಯುತ್ತಿರುವ ತನ್ನ ಕುಟುಂಬದವರೆಲ್ಲರೂ ತನ್ನ ಪಾಪದಲ್ಲಿ ಪಾಲನ್ನು ಪಡೆಯುವರು ಎಂದನು. ಅದಕ್ಕೆ ನಾರದರು ಕುಟುಂಬದ ಸದಸ್ಯರನ್ನು ಕೇಳಿಬರಲು ಹೇಳಿದರು.

ಮನೆಗೆ ಬಂದ ವಾಲ್ಮೀಕಿ, ತನ್ನ ಪಾಪದಲ್ಲಿ ಪಾಲನ್ನು ಪಡೆವಳೆ ಎಂದು ತನ್ನ ಪತ್ನಿಯನ್ನು ಕೇಳಿದ್ದಕ್ಕೆ ಆಕೆ, ಪತ್ನಿಯನ್ನು ಸಲಹುವುದು ಪತಿಯ ಕರ್ತವ್ಯ, ಆದರೆ ಆತನು ತಮ್ಮನ್ನು ಸಲಹಲು ಮಾಡುವ ಯಾವುದೇ ಪಾಪಕರ್ಮಕ್ಕೆ ಆಕೆ ಪಾಲುದಾರಳಲ್ಲ ಎಂದಳು. ಇದರಿಂದ ನೊಂದ ರತ್ನಾಕರ ತನ್ನ ಮಾತಾಪಿತೃಗಳ ಬಳಿಗೆ ಬಂದು ಅದೇ ಪ್ರಶ್ನೆಯನ್ನು ಕೇಳಿದನು. ಅದಕ್ಕೆ ಅವರು, ಹುಟ್ಟಿನಿಂದ ಆತನು ತನ್ನ ಜವಾಬ್ದಾರಿಯನ್ನು ತಾನು ಹೊರುವವರೆಗೂ ಅವನನ್ನು ತಾವು ಸಲಹಿರುವುದಾಗಿಯೂ, ಈಗ ಅವರ ಕಡೆಗಾಲದಲ್ಲಿ ತಂದೆತಾಯಿಯರನ್ನು ಸಲಹುವುದು ಆತನ ಕರ್ತವ್ಯವೆಂದೂ ಹೇಳಿದರು. ಅದಕ್ಕಾಗಿ ಆತ ಮಾಡುವ ಯಾವುದೇ ಪಾಪದಲ್ಲಿ ಅವರು ಪಾಲನ್ನು ಪಡೆಯಲಾರೆವು ಎಂದರು. ಇದೇ ರೀತಿ ತನ್ನ ಕುಟುಂಬದವರಿಂದ ಉತ್ತರ ಪಡೆದ ರತ್ನಾಕರ ಬಹಳವಾಗಿ ನೊಂದುಕೊಂಡನು. ಜೀವನದ ಸತ್ಯವನ್ನು ಅರಿತ ಆತ ನಾರದರ ಬಳಿಬಂದು ತನ್ನನ್ನು ರಕ್ಷಿಸಬೇಕೆಂದು ಕೇಳಿಕೊಂಡನು.



ನಾರದರು ಕರುಣೆ ತೋರಿ ಆತನಿಗೆ ರಾಮ ಮಂತ್ರವನ್ನು ನೀಡಲು ಚಿಂತಿಸಿದರು. ಆದರೆ ಮಹಾಪಾಪಿಯಾದ ಆತನಿಗೆ ಆ ಪವಿತ್ರ ಮಂತ್ರವನ್ನು ಕೊಡಬಾರದೆಂದು ಶಾಸ್ತ್ರವಿರುವುದರಿಂದ (ಒಂದು ಕತೆಯಲ್ಲಿ) ಮರ ಎಂದು ಬೋಧಿಸಿದರು. ಮತ್ತೊಂದು ಕತೆಯಲ್ಲಿ ಆತನಿಗೆ ರಾಮ ಎನ್ನಲು ಬರದಿದ್ದರಿಂದ ಮರಾ ಎಂದೂ ಮರಗಳನ್ನು ತೋರಿಸಿ, ಮರಾ, ಮರಾ, ಮರಾ ಎಂದು ಹೇಳಿದರೆಂದೂ ಇದೆ.

ಆ ಮಂತ್ರವನ್ನೇ ಚಿಂತಿಸುತ್ತಾ ಮೈಮರೆತ ರತ್ನಾಕರನ ಸುತ್ತ ಹುತ್ತ ಬೆಳೆದುಕೊಂಡಿತು. ಹಲವು ಕಾಲದ ನಂತರ ಅಂತರ್ಯದಲ್ಲಿ ಜ್ಞಾನ ಜ್ಯೋತಿಯನ್ನು ಬೆಳಗಿಸಿಕೊಂಡ ಆತ, ಆ ಹುತ್ತದಿಂದ ಹೊರಬಂದ. ಇದರಿಂದಾಗಿ ಆತನಿಗೆ ಹುತ್ತದಲ್ಲಿ ಬೆಳೆದವ ಅಥವಾ 'ವಾಲ್ಮೀಕಿ' ಎಂದು ಹೆಸರಾಯಿತು. ಮುಂದೆ ಶ್ರೀರಾಮನ ಜೀವನ ಚರಿತೆ, ರಾಮಾಯಣವನ್ನು ಕಾವ್ಯರೂಪದಲ್ಲಿ ಬರೆದ ಮೊದಲ ಕವಿಯಾಗಿ ಆಚಂದ್ರಾರ್ಕ ಸ್ತುತ್ಯರ್ಹನಾದನು.

ಪ್ರತಿಯೊಬ್ಬ ದುಷ್ಟನಿಗೂ ಭವಿಷ್ಯವಿದೆ, ಅವನಲ್ಲೂ ಸಂತನೊಬ್ಬ ನಿದ್ದಾನೆ ಎಂಬ ಮಾತನ್ನು ನಿರೂಪಿಸುವ ವ್ಯಕ್ತಿಯಾಗಿ ಈ ರತ್ನಾಕರ–ವಾಲ್ಮೀಕಿ ನಿಲ್ಲುತ್ತಾನೆ.

ಭಗವಂತನೇ ನೇರವಾಗಿ ಬರದಿದ್ದರೂ, ಆತನ ನಾಮವನ್ನು ಜಪಿಸಿ, ಪುಣ್ಯಾತ್ಮನಾಗಿ ಇಂದಿಗೂ ಪೂಜ್ಯ ಸ್ಥಾನದಲ್ಲಿ ನಿಲ್ಲುವ ಈ ವ್ಯಕ್ತಿತ್ವ ಭಗವಂತನ ನಾಮದ ಮಹಿಮೆಯ ಮುಖವೊಂದನ್ನು ತೋರುತ್ತದೆ. ಅಂತೆಯೇ ಮತ್ತೊಬ್ಬ ವ್ಯಕ್ತಿಯ ಜೀವನವನ್ನು ನೋಡೋಣ.

**–ಕಥೆ ೨–**

**''ಯಮನ ದೂತರು ಬಂದು ಅಜಾಮಿಳನೆಳೆವಾಗ**
**ನಾರಾಯಣ ಎಂಬೋ ನಾಮವೆ ಕಾಯ್ತೋ ।''**

**ಅಜಾಮಿಳ – ಪತಿತ ವ್ಯಭಿಚಾರಿ, ಪಾಪಿಷ್ಠ :** 'ಕಲಿಯುಗದಲಿ ಹರಿನಾಮವ ನುಡಿದರೆ ಕುಲಕೋಟಿಗಳುದ್ಧರಿಸುವವೋ ರಂಗಾ, ಸುಲಭದ ಮುಕ್ತಿಗೆ ಸುಲಭನೆಂದೆನಿಸುವ, ಜಲರುಹನಾಭನ ನೆನೆ ಮನವೇ' – ಪುರಂದರ ದಾಸರು.

**ಯಥಾಗದಂ ವೀರ್ಯತಮಮುಪಯುಕ್ತಂ ಯದೃಚ್ಛಯಾ ।**
**ಅಜಾನತೋಽಪ್ಯಾತ್ಮಗುಣಂ ಕುರ್ಯಾನ್ಮಂತ್ರೋಽಪ್ಯುದಾಹೃತಃ॥**

*(ಭಾಗವತ, ೬–೨.೧೯)*

'ರಾಜನ್! ಔಷಧದ ಶಕ್ತಿಯನ್ನರಿಯದೆ ವ್ಯಕ್ತಿಯು ತೆಗೆದು ಅದನ್ನು ಕೊಂಡರೂ, ಅದು ತನ್ನ ಕಾರ್ಯವನ್ನು ಮಾಡುತ್ತದೆ. ಅದರಂತೆ ಭಗವನ್ನಾಮವು (ಮನುಷ್ಯನ ಪಾಪವನ್ನು ನಿವಾರಿಸುತ್ತದೆ)'

ಭಾಗವತ ಪುರಾಣದಲ್ಲಿ ಅಜಾಮಿಳನ ಕಥೆಯು ಕಾಣಬರುತ್ತದೆ.

ಬಹಳ ಕಾಲದ ಹಿಂದೆ, ಕನ್ಯಾಕುಬ್ಜದಲ್ಲಿ ನೆಲೆಸಿದ್ದ ಅಜಾಮಿಳನು ಹುಟ್ಟಿನಿಂದ ಬ್ರಾಹ್ಮಣನೂ, ಶಾಸ್ತ್ರಪಾರಂಗತನೂ, ಕಟ್ಟುನಿಟ್ಟಿನ ಧಾರ್ಮಿಕನೂ ವಿನಯವಂತನೂ, ಸಜ್ಜನನೂ, ಸರ್ವಪ್ರಿಯನೂ ಆಗಿದ್ದನು. ಒಮ್ಮೆ ಪೂಜೆಗಾಗಿ ಹೂಗಳನ್ನು ಕೀಳುತ್ತಿದ್ದಾಗ ಕಾಮಕೇಳಿಯಲ್ಲಿ ತೊಡಗಿದ್ದ ಶೂದ್ರ ಸ್ತ್ರೀಪುರುಷರನ್ನು ಕಂಡನು. ಅಷ್ಟು ವರ್ಷಗಳ ಕಾಲ ಸಾಧನೆಯಿಂದ ಹಿಡಿದಿಟ್ಟ ಅಜಾಮಿಳನ ಮನಸ್ಸನ್ನು ಆಕೆಯ ಸೌಂದರ್ಯವು ಸೆರೆಹಿಡಿಯಿತು. ಮನೆಗೆ ಬಂದರೂ ಆಕೆಯ ಸೌಂದರ್ಯದಿಂದ ಹೊರಬರದ ಮನಸ್ಸು, ಆತನನ್ನು ಆಕೆಯ ಬಳಿಗೆ ಕರೆತಂದಿತು. ಆಕೆಯನ್ನು ವಿವಾಹವಾಗಿ, ತನ್ನ ೮೦ನೇ ವಯಸ್ಸಿನ ವರೆಗೂ ಆಕೆಯೊಡನೆ ನೆಲೆಸಿ, ತನ್ನ ಉತ್ತಮ ಜನ್ಮವನ್ನು ಮರೆತು ಹೋದನು. ಕಾಲಕ್ರಮದಲ್ಲಿ ಅನೇಕ ಮಕ್ಕಳಾದವು. ಅವರನ್ನು ಸಾಕಲು ಕಳ್ಳತನ, ಮೋಸ, ಸುಳ್ಳು, ಕುಡಿತ ಮುಂತಾದ ಗುಣಗಳನ್ನು ಕಲಿತು ಪತಿತನಾದನು.

ಆದರೆ ತನ್ನ ಪತಿಯ ಪವಿತ್ರ ಜೀವನ ತನ್ನ ಸೌಂದರ್ಯದಿಂದ ನಾಶವಾದುದನ್ನು ನೆನೆದು ಆ ಶೂದ್ರ ಹೆಂಗಸು ಆತನಿಗೆ ಸನ್ಮಾರ್ಗದಲ್ಲಿ ನಡೆಯುವಂತೆ ಬೇಡಿಕೊಂಡರೂ, ಅಜಾಮಿಳ ಆಕೆಯ ಮೋಹದಿಂದ ಹೊರಬರಲಿಲ್ಲ. ಆಕೆಯ ಒತ್ತಾಯದ ಮೇರೆಗೆ ತನ್ನ ಕೊನೆಯ ಮಗನ ಹೆಸರನ್ನು 'ನಾರಾಯಣಾ' ಎಂದು ಇಟ್ಟನು. ಆತನ ಮೇಲೆ ಅಪಾರ ವ್ಯಾಮೋಹವನ್ನು ಹೊಂದಿದ್ದ ಅಜಾಮಿಳ, ಬಾರಿಬಾರಿಗೂ 'ನಾರಾಯಣ ಕುಳಿತುಕೋ, ನಾರಾಯಣ ಮಲಗಿಕೋ, ನಾರಾಯಣ ಊಟ ಮಾಡು, ನಾರಾಯಣ ಒಳಗೆ ಬಾ' ಎಂಬುದಾಗಿ ಕರೆಯುತ್ತಿದ್ದನು. ತನ್ನ ಕೊನೆಯ ಮಗನಲ್ಲೇ ಪ್ರಾಣವನ್ನು ಇಟ್ಟಿದ್ದನು.

ಪಾಪಕರ್ಮಗಳಿಂದಲೂ, ಸಂಸಾರದ ಕಷ್ಟಕೋಟಲೆಗಳಿಂದಲೂ ಜರ್ಜರಿತನಾಗಿ ಪ್ರಾಣವು ಹೋಗುವ ಕಾಲ ಸನ್ನಿಹಿತವಾಯಿತು. ಪ್ರಾಣಪ್ರಯಾಣದ ಘಳಿಗೆಯಲ್ಲಿ ಆತನನ್ನು ಸೆಳೆದೊಯ್ಯಲು ಭಯಂಕರ ಆಕೃತಿಯ ಯಮನ ಕಿಂಕರರು ಬಂದರು. ಅವರನ್ನು ಕಂಡು ಹೆದರಿದ ಅಜಾಮಿಳನು ತನ್ನ ಸಂಸ್ಕಾರದಂತೆ, ತನ್ನ ಕಡೆಯ ಮಗನನ್ನು 'ನಾರಾಯಣಾ' ಎಂದು ಕೂಗಿಕರೆದನು. ತಕ್ಷಣವೇ ವೈಕುಂಠದಿಂದ ಶ್ರೀಮನ್ನಾರಾಯಣನ ದೂತರು ಬಂದು ಯಮನ ದೂತರನ್ನು ತಡೆದರು. ಅವರ ನಡುವೆ ಧರ್ಮಾಧರ್ಮದ ಚರ್ಚೆಯಾಯಿತು. ವಿಷ್ಣುವಿನ ದೂತರು, ಆತ ತನ್ನ ಕೊನೆಯ ಕಾಲದಲ್ಲಿ ಭಗವಂತನ ನಾಮವನ್ನು ನುಡಿದಿರುವುದರಿಂದ ಆತನಿಗೆ ನರಕಪ್ರಾಪ್ತಿಯಿಲ್ಲವೆಂದು ಆತನನ್ನು ರಕ್ಷಿಸಿದರು.

ಆಗ ಆತ, 'ಋಜುಮಾರ್ಗದಿಂದ ಸರಿದಿದ್ದ ನನಗೆ ಕೇವಲ ಒಂದು ಬಾರಿ 'ನಾರಾಯಣ' ಎಂದದ್ದಕ್ಕೆ ನರಕ ತಪ್ಪಿತು, ಮತ್ತೆ ಅದನ್ನೇ ಬಾರಿಬಾರಿ ಜಪಿಸುತ್ತಿದ್ದರೆ ಭಗವಂತನ ನಾಮದ ಮಹಿಮೆ ಮತ್ತೇನನ್ನು ನೀಡಲಾರದು?' ಎಂದು ಭಾವಿಸಿದನು. ನಂತರ ತನ್ನ ಪಾಪಕರ್ಮದಿಂದ ಕೂಡಿದ ಜೀವನವನ್ನು ತೊರೆದು, ಕಾಶಿಗೆ ತೆರಳಿ ಅಲ್ಲಿ ತನ್ನ ಉಳಿದ ಆಯುಸ್ಸನ್ನು ಭಗವನ್ನಾಮಸ್ಮರಣೆಯಲ್ಲಿ ಕಳೆದನು.

ಭಗವಂತನ ನಾಮವನ್ನು ಕೊನೆಗಾಲದಲ್ಲಿ ನೆನೆಯುವವನು ಪರಮಪಾಪಿಯಾಗಿದ್ದರೂ, ಆತನನ್ನು ಭಗವನ್ನಾಮ ರಕ್ಷಿಸುತ್ತದೆ ಎಂಬುದನ್ನು ಮತ್ತು ಇದರಿಂದ ಮುಕ್ತಿಯು ಪ್ರಾಪ್ತಿಯಾಗುವುದು ಎಂಬುದನ್ನು ಅಜಾಮಿಳೋಪಾಖ್ಯಾನವು ತೋರಿಸುತ್ತದೆ.

**-ಕಥೆ ೩-**

''ಕರಿ ಮಕರಿಗೆ ಸಿಲುಕಿ ಮೊರೆಯಿಡುತಿರುವಾಗ
ಆದಿಮೂಲ ಎಂಬೋ ನಾಮವೆ ಕಾಯ್ತೋ ।''

### ಆನೆ-ಕಾಡುಪ್ರಾಣಿ; ಮದಾಂಧನಾದ ರಾಜ; ಜನ್ಮಾಂತರದಲ್ಲೂ ರಕ್ಷಣೆ

ಭಗವದ್ಗೀತೆಯಲ್ಲಿ ಭಗವಂತ ಹೇಳುವಂತೆ, **'ನ ಮೇ ಭಕ್ತಃ ಪ್ರಣಶ್ಯತಿ'** *(ಗೀತಾ, ೯.೩೧)* ಮತ್ತು **'ನ ಹಿ ಕಲ್ಯಾಣ ಕೃತ್ ಕಶ್ಚಿದ್ದುರ್ಗತಿಮ್ ತಾತ ಗಚ್ಛತಿ'** *(ಗೀತಾ, ೬.೪೦)* ತನ್ನ ಭಕ್ತನು ಎಂದಿಗೂ ನಾಶವಾಗಲಾರನು ಮತ್ತು ದುರ್ಗತಿಯನ್ನು ಹೊಂದಲಾರನು ಎಂಬುದನ್ನು ನಿರೂಪಿಸಿ, ಕೇವಲ ತನ್ನ ನಾಮವನ್ನು ನೆನೆದರೂ ಸಾಕು, ತಾನು ಸಲಹುವೆ ಎಂಬುದನ್ನು ತೋರಲೋಸುಗವೇ ಈ ಲೀಲೆಯ ನ್ನಾಡಿದನೇನೋ ಎಂಬಂತಿದೆ ಈ ಘಟನೆ.

ಭಾಗವತ ಪುರಾಣದಲ್ಲಿ ಬರುವ ಗಜೇಂದ್ರಮೋಕ್ಷದ ಘಟನೆಯನ್ನು ಪುರಂದರದಾಸರು ಇಲ್ಲಿ ಉದಾಹರಿಸಿದ್ದಾರೆ. ತ್ರಿಕೂಟ ಪರ್ವತದ ಬಳಿ ಇದ್ದ ವರುಣನ ಉದ್ಯಾನವನದಲ್ಲಿ ಒಂದು ಸುಂದರವಾದ ಕೊಳವಿತ್ತು. ಸುತ್ತಲೂ ಅನೇಕ ಫಲಗಳನ್ನು ಬಿಡುವ ವಿವಿಧ ಮರಗಳಿಂದ, ಸುಂದರವಾದ ಪ್ರಾಣಿ ಪಕ್ಷಿಗಳಿಂದ ಕೂಡಿತ್ತು ಈ ವನ. ಅವುಗಳಲ್ಲಿ ಮದಿಸಿದ ಗಜವು ಮೃಗಗಳ ರಾಜನೆಂಬಂತೆ ಮೆರೆಯುತ್ತಿತ್ತು. ಇದರ ವಾಸನೆಗೇ ಹುಲಿ, ಖಡ್ಗಮೃಗ, ಸಿಂಹಗಳು ಹೆದರಿ ಪಲಾಯನ ಮಾಡುತ್ತಿದ್ದವು. ಸಾಧುಪ್ರಾಣಿ ಗಳು ಇದ ರಿಂದಾಗಿ ಈ ಕರಿಯ ಸುತ್ತಲೂ ನಿರ್ಭಯದಿಂದ ಓಡಾಡಿಕೊಂಡಿದ್ದವು. ಈ ಗಜರಾಜನು ತನ್ನ ಹೆಣ್ಣಾನೆಗಳು, ಮರಿಗಳೊಂದಿಗೆ ಪೊದರುಗಳನ್ನು, ಬಿದಿರುಗಳನ್ನು ನೆಲಸಮ ಮಾಡುತ್ತಾ ನಡೆಯುತ್ತಿತ್ತು. ಇದರಿಂದ ತ್ರಿಕೂಟ ಪರ್ವತವೇ ನಡುಗುತ್ತಿದೆಯೇನೋ ಎಂಬತ್ತಾಗುತ್ತಿತ್ತು.

ಹೀಗೆ ನಿರ್ಭಯವಾಗಿ, ಆನಂದದಿಂದ ಇರಲು ಒಮ್ಮೆ ಬೇಸಿಗೆಯು ಹೆಚ್ಚಾಗಿ ಎಲ್ಲ ಕಡೆಯಲ್ಲೂ ನೀರು ಆಹಾರಕ್ಕೆ ಬರ ಬಂದಿತು. ಬಾಯಾರಿಕೆ ಹಸಿವಿನಿಂದ ವರುಣನ ಉದ್ಯಾನಕ್ಕೆ ಬಂದು ಅಲ್ಲಿನ ಕೊಳದ ತಿಳಿನೀರನ್ನು ಕುಡಿದು, ಆನಂದದಿಂದ ಆಟವಾಡಲಾರಂಭಿಸಿತು.

ಆಗ ಆ ಕೊಳದಲ್ಲಿ ವಾಸವಾಗಿದ್ದ ದೊಡ್ಡ ಮಕರ (ಮೊಸಳೆ)ವು ಈ ಗಜರಾಜನ ನೀರಾಟದಿಂದ ಗಮನ ಸೆಳೆಯಲ್ಪಟ್ಟು ಬಂದು, ಅದರ ಕಾಲನ್ನು ಬಿಗಿಯಾಗಿ ಹಿಡಿದು ನೀರೊಳಗೆ ಎಳೆಯಲಾರಂಭಿಸಿತು. ಬಲಶಾಲಿಯಾದ ಕರಿಯು ಕೋಪಗೊಂಡು ತಾನು ಅದರ ಹಿಡಿತದಿಂದ ಪಾರಾಗಲು ಹವಣಿಸಿತು. ಆದರೆ ಸಾಧ್ಯವಾಗಲಿಲ್ಲ. ಇತರ ಆನೆಗಳೆಲ್ಲಾ ಸೇರಿ ಗಜರಾಜನನ್ನು ರಕ್ಷಿಸಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಅವು ದೂರದಲ್ಲಿ ನಿಂತು ಕಣ್ಣೀರು ಸುರಿಸಲಾರಂಭಿಸಿದವು. ಕರಿಮಕರಗಳ ಹೋರಾಟ ದೀರ್ಘಕಾಲದವರೆಗೂ ನಡೆಯಿತು. ಬರುಬರುತ್ತಾ ಕರಿಯ ಶಕ್ತಿ ಕುಗ್ಗಲಾರಂಭಿಸಿತು. ತನ್ನ ಸಾವನ್ನು ಸಮೀಪದಿಂದ ಕಾಣಲಾರಂಭಿಸಿದ ಆನೆಗೆ ತನ್ನ ಪೂರ್ವಜನ್ಮದ ಸ್ಮರಣೆಯಾಯಿತು.

ಪಾಂಡ್ಯದೇಶದ ರಾಜನಾಗಿದ್ದ ಇಂದ್ರದ್ಯುಮ್ನ ದೊಡ್ಡಭಕ್ತ. ರಾಜ್ಯ, ಕೋಶಗಳನ್ನೆಲ್ಲ ತೊರೆದು ಮಲಯ ಪರ್ವತಗಳಲ್ಲಿ ಆಶ್ರಮವನ್ನು ಕಟ್ಟಿಕೊಂಡು ಬಹಳ ಕಾಲದವರೆಗೆ ಶ್ರೀವಿಷ್ಣುವಿನ ಧ್ಯಾನದಲ್ಲಿ ತಲ್ಲೀನನಾಗಿದ್ದ. ಹೀಗಿರಲು ಒಂದುದಿನ ಆತ ಧ್ಯಾನಸ್ಥನಾಗಿ ಬಾಹ್ಯ ಪ್ರಪಂಚವನ್ನು ಮರೆತಿದ್ದಾಗ, ಅಗಸ್ತ್ಯಮುನಿಗಳು ಆತನ ಆಶ್ರಮಕ್ಕೆ ಬಂದರು. ಶಿಷ್ಯರೊಡಗೂಡಿ, ತನ್ನ ಆಶ್ರಮದ ಬಾಗಿಲಿಗೆ ಬಂದರೂ ತಮ್ಮನ್ನು ಗೌರವಿಸದ ಇಂದ್ರದ್ಯುಮ್ನನ ಮೇಲೆ ಅವರಿಗೆ ಕೋಪಬಂತು. ಆ ಕೋಪದ ಭರದಲ್ಲಿ, ಆನೆಯಂತೆ ಸೊಕ್ಕಿ, ತಮ್ಮನ್ನು ಗೌರವಿಸದೆ ಅವಹೇಳನ ಮಾಡಿದ್ದಕ್ಕೆ 'ನೀನು ಆನೆಯಾಗಿ ಹೋಗು' ಎಂದು ಶಾಪವಿತ್ತರು. ಇದರಿಂದಾಗಿ ಇಂದ್ರದ್ಯುಮ್ನನಿಗೆ ಆನೆಯ ಜನ್ಮ ಬಂದಿತು.

ಈಗ ಮರಣಸಂಕಟಕ್ಕೆ ಗುರಿಯಾದದ್ದರಿಂದ ಗಜರಾಜನಿಗೆ ತನ್ನ ಪೂರ್ವಜನ್ಮದ ನೆನಪಾಯಿತು. ತಕ್ಷಣವೇ ತಾನು ಹಿಂದಿನ ಜನ್ಮದಲ್ಲಿ

ಪ್ರತಿದಿನವೂ ಹೇಳುತ್ತಿದ್ದ ಪರಬ್ರಹ್ಮಸ್ತುತಿಯು ಜ್ಞಾಪಕಕ್ಕೆ ಬಂತು. ಈ ಜನ್ಮದಲ್ಲಿ ನಮಸ್ಕಾರ ಮಾಡಲು ಸಾಧ್ಯವಿಲ್ಲದ ಕಾರಣ ಕಡೆಯ ಬಾರಿಗೆ ಮನಸ್ಸಿನಲ್ಲೇ ಆ ಪರಬ್ರಹ್ಮ ತತ್ತ್ವಕ್ಕೆ ಪ್ರಣಾಮವನ್ನು ಮಾಡಿತು.

ತಾನು ಯಾವುದೇ ರೂಪ, ನಾಮವನ್ನೂ ನೆನೆಯದೆ ಕೇವಲ ಪರಾತ್ಪರ ವಸ್ತುವನ್ನು ಧ್ಯಾನಿಸಿದ್ದರಿಂದ, ಪರಬ್ರಹ್ಮ ಸ್ವರೂಪಿಯಾದ, ಎಲ್ಲಕ್ಕೂ ಮೂಲನಾದ ಆದಿಮೂಲನೆ (ನಾರಾಯಣ) ಪ್ರತ್ಯಕ್ಷನಾದನು. ಗರುಡವಾಹನನಾದ ಸ್ವಾಮಿಯು ತನ್ನ ಸುದರ್ಶನ ಚಕ್ರದಿಂದ, ಶಾಪಗ್ರಸ್ತನಾಗಿ ಮೊಸಳೆಯ ರೂಪದಿಂದ ಇದ್ದ 'ಹೂಹೂ' ಎಂಬ ಗಂಧರ್ವನನ್ನು ಸಂಹರಿಸಿ, ವಿಮೋಚನೆ ನೀಡಿದನು.

ಯಾವುದೇ ನಿರ್ದಿಷ್ಟ ರೂಪವನ್ನು ಧ್ಯಾನಿಸದೆ ಕೇವಲ ನಾಮವನ್ನು ಮಾತ್ರವೇ ಧ್ಯಾನಿಸಿದ್ದರಿಂದ ಭಗವಂತ ಪ್ರತ್ಯಕ್ಷನಾಗಿ ಭಕ್ತನನ್ನು ಸಲಹಿದ. ಭಗವಂತ ನಾಮಪ್ರಿಯ. ನಾಮವು ಹಗ್ಗದಂತೆ ಆತನನ್ನು ಬಂಧಿಸಿ ಭಕ್ತನ ಬಳಿಗೆ ಕರೆದು ತರುತ್ತದೆ.

**-ಕಥೆ ೪-**

''ಪ್ರಹ್ಲಾದನ ಪಿತ ಬಾಧಿಸುತಿರುವಾಗ
ನಾರಸಿಂಹ ಎಂಬೋ ನಾಮವೆ ಕಾಯ್ತೋ।''

**ಪ್ರಹ್ಲಾದ - ರಾಕ್ಷಸ ಪುತ್ರ : 'ಗರ್ವದಿ ಬೀಗದಿರೈ ನೀನು ತೋರೆಯ್ಯೆ ಅಪಹಾಸ್ಯವನು, ಜಲಧಿಯಲಿಹುದೈ ನಿನ್ನಯ ನೌಕೆ ಏನು ಗತಿಯೋ ಜೋಕೆ ಕಬೀರಾ ಏನು ಗತಿಯೋ ಜೋಕೆ'** *-ಕಬೀರ*

ಸತ್ವ-ರಜಸ್-ತಮಸ್ಸು ಇವು ಮೂರುಗುಣಗಳು. ಸತ್ವವು ದೇವಗುಣ. ಇದು ಯೋಗಮಾರ್ಗ ಅಥವಾ ಉನ್ನತಿಯನ್ನು ಪ್ರತಿನಿಧಿಸಿದರೆ, ತಮಸ್ಸು ಎಂಬುದು ಆಲಸ್ಯ, ನಿದ್ರಾ, ಪ್ರಮಾದಗಳ ಮಾರ್ಗವನ್ನು ತೋರುತ್ತದೆ. ಈ ತಮಸ್ಸಿನ ಪ್ರತಿರೂಪವಾದ ರಾಕ್ಷಸರ ಕುಲದಲ್ಲಿ ಹುಟ್ಟಿದವನೇ ಈ ಪ್ರಹ್ಲಾದ.

ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಇಬ್ಬರು ಬಲಿಷ್ಠ ದೈತ್ಯರ ರಾಜರು. ಹರಿಯ ದ್ವೇಷಿಗಳಾದ ಇವರು ತಾವೇ ಬಲಿಷ್ಠರೆಂದು ಗರ್ವಪಡುತ್ತಿದ್ದರು. ಅವರು ಭಗವಂತನ ಮೇಲೆ ಯುದ್ಧ ಸಾರಿದರು. ಹಿರಣ್ಯಾಕ್ಷನು ಹರಿಯನ್ನು ಹುಡುಕಿಕೊಂಡು ಹೋಗಿ ಅವನು ಮತ್ತು ಆತನ ಪತ್ನಿ ಭೂಮಿಯನ್ನು ಸಾಗರದಲ್ಲಿ ಮುಳುಗಿಸಲು ಯತ್ನಿಸಿದನು. ಆಗ ಹರಿಯು ವರಾಹರೂಪದಲ್ಲಿ ಬಂದು ಅವನನ್ನು ಕೊಂದು ಹಾಕಿದನು. ಸಹೋದರನ ಸಾವಿನಿಂದ ಕೋಪಗೊಂಡ ಹಿರಣ್ಯಕಶಿಪು ಬ್ರಹ್ಮನನ್ನು ಕುರಿತು ಘೋರ ತಪಸ್ಸನ್ನು ಆಚರಿಸಿ ವರವನ್ನು ಪಡೆದನು. ಮನೆಯ ಹೊರಗೆ ಅಥವಾ ಒಳಗೆ, ಶಸ್ತ್ರಾಸ್ತ್ರ ಗಳಿಂದಾಗಲಿ, ಪ್ರಾಣಿಗಳಿಂದಾಗಲಿ, ಮನುಷ್ಯ, ದೇವ, ದಾನವ, ಗಂಧರ್ವರಿಂದಾಗಲಿ, ಹಗಲಾಗಲಿ, ಇರುಳಾಗಲಿ, ರಣರಂಗದಲ್ಲಾಗಲಿ, ನೆಲದ ಮೇಲಾಗಲಿ, ಆಕಾಶದಲ್ಲಾಗಲಿ ಮರಣ ಬರದಂತೆ ವರವನ್ನು ಪಡೆದು ತನಗೆ ಸಾವೇ ಇಲ್ಲವೆಂದು ಗರ್ವದಿಂದ ಬೀಗಿದನು.



ಈ ಮಧ್ಯೆ, ಗರ್ಭಿಣಿಯಾಗಿದ್ದ, ಹಿರಣ್ಯಕಶಿಪುವಿನ ಹೆಂಡತಿಯ ಗರ್ಭದಲ್ಲಿ ಬೆಳೆಯುತ್ತಿದ್ದ ಮಗುವಿಗೆ ದೇವರ್ಷಿ ನಾರದರು ನಾರಾಯಣ ನಾಮವನ್ನು ಉಪದೇಶಿಸಿದರು. ಇದರಿಂದ ಹುಟ್ಟುತ್ತಲೇ ಹರಿಭಕ್ತನೊಬ್ಬ ಹರಿದ್ವೇಷಿಯ ಮನೆಯಲ್ಲಿ ಬೆಳೆಯಲಾರಂಭಿಸಿದ.

ಹುಟ್ಟಿದ ಮಗುವಿಗೆ ಪ್ರಹ್ಲಾದ ಎಂದು ನಾಮಕರಣ ಮಾಡಿದರು. ಗುರುಕುಲಕ್ಕೆ ಹೋದ ಬಾಲಕ ಅಲ್ಲಿದ್ದ ಮಕ್ಕಳಿಗೆಲ್ಲಾ ಹರಿನಾಮದ ರುಚಿಯನ್ನು ಹತ್ತಿಸಿದ. ರಾಕ್ಷಸ ಗುರುಗಳಾದ ಚಂಡಾಮರ್ಕರು ಇದರಿಂದ ಕುಪಿತಗೊಂಡು ಹಿರಣ್ಯಕಶಿಪುವಿನಲ್ಲಿ ದೂರು ನೀಡಿದರು.

ತಂದೆ ಹಿರಣ್ಯಕಶಿಪು ದೇವತೆಗಳನ್ನು ಸೋಲಿಸಿ, ತ್ರಿಲೋಕಗಳಲ್ಲೂ ಅಧಿಕಾರ ನಡೆಸುತ್ತಿದ್ದನು. ಆತನ ತೊಡೆಯ ಮೇಲೆ ಕುಳಿತ ಪ್ರಹ್ಲಾದ ಹರಿನಾಮ ಅದಾಗಿಯೇ ದೊರಕಿದ್ದಾಗಿಯೂ, ಹರಿಯೇ ಸರ್ವಶ್ರೇಷ್ಠನೂ, ಅಮರನೂ ಎಂದು ಹೇಳಿದನು. ಇದರಿಂದ ಕೋಪಗೊಂಡ ಹಿರಣ್ಯಕಶಿಪು ಅವನನ್ನು ಬೆಂಕಿಯಲ್ಲಿ ಸುಡಿಸಿ, ಸಾಗರದಲ್ಲಿ ಮುಳುಗಿಸಿ, ಆನೆಯ ಕಾಲಿಗೆ ದೂಡಿ, ವಿಷಕುಡಿಸಿ, ಬೆಟ್ಟದಿಂದ ತಳ್ಳಿ, ಹಾವಿನಿಂದ ಕಡಿಸಿ, ತಲೆ ಕತ್ತರಿಸಿ ಸಾಯಿಸಲು ಯತ್ನಿಸಿದನು. ಆದರೆ ಎಲ್ಲದರಿಂದಲೂ ಪಾರಾಗಿ ಬದುಕಿಬಂದ ಮಗನನ್ನು ಹಿರಣ್ಯಕಶಿಪು ಕಂಡು ವ್ಯಾಕುಲಗೊಂಡನು.

ನಂತರ ಜಗತ್ತಿನಲ್ಲಿ ತನ್ನಂತೆ ಸರ್ವಶಕ್ತರು ಮತ್ತಾರೂ ಇಲ್ಲ ಎಂದು ಮಗನನ್ನು ನಂಬಿಸಲು ಹರಿಯನ್ನು ತನಗೆ ತೋರಿಸಲು ಹೇಳಿದನು. ಭಕ್ತನಾದ ಪ್ರಹ್ಲಾದ, ಸರ್ವಾಂತರ್ಯಾಮಿಯಾದ ಭಗವಂತನ ಆವಿರ್ಭಾವವನ್ನು ಎಲ್ಲೆಡೆ ತಾನು ಕಾಣುತ್ತಿರುವುದಾಗಿ ಹೇಳಿದ. 'ಸರ್ವಾಂತರ್ಯಾಮಿಯಾದ ಭಗವಂತನು ಅರಮನೆಯ ಕಂಬ ಕಂಬಗಳಲ್ಲೂ ಇದ್ದಾನೆ' ಎಂದು ಹೇಳಿದನು. ಹಿರಣ್ಯಕಶಿಪು ಒಂದು ಕಂಬವನ್ನು ತನ್ನ ಗದೆಯಿಂದ ಹೊಡೆಯಲು, ಅದರಲ್ಲಿ ನರಸಿಂಹ ರೂಪದಿಂದ ಹರಿಯು ಬಂದು ಆತನನ್ನು ಸಾಯಂಕಾಲ ಮನೆಯ ಹೊಸ್ತಿಲ ಮೇಲೆ ಕುಳಿತು, ತನ್ನ ಉಗುರುಗಳಿಂದ ಕೊಂದು ಹಾಕಿದ.

ಪ್ರಹ್ಲಾದ ಕೇವಲ ಭಗವನ್ನಾಮ ಸ್ಮರಣೆಯಿಂದಲೇ ಭಗವಂತನ ದರ್ಶನವನ್ನು ಪಡೆದ.

ಮತ್ತೊಂದು ವಿಚಾರವಿದೆ. ಪ್ರಹ್ಲಾದನನ್ನು ಹಿರಣ್ಯನು 'ಆ ಕಂಬದಲ್ಲಿರುವನೇ, ಈ ಕಂಬದಲ್ಲಿರುವನೇ, ಅಲ್ಲಿರುವನೇ ಇಲ್ಲಿರುವನೇ' ಎಂದು ಕೇಳುತ್ತಿದ್ದಾಗ, ಭಗವಂತನಿಗೆ ಚಿಂತೆಯಾಗಿತ್ತಂತೆ. ಎಲ್ಲಿ ತಾನು ಇರಬೇಕು ಎಂದು. ಭಕ್ತನ ಮಾತನ್ನು ನಡೆಸಿಕೊಡುವ ಭಾರವನ್ನು ಹೊತ್ತಿದ್ದ ಹರಿಯು ಚಿಂತಾಕ್ರಾಂತನಾಗಿದ್ದನಂತೆ.

ಹೀಗೆ ನಾಮವು ಭಗವಂತನನ್ನು ಭಕ್ತನ ರಕ್ಷಣೆಗೆ ಎಳೆದು ತರುವುದರಿಂದ ಅದರ ಮಹಿಮೆಯು ಅಪಾರವಾದುದು.

**–ಕಥೆ ೫–**

**''ಬಾಲೆಯ ಸಭೆಯಲಿ ಸೀರೆಯ ಸೆಳೆವಾಗ**
**ಕೃಷ್ಣ ಕೃಷ್ಣ ಎಂಬೋ ನಾಮವೆ ಕಾಯ್ತೋ।''**

**ದ್ರೌಪದಿ – ಆರ್ತ ಸ್ತ್ರೀ ಭಕ್ತೆ :** ದ್ರುಪದ ಮತ್ತು ದ್ರೋಣಾಚಾರ್ಯರು ಒಂದೇ ಗುರುಕುಲದಲ್ಲಿ ಓದಿದ ಸಹಪಾಠಿಗಳು. ರಾಜಪುತ್ರನಿಗೂ, ಬಡಬ್ರಾಹ್ಮಣ ಕುವರನಿಗೂ ಅಲ್ಲಿ ಸ್ನೇಹ ಉಂಟಾಯಿತು. ಆಗ ದ್ರುಪದನು ತನ್ನ ಸ್ನೇಹಿತನಿಗೆ ಮುಂದೆ, ಅರ್ಧರಾಜ್ಯವನ್ನು ನೀಡಿ, ತನ್ನ ಸಮಾನವಾಗಿ ಕಾಣುವುದಾಗಿ ಮಾತುಕೊಟ್ಟನು. ಮುಂದೆ ಓದಿ, ಸಕಲವಿದ್ಯಾಸಂಪನ್ನರಾದ ಮೇಲೆ ಸ್ನೇಹಿತರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು. ಮಾತನ್ನು ಕೊಟ್ಟವರು, ಪಡೆದವರು ಅದನ್ನು ಮರೆತರು. ದುಪದ ರಾಜಸುಖದಲ್ಲಿ ಮೈ ಮರೆತ ; ಬಡ ದ್ರೋಣಾಚಾರ್ಯರು ಕಷ್ಟದಲ್ಲಿ ಜೀವನ ತಳ್ಳಲಾರಂಭಿಸಿದರು. ದ್ರೋಣಾಚಾರ್ಯರು, ಹುಟ್ಟಿದ ಮಗನಿಗೆ ಹಾಲು ನೀಡಲೂ ಕಷ್ಟವಾದಾಗ ಸ್ನೇಹಿತನ ಮಾತನ್ನು ನೆನೆದುಕೊಂಡು, ಪಾಂಚಾಲದ ರಾಜನಾಗಿದ್ದ ದ್ರುಪದನನ್ನು ಕಾಣಲು ಬಂದರು. ಅವನ ಬಳಿ ಒಂದು ಹಸುವಿಗಾಗಿ ಕೇಳಿಕೊಂಡರು. ಆಗ ಸಿಂಹಾಸನದಲ್ಲಿ ಕುಳಿತಿದ್ದ ದ್ರುಪದ ಅಹಂಕಾರದಿಂದ ದ್ರೋಣಾಚಾರ್ಯರನ್ನು ಅವಮಾನಿಸಿ ಹಿಂದಿರುಗಿಸಿದ. ಇದರಿಂದ ಕೋಪಗೊಂಡ ದ್ರೋಣಾಚಾರ್ಯರು ತಮ್ಮ ಶಿಷ್ಯರಾದ ಪಾಂಡವರಿಂದ ದ್ರುಪದನನ್ನು ಸೋಲಿಸಿ, ಆತನ ಅರ್ಧರಾಜ್ಯವನ್ನು ಕಿತ್ತುಕೊಂಡರು. ಇದರಿಂದ ಅವಮಾನಿತನಾದ ದ್ರುಪದ ತನ್ನ ಸೇಡನ್ನು ತೀರಿಸಿಕೊಳ್ಳಲು ದೊಡ್ಡ ಯಾಗವೊಂದನ್ನು ಮಾಡಿ, ಅದರಿಂದ ದ್ರೋಣಾಚಾರ್ಯರನ್ನು ಕೊಲ್ಲುವ ಒಬ್ಬ ಮಗ ಧೃಷ್ಟದ್ಯುಮ್ನ ಮತ್ತು ಪಾರ್ಥನನ್ನು ವರಿಸುವಂತಹ ಮಗಳು, ದ್ರೌಪದಿ (ಕೃಷ್ಣೆ, ಯಾಜ್ಞಸೇನಿ, ಪಾಂಚಾಲಿ ಇವು ಈಕೆಯ ಇತರ ನಾಮಗಳು) ಎಂಬ ಒಬ್ಬಳು ಕನ್ಯೆಯನ್ನು ಪಡೆದನು.



ಬಲಿಷ್ಠ ದೊರೆಯಾದ ದ್ರುಪದ ತನ್ನ ಮಗಳನ್ನು ಶ್ರೇಷ್ಠ ವೀರನಿಗೆ ಮದುವೆ ಮಾಡಿಕೊಡುವುದಾಗಿ ತೀರ್ಮಾನಿಸಿದನು. ಅಸಾಮಾನ್ಯರಿಂದ ಮಾತ್ರವೇ ಭೇದಿಸಬಹುದಾದ ಮತ್ಸ್ಯಯಂತ್ರವನ್ನು ನಿರ್ಮಿಸಿ, ಕ್ಷತ್ರಿಯವೀರರನ್ನು ಸ್ವಯಂವರಕ್ಕೆ ಆಹ್ವಾನಿಸಿದನು. ಅಲ್ಲಿ ಬಿಲ್ಲನ್ನು ಬಗ್ಗಿಸಲು ಸಹ ಸಾಧ್ಯವಾಗದೆ ಕ್ಷತ್ರಿಯರೆಲ್ಲ ಸೋತು ಹೋದರು. ಬ್ರಾಹ್ಮಣ ವೇಷದಿಂದ ಇದ್ದ ಪಾಂಡವರ ಗುಂಪಿನಿಂದ ಅರ್ಜುನ ಬಂದು ಬಿಲ್ಲನ್ನು ಬಗ್ಗಿಸಿ, ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಗೆದ್ದುಕೊಂಡನು.

ಕಾಲಾನಂತರದಲ್ಲಿ ರಾಜ್ಯವನ್ನು ಮರಳಿಪಡೆದ ಪಾಂಡವರು ಇಂದ್ರಪ್ರಸ್ಥದಲ್ಲಿ ವಾಸವಿದ್ದರು. ಅಲ್ಲಿಗೆ ಬಂದ ದುರ್ಯೋಧನ ಒಮ್ಮೆ ನೀರಿನ ಕುಂಡದಲ್ಲಿ ಬಿದ್ದದ್ದನ್ನು ಕಂಡು ದ್ರೌಪದಿ, ಕುರುಡನ ಮಗ ಕುರುಡ ಎಂದು ಹಂಗಿಸಿದಳು. ಇದರಿಂದ ಕುಪಿತನಾದ ದುರ್ಯೋಧನನು ಶಕುನಿಯ ಸಹಾಯದಿಂದ, ಪಾಂಡವರನ್ನು ಕಪಟದ್ಯೂತದಲ್ಲಿ ಸೋಲಿಸಿ, ದ್ಯೂತದ ವಸ್ತುವಾಗಿ ದ್ರೌಪದಿಯನ್ನು ಗೆದ್ದ. ನಂತರ ತುಂಬಿದ ಸಭೆಯಲ್ಲಿ ಆಕೆಯ ವಸ್ತ್ರಾಪಹರಣ ಮಾಡಲು ಆದೇಶಿಸಿದನು. ದ್ರೌಪದಿಯು ಮೊದಲು ಹಲವಾರು ನಿಯಮ, ನೀತಿಗಳ ಬಗ್ಗೆ ವಾದದಲ್ಲಿ ತೊಡಗಿದ್ದಳು. ನಂತರ ತನ್ನ ಅಹಂಕಾರವನ್ನು ಬಿಡಬೇಕಾಯಿತು. ಅಲ್ಲದೆ ಅತಿ ಬಲಶಾಲಿಗಳಾದ ತನ್ನ ಗಂಡಂದಿರು, ಹಿರಿಯರಾದ, ಭೀಷ್ಮದ್ರೋಣಾದಿಗಳು, ಮಹಾರಾಜ ಧೃತರಾಷ್ಟ್ರ ಯಾರೂ ತನ್ನ ಮಾನರಕ್ಷಣೆಗೆ ಬರದಿದ್ದಾಗ, ಶ್ರೀಕೃಷ್ಣನನ್ನು ಆರ್ತಳಾಗಿ ಪ್ರಾರ್ಥಿಸಿದಳು. ಭಗವಂತನ ಕೃಪೆಯಿಂದ ಆಕೆಯ ವಸ್ತ್ರವು ಅಕ್ಷಯವಾಗಿ ಮಾನ ರಕ್ಷಣೆಯಾಯಿತು.

ದ್ರೌಪದಿಯು ಭಗವಂತನ ಆರ್ತ ಭಕ್ತರಿಗೆ ಉತ್ತಮ ಉದಾಹರಣೆಯಾಗುತ್ತಾಳೆ. ಭಗವಂತನ ನಾಮವನ್ನು ನೆನೆದು ಆತನಿಂದ ತನ್ನ ಮಾನದ ರಕ್ಷಣೆಯನ್ನು ಮಾಡಿಸಿಕೊಂಡಳು.

ಒಮ್ಮೆ ಒಬ್ಬ ರಾಜನು ತಾನು ಮಾಡಿರುವ ಪಾಪಕ್ಕೆ ಪರಿಹಾರವನ್ನು ಕೇಳಲು ಮಹಾತಪಸ್ವಿಯಾದ ಋಷಿಯೊಬ್ಬರ ಕುಟೀರಕ್ಕೆ ಹೋದನು. ಆಗ ತಪಸ್ವಿಯು ಇರಲಿಲ್ಲ, ಅಲ್ಲಿಯೇ ಕುಳಿತಿದ್ದ ಋಷಿಪುತ್ರನಿಗೆ ತಾನು ಮಾಡಿರುವ ಹಲವಾರು ಪಾಪಕರ್ಮಗಳನ್ನು ಹೇಳಿ ಪರಿಹಾರವನ್ನು ಸೂಚಿಸಲು ಹೇಳಿದನು. ಅದನ್ನು ಕೇಳಿದ ಆ ಕುಮಾರನು, ರಾಜನಿಗೆ ಮೂರು ಬಾರಿ ರಾಮನಾಮವನ್ನು ಜಪಿಸಲು ಹೇಳಿದ. ಮೂರು ಬಾರಿ ರಾಮನಾಮವನ್ನು ಜಪಿಸಿ ರಾಜನು ಆನಂದದಿಂದ ಹೊರಟುಹೋದ. ಆಗ ದಾರಿಯಲ್ಲಿ ಬರುತ್ತಾ ಇದನ್ನೆಲ್ಲಾ ಗಮನಿಸುತ್ತಿದ್ದ ಆ ತಪಸ್ವಿಯು ತನ್ನ ಮಗನಿಗೆ ರಾಜನ ಆಗಮನದ ಕಾರಣವನ್ನು ಕೇಳಿದ. ಮಗ ನಡೆದುದನ್ನೆಲ್ಲಾ ಹೇಳಿದ. ಅದನ್ನು ಕೇಳಿ, ಆ ಋಷಿಯು ಕೋಪದಿಂದ ಮಗನಿಗೆ, ''ಕೇವಲ ಒಮ್ಮೆ ಭಗವನ್ನಾಮ ನುಡಿದರೆ ಜನ್ಮಜನ್ಮಾಂತರದ ಮಹಾಪಾಪಗಳೇ ನಾಶವಾಗುವಾಗ, ರಾಜನಿಗೆ ಮೂರು ಬಾರಿ ರಾಮನಾಮ ಜಪಿಸಲು ಹೇಳಿ, ಭಗವಂತನ ನಾಮಕ್ಕೆ ಅವಮಾನ ಮಾಡಿದ್ದಕ್ಕೆ ಶೂದ್ರನಾಗಿ ಹೋಗು'' ಎಂದು ಶಪಿಸಿಬಿಟ್ಟನು. **ಇದು ನಾಮದ ಮಹಿಮೆ.**

ಭಗವಂತನ ನಾಮವು ಜನ್ಮಜನ್ಮಾಂತರ ಪಾಪಗಳನ್ನು ನಾಶ ಮಾಡುತ್ತದೆ. ಇಂತಹ ಭಗವನ್ನಾಮವು ಒಬ್ಬ ವ್ಯಕ್ತಿಯ ಮೂಲ ಗುಣವನ್ನೇ, ಮನೋಭಾವನೆಯನ್ನೇ, ಜೀವನವನ್ನೇ ಬದಲಾಯಿಸುವ ಶಕ್ತಿಯನ್ನು ಹೊಂದಿದೆ. ಅಘಟಿತ ಘಟನೆಗಳನ್ನು ಘಟಿಸುವಂತೆ ಮಾಡುವ ಶಕ್ತಿ ಈ ನಾಮಕ್ಕಿದೆ. ಇಂತಹ ನಾಮವು ಭಕ್ತಿಯ ಒಂದು ರೂಪವೇ ಆಗಿದೆ.

**''ನುತಿಸಿ ದುರ್ಗಾನಾಮವನು ಹಲವು ಪಾಪಿಗಳು**
**ಹೊಂದಿದರು ಮೋಕ್ಷವನು ಭವವ ದಾಟಿ**
**ಒಂದು ಬಾರಿಗೆ ನನ್ನ ಕಣ್ಣಪಟ್ಟಿಯ ಬಿಡಿಸು**
**ನೋಡುವೆನು ನಾ ನಿನ್ನ ಅಭಯಪದವ.''**

*–ರಾಮಪ್ರಸಾದ*

# ಉತ್ತರ ಭಾರತದ ಸಂತರುಗಳಲ್ಲಿ ನಾಮಜಪದ ಪ್ರಾಮುಖ್ಯತೆ

ಡಾ.ಕೆ.ಅನಂತರಾಮು

### ಸ್ವಾಮಿ ರಾಮಾನಂದ



ಉತ್ತರದೇಶಕ್ಕೆ ದಕ್ಷಿಣ ದೇಶದಿಂದ ರಾಮನಾಮವನ್ನು ಕೊಂಡೊಯ್ದು, ಅದನ್ನು ಪ್ರಚಾರ ಮಾಡಿದ ಕೀರ್ತಿ ಸ್ವಾಮಿ ರಾಮಾನಂದರಿಗೆ (೧೨೯೯-೧೪೧೦) ಸಲ್ಲುತ್ತದೆ. ಭಕ್ತಿತತ್ತ್ವವು ದಕ್ಷಿಣ ದೇಶದಲ್ಲಿ ಹುಟ್ಟಿತ್ತು, ಅದನ್ನು ರಾಮಾನಂದರು ಉತ್ತರದೇಶಕ್ಕೆ ಒಯ್ದರು, ಅವರ ಶಿಷ್ಯರಾಗಿ ಆ ಭಕ್ತಿಯನ್ನು ಕಬೀರದಾಸರು ಸಪ್ತದ್ವೀಪ ನವ ಖಂಡಗಳಲ್ಲಿ ಪ್ರಚಾರ ಪಡಿಸಿದರು ಎಂಬೊಂದು ಮಾತು ಪ್ರಚಾರದಲ್ಲಿದೆ. ರಾಮಾನಂದರು ಕರ್ನಾಟಕದ ಮಂಡ್ಯ ಜಿಲ್ಲೆಯ ಮೇಲುಕೋಟೆಯೆಂಬಲ್ಲಿ ಜನಿಸಿದವರೆಂಬ ವಿಚಾರವೂ ಇದೆ. ಕಬೀರ, ರೈದಾಸ, ಸೇನಾನಾಯಿ, ನರಹರಿ, ಪೀಪಾ ಮುಂತಾದ ಭಕ್ತಿದೀವಿಗೆಗಳನ್ನು ಬೆಳಗಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. 'ರಾಮಾವತ' ಎಂಬ ಹೆಸರಿನ ಭಕ್ತಿಪಂಥಕ್ಕೆ ಅವರು ಪ್ರವರ್ತಕರೆನಿಸಿದ್ದಾರೆ. ಉತ್ತರಭಾರತದ ಸಂತ ಪರಂಪರೆಯಲ್ಲಿ ಅವರ ಹೆಸರು ಸುವರ್ಣಾಕ್ಷರಗಳಲ್ಲಿ ಬರೆದಿಡಲು ಅರ್ಹವಾದುದೆಂದು ವಿದ್ವಾಂಸರು ಬರೆದಿದ್ದಾರೆ. ಅವರು ಬಹುಕಾಲ ಕಾಶೀಪಟ್ಟಣದಲ್ಲಿ ವಾಸವಾಗಿದ್ದರು.

''ಹರಿನಾಮವನ್ನು ಸ್ಮರಿಸದಿದ್ದರೆ ಜೀವನವೆಂಬುದೇ ವ್ಯರ್ಥವಾಗಿಬಿಡುತ್ತದೆ. ಸಾಧುಸಂಗದಲ್ಲಿರುತ್ತ, ಭಜನೆ ಕೀರ್ತನೆಗಳಲ್ಲಿ ಮುಳುಗುತ್ತ, ಅಂತರಂಗದ ಕೊಳೆಯನ್ನೆಲ್ಲ ತೊಳೆದು ಹಾಕಿ, ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕು. ಮಡದಿ ಮಕ್ಕಳ ಮೋಹಕ್ಕಾಗಲಿ, ವಿಷಯಸುಖಗಳ ಸೆಳೆತಕ್ಕಾಗಲಿ ಸಿಲುಕದೆ ಎಚ್ಚರದಿಂದಿರಬೇಕು. ಶ್ರೀಪತಿಯ ಚರಣ ಕಮಲಗಳನ್ನು ಸದಾಕಾಲ ಸ್ಮರಿಸುತ್ತಿದ್ದರೆ, ಆ ನಾಮರತ್ನಕ್ಕಂಜಿ, ಯಮಧರ್ಮರಾಯನೂ ಆಗ ನಮ್ಮನ್ನು ಮುಟ್ಟಲು ಹಿಂದೆ ಮುಂದೆ ನೋಡುತ್ತಾನೆ'' ಎಂದು ರಾಮಾನಂದರು ನಾಮಸ್ಮರಣೆಗೆ ಹೆಚ್ಚಿನ ಒತ್ತು ನೀಡಿದ್ದಾರೆ.

ಮಹಾತ್ಮರ ಬಾಯಿಂದ ಅಯಾಚಿತವಾಗಿ ಹೊಮ್ಮಿ ಬಂದ ಭಗವಂತನ ನಾಮವೂ ಕೂಡ ತಾರಕ ಮಂತ್ರವಾಗಿ, ದೀಕ್ಷಾಮಂತ್ರವಾಗಿ ಪರಿಣಮಿಸಿ ಬಿಡುತ್ತದೆಯೆಂಬುದಕ್ಕೆ ರಾಮಾನಂದರೇ ಒಳ್ಳೆಯ ಉದಾಹರಣೆಯಾಗಿದ್ದಾರೆ. ''ರಾಮಾನಂದರು ನನ್ನನ್ನು ತಮ್ಮ ಶಿಷ್ಯನನ್ನಾಗಿ ಒಪ್ಪಿಕೊಳ್ಳುತ್ತಾರೋ ಇಲ್ಲವೋ, ನಾನು ಮುಸಲ್ಮಾನ'' ಎಂಬ ಅಳುಕು ಕಬೀರದಾಸರನ್ನು ಪೀಡಿಸುತ್ತಿತ್ತು. ಅದಕ್ಕಾಗಿ ಅವರೊಂದು ಉಪಾಯ ಮಾಡಿದರು. ರಾಮಾನಂದರು ಗಂಗಾಸ್ನಾನಕ್ಕೆಂದು ನಿತ್ಯವೂ ಬ್ರಾಹ್ಮೀ ಮೂಹರ್ತಕ್ಕೆ ಇಳಿದು ಹೋಗುತ್ತಿದ್ದ ಪಂಚಗಂಗಾ ಘಾಟಿನ ಮೆಟ್ಟಿಲೊಂದರ ಮೇಲೆ ಕಬೀರದಾಸರು ಹೋಗಿ ಮಲಗಿಬಿಟ್ಟರು. ಎಂದಿನಂತೆ ರಾಮಾನಂದರು ಮೆಟ್ಟಿಲುಗಳನ್ನಿಳಿಯುತ್ತ ಕತ್ತಲೆಯಲ್ಲಿ ಕಾಣದೆ, ಕಬೀರರ ಎದೆಯ ಮೇಲೆ ಹೆಜ್ಜೆಯೂರಿಬಿಟ್ಟರು. ''ಇದಾರೋ ಮನುಷ್ಯರನ್ನು ತುಳಿದುಬಿಟ್ಟೆನಲ್ಲಾ'' ಎಂದು ಬೆಚ್ಚಿಬಿದ್ದ ರಾಮಾನಂದರು, ''ಆಹಾ, ರಾಮರಾಮಾ'' ಎಂದು ಉದ್ಗರಿಸಿದರು. ಅದಷ್ಟೇ ಕಬೀರರಿಗೆ ಸಾಕಾಯಿತು. ಮೆಲ್ಲನೆ ಮೇಲೆದ್ದು ಕತ್ತಲೆಯಲ್ಲಿ ಮರೆಯಾಗಿಬಿಟ್ಟರು. ಆಮೇಲೆ ಕಬೀರರು, ''ನಾನು ರಾಮಾನಂದರ ಶಿಷ್ಯ, ಅವರಿಂದ ನನಗೆ ರಾಮನಾಮದ ದೀಕ್ಷೆಯಾಗಿದೆ'' ಎಂದು ಕಾಶೀಪಟ್ಟಣದಲ್ಲೆಲ್ಲ ಹೇಳಿಕೊಳ್ಳುತ್ತ ಅಲೆಯತೊಡಗಿದರು. ಆಗ ಕೆಲವರು ರಾಮಾನಂದರನ್ನು ಕಂಡು, ''ಇದೇನು ಸ್ವಾಮಿ, ಮ್ಲೇಚ್ಛನಿಗೂ ದೀಕ್ಷೆ ಕೊಟ್ಟಿರಾ?'' ಎಂದು ಆಕ್ಷೇಪಿಸಿದರು. ಅದಕ್ಕೆ ರಾಮಾನಂದರು, ''ಕರೆದು ತನ್ನಿ ಆ ಕಬೀರನನ್ನು'' ಎಂದರು. ಕಬೀರರು ಬಂದರು, ಸದ್ಗುರುವಿಗೆ ಅಡ್ಡಬಿದ್ದು ನಿಂತರು. ಆಗ ರಾಮಾನಂದರು, ''ನಾನು ನಿನ್ನನ್ನು ಶಿಷ್ಯನನ್ನಾಗಿ ಮಾಡಿಕೊಂಡುದು ಹೌದೇನೋ, ಅದು ಯಾವಾಗ?'' ಎಂದು ಕೇಳಿದರು. ಅದಕ್ಕೆ ಕಬೀರದಾಸರು, ''ಪಂಚಗಂಗಾ ಘಾಟಿನ ಮೆಟ್ಟಿಲುಗಳನ್ನಿಳಿಯುವಾಗ ತಾವು ನನ್ನ ಎದೆಯ ಮೇಲೆ ಕಾಲಿಟ್ಟು 'ರಾಮರಾಮಾ' ಎಂದು ಉಚ್ಚರಿಸಿದಿರಲ್ಲಾ, ಆಗಲೇ ನನಗೆ ಮಂತ್ರದೀಕ್ಷೆಯಾಗಿಬಿಟ್ಟಿತು. ತಾವು ನನ್ನ ಸದ್ಗುರುಗಳಾಗಿ ಬಿಟ್ಟಿರಿ, ನಾನು ನಿಮ್ಮ ಶಿಷ್ಯನಾಗಿ ಬಿಟ್ಟೆ'' ಎಂದು ವಿನೀತರಾಗಿ ಉತ್ತರಿಸಿದರು. ಆ ಮಾತುಗಳನ್ನು ಕೇಳಿ ರಾಮಾನಂದರು ಪರಮಾನಂದಭರಿತರಾದರು. ಆಕ್ಷೇಪಿಸುವ ಒಂದೇ ಒಂದು ಮಾತನ್ನೂ ಆಡಲಿಲ್ಲ. ''ಹೌದು ಹೌದು, ಗುರುವೆಂದರೆ ನಾನೇ, ಶಿಷ್ಯನೆಂದರೆ ನೀನೇ'' ಎಂದು ಕಬೀರರನ್ನು ಮುಸಲ್ಮಾನನೆಂಬ ಭೇದವೆಣಿಸದೆ ಬಾಚಿ ತಬ್ಬಿಕೊಂಡರು.

### ಕಬೀರದಾಸ

ಕಬೀರದಾಸರು (೧೩೯೮-೧೫೧೮) ಕಾಶೀಪಟ್ಟಣದ ಬ್ರಾಹ್ಮಣರ ಮನೆಯಲ್ಲಿ ಹುಟ್ಟಿದರೂ ವಿಧಿವಿಲಾಸದಿಂದ ಮುಸಲ್ಮಾನರ ಮನೆಯಲ್ಲಿ ಬೆಳೆದು ದೊಡ್ಡವರಾದರು. ನಾನು ಆರಾಧಿಸುತ್ತಿರುವ ರಾಮನಾದರೋ ದಶರಥಪುತ್ರನಾದ ರಾಮನಲ್ಲ ; ಅವನು ಅಂತರ್ಯಾಮಿಯಾದ ನಿರ್ಗುಣರಾಮ ಎಂದು ಕಬೀರರೇ ತಾವು ನಿರ್ಗುಣೋಪಾಸಕರೆಂದು ಹೇಳಿಕೊಂಡಿದ್ದಾರೆ. ಅದು ಉಪನಿಷತ್ತುಗಳಲ್ಲಿ ಬರುವ ನಿರ್ಗುಣ ಪರಬ್ರಹ್ಮ ತತ್ತ್ವಕ್ಕೆ ಒಪ್ಪುವಂತಿದೆ. ''ರಾಮ



ನಾಮವೆಂದರೆ ಅದು ಸಾರಪೂರ್ಣ ವಾದ ವಸ್ತು. ಅದು ಎಲ್ಲ ತತ್ತ್ವಗಳಿಗೂ ತಿಲಕಪ್ರಾಯವಾದುದು. ಅದು ಭವಸಮುದ್ರ ವನ್ನು ಪಾರುಗಾಣಿಸುವ ನೌಕೆಯೇ ಸರಿ'' ಎಂದು ಕಬೀರರು ರಾಮನಾಮವನ್ನು ಕೊಂಡಾಡಿದ್ದಾರೆ.

''ಹೇ ಸ್ನೇಹಶೀಲನಾದ ಸ್ವಾಮಿಯೇ, ನಾನು ನಿನ್ನನ್ನು ಕಾಣುವುದು ಯಾವಾಗ, ನಾನು ನಿನ್ನನ್ನು ಕೂಡುವುದು ಯಾವಾಗ ! ಅಂತರ್ಯಾಮಿಯಾದ ನಿನ್ನ ಹಾದಿಯನ್ನೇ ನಾನು ಕಾಯುತ್ತಿದ್ದೇನೆ. ನೀರಿಂದೆತ್ತಿದ ಮೀನಿನಂತೆ ನನ್ನ ಜೀವ ಚಡಪಡಿಸುತ್ತಿದೆ. ನಿನ್ನ ದರ್ಶನವಿಲ್ಲದೆ ನನಗೆ ನಿದ್ರೆ ಬಾರದಾಗಿದೆ. ಹಗಲೆನ್ನದೆ, ಇರುಳೆನ್ನದೆ ನಿನ್ನ ದರ್ಶನಕ್ಕಾಗಿ ನಾನು ಕಾತರಿಸುತ್ತಿದ್ದೇನೆ. ತಡ ಮಾಡಬೇಡ ಸ್ವಾಮಿ, ನನ್ನನ್ನು ನಿನ್ನವನೆಂದು ತಿಳಿದು ಬೇಗನೆ ಕೈಹಿಡಿದು ಕಾಪಾಡು. ಹೇ ಶ್ರೀರಾಮ, ನನ್ನನ್ನು ನಿನ್ನ ಬಾಗಿಲು ಕಾಯುವ ನಾಯಿಯೆಂದು ತಿಳಿದುಕೋ. ನೀನೇ ಕಟ್ಟಿದ ನಾಮಸ್ಮರಣೆಯ ಹಗ್ಗ ನನ್ನ ಕಂಠದಲ್ಲಿದೆ. ನೀನು ಸೆಳೆದತ್ತ ನಾನು ಬರುತ್ತೇನೆ. ಈ ಭವಸಾಗರದಿಂದ ನನ್ನನ್ನು ದಾಟಿಸು. ನಿನ್ನ ವೈಕುಂಠವೆಲ್ಲಿದೆಯೋ ಅದನ್ನು ನನಗೆ ತೋರಿಸು. 'ರಾಮಾ ರಾಮಾ' ಎಂದು ನಿನ್ನ ನಾಮವನ್ನೂ ಕರೆ ಕರೆದು ನನ್ನ ನಾಲಗೆಯೆಲ್ಲ ಹೊಪ್ಪಳೆ ಎದ್ದುಬಿಟ್ಟಿದೆ. ನೀನು ಬರುವ ಹಾದಿ ನೋಡಿ ನೋಡಿ ನನ್ನ ಕಣ್ಣುಗಳು ಮರಗಟ್ಟಿ ಹೋಗಿವೆ. ನೀನೇ ನನಗೆ ತಾಯಿ, ನಾನು ನಿನ್ನ ಬಾಲಕ, ನನ್ನನ್ನು ಕಡೆಗಣಿಸಬೇಡ ಸ್ವಾಮಿ'' ಎಂದು ಕಬೀರರು ನಾಮ ಸ್ಮರಣೆಯ ಮೂಲಕ ಭಗವಂತನ ಸಾಕ್ಷಾತ್ಕಾರಕ್ಕಾಗಿ ಕಾತರಿಸಿದ್ದಾರೆ.

ರಾಮನಾಮವೆಂಬುದು ಬೆಲೆ ಕಟ್ಟಲಾಗದ ವಸ್ತು. ಒಂದು ದಿನ ನಂದಲಾಲನೆಂಬ ಸಿರಿವಂತನೊಬ್ಬನು ಕಬೀರರ ಕೃಪಾಶೀರ್ವಾದಗಳನ್ನು ಬಯಸಿ, ಸಾಕಷ್ಟು ಧನರಾಶಿಯ ಸಹಿತವಾಗಿ ಅವರ ಮನೆಗೆ ಬಂದನು. ಆತನ ಆಗಮನವನ್ನು ದೂರದಿಂದಲೇ ಕಂಡ ಕಬೀರರು, ಆತನಿಗೆ ಅರಿವಾಗದಂತೆ, ತಮ್ಮ ಮನೆಯಿಂದ ಮೆಲ್ಲನೆ ಹೊರಕ್ಕೆ ಜಾರಿಕೊಂಡುಬಿಟ್ಟರು.

ಆಗ ಮನೆಯಲ್ಲಿಯೇ ಇದ್ದ ಕಬೀರರ ಮಗ ಕಮಾಲನು ನಂದಲಾಲನನ್ನು ಮಾತನಾಡಿಸಿ ಬರಮಾಡಿಕೊಂಡನು. ರಾಮ ಮಂತ್ರೋಪದೇಶವನ್ನು ಬಯಸಿ ಬಂದಿದ್ದ ಆ ಮುಮುಕ್ಷುವಿಗೆ ಕಮಾಲನೇ ರಾಮಮಂತ್ರೋಪದೇಶ ಮಾಡಿ, ತನ್ನ ಶಿಷ್ಯನನ್ನಾಗಿ ಮಾಡಿಕೊಂಡನು. ಕಮಾಲನು ಬೇಡ ಬೇಡವೆಂದರೂ ಕೇಳದೆ, ನಂದಲಾಲನು ತಾನು ತಂದಿದ್ದ ದ್ರವ್ಯವನ್ನೆಲ್ಲ ಕಮಾಲನಿಗೇ ಕಾಣಿಕೆಯಾಗಿ ಸಮರ್ಪಿಸಿ, ತಾನು ಬಂದ ಕಾರ್ಯವು ನೆರವೇರಿತೆಂದು ಧನ್ಯತಾಭಾವದಿಂದ ಹೊರಟು ಹೋದನು.

ಅಲ್ಲಿ ಇಲ್ಲಿ ಅಡ್ಡಾಡುತ್ತ ಕಾಲಹರಣ ಮಾಡಿ, ಅದೆಷ್ಟೋ ಹೊತ್ತಾದ ಬಳಿಕ ಕಬೀರದಾಸರು ಮನೆಗೆ ವಾಪಸು ಬಂದರು. ನಡೆದ ವಿಷಯವನ್ನೆಲ್ಲ ಕಮಾಲನು ವರ್ಣಿಸಿದನು. ಆಗ ಕಬೀರರು, ''ಈ ದ್ರವ್ಯವೆಲ್ಲ ನಮಗೇಕಪ್ಪಾ, ಅದು ನಮ್ಮನ್ನು ದಾರಿತಪ್ಪಿಸುತ್ತದೆ. 'ನಮಗೆ ಬೇಡ' ಅನ್ನಬಾರದಿತ್ತೆ? ರಾಮನಾಮವನ್ನು ಹೀಗೆಲ್ಲ ಮಾರಾಟ ಮಾಡುತ್ತಾರೇನಪ್ಪಾ ಎಂದು ಆಕ್ಷೇಪಿಸಿದರು. ಆಗ ಕಮಾಲನು, ''ಅಪ್ಪಾ, ನಾನು ಮಾರಿದೆ, ನಂದಲಾಲನು ಕೊಂಡುಕೊಂಡ ಎಂದಾದರೆ, ನಂದ ಲಾಲನು ಕೊಟ್ಟಿರುವಷ್ಟೇ ರಾಮನಾಮಕ್ಕೆ ಇರುವ ಬೆಲೆ ಎಂದು ನೀವು ತಿಳಿದುಕೊಂಡಿದ್ದೀರೇನು? ರಾಮನಾಮವು ಬೆಲೆ ಕಟ್ಟಲಾಗದ ವಸ್ತು. ಹಾಗೆ ಬೆಲೆ ಕಟ್ಟಲಾಗದ ವಸ್ತುವನ್ನು ಮಾರಾಟ ಮಾಡುವುದಾದರೂ ಹೇಗೆ? ಈ ದ್ರವ್ಯವನ್ನು ದೀನದಲಿತರಿಗೆ ದಾನ ಮಾಡೋಣ'' ಎಂದು ಹೇಳಿದನು. ಆ ಮಾತುಗಳನ್ನು ಕೇಳಿ ಕಬೀರರೇ ಮನದಲ್ಲಿ ಮಗನನ್ನು ಮೆಚ್ಚಿ ಮೌನವಾಂತರು.

## ಸಧನಾ

೧೪ನೆಯ ಶತಮಾನದ ಅಂತ್ಯ ಭಾಗದಲ್ಲಿ ಉತ್ತರಪ್ರದೇಶದಲ್ಲಿ ಸಧನಾ ಎಂಬ ಹೆಸರಿನ ಸಂತನೊಬ್ಬನಿದ್ದನು. ಅವನು ಮಹಾಭಾರತದಲ್ಲಿ ಬರುವ ಧರ್ಮವ್ಯಾಧನಂತೆ ತನ್ನ ಜೀವನೋಪಾಯಕ್ಕಾಗಿ ಕಟುಕ ವೃತ್ತಿಯನ್ನು ಅವಲಂಬಿಸಿದ್ದನು. ಸತ್ತ ಪಶುಗಳ ಮಾಂಸವನ್ನು ಮಾತ್ರವೇ ಅವನು ಮಾರಾಟ ಮಾಡುತ್ತಿದ್ದನು. ತೂಕಕ್ಕೆ ಸರಿಹೊಂದಿಸಿಕೊಂಡು, ಮಾಂಸ ತೂಗುವ ತಕ್ಕಡಿಯ ಒಂದು ತಟ್ಟೆಯಲ್ಲಿ ಸದಾಕಾಲ ಒಂದು ಸಾಲಿಗ್ರಾಮ ಶಿಲೆಯನ್ನು ಇಟ್ಟುಕೊಂಡಿರುತ್ತಿದ್ದನು. ಅದರಿಂದ ಆ ಭಕ್ತನು ಮಾಡುತ್ತಿದ್ದ ನಾಮಸ್ಮರಣೆಗೆ ಅನುಕೂಲವಾಗುತ್ತಿತ್ತು. ಆದರೆ ಆ ರಹಸ್ಯವನ್ನು ಅರಿಯಲಾರದೆ ವಿಷ್ಣುಭಕ್ತನೊಬ್ಬನು, ''ಮಾಂಸ ತೂಗುವ ತಕ್ಕಡಿಯಲ್ಲಿ ಸಾಲಿಗ್ರಾಮ ದೇವರನ್ನು ಇಟ್ಟುಕೊಳ್ಳುವುದೆ?'' ಎಂದು ಸಂಕಟಪಟ್ಟುಕೊಂಡು, ಅದನ್ನು ಎತ್ತಿಕೊಂಡು ಹೋಗಿ ತನ್ನ ಮನೆಯಲ್ಲಿಟ್ಟುಕೊಂಡನು.



ಆದರೆ ಆ ರಾತ್ರಿಯಲ್ಲಿ ಮಹಾವಿಷ್ಣುವು ಆ ವಿಷ್ಣುಭಕ್ತನ ಕನಸಿನಲ್ಲಿ ಕಾಣಿಸಿಕೊಂಡು, ''ಅಯ್ಯಾ, ನೀನೇಕೆ ನನ್ನನ್ನು ಸಧನಾ ಭಕ್ತನ ತಕ್ಕಡಿ ಬಿಡಿಸಿ ತಂದೆ? ಅವನು ಸದಾಕಾಲ ನನ್ನನ್ನು ಸ್ಮರಿಸುತ್ತ ತಕ್ಕಡಿಯಲ್ಲಿಟ್ಟು ಉಯ್ಯಾಲೆ ತೂಗಿಸುತ್ತಿದ್ದನಲ್ಲ ! ಅಷ್ಟು ಮಾತ್ರವಲ್ಲದೆ ಅವನ ನಾಮ ಜಪಕ್ಕೂ ನೀನು ಅಡ್ಡಿಮಾಡಿದೆಯಲ್ಲಾ?'' ಎಂದನು. ಮರುದಿನವೇ ವಿಷ್ಣುಭಕ್ತನು ಅದನ್ನು ಸಧನಾನಿಗೆ ಮರಳಿಸಿ ಬಂದನು. ಪರಮಾತ್ಮನ ನಾಮಜಪದಲ್ಲಿಯೇ ಮುಳುಗಿದ್ದಾದರೆ, ಕಟುಕನಿಗೂ ಅವನು ಒಲಿಯುತ್ತಾನೆ ಎಂಬುದು ವೇದ್ಯವಾಗುತ್ತದೆ.

''ಒಂದು ಹನಿ ನೀರಿಗಾಗಿ ಹಂಬಲಿಸುವ ಚಾತಕಪಕ್ಷಿ ನಾನಾಗಿದ್ದೇನೆ. ನಿನಗಾಗಿ ನನ್ನ ಪ್ರಾಣವು ಸೋತು ಸುಣ್ಣವಾಗಿದೆ. ಹೇ ಸ್ವಾಮಿ, ನಾನು ನಿನ್ನಿಂದ ಬೇರೆಯೆಂದು ಬಗೆಯಬೇಡ. ನಿನ್ನನ್ನೇ ನೆನೆಯುತ್ತ, ನಿನಗೆ ಶರಣಾಗತನಾಗಿರುವ ನನ್ನನ್ನು ಕಾಪಾಡು'' ಎಂದು ಸಧನಾ ಭಗವಂತನಲ್ಲಿ ಮೊರೆಯಿಟ್ಟಿದ್ದಾನೆ.

## ರೈದಾಸ

ರಾಮಾನಂದರ ಅನುಗ್ರಹದಿಂದ ಜನಿಸಿದ ರೈದಾಸರು (೧೪೫೦-೧೫೨೦) ನೂರಿಪ್ಪತ್ತು ವರ್ಷ ಬದುಕಿದ್ದರು. ಕಾಶೀ ಪಟ್ಟಣದ ಸುತ್ತಮುತ್ತ ಸತ್ತ ದನಗಳನ್ನು ತಂದು, ಅವುಗಳ ಚರ್ಮದಿಂದ ಪಾದರಕ್ಷೆಗಳನ್ನು ಅವರು ತಯಾರಿಸುತ್ತಿದ್ದರು. ಒಂದು ದೇವಾಲಯದ ಎದುರಿಗೆ ಕುಳಿತು, ನಾಮ ಸ್ಮರಣೆಯಲ್ಲಿಯೇ ಮಗ್ನರಾಗಿ ಪಾದರಕ್ಷೆ ಹೊಲಿಯುತ್ತಿದ್ದರು. ರಾಮನಾಮದ ಜಪದಿಂದಾಗಿ ಅವರು ಅಪೂರ್ವ ಶಕ್ತಿಯನ್ನು ಗಳಿಸಿದ್ದರು. ತಾನು ದುಡಿದು ಪಡೆದ ದ್ರವ್ಯದಿಂದ ಹೊಟ್ಟೆ ಹೊರೆಯಬೇಕೇ ಹೊರತು, ಉಚಿತವಾಗಿ ಯಾರಿಂದಲೂ ಏನನ್ನೂ ತೆಗೆದುಕೊಳ್ಳಬಾರದು ಎಂಬ 'ಅಪರಿಗ್ರಹ' ವ್ರತ ಅವರದಾಗಿತ್ತು.



ಒಂದು ದಿನ ಭಗವಂತನೇ ಮಾರುವೇಷದಲ್ಲಿ ಬಂದು, ರೈದಾಸರ ಗುಡಿಸಲನ್ನು ಹೊಕ್ಕು, ''ತೆಗೆದುಕೊಳ್ಳಪ್ಪಾ ರೈದಾಸ, ಇದು ಸ್ಪರ್ಶಮಣಿ, ಕಬ್ಬಿಣವನ್ನು ಚಿನ್ನವಾಗಿಸುತ್ತದೆ. ಇದರಿಂದ ನೀನು ಮಾಡುವ ಸಾಧು ಸೇವೆಗೆ ಸಹಾಯವಾಗುತ್ತದೆ'' ಎಂದು ಹೇಳಿದನು. ರೈದಾಸರು, ''ಅದೆಲ್ಲ ನನಗೆ ಬೇಡ'' ಎಂದುಬಿಟ್ಟರು. ಕೊನೆಗೆ ಭಗವಂತನು ಅದನ್ನು ರೈದಾಸರ ಗುಡಿಸಿಲಿನ ಸೂರಿನಲ್ಲಿ ಬಟ್ಟೆಯಲ್ಲಿ ಸುತ್ತಿಟ್ಟು , ''ಸಮಯ ಬಿದ್ದಾಗ ಬಳಸಿಕೊಳ್ಳಪ್ಪ'' ಎಂದು ಬಲವಂತ ದಿಂದ ಇರಿಸಿ ಹೊರಟುಹೋದನು. ಒಂದು ವರ್ಷ ಕಳೆದ ಮೇಲೆ ಭಗವಂತನು ಹಿಂದಿನ ಮಾರುವೇಷದಲ್ಲಿಯೇ ರೈದಾಸರಲ್ಲಿಗೆ ಬಂದು, ''ನಾನು ಕೊಟ್ಟ ಸ್ಪರ್ಶಮಣಿಯಿಂದ ಏನಾದರೂ ಉಪಕಾರವಾಯಿತೇ ರೈದಾಸ?'' ಎಂದು ಕೇಳಿದನು. ಅದಕ್ಕೆ ರೈದಾಸರು, ''ರಾಮನಾಮಕ್ಕಿಂತ ಮಿಗಿಲಾದ ಸ್ಪರ್ಶಮಣಿ ಬೇರಾವುದೂ ಇಲ್ಲ. ಅದನ್ನು ಮರೆತು ಅನ್ಯ ವಸ್ತುಗಳನ್ನು ಬಯಸುವವರು ಯಮಪುರಿಗೆ ತುತ್ತಾಗುತ್ತಾರೆ. ನನ್ನ ಬಳಿ ರಾಮನಾಮವೆಂಬ ಕಲ್ಪವೃಕ್ಷ ಕಾಮಧೇನುಗಳೇ ಇರುವಾಗ ಸ್ಪರ್ಶಮಣಿಯೆಂಬ ಕಲ್ಲು ನನಗೇಕೆ ಬೇಕು? ಅದು ನೀವಿಟ್ಟ ಜಾಗದಲ್ಲಿಯೇ ಇರಬೇಕು. ಕೃಪೆಮಾಡಿ ತೆಗೆದುಕೊಂಡು ಹೋಗಿ'' ಎಂದು ಹೇಳಿದರು. ನಾಮಜಪವು ಅಂತಹ ಅಪೂರ್ವವಾದ ಶಕ್ತಿಯನ್ನು ಅವರಿಗೆ ತಂದುಕೊಟ್ಟಿತ್ತು.

''ರಾಮನಾಮವನ್ನು ಎಚ್ಚರದಿಂದ ನೆನೆ ಮನವೆ. ಈ ಮಾಯಾ ಪ್ರಪಂಚದಲ್ಲಿ ಮೈಮರೆಯಬೇಡ. ಎಂದೋ ಒಂದು ದಿನ ಬಿದ್ದು ಹೋಗುವ ಕಾಯವನ್ನು ನೆಚ್ಚಿಕೊಳ್ಳಬೇಡ. ಮನೆ ಮಠಗಳು, ಬಂಧು ಬಳಗದವರು, ಹೆಂಡತಿ ಮಕ್ಕಳು, ಯಾರೂ ನಿನ್ನವರಲ್ಲ. ನಿನ್ನ ದೇಹ ಬೀಳುತ್ತಿದ್ದಂತೆಯೇ ಎಲ್ಲರೂ ನಿನ್ನ ನಂಟು ಕಡಿದುಕೊಂಡು, ನಿನ್ನ ದೇಹವನ್ನೂ ಬೆಂಕಿ ಪಾಲು ಮಾಡಿಬಿಡುತ್ತಾರೆ. ಆದ್ದರಿಂದ ನೀನು ದೇಹಿಯಾಗಿರುವವರೆಗೆ ರಾಮನಾಮದ ಸ್ಮರಣೆಯನ್ನು ಮರೆಯಬೇಡ'' ಎಂದು ರೈದಾಸರು ಉಪದೇಶಿಸಿದ್ದಾರೆ.

## ಸೂರದಾಸ

ಕೃಷ್ಣಭಕ್ತರಾಗಿದ್ದ ಸೂರದಾಸರು (೧೪೮೩-೧೫೬೩) ಆ ಸ್ವಾಮಿಯ ಲೀಲಾಭೂಮಿಯಾಗಿದ್ದ ವೃಂದಾವನ ಸಂಚಾರಿಯಾಗಿದ್ದರು. ಅವರು ಅಂಧರಾಗಿದ್ದರು. ಆದರೇನು, ಸದಾಕಾಲ ಕೃಷ್ಣ ನಾಮಜಪದಲ್ಲಿಯೇ ಮತ್ತರಾಗಿರುತ್ತಿದ್ದ ಅವರ ಒಳಗಣ್ಣು ಸದಾ ತೆರೆದಿರುತ್ತಿತ್ತು. ಒಂದು ದಿನ ವೃಂದಾವನದ ದಾರಿಯಲ್ಲಿ ನಡೆದು ಹೋಗುತ್ತ, ಅರಿಯದೆ ಒಂದು ಬಾವಿಯೊಳಕ್ಕೆ ಬಿದ್ದುಬಿಟ್ಟರು. ಹೆಚ್ಚು ಘಾಸಿಯಾಗಲಿಲ್ಲ. ''ಹೇ ಕರುಣಾಮಯನಾದ ಶ್ರೀಹರಿಯೆ, ನನ್ನನ್ನು ಈ ಕೂಪದಿಂದ ಮೇಲೆತ್ತಿ ಕಾಪಾಡು'' ಎಂದು ಅವನ ನಾಮವನ್ನೇ ಸ್ಮರಿಸುತ್ತ ನಿಂತುಕೊಂಡರು. ಆಗ ಶ್ರೀಕೃಷ್ಣನು ಬಾಲಕೃಷ್ಣನಾಗಿ ತೋರಿಕೊಂಡು, ''ಇಲ್ಲಿ ನಿನ್ನ ಕೈಕೊಡು ಅಜ್ಜಾ'' ಎಂದು ಕೂಗಿ ಹೇಳುತ್ತ ಮೇಲೆತ್ತಿದನು.

ಶ್ರೀಕೃಷ್ಣನ ಅಮೃತಸ್ಪರ್ಶದಿಂದ ಸೂರದಾಸರು ರೋಮಾಂಚನಗೊಂಡರು. ಅಪೂರ್ವವಾದ ಆನಂದದ ಸಂಚಾರವಾಯಿತು. ತಮ್ಮನ್ನು ಮೇಲೆತ್ತಿದ ಆ ಬಾಹುವನ್ನು ಭದ್ರವಾಗಿ ಹಿಡಿದುಕೊಂಡು



ಬಿಟ್ಟರು. ಆದರೆ ಶ್ರೀಹರಿಯು ಝುಟಕ್ಕನೆ ಕೊಡಹಿಕೊಂಡು ಓಡಿಬಿಟ್ಟನು. ಸೂರದಾಸರಿಗೆ ಎಲ್ಲವೂ ವೇದ್ಯವಾಯಿತು. ''ಬಲಹೀನನೆಂದು ತಿಳಿದು ನನ್ನ ಕೈಯಿಂದ ಕೊಸರಿಕೊಂಡು ಹೋಗುತ್ತೀಯಾ ಸ್ವಾಮಿ! ಆದರೇನು, ನಾನು ನಿನ್ನನ್ನು ನನ್ನ ಹೃದಯದಲ್ಲಿ ಸೆರೆಹಿಡಿದು ಕೂರಿಸಿದ್ದೇನೆ. ಅಲ್ಲಿಂದ ತಪ್ಪಿಸಿಕೊಂಡು ಹೋದರೆ ಮಾತ್ರ ನಿನ್ನನ್ನು ಶೂರನೆನ್ನುತ್ತೇನೆ'' ಎಂದು ಉಗ್ಗಡಿಸಿದರು. ನಾಮಜಪದಲ್ಲೇ ಮಗ್ನರಾದ ಭಕ್ತರನ್ನು ಸಂಕಟಗಳೂ ಸುಲಭದಲ್ಲಿ ತಟ್ಟಲಾರವು. ತಟ್ಟಿದರೂ ದೇವರೇ ಸರಿಪಡಿಸಿಕೊಡುತ್ತಾನೆ.

''ಶ್ರೀಹರಿಯ ನಾಮಸ್ಮರಣೆಯಿಂದ ಮಾನವನು ಯಾವ ಫಲವನ್ನು ಬೇಕಾದರೂ ಪಡೆಯಬಹುದು. ಪರಮಾತ್ಮನು ಕಣ್ಣುಬಿಟ್ಟರೆ ಸಾಕು, ಹೆಳವನು ಗುಡುಗುಡನೆ ಪರ್ವತವನ್ನೇರಿಬಿಡುತ್ತಾನೆ. ಕುರುಡನು ಕಣ್ಣು ಪಡೆದು ಲೋಕವನ್ನೆಲ್ಲ ನೋಡಬಲ್ಲವನಾಗುತ್ತಾನೆ. ಕಿವುಡನಿಗೆ ಕಿವಿ ಕೇಳಿಸುತ್ತದೆ, ಮೂಗನಿಗೆ ಮಾತು ಬರುತ್ತದೆ. ಬಡವನು ದೊರೆಯಾಗಿ ಛತ್ರ ಚಾಮರಗಳ ನೆರಳಿನಲ್ಲಿ ಸಾಗುತ್ತಾನೆ''

ಎಂದೆಲ್ಲ ಸೂರದಾಸರು ನಾಮಜಪ ಮಹಿಮೆಯನ್ನು ಅನೇಕ ಬಗೆಯಲ್ಲಿ ಬಣ್ಣಿಸಿದ್ದಾರೆ. ''ಶ್ರೀಹರಿಯ ನಾಮಸ್ಮರಣೆಯನ್ನು ಅನವರತವೂ ಮಾಡುತ್ತಿರಬೇಕು. ಆ ಸ್ವಾಮಿಯು ಮೇಲು ಕೀಳೆನ್ನದೆ, ಗಂಡು ಹೆಣ್ಣೆನ್ನದೆ, ಬಡವ ಬಲ್ಲಿದನೆನ್ನದೆ ತನ್ನ ನಾಮಸ್ಮರಣೆ ಮಾಡಿದವರನ್ನೆಲ್ಲ ಪವಿತ್ರರನ್ನಾಗಿ ಮಾಡಿಬಿಡುತ್ತಾನೆ'' ಎಂಬುದಾಗಿಯೂ ಸೂರದಾಸರು ನಾಮಜಪದ ಹಿರಿಮೆಯನ್ನು ಎತ್ತಿಹಿಡಿದಿದ್ದಾರೆ.

''ಪ್ರಭು ಮೇರೇ ಅವಗುಣ ಚಿತ್ತ ನ ಧರೋ'' – ಎನ್ನವಗುಣವ ಚಿತ್ತಕ್ಕೆ ತಾರದಿರು ಪ್ರಭುವೆ – ಎಂಬ ಸೂರದಾಸರ ಗೀತೆಯೊಂದು, ಸ್ವಾಮಿ ವಿವೇಕಾನಂದರ ಮೇಲೆ ಪರಿಣಾಮವನ್ನುಂಟುಮಾಡಿತು; ವೇಶ್ಯೆಯರ ವಿಷಯದಲ್ಲಿದ್ದ ಅವರ ಭಾವನೆಯನ್ನೇ ಪರಿವರ್ತನೆಗೊಳಿಸಿಬಿಟ್ಟಿತು ಎಂಬ ವಿಚಾರವನ್ನು ಕೂಡ ನಾವು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.

## ಮೀರಾಬಾಯಿ

ಉತ್ತರಭಾರತದ ಭಕ್ತಪರಂಪರೆಯಲ್ಲಿ ಮೀರಾಬಾಯಿಯ ಹೆಸರು ಧ್ರುವನಕ್ಷತ್ರವಿದ್ದಂತೆ. ಕನ್ನಡನಾಡಿನ ಅಕ್ಕಮಹಾದೇವಿ, ತಮಿಳುನಾಡಿನ ಆಂಡಾಳ್, ಕಾಶ್ಮೀರದ ಲಲ್ಲೇಶ್ವರಿ ಅವರುಗಳಂತೆ ಮೀರಾಬಾಯಿ (೧೪೯೮–೧೫೫೮) ಕೂಡ ವೀರ ವಿರಾಗಿಣಿ. ಮೀರಾಬಾಯಿ ರಜಪೂತ ರಾಜವಂಶಕ್ಕೆ ಸೇರಿದ ಮಹಾರಾಣಿ. ಅವಳು ಬಾಲೆಯಾಗಿರುವಾಗಲೇ ಒಂದು ಮದುವೆಯ ಮನೆಯಲ್ಲಿ ತನ್ನ ತಾಯಿಯನ್ನು ಕುರಿತು, ''ಅಮ್ಮಾ, ನನ್ನ ಗಂಡ ಯಾರಾಗುತ್ತಾನೆ?'' ಎಂದು ಬಾಲಸಹಜವಾದ ಭಾವದಿಂದ ಕೇಳಿದಳು. ಅದಕ್ಕೆ ತಾಯಿಯಾದರೋ ವಿನೋದವನ್ನೇ ಮುಂದು ಮಾಡಿಕೊಂಡು ನಗುನಗುತ್ತ, ಅಲ್ಲಿಯೇ ಇದ್ದ ಶ್ರೀಕೃಷ್ಣನ ಪ್ರತಿಮೆಯೊಂದನ್ನು ತೋರಿಸುತ್ತ, ''ಅಲ್ಲಿ ನೋಡು, ಆ ಶ್ರೀಕೃಷ್ಣನೇ ನಿನಗೆ ಗಂಡನಾಗುತ್ತಾನೆ'' ಎಂದು ಹೇಳಿದಳು. ಆ ಮಾತನ್ನೇ ಮೀರಾಬಾಯಿ ಶ್ರದ್ಧೆಯಿಂದ ನಂಬಿದಳು. ಮುಂದೆ ಲೌಕಿಕ ಜೀವನವನ್ನು ಪ್ರವೇಶಿಸಿ ವಿವಾಹಿತಳಾದರೂ ಅದರಿಂದ ಮುಕ್ತಳಾಗಿ, ಕೃಷ್ಣನನ್ನೇ ಧ್ಯಾನಿಸುತ್ತ, ಪೂಜಿಸುತ್ತ, ಅವನನ್ನೇ ತನ್ನ ಪತಿಯ ರೂಪದಲ್ಲಿ ಸಾಕ್ಷಾತ್ಕರಿಸಿಕೊಂಡುಬಿಟ್ಟಳು.



ಶ್ರೀಕೃಷ್ಣನ ನಾಮಜಪದ ಬಲದಿಂದ ಮೀರಾಬಾಯಿಯು ತನ್ನ ಮೇಲೆರಗಿದ ಘೋರವಿಪತ್ತುಗಳನ್ನೆಲ್ಲ ಗೆದ್ದುಕೊಂಡುಬಿಟ್ಟಳು. ''ಇದು ಶ್ರೀಕೃಷ್ಣನ ತೀರ್ಥ'' ಎಂದು ಹೇಳಿ ಅರಮನೆಯ ಕಡೆಯಿಂದ ಕಳುಹಿಸಲಾಗಿದ್ದ ವಿಷವನ್ನೇ ಕುಡಿದು ಜೀರ್ಣಿಸಿಕೊಂಡುಬಿಟ್ಟಳು. ಹೇಳಿಗೆಯಲ್ಲಿ ವಿಷಸರ್ಪವನ್ನು ಕೂಡಿ ಹಾಕಿ, ''ಇದು ಶ್ರೀಕೃಷ್ಣನ ಪುಷ್ಪಮಾಲಾಪ್ರಸಾದ'' ಎಂದು ಕಳುಹಿಸಿಕೊಟ್ಟುದನ್ನು ಮೀರಾಬಾಯಿ, ಕೃಷ್ಣನಾಮವನ್ನೇ ಜಪಿಸುತ್ತ ತೆರೆದು ನೋಡಿದಾಗ, ಅದು ನಿಜಕ್ಕೂ ಪುಷ್ಪಮಾಲಿಕೆಯೇ ಆಗಿತ್ತು. ಹಾಗೆಯೇ ಮೀರಾಬಾಯಿಯು ಕೃಷ್ಣನಾಮವನ್ನೇ ಜಪಿಸುತ್ತ, ದ್ವಾರಕಾಪುರಿಯ ಕೃಷ್ಣದೇವಾಲಯದ ವಿಗ್ರಹದಲ್ಲಿ ಎಲ್ಲರೂ ನೋಡನೋಡುತ್ತಿದ್ದಂತೆಯೇ ಐಕ್ಯಳಾಗಿಬಿಟ್ಟಳು. ಅವಳನ್ನು ಮೂರ್ತಿಯಿಂದ ಹೊರಕ್ಕೆಳೆದುಕೊಳ್ಳಲು ಅಲ್ಲಿದ್ದ ಕೆಲವರು ಮಾಡಿದ ಪ್ರಯತ್ನಗಳು ವಿಫಲವಾದುವು.

''ನಾನು ಗೋವಿಂದನ ಗುಣಕೀರ್ತನೆ ಮಾಡುತ್ತೇನೆ. ಅವನ ದೇವಾಲಯವನ್ನು ಹೊಕ್ಕು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನರ್ತನ ಮಾಡುತ್ತೇನೆ. ಅರಸು ಮುನಿದರೆ ಊರನ್ನೇ ತೊರೆದೇನು, ಆದರೆ ಹರಿಯು ಮುನಿದರೆ ಹೋಗುವುದೆಲ್ಲಿಗೆ? ಲೋಕದ ಜನರಿಗೆ ರಾಮನಾಮವನ್ನು ನುಡಿಯಲು ನಾಚಿಕೆಯಾಗುತ್ತದೆಯಂತೆ. ಊರೆಲ್ಲ ಅಲೆಯುತ್ತಾರೆ, ಆದರೆ ಶ್ರೀಹರಿಯ ದೇವಾಲಯಕ್ಕೆ ಹೋಗುವುದೆಂದರೆ ಅವರಿಗೆ ಕಾಲು ನೋವಂತೆ. ಶ್ಯಾಮಸುಂದರನ ನಾಮವನ್ನು ಎಡೆಬಿಡದೆ ಜಪಿಸುತ್ತಿರು ಮನವೇ, ಅದರ ಬಲದಿಂದ ನೂರಾರು ಜನ್ಮಗಳ ಹಳೆಯ ಪಾಪಗಳೆಲ್ಲ ತೊಳೆದು ಹೋಗುತ್ತವೆ. ರಾಮರಸಪಾನವೆಂಬುದು ಪರಮಾನಂದಕರವಾದುದು. ನಿತ್ಯವೂ ಸತ್ಸಂಗದಲ್ಲಿರುತ್ತ ಶ್ರೀಹರಿಯ ಗುಣಶ್ರವಣ ಮಾಡುತ್ತಿರಬೇಕು. ಕಾಮಕ್ರೋಧ ಮದಲೋಭಗಳನ್ನೂ ಚಿತ್ತದಿಂದ ತೊಡೆದು ಹಾಕಬೇಕು. ಗಿರಿಧರನ ನಾಮಸ್ಮರಣೆಯಲ್ಲಿಯೇ ಒಂದಾಗಿ ಬಿಡಬೇಕು'' ಎಂದು ಬಹುಪರಿಯಾಗಿ ಮೀರಾಬಾಯಿ ನಾಮಸಂಕೀರ್ತನ ಮಹಿಮೆಯನ್ನು ಕೊಂಡಾಡಿದ್ದಾಳೆ.

## ಲಲ್ಲೇಶ್ವರಿ

ಮೀರಾಬಾಯಿಯನ್ನು ನೆನೆಯುತ್ತಿರುವ ಕ್ಷಣದಲ್ಲಿಯೇ ಕಾಶ್ಮೀರದಲ್ಲಿ ೧೩ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಸಂತಶ್ರೇಷ್ಠಳಾದ ಲಲ್ಲೇಶ್ವರಿಯನ್ನೂ ನೆನೆಯಬೇಕು. ಶಿವನಲ್ಲಿ ನಿರ್ಗುಣ ಪರಬ್ರಹ್ಮನನ್ನು ಉಪಾಸನೆ ಮಾಡಿದ ಶರಣೆ ಅವಳು. ನಾಮಜಪದ ಬಲದಿಂದ ಲಲ್ಲೇಶ್ವರಿ ಪವಾಡಗಳನ್ನೇ ಮಾಡಿ ಮೆರೆದುಬಿಟ್ಟಳು. ಒಂದು ದಿನ ರೊಟ್ಟಿ ತಯಾರಿಸುವ ಅಂಗಡಿಯೊಂದಕ್ಕೆ ಧಡಕ್ಕನೆ ನುಗ್ಗಿದ ಲಲ್ಲೇಶ್ವರಿಯು, ಅಲ್ಲಿ ಧಗಧಗನೆ ಉರಿಯುತ್ತಿದ್ದ ಅಗ್ನಿಕೊಂಡದಂತಹ ದೊಡ್ಡ ಒಲೆಯೊಳಕ್ಕೆ ಧುಮ್ಮಿಕ್ಕಿ ಬಿಟ್ಟಳು. ಅಂಗಡಿಯಲ್ಲಿದ್ದ ಜನರು 'ಹೋ' ಎಂದು ಗಾಬರಿಗೊಂಡು ಚೀರಿದರು. ಅಂಗಡಿಯ ಮಾಲೀಕನಾದರೋ ದಿಗ್ಭ್ರಾಂತನಾಗಿ ಮೂರ್ಛೆ ಹೋಗಿ ಉರುಳಿ ಬಿದ್ದನು. ಆದರೆ ಮರುಕ್ಷಣದಲ್ಲಿಯೇ ಲಲ್ಲೇಶ್ವರಿಯು ಸೀತಾದೇವಿಯ ಹಾಗೆ, ಏನೂ ಆಗಿಲ್ಲವೆಂಬಂತೆ, ಸರ್ವಾಲಂಕಾರ ಭೂಷಿತೆಯಾಗಿ ಆ ಅಗ್ನಿಜ್ವಾಲೆಯಿಂದ ಮೇಲೆದ್ದು ಬಂದಳು.

''ಪರಮಾತ್ಮನು ಎಲ್ಲೆಲ್ಲಿಯೂ ಇದ್ದಾನೆ. ನಮ್ಮನ್ನು ನಾವು ಅರಿತರಾಯಿತು. ಅವನನ್ನು ಕೂಡುತ್ತೇವೆ. ಶಿವನೇ ನಮ್ಮನ್ನೆಲ್ಲ ನಡೆಸುವವನು, ನಾವು ಮಾತ್ರ ನಡೆಯುವವರು. ಅವನ ನಾಮಘೋಷವೇ ಮಂತ್ರವಾಗಿ ಪರಿಮಳ ಬೀರುತ್ತ ಎಲ್ಲೆಡೆಗೂ ಪಸರಿಸುತ್ತಿದೆ. ಆ ಭಗವಂತನ ವಿಚಾರವನ್ನು ನಾನು ಪರಿಪರಿಯಾಗಿ ನೂರಾರು ಬಾರಿ ಕೇಳಿಸಿಕೊಂಡೆ. ಅವನಿಗೇನೂ ಹೆಸರಿಲ್ಲ, ಆ ಹೆಸರಿಲ್ಲದವನನ್ನು ಗುರುತಿಸುವುದಾದರೂ ಹೇಗೆ? ಎಂದು ಪರದಾಡಿದೆ. ಆದರೆ



ಸೃಷ್ಟಿಯ ಪ್ರತಿಯೊಂದು ನಾಮರೂಪಗಳೂ ಅವನೇ ಆಗಿದ್ದಾನೆ ಎಂಬುದನ್ನು ಅರಿತುಕೊಂಡೆ. ಹಗಲಿರುಳು ಅವನನ್ನೇ ಹುಡುಕಾಡುತ್ತ ಅಲೆದಾಡಿದೆ. ಅವನನ್ನೇ ನೆನೆಯುತ್ತ ಬಳಲಿ ಬಸವಳಿದು ಬಿಟ್ಟೆ. ಆ ನಾಮಜಪದ ಫಲವಾಗಿ ಅಚ್ಚರಿಯೋ ಎಂಬಂತೆ ಅವನು ನನ್ನ ಮನೆಯಲ್ಲಿಯೇ, ಮನದಲ್ಲಿಯೇ ಸಿಕ್ಕಿಬಿಟ್ಟ. ಅವನ ಅನುಸಂಧಾನದಲ್ಲಿಯೇ ಮುಳುಗಿದ್ದ ನನಗೆ ಅವನೇ ಆಕಾಶ, ಅವನೇ ಭೂಮಿ, ಅವನೇ ವಾಯು, ಅವನೇ ಜಲ, ಅವನೇ ಅಗ್ನಿ, ಎಲ್ಲವೂ ಆಗಿದ್ದಾನೆ ಎಂಬುದು ತಿಳಿದುಹೋಯಿತು. ಎಲ್ಲ ಹೂವುಗಳೂ ಹಣ್ಣುಗಳೂ ಅವನೇ ಆಗಿರುವಾಗ, ಅವನ ಪೂಜೆಗೆಂದು ಬೇರೆಯಾಗಿ ವಸ್ತುಗಳನ್ನು ಎಲ್ಲಿಂದ ತರುವುದು? ಎಂದು ಬೆರಗಾಗಿ ಬಿಟ್ಟೆ'' ಎಂದು ಮುಂತಾಗಿ ಲಲ್ಲೇಶ್ವರಿಯು ಹಾಡಿದ್ದಾಳೆ.

### ತುಳಸೀದಾಸ

ಕಾಶೀಪಟ್ಟಣವೇ ತುಳಸೀದಾಸರ (೧೫೩೨-೧೬೨೩) ಸಾಧನೆಯ ಪ್ರಮುಖ ತಾಣವಾಗಿತ್ತು. ಅವರು ಮೂಲಾನಕ್ಷತ್ರದಲ್ಲಿ ಹುಟ್ಟಿದುದೇ ಕಾರಣವಾಗಿ, ಜೈಮಿನಿಭಾರತದಲ್ಲಿ ಬರುವ ಚಂದ್ರಹಾಸನಂತೆ, ಹುಟ್ಟುತ್ತಿದ್ದಂತೆಯೇ ತಂದೆತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾಗಿಬಿಟ್ಟರು. ನರಹರಿದಾಸರೆಂಬ ಮಹಾತ್ಮರ ಆಶ್ರಯದಲ್ಲಿ ಬೆಳೆದು, ಅವರಿಂದ ರಾಮನಾಮದ ಉಪದೇಶ ಪಡೆದುಕೊಂಡು, 'ರಾಮಬೋಲಾ' ಎಂಬ ಹೆಸರು ಪಡೆದುಕೊಂಡರು. ರಾಮನಾಮದ ಬಲದಿಂದ ಶೇಷ ಸನಾತನರೆಂಬ ವಿದ್ವನ್ಮಣಿಗಳ ಬಳಿಯಲ್ಲಿ, ಕಾಶೀಪಟ್ಟಣದಲ್ಲಿ ವಿದ್ಯೆ ಕಲಿತು ತಾವೂ ಪಂಡಿತೋತ್ತಮರಾದರು. ಮುಂದಕ್ಕೆ ಶ್ರೀರಾಮನ ನಾಮಜಪವೇ ಕಾರಣವಾಗಿ ತುಳಸೀದಾಸರೆನಿಸಿಕೊಂಡರು, ಮಹಾತ್ಮರಾಗಿಬಿಟ್ಟರು, ಮಹಾಕವಿಯಾಗಿಬಿಟ್ಟರು.

''ರಾಮನಾಮವನ್ನು ನಾಲಿಗೆಯ ಮೇಲೆ ಸದಾಕಾಲ ಧರಿಸಿಕೊಂಡಿರಬೇಕು. ಅದು ರತ್ನದ ದೀಪವಿದ್ದಂತೆ. ಹೊಸ್ತಿಲ ಮೇಲಿಟ್ಟ ದೀಪವು ಮನೆಯ ಒಳಗನ್ನೂ ಹೊರಗನ್ನೂ ಬೆಳಗಿಸುವ ಹಾಗೆ ಆ ರಾಮನಾಮವೆಂಬ ರತ್ನದೀಪವು ನಮ್ಮ ಅಂತರಂಗ-ಬಹಿರಂಗಗಳೆರಡನ್ನೂ ಬೆಳಗಿಸುತ್ತದೆ. ಶರೀರವೆಂಬ ಮನೆಗೆ ನಾಲಗೆಯು ಹೊಸ್ತಿಲು ಇದ್ದ ಹಾಗೆ. ರಾಮನಾಮವನ್ನು ಹೃದಯದಲ್ಲಿ ತುಂಬಿಕೊಂಡರೆ ಅಲ್ಲಿಗೆ ಕಾಮಪುರುಷನು ಪ್ರವೇಶಿಸಲಾರನು. ರಾಮನಿದ್ದಲ್ಲಿ ಕಾಮನಿಲ್ಲ, ಕಾಮನಿದ್ದಲ್ಲಿ ರಾಮನಿಲ್ಲ. ಸೂರ್ಯನನ್ನೂ ಅಂಧಕಾರವನ್ನೂ ಅಕ್ಕಪಕ್ಕದಲ್ಲಿ ಕಂಡವರುಂಟೆ?'' ಎಂದು ಮೊದಲಾಗಿ ತುಳಸೀದಾಸರು ರಾಮನಾಮದ ಹೆಚ್ಚಳವನ್ನು ಬಣ್ಣಿಸಿದ್ದಾರೆ. ಕಲಿಯುಗವೆಂಬುದು ಮಾಲಿನ್ಯದ ಆಗರವಾಗಿದೆ. ಶ್ರೀರಾಮನ ನಾಮಸ್ಮರಣೆಯ ಹೊರತಾಗಿ ಪಾವನರಾಗಲು ಅನ್ಯಮಾರ್ಗವೇ ಇಲ್ಲ ಎಂಬುದಾಗಿಯೂ ಅವರು ಬರೆದಿದ್ದಾರೆ.

ಸಕಲ ಅಪಚಾರಗಳನ್ನೂ ತೊರೆದು ಶ್ರೀರಾಮನಾಮವನ್ನು ಸ್ಮರಣೆ ಮಾಡುತ್ತಿದ್ದರೆ ಮನಸ್ಸು ಏಕಾಗ್ರವಾಗುತ್ತದೆ, ನವವಿಧಭಕ್ತಿಗಳೂ ಅಲ್ಲಿ ನೆಲೆಸುತ್ತವೆ ಎಂಬುದನ್ನು ತುಳಸೀದಾಸರು ಒಂದು ಪದ್ಯದಲ್ಲಿ ಅತ್ಯಂತ ಚಮತ್ಕಾರ ಯುಕ್ತವಾಗಿ ತಿಳಿಸಿಕೊಟ್ಟಿದ್ದಾರೆ:



**ತುಲಸೀ ರಾಮಸ್ನೇಹ ಕರು । ತ್ಯಾಗಿ ಸಕಲ ಅಪಚಾರ**
**ಜೈಸೇ ಘಟತ ನ ಅಂಕ । ನೌನೌಕೇ ಲಿಖತ ಪಹಾರ ॥**

ಒಂಭತ್ತು ಎಂಬ ಸಂಖ್ಯೆಯ ಮಗ್ಗಿಯನ್ನು ಬರೆಯುತ್ತ ಹೋಗೋಣ. ಆಗ ಬರುವ ಗುಣಲಬ್ಧಗಳು ೯, ೧೮, ೨೭, ೩೬, ೪೫, ೫೪, ೬೩, ೭೨, ೮೧, ೯೦ ಎಂಬಂತೆ ಇರುತ್ತವೆ. ಆ ಗುಣಲಬ್ಧದ ಸಂಖ್ಯೆಗಳನ್ನು ಪರಸ್ಪರ ಕೂಡುತ್ತ ಹೋದರೆ ೯, ೧+೮=೯, ೨+೭=೯, ೩+೬=೯, ೪+೫=೯, ೫+೪=೯, ೬+೩=೯, ೭+೨=೯, ೮+೧=೯, ಕೊನೆಗೆ ಸೊನ್ನೆಯನ್ನು ತೆಗೆದುಹಾಕಿದರೆ ೯ ಎಂಬಂತೆ ಉದ್ದಕ್ಕೂ ಎಂಬ ಸಂಖ್ಯೆ ಭದ್ರವಾಗಿ ನಿಲ್ಲುತ್ತದೆ. ಹೀಗೆಯೇ ರಾಮನಾಮವನ್ನು ಸದಾಕಾಲ ಜಪಿಸುತ್ತಿದ್ದರೆ, ಮನಸ್ಸು ಸ್ಥಿರವಾಗಿ ನಿಲ್ಲುತ್ತದೆ. ಒಂಬತ್ತರ ಪ್ರತೀಕವಾಗಿ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮ ನಿವೇದನ ಎಂಬ ಒಂಬತ್ತು ಬಗೆಯ ಭಕ್ತಿಗಳೂ ಅಲ್ಲಿ ನೆಲೆಯೂರುತ್ತವೆ. ❖



# ಶಂಕರಾಚಾರ್ಯರ ಕೃತಿಗಳಲ್ಲಿ ನಾಮಮಹಿಮೆ

ಡಾ. ಕೆ. ಲೀಲಾಪ್ರಕಾಶ್

ಯಸ್ತಾಂ ಪಶ್ಯತಿ ಪಾರ್ವತಿ ಪ್ರತಿದಿನಂ ಧ್ಯಾನೇನ ತೇಜೋಮಯೀಂ।
ಮನ್ಯೇ ಸುಂದರಿ ತತ್ತ್ವಮೇತದಖಿಲಂ ವೇದೇಷು ನಿಷ್ಠಾಗತಮ್ ।
ಯಸ್ತಸ್ಮಿನ್ ಸಮಯೇ ತವಾರ್ಚನ ವಿಧಾವಾನಂದ ಸಾಂದ್ರಾಶಯೋ
ಯತೋಽಹಂ ತದಭಿನ್ನತಾಂ ಪರಶಿವೇ ಸೋಽಯಂ ಪ್ರಸಾದಸ್ತವ ॥

ಶ್ರೀಶಂಕರ ಭಗವತ್ಪಾದರು ವಿಶ್ವದ ಮಹಾಪುರುಷರಲ್ಲಿ ವಿಶಿಷ್ಟರಾಗಿ, ವಿಖ್ಯಾತಿಯಿಂದ ವಿಜೃಂಭಿಸಿ, ಉದಾತ್ತರೂ ಅಸಮಾನ್ಯರೂ ಆಗಿ ಮೆರೆದರು. ಲೋಕೋತ್ತರವಾದ, ಸಂಪೂರ್ಣ ಮಾನವಕೋಟಿಗೆಲ್ಲ ಸಮತಾಭಾವವನ್ನು ನೀಡುವ, ಸಕಲ ಮತಗಳನ್ನೂ ಸಮನ್ವಯಗೊಳಿಸುವ ಅದ್ವೈತಸಿದ್ಧಾಂತದ ಅರಿವನ್ನು ನೀಡಿದ ಜ್ಞಾನಸೂರ್ಯರಾಗಿ, ಮತಾಂಧತೆ, ಅಹಂಕಾರಗಳಿಂದ ಅಹಂಕಾರಿಗಳಾಗಿದ್ದ ಅಸಂಖ್ಯಾತರ ಅಜ್ಞಾನವನ್ನು ನಿವಾರಿಸಿ ಅಮೃತೋಪದೇಶ ಮಾಡಿದ ಅಸೀಮ ಸಾಹಸಿ ಅವರು.

ಶ್ರೀಶಂಕರಭಗವತ್ಪಾದರು ಕಲಿಯುಗದಲ್ಲಿ ಜನಿಸಿದ ಕಾಮಧೇನು. ಅವರು ತಮ್ಮ ಅಪಾರವಾದ ಪಾಂಡಿತ್ಯದಿಂದ, ಅಧ್ಯಾತ್ಮದರ್ಶನದಿಂದ, ಅದ್ವೈತ ಸಿದ್ಧಾಂತದಿಂದ ಲೋಕೋಪಕಾರವನ್ನು ಮಾಡಿ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಭಾರತದಲ್ಲೆಲ್ಲಾ ಸಂಚರಿಸಿ, ಶೈವ, ವೈಷ್ಣವ ಧರ್ಮಗಳ ಸಂಘರ್ಷದಲ್ಲಿ ಸಿಕ್ಕು ಒದ್ದಾಡುತ್ತಿದ್ದ ಜನತೆಯನ್ನು ತಮ್ಮ ಜ್ಞಾನವೆಂಬ ಅಂಜನದ ಶಲಾಕೆಯಿಂದ ದೂರ ಸರಿಸಿದರು.

ಅದ್ವೈತವು ಅನಿರ್ವಚನೀಯ ಖ್ಯಾತಿಯೆಂದೇ ಪ್ರಸಿದ್ಧಿಯಾಗಿದೆ. ಇಂದ್ರಿಯ, ಇಂದ್ರಿಯಾರ್ಥ, ಮನಸ್ಸು, ಬುದ್ಧಿ, ಅಹಂಕಾರ ಇವುಗಳಿಂದ ಅತೀತರಾಗಿ ಆತ್ಮನಿಂದಲೇ ಆತ್ಮದರ್ಶನ ಮಾಡಬೇಕಾಗುತ್ತದೆ. ನಮ್ಮ ತ್ರಯೋವಸ್ಥೆಗಳಾದ ಜಾಗ್ರತ್, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳಿಂದಲೂ ದೂರವಾಗಿ, ತುರೀಯಾವಸ್ಥೆಗೆ ಸಾಗಿ ಆತ್ಮನಲ್ಲಿಯೇ ಆತ್ಮನ ದರ್ಶನ ಮಾಡಬೇಕಾದ ಪ್ರಸಕ್ತಿ ಇರುತ್ತದೆ. ಆತ್ಮವಸ್ತುವಿಗೆ ಕ್ರಿಯೆಯಿಲ್ಲ, ಇಂದ್ರಿಯಗಳು ಕ್ರಿಯೆಯಲ್ಲಿ ತೊಡಗಿರುವಾಗ ಅದೂ ಕ್ರಿಯೆಯಲ್ಲಿ ತೊಡಗಿರುವಂತೆ ಅಜ್ಞಾನಿಗಳಿಗೆ ಭಾಸವಾಗುತ್ತದೆ. ಚಲಿಸುತ್ತಿರುವ ಮೋಡಗಳ ಮಧ್ಯೆ ಇರುವ ಚಂದ್ರನು ಚಲಿಸದಿದ್ದರೂ ಚಲಿಸುವಂತೆ ಕಾಣುವ ಹಾಗೆ. ಆತ್ಮವು ಕೇವಲ ಸತ್– ಚಿತ್ ಸ್ವರೂಪವು. ಈ ಆತ್ಮವಸ್ತು ನಮಗೆ ಅತ್ಯಂತ ಸಮೀಪದಲ್ಲಿದ್ದರೂ ಬುದ್ಧಿಯ ಮೂಲಕ ಅದನ್ನು ಅರಿಯಲು ಸಾಧ್ಯವಿಲ್ಲ. ಆತ್ಮವು ಸ್ವಯಂವೇದ್ಯ ಎಂಬುದು ನಿಜವಾದರೂ ಶ್ರವಣ, ಮನನ, ಹಾಗೂ ನಿದಿಧ್ಯಾಸನ ಎಂಬೀ ರೂಪದ ಸಾಧನೆಯನ್ನು ಬುದ್ಧಿಯ ಮೂಲಕವೇ ಮಾಡಬೇಕು.

ಮಾಯೆ, ಅವಿದ್ಯೆ, ಅಜ್ಞಾನ ಇತ್ಯಾದಿ ಶಬ್ದಗಳಿಂದ ಕರೆಯಲ್ಪಡುವ ಅಜ್ಞಾನವು, ಸತ್–ಅಸತ್, ಸದಸತ್, ಭಿನ್ನ, ಅಭಿನ್ನ ಇತ್ಯಾದಿ ಯಾವ ಶಬ್ದದಿಂದಲೂ ನಿರ್ವಚನ ಮಾಡಲು ಸಾಧ್ಯವಲ್ಲದ್ದರಿಂದ ಇದು ಅನಿರ್ವಚನೀಯ ಖ್ಯಾತಿ.

ಮನಸ್ಸು ತನ್ನ ವಿಷಯವಾದ ವಸ್ತುವನ್ನು ಅರಿಯುವಾಗ ಮತ್ತೊಂದು ಮನಸ್ಸು ಬೇಕಿಲ್ಲದಿದ್ದರೂ ಆ ಮನಸ್ಸು ವಿಷಯವನ್ನು ತಿಳಿಸಬೇಕಾದಲ್ಲಿ ಮನಸ್ಸೆಂಬ ಶಕ್ತಿಯು

ಅದ್ವೈತ ದರ್ಶನದಲ್ಲಿ ಮೇರುವ್ಯಕ್ತಿತ್ವವಾದ ಶ್ರೀಶಂಕರಾಚಾರ್ಯರು ಜ್ಞಾನಮಾರ್ಗದ ಪ್ರತಿಪಾದಕರೂ, ತತ್ತ್ವ-ದರ್ಶನಗಳ ನಿರೂಪಕರೂ ಆಗಿರುವಂತೆ ಅನೇಕ ಸ್ತೋತ್ರಗಳನ್ನು ರಚನೆ ಮಾಡುವ ಮೂಲಕ ಜನಸಾಮಾನ್ಯರ ಮನಸ್ಸನ್ನು ಭಗವಂತನೆಡೆಗೆ ತಿರುಗಿಸುವ ಪ್ರಯತ್ನ ಮಾಡಿದರು. ಶ್ರೀಶಂಕರರ ಕೃತಿಗಳನ್ನು ಕುರಿತು ವಿಶೇಷ ಅಧ್ಯಯನ ಮಾಡಿರುವ ಲೇಖಕಿ, ಬೆಂಗಳೂರಿನ ಸುಶ್ರುತ ಕಾಲೇಜಿನಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿದ್ದಾರೆ. ಸಂಸ್ಕೃತ, ಮನೋವಿಜ್ಞಾನ ಮೊದಲಾದ ಕ್ಷೇತ್ರಗಳಲ್ಲಿ ಆಳವಾದ ಅಧ್ಯಯನ ಮಾಡಿರುವ ಅವರು ಮೈಸೂರಿನ 'ಡಾ.ಕೆ.ಕೃಷ್ಣಮೂರ್ತಿ ಸಂಶೋಧನ ಪ್ರತಿಷ್ಠಾನ'ದ ಸಂಸ್ಥಾಪಕ ನಿರ್ದೇಶಕರಾಗಿದ್ದಾರೆ.

ಅದರಲ್ಲಿರಬೇಕು. ಆ ಸಾಮರ್ಥ್ಯವು ಆತ್ಮಚೈತನ್ಯದಿಂದ ಉಂಟಾಗುವುದರಿಂದ ಕೇವಲ ಷಷ್ಠ್ಯಂತ ಶಬ್ದದಿಂದ ಹೇಳಲಾದ ಮನಸ್ಸಿಗೆ ಜಡತ್ವವಿರುವುದರಿಂದ, ಹೇಳಲ್ಪಟ್ಟಿರುವ ಪ್ರಥಮಾಂತ ಮನಶ್ಶಬ್ದದಿಂದ ಆತ್ಮಚೈತನ್ಯವು ಇಲ್ಲದೆ ಹೋದಲ್ಲಿ ಮನಸ್ಸು ಸ್ವಕಾರ್ಯದಲ್ಲಿ ತೊಡಗಲಾರದು. ಗಾಡಿಯು ಗ್ರಾಮಾಂತರಕ್ಕೆ ಹೋಗುವುದಾದರೂ ಗಾಡಿಯು ಚಲಿಸಲು ಪ್ರೇರಕನಾದ ಸಾರಥಿಯೊಬ್ಬ ಇರಲೇಬೇಕು. ಹಾಗೆಯೇ ಪ್ರಾಣಿಗಳಲ್ಲಿಯೂ, ಚಕ್ಷುಷಾದಿ ಇಂದ್ರಿಯಗಳಲ್ಲೂ ಅವುಗಳನ್ನು ಪ್ರೇರಿಸುವ, ಅವುಗಳಿಗಿಂತಲೂ ವಿಲಕ್ಷಣವಾದ ಚೇತಾತ್ಮನ ಸನ್ನಿಧಿ ಇದ್ದೇ ಇರಬೇಕು. ಈ ಕಣ್ಣಿಲ್ಲದೆಯೂ ಕಾಣುವಂತಹ ಈ ಮೂಗಿಲ್ಲದೆಯೂ ಮೂಸುವಂತಹ, ಈ ಚರ್ಮವಿಲ್ಲದೆಯೂ ಸ್ಪರ್ಶಿಸುವಂತಹ ಈ ನಾಲಗೆ ಇಲ್ಲದೆಯೂ ಸವಿಯುವಂತಹ, ಈ ಕಿವಿಯಿಲ್ಲದೆಯೂ ಆಲಿಸುವಂತಹ ನಿಜಜ್ಞಾನದ ಅರಿವಾಗಬೇಕಾಗುತ್ತದೆ. ಇದನ್ನೇ ಶಂಕರರು ***ಉಪದೇಶಸಾಹಸ್ರಿ***ಯಲ್ಲಿ ಹೀಗೆ ಹೇಳುತ್ತಾರೆ :

**ಅಚಕ್ಷುಷ್ಟ್ವನ್ನ ದೃಷ್ಟಿರ್ಮೇ ತಥಾಽಶ್ರೋತಸ್ಯ ಕಾ ಶ್ರುತಿಃ।**
**ಅವಾಕ್ತ್ವನ್ನ ತು ವಕ್ತಿಃ ಸ್ಯಾದಮನಸ್ತ್ವಾನ್ಮತೀ ಕುತಃ ॥**

ಈ ಜಗತ್ತಿನಲ್ಲಿ ನಾಲ್ಕು ಬಗೆಯ ಬ್ರಹ್ಮಜ್ಞಾನಿಗಳಿದ್ದಾರೆ. ಬ್ರಹವಿದ್, ಬ್ರಹ್ಮವಿದ್ವರ, ಬ್ರಹ್ಮವಿದರಿಯಾನ್ ಮತ್ತು ಬ್ರಹ್ಮವಿದ್ವರ್ಷಿ. ಜ್ಞಾನಿಯಲ್ಲಿ ಸಾತ್ವಿಕ ಗುಣವು ಎಷ್ಟು ಬೆಳೆದಿದೆ ಎಂಬುದರಿಂದ ಈ ನಿರ್ಧಾರ ಮೂಡುತ್ತದೆ. ಬ್ರಹ್ಮಜ್ಞಾನ ಪ್ರಾಪ್ತಿಯಿಂದ, ಮನಸ್ಸಿನ ಆಮಿಷದ ದೃಷ್ಟಿಯಿಂದ ದೂರಾಗಬಹುದು. ಯಾವಾಗ ಪಂಚಕೋಶದ ಅರಿವನ್ನು ಹೊಂದಿ ಆನಂದವಲಯದೆಡೆ ಸಾಗಿ ತಾನು ಸಚ್ಚಿದಾನಂದಮೂರ್ತಿಯಾಗುವನೋ ಅದೇ ನಿಜವಾದ ಸ್ವರಾಜ್ಯ ಹಾಗೂ ಸ್ವಯಮಾಡಳಿತ! ಅದೇ ನಿಜವಾದ ಮೋಕ್ಷ! ಯಾವಾಗ ಮಾನವ ಪರಮಜ್ಞಾನದ ಪಾರಂಗತ್ವವನ್ನು ಹೊಂದುವನೋ ಅವನೇ ಸ್ವತಃ ಸಚ್ಚಿದಾನಂದ ಸ್ವರೂಪಿಯು. ಆತ್ಮಾನುಭವದಲ್ಲಿ ತಲ್ಲೀನನಾಗುವುದೇ ನಿಜವಾದ ''ಆತ್ಮಸಾಕ್ಷಾತ್ಕಾರ.'' ಆ ಕ್ಷಣವೇ ಮಾಯೆ, ಅಧ್ಯಾಸ, ಅವಿದ್ಯೆಗಳಿಂದ ದೂರಾಗಿ ''ಬ್ರಹ್ಮ ಸತ್ಯಂ ಜಗನ್ಮಿಥ್ಯಾ'' ಎಂಬ ಅರಿವು ಆಗುತ್ತದೆ. 'ಆಯಮಾತ್ಮಾ ಬ್ರಹ್ಮ', 'ಅಹಂ ಬ್ರಹ್ಮಾಸ್ಮಿ', 'ಪ್ರಜ್ಞಾನಂ ಬ್ರಹ್ಮ', 'ಸರ್ವ ಖಲ್ವಿದಂ ಬ್ರಹ್ಮ', 'ಯೋಸಾವಸೌ ಪುರುಷಸ್ಸೋಽಹಮಸ್ಮಿ', 'ತತ್ತ್ವಮಸಿ' 'ಸರ್ವಭೂತೇಷು ಚಾತ್ಮಾನಂ', 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಮೊದಲಾದ ಉಪನಿಷತ್ ವಾಣಿಯ ಅರಿವಾಗುತ್ತದೆ. ಬ್ರಹ್ಮವು ನಿರ್ವಿಕಲ್ಪಕ, ನಿರುಪಾಧಿಕ ಹಾಗೂ ನಿರ್ವಿಕಾರ ಸದ್ವಸ್ತು. ನಿರ್ಗುಣ ಬ್ರಹ್ಮವೇ ಪಾರಮಾರ್ಥಿಕವಾದದು. ಬ್ರಹ್ಮನು ಜಗತ್ತಿನ ಉತ್ಪತ್ತಿ ಸ್ಥಿತಿ-ಲಯಗಳಿಗೆ ಕಾರಣನು. ಜೀವ ವಾಸ್ತವವಾಗಿ ತತ್‌ಪದಾರ್ಥದ ಬ್ರಹ್ಮವೇ. ಜೀವ ಮತ್ತು ಬ್ರಹ್ಮ ಇವೆರೆಡೂ ಅಭಿನ್ನವಾದವು. ಜೀವ ಬ್ರಹ್ಮದಿಂದ ಭಿನ್ನವಲ್ಲದ್ದರಿಂದಲೇ ನಿರ್ಗುಣ ಮುಂತಾದ ಲಕ್ಷಣಗಳಿಂದ ಕೂಡಿರುತ್ತದೆ.

ಶ್ರೀ ಶಂಕರರ ಕೃತಿಗಳೆಂದರೆ ಭಾಷ್ಯಗಳೆ? ಪ್ರಕರಣಗಳೇ ಅಥವಾ ಸ್ತೋತ್ರಗಳೆ? ಏಕೆಂದರೆ ಭಾಷ್ಯವೆನ್ನುವುದು ಪ್ರಸ್ಥಾನತ್ರಯವೆಂದು ವ್ಯಾಸರಿಂದ ಕ್ರೋಡೀಕರಿಸಲ್ಪಟ್ಟ ದಶೋಪನಿಷತ್ತುಗಳು, ಬ್ರಹ್ಮಸೂತ್ರ ಹಾಗೂ ಭಗವದ್ಗೀತೆ. ಇಲ್ಲಿ ಬರುವ ವಿಷಯವೆಲ್ಲ ಆತ್ಮವಿಷಯಕವಾಗಿ ಬ್ರಹ್ಮವಿಷಯಕವಾಗಿ ಇರುವಂತಹುದು. ಜೀವಾತ್ಮ-ಪರಮಾತ್ಮರ ಸಂಬಂಧ, ಕ್ಷೇತ್ರ-ಕ್ಷೇತ್ರಜ್ಞರ ವಿಚಾರ ವಿಶ್ಲೇಷಣೆ, ಅಸಾಧ್ಯದ ವಿಷಯ. ಪ್ರಸನ್ನವೂ, ಗಂಭೀರವೂ ಆಗಿರುವ ಈ ಭಾಷ್ಯಗ್ರಂಥಗಳಲ್ಲಿ ಅದ್ವೈತವೇದಾಂತ, ಜ್ಞಾನ, ಭ್ರಮಾ-ಪ್ರಮಾ, ಮಾಯೆ, ಅಧ್ಯಾಸ, ಆತ್ಮಜ್ಞಾನ ಮೊದಲಾದ ವಿವೇಚನೆ ಇದೆ. ಇವೆಲ್ಲ ಕೇವಲ ನಾಮಧೇಯಗಳಲ್ಲ. ಇನ್ನು ಎರಡನೆಯ ಭಾಗವಾದ ಪ್ರಕರಣಗಳು. ಪ್ರಕರಣಗ್ರಂಥಗಳ ಪಾತ್ರವೇ ಬೇರೆ, ಪ್ರಕರಣಗ್ರಂಥವೆಂದರೆ ಒಂದು ವಿಶೇಷಜ್ಞಾನಕ್ಕೆ ಸಂಬಂಧಿಸಿದಂತೆ ಬರೆದ ಪ್ರೌಢಪತ್ಯವೆನ್ನಬಹುದು. ಶ್ರೀ ಭಗವತ್ಪಾದರ ಹೆಸರಿನಲ್ಲಿ ರಚಿತವಾಗಿರುವ ಪ್ರಕರಣಗಳ ಸಂಖ್ಯೆ ೩೯ ಎಂದರೂ ಅವೆಲ್ಲ ಆಚಾರ್ಯರ ಕೃತಿಗಳೆ ಎನ್ನುವುದರ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕೇವಲ ಏಳನ್ನು ಮಾತ್ರ ಸರ್ವಾನುಮತದಿಂದ ಒಪ್ಪುತ್ತಾರೆ. ಅವೆಂದರೆ ೧)ಅಪರೋಕ್ಷಾನುಭೂತಿ ೨) ಆತ್ಮಬೋಧ ೩)ಉಪದೇಶಸಾಹಸ್ರೀ ೪)ಪಂಚೀಕರಣ ಪ್ರಕರಣ ೫) ಲಘುವಾಕ್ಯವೃತ್ತಿ ೬)ವಾಕ್ಯವೃತ್ತಿ ಹಾಗೂ ೭) ವಿವೇಕಚೂಡಾಮಣಿ. ಇಲ್ಲಿಯೂ ನಾವು ಆತ್ಮಜ್ಞಾನ, ಬ್ರಹ್ಮಜ್ಞಾನದ ವಿಷಯವಾಗಿಯೇ ಚರ್ಚಿಸಿರುವುದರಿಂದ ನಾಮಮಹಿಮೆ ಕಂಡುಬರುವುದಿಲ್ಲ.

ಶ್ರೀಶಂಕರಾಚಾರ್ಯರಿಂದ ರಚಿತವಾದ ಸ್ತೋತ್ರಗಳಲ್ಲಿ ಮಾತ್ರ ನಾಮಮಹಿಮೆಯನ್ನು ಗುರುತಿಸಬಹುದು. ಶಂಕರಾಚಾರ್ಯರ ಹೆಸರಿನಲ್ಲಿ ಇಂದು ಅನೇಕಾನೇಕ ಸ್ತೋತ್ರಗಳು ಪ್ರಚಲಿತವಾಗಿವೆ. ಅವುಗಳಲ್ಲಿ ಅವರು ತಾವು ಭಾರತಸಂಚಾರ ಕೈಗೊಂಡಾಗ ಸಂದರ್ಶಿಸಿದ ರಾಮ, ಕೃಷ್ಣ, ವಿಶ್ವನಾಥ, ಅನ್ನಪೂರ್ಣೆ, ಗಂಗೆ, ನೃಸಿಂಹ, ರಾಜರಾಜೇಶ್ವರಿ, ಅಂಬಿಕೆ, ಗಣಪತಿ, ಸ್ಕಂದ, ಕಾಲಭೈರವ ಮೊದಲಾದ ಕ್ಷೇತ್ರದೇವತೆಗಳನ್ನು ನುತಿಸುವ ಸ್ತೋತ್ರಗಳಿವೆ. ಪರತತ್ತ್ವವನ್ನೇ ಬಹಳ ಗಹನವಾಗಿಯೂ ಸಂಗ್ರಹವಾಗಿಯೂ, ಸಾರವತ್ತಾಗಿಯೂ ಬೋಧಿಸುವ 'ಮನೀಷಾಪಂಚಕ', 'ದಕ್ಷಿಣಾಮೂರ್ತಿ ಸ್ತೋತ್ರ', 'ಕೌಪೀನ ಪಂಚಕ', 'ವಿಜ್ಞಾನನೌಕಾ', 'ಹರಿಮೀಡೆ', 'ಚರ್ಪಟಪಂಜರಿಕಾ' ಮುಂತಾದ ವೇದಾಂತ ಸ್ತೋತ್ರಗಳಿವೆ. ಇವಲ್ಲದೆ ಕಾವ್ಯಲಕ್ಷಣ ಗ್ರಂಥಗಳಲ್ಲಿ ಉಲ್ಲೇಖಿಸಲಾದ ನಾನಾ ರಸಭಾವ, ಅಲಂಕಾರ, ಗುಣ ರೀತಿಗಳನ್ನು ಸಂಘಟಿಸಿಕೊಂಡು ರಚಿಸಲಾದ 'ಸೌಂದರ್ಯಲಹರೀ' ಹಾಗೂ 'ಶಿವಾನಂದಲಹರೀ' ಮೊದಲಾದ ಸ್ತೋತ್ರಗಳಿವೆ. ಆಸ್ತಿಕ ಪರಂಪರೆಯಲ್ಲಿ ಇವೆಲ್ಲವೂ ಶ್ರೀಶಂಕರರೇ ರಚಿಸಿದ್ದಾರೆಂಬ ಪ್ರತೀತಿ ಬೇರೂರಿದೆ. ಸುಮಾರು ೮೫ ಸ್ತೋತ್ರಗಳನ್ನು ಶ್ರೀಶಂಕರರು ರಚಿಸಿದ್ದಾರೆಂಬ ಬಗ್ಗೆ ಐತಿಹ್ಯಗಳಿವೆ. ಅವನ್ನು ಐದು ಭಾಗವಾಗಿ ವಿಂಗಡಿಸಬಹುದು.

**೧. ಗಣೇಶ ಸ್ತೋತ್ರಗಳು**

**೨. ಶಿವಸ್ತೋತ್ರಗಳು**

**೩. ವಿಷ್ಣುಭಕ್ತಿ ಸ್ತೋತ್ರಗಳು**

**೪. ಶ್ರೀದೇವೀ ಸ್ತೋತ್ರಗಳು**

ಶ್ರೀ ಭಗವತ್ಪಾದರು ಬೋಧಿಸಿದ್ದು ಅದ್ವೈತವನ್ನು. ನಮ್ಮಾತ್ಮದಲ್ಲೇ ಬ್ರಹ್ಮನಿದ್ದಾನೆ; ಎಲ್ಲೋ ಇಲ್ಲ, ನಾಯಿ, ಚಂಡಾಲರಲ್ಲಿ ಇರುವ ಆತ್ಮವೂ ನಮ್ಮಲ್ಲಿರುವ ಆತ್ಮವೂ ಒಂದೇ! ಹೀಗಿದ್ದ ಪಕ್ಷದಲ್ಲಿ ಈ ಎಲ್ಲ ದೇವಾಧಿದೇವತೆಗಳ ಬಗ್ಗೆ ಶ್ರೀಶಂಕರರು ಸ್ತೋತ್ರ ಬರೆದಿರುವ ಅಗತ್ಯ

ವಿತ್ತೆ? ಎಂಬ ಪ್ರಶ್ನೆ ವಿದ್ವಾಂಸರನ್ನು ಕಾಡಿದ್ದಿದೆ. ಇದಕ್ಕೆ ಉತ್ತರ ಬಹು ಸುಲಭ. ಜ್ಞಾನಮಾರ್ಗದಿಂದ ಸಿದ್ಧಿ ಪಡೆಯುವುದು ಅತ್ಯಂತ ದುಷ್ಕರವಾದ ಮಾರ್ಗ! ಆ ಮಾರ್ಗದಲ್ಲಿ ಸಂಚರಿಸುವವರಿಗೆ ಅದ್ವೈತ ದರ್ಶನದ ಸಿದ್ಧಿಯನ್ನು ಸಾಕ್ಷಾತ್ಕರಿಸಿದ್ದಾರೆ ಶ್ರೀ ಶಂಕರರು!

ಭಕ್ತಿಮಾರ್ಗದ ಮೂಲಕವೇ, ಮನಸ್ಸಮಾಧನವನ್ನು, ಮೋಕ್ಷವನ್ನು ಹೊಂದಬೇಕೆಂಬ ಇಚ್ಛೆಯಿರುವವರ ಸಂಖ್ಯೆ ಬಹಳ ದೊಡ್ಡದು. ಹಾಗಾಗಿಯೇ ದೇವಿ-ದೇವತೆಯ ಮಾಹಾತ್ಮ್ಯದ ಮೂಲಕ, ತಮ್ಮ ಪ್ರತಿಭಾದ್ಯೋತನದಿಂದ, ವಾಗಾಡಂಬರದಿಂದ, ಛಂದಸ್ಸಿನ ಸಿದ್ಧಿಯಿಂದ, ಅನುಪ್ರಾಸದ ವೀಣೆಯ ಝೇಂಕಾರದಿಂದ ನಮ್ಮೆಲ್ಲರನ್ನೂ ಸೆರೆಹಿಡಿಯುತ್ತಾರೆ. ಯಾವುದೇ ದೇವಿಯ ವರ್ಣನೆಯಿರಲಿ, ಅದೂ ಸಂಪೂರ್ಣ ಬ್ರಹ್ಮಜ್ಞಾನದ ಸಿದ್ಧಿಯ ಮಾರ್ಗ ತಲುಪುವಂತೆ ಬಹಿರಂಗ ಸೌಂದರ್ಯದೊಂದಿಗೆ ಆಂತರಂಗಿಕ ಸೌಂದರ್ಯವನ್ನೂ ತಳುಕು ಹಾಕಿರುವುದನ್ನು ಕಾಣಬಹುದು. ಸ್ತ್ರೀಯ ಸ್ವರೂಪಗಳಾದ ಕೌಮಾರಿ, ತರುಣಿ, ಮಾನಿನಿ, ಮಾತೃತ್ವ ಇವೆಲ್ಲವುಗಳ ಸೌಂದರ್ಯ ಸೀಮೆಯನ್ನು, ವೈಭವೀಕರಿಸಿದ್ದಾರೆ. ಆದಿಶಂಕರರ ಸ್ತೋತ್ರಶೈಲಿ ಅನನ್ಯವಾದ ಪಾಂಡಿತ್ಯ, ಮಾರ್ದವ ರಮಣೀಯತೆಯ ಬೆಡಗಿನಿಂದ ಚೇತೋಹಾರಿಯಾದದು. ಕಾವ್ಯಕಲೆಯ ಕುಸುರಿಕೆಲಸಕ್ಕೂ ಶಂಕರರ ಸ್ತೋತ್ರಗಳ ಪ್ರಸನ್ನ ಸುಭಗವಿಶದತೆಗೂ ತುಂಬಾ ಅಂತರವಿದೆ. ಒಂದು ಚಿತ್ರಶಿಲ್ಪಿಯ ಸೂಕ್ಷ್ಮರೇಖಾವಿನ್ಯಾಸ ಚಮತ್ಕಾರದ ಪ್ರದರ್ಶನದಂತೆ, ಮತ್ತೊಂದು ಪ್ರಕೃತಿಸಹಜವಾದ ಕಾಮನಬಿಲ್ಲಿನಂತೆ ಕಮನೀಯ. ಒಂದು ಶಿಲ್ಪಚಾತುರ್ಯದಿಂದ ಬೆರಗಾಗಿಸುವ ಪುಷ್ಕರಣಿಯಾದರೆ ಇನ್ನೊಂದು ಪ್ರಶಾಂತವಾಗಿ ಅಡೆತಡೆಯಿಲ್ಲದೇ ಸೇರುವ ಗಂಗಾನದಿ.

ಶ್ರೀಶಂಕರಾಚಾರ್ಯರ ವರ್ಣನಾವಿಸ್ತಾರದ ಹರವು ಆಗಸದಂತೆ ಅಳೆಯಲಸಾಧ್ಯ. ವಿಶ್ವದ ಸಮಸ್ತ ಸ್ವರೂಪಗಳನ್ನು ತಮ್ಮ ದೇವ-ದೇವತೆಗಳ ವರ್ಣನೆಯಲ್ಲಿ ಉಪಯೋಗಿಸಿ ಸಾರ್ಥಕರಾಗಿರುವುದು ಅವರ ಮಹಾಮೇಧಾವಿತನಕ್ಕೊಂದು ನಿದರ್ಶನ.

ಶ್ರೀಶಂಕರಾಚಾರ್ಯರು ಉಪಾಸಿಸುವ ನಾಮಗಳಲ್ಲಿ ವಿಭಿನ್ನತೆ ಇರಬಹುದು. ಆದರೆ ಅವುಗಳೆಲ್ಲದರ ಸಾರವೂ ಸಹ ಈ ಭವಸಾಗರದಿಂದ ದಾಟಲು ದೇವರನ್ನು ಪ್ರಾರ್ಥಿಸುವುದೇ ಆಗಿರುತ್ತದೆ. ಅದರೊಂದಿಗೆ ಎಲ್ಲ ದೇವಾಧಿದೇವತೆಗಳ ಕಲ್ಪನೆಯಲ್ಲಿಯೂ ವಿಶ್ವದ ವಿರಾಟ್‌ಸ್ವರೂಪ ಪ್ರದರ್ಶಿತವಾಗುತ್ತದೆ. ಇಲ್ಲಿ ನಾವು ಕಾಣುವುದು ಭೂಮದ ಕಲ್ಪನೆಯನ್ನು. ಭೂಮಿಯಿಂದ ಅತ್ಯಂತ ಸುಲಲಿತವಾಗಿ ಅವರಕಲ್ಪನೆವ್ಯೋಮಕ್ಕೆಸಾಗುತ್ತದೆ. ಪ್ರತಿಯೊಂದು ಸ್ತೋತ್ರದಲ್ಲಿಯೂ ಅವರ ಶಬ್ದಾಡಂಬರ, ಅನುಪ್ರಾಸವೃತ್ತಿ ಕೆಲವೊಮ್ಮೆ ವಿದ್ವಜ್ಜನರಿಗೂ ಅರ್ಥೈಸಲು ಕಷ್ಟವಾಗುವಂತಿರುತ್ತದೆ. ಇದಕ್ಕೆ ಅಪವಾದವೆಂಬಂತಿರುವುದು ಭಜಗೋವಿಂದಂ, ಚರ್ಪಟಪಂಜರಿಕಾ ಸ್ತೋತ್ರಗಳು ಮಾತ್ರ. ಕೆಲವೊಂದು ಸ್ತೋತ್ರಗಳನ್ನು ಅವಲೋಕಿಸೋಣ.

**ಯದಾ ಧರ್ಮಗ್ಲಾನಿರ್ಭವತಿ ಜಗತಾ ಕ್ಷೋಭಕರಣೇ**
**ಪದಾ ಲೋಕಸ್ವಾಮೀ ಪ್ರಕಟಿತವಪುಃ ಸೇತುದೃಗಜಃ**

ಇದು ಕೃಷ್ಣಾಷ್ಟಕದಲ್ಲಿ ಬರುವಂತಹುದು; ಇದು ಭಗವದ್ಗೀತೆಯ 'ಯದಾ ಯದಾ ಗ್ಲಾನಿರ್ಭವತಿ' ಯನ್ನು ಸ್ಮರಿಸುವಂತಿದೆ. ಗೋವಿಂದಾಷ್ಟಕದಲ್ಲಿ,

**'ಸತ್ಯಂ ಜ್ಞಾನಮನಂತಂ ನಿತ್ಯಮನಾಕಾಶಂ ಪರಮಾಕಾಶಂ'**
-ಈ ವಾಕ್ಯವು ಉಪನಿಷತ್‌ವಾಕ್ಯವನ್ನು ನೆನಪಿಸುತ್ತದೆ.

**'ಚಂದ್ರಾರ್ಕಾನಲ ಕೋಟಿಕೋಟಿ ಸದೃಶೀ ಚಂದ್ರಾಂಶು ಬಿಂಬಾಧರೀ।**
**ಚಂದ್ರಾರ್ಕಾಗ್ನಿಸಮಾನ ಕುಂಡಲಧರೀ ಚಂದ್ರಾರ್ಕ ವರ್ಣೇಶ್ವರೀ ॥**

-ಇಲ್ಲಿ ಅನ್ನಪೂರ್ಣೆಯನ್ನು ಸೂರ್ಯಚಂದ್ರರ ಪ್ರಕಾಶಕ್ಕೆ ಸಮಾನ ತೇಜೋಮಯಳಾಗಿ ನಿರೂಪಿಸುತ್ತಾರೆ.

**'ಕೌಮಾರೀ ನಿಗಮಾರ್ಥಗೋಚರಕರೀ ಓಂಕಾರ ಬೀಜಾಕ್ಷರೀ**
**ಮೋಕ್ಷಾದ್ವಾರಕಪಾಟ ಪಾಟನಕರೀ ಕಾಶೀಪುರಾಧೀಶ್ವರೀ'**

-ಎಂಬುವಾಗ ಓಂಕಾರದಮೂಲಳು, ಅವಿನಾಶಿ, ಮೋಕ್ಷದ್ವಾರದ ಬಾಗಿಲ ತೆಗೆಯುವ ಕಾಶಿಪಟ್ಟಣದ ಮುಖ್ಯದೇವತೆ – ಹೀಗೆ ಸಾಗುತ್ತದೆ ಶಂಕರರ ವರ್ಣನಾವಿಸ್ತಾರದ ಹರವು.

ಮೋಹಮುದ್ಗರದಲ್ಲಿ ಕೇವಲ ನಾಲ್ಕು ಸಾಲಿನಲ್ಲಿ ಮೋಕ್ಷದ ಮಾರ್ಗವನ್ನು ಸಾರುತ್ತಾರೆ:

**ಸತ್ಸಂಗತ್ವೇ ನಿಸ್ಸಂಗತ್ವಂ**
**ನಿಸ್ಸಂಗತ್ವೇ ನಿರ್ಮೋಹತ್ವಂ**
**ನಿರ್ಮೋಹತ್ವೇ ನಿಶ್ಚಲತತ್ತ್ವಂ**
**ನಿಶ್ಚಲತತ್ತ್ವೇ ಜೀವನ್ಮುಕ್ತಿಃ ॥**

ವೇದಸಾರ ಶಿವಸ್ತವದಲ್ಲಿ ಹೀಗೆ ವಿವರಿಸುತ್ತಾರೆ:

**ನ ಭೂಮಿರ್ನ ಚಾಪೋ ನ ವಹ್ನಿರ್ನ ವಾಯು**
**ರ್ನ ಚಾಕಾಶ ಮಾಸ್ತೇ ನ ತಂದ್ರಾ ನ ನಿದ್ರಾ ॥**
**ಅಜಂ ಶಾಶ್ವತಂ ಕಾರಣಂ ಕಾರಣಾನಾಂ**
**ತುರೀಯಂ ತಮಃ ಪಾರಮಾದ್ಯಂತಹೀನಂ ॥**

ತ್ರಿಪುರಸುಂದರೀ ವೇದಪಾದಸ್ತೋತ್ರದಲ್ಲಿ ಷಟ್ಚಕ್ರದ ಸಿದ್ಧಿಯ ಬಗ್ಗೆ ಹೇಳುತ್ತಾರೆ:

**ಮೂಲಾಧಾರಾದೂರ್ಧ್ವಮಂತಶ್ಚರಂತೀಂ ।**
**ಭಿತ್ವಾ ಗ್ರಂಥೀನ್ಮೂರ್ಧ್ನಿ ನಿರ್ಯತ್ಸುಧಾರ್ದ್ರಾಮ್ ॥**

ಸೌಂದರ್ಯಲಹರಿಯಲ್ಲಿಯೂ ಭಗವತಿಯ ಉಪಾಸನೆಯ ನೆವದಲ್ಲಿ ಷಟ್ಚಕ್ರದ ಮಹತ್ವವನ್ನು ಸಾರುತ್ತಾರೆ.

ಭಗವತೀ, ಪೃಥ್ವಿತತ್ತ್ವದ ಮೂಲಾಧಾರ ಚಕ್ರದಲ್ಲಿ ಐವತ್ತಾರು ಕಿರಣಗಳು, ಉದಕತತ್ತ್ವದ ಮಣಿಪೂರಸ್ಥಾನದಲ್ಲಿ ಐವತ್ತೆರಡು ಕಿರಣಗಳು, ಅಗ್ನಿತತ್ತ್ವದ ಸ್ವಾಧಿಷ್ಠಾನ ಚಕ್ರದಲ್ಲಿ ಅರವತ್ತೆರಡು ಕಿರಣಗಳು, ವಾಯುತತ್ತ್ವದ ಅನಾಹತ ಚಕ್ರದಲ್ಲಿ ಐವತ್ನಾಲ್ಕು ಕಿರಣಗಳು, ಆಕಾಶತತ್ತ್ವದ ವಿಶುದ್ಧಚಕ್ರದಲ್ಲಿ ಎಪ್ಪತ್ತೆರಡು ಕಿರಣಗಳು, ಮನಸ್ತತ್ತ್ವದ ಆಜ್ಞಾಚಕ್ರದಲ್ಲಿ ಅರುವತ್ತನಾಲ್ಕು ಕಿರಣಗಳು, ಹೀಗೆ ಅಷ್ಟಚಕ್ರಗಳಲ್ಲಿರುವ ಮುನ್ನೂರ ಅರುವತ್ತು ಕಿರಣಗಳ ಮೇಲೆ ಸಹಸ್ರದಲ ಮಧ್ಯವರ್ತಿ ಚಂದ್ರಬಿಂಬಸ್ವರೂಪದ ಬೈಂದವವೆಂಬ ಸುಧಾಸಿಂಧುವಿನಲ್ಲಿ ನಿನ್ನ ಪಾದಾಂಬುಜಗಳಿರುವವು.

*(ಸೌಂದರ್ಯಲಹರೀ, ಶ್ಲೋಕ ೧೪)*

ಶಂಕರರು ಪ್ರಾತಃಸ್ಮರಣಸ್ತೋತ್ರದಲ್ಲಿ ಹೀಗೆ ಹೇಳುತ್ತಾರೆ:

**ಪ್ರಾತಃಸ್ಮರಾಮಿ ಹೃದಿಸಂಸ್ಫುರದಾತ್ಮತತ್ತ್ವಂ**
**ಸಚ್ಚಿತ್‌ಸುಖಂ ಪರಮಹಂಸಗತಿಂ ತುರೀಯಮ್।**
**ಯತ್‌ಸ್ವಪ್ನಜಾಗರಸುಷುಪ್ತಮವೈತಿ ನಿತ್ಯಂ**
**ತದ್‌ಬ್ರಹ್ಮನಿಷ್ಕಲಮಹಂ ನ ಚ ಭೂತಸಂಘಃ ।।**

*(ಪ್ರಾತಃಸ್ಮರಣಸ್ತೋತ್ರ, ೧)*

''ಬೆಳಗಾಯಿತೆಂದು ಎದ್ದೊಡನೆ ಹೃದಯದಲ್ಲಿ ಸ್ಫುರಿಸುತ್ತಿರುವ ಆತ್ಮಜ್ಯೋತಿಯನ್ನೇ ನೆನೆಯುತ್ತೇನೆ; ಅದೇ ಸಚ್ಚಿದಾನಂದ ಸ್ವರೂಪ; ಅದು ಅವಸ್ಥಾತ್ರಯಗಳನ್ನು ಮೀರಿ ಆಚೆಗಿರುವ ನಾಲ್ಕನೆಯ ನೈಜಾವಸ್ಥೆ. ಅದರದ್ದು ಪರಮಹಂಸ ರೀತಿಯ ಗಂಭೀರಗಮನ. ನಿತ್ಯವೂ ಕನಸು, ಎಚ್ಚರ, ನಿದ್ದೆಯೆಂಬ ಅವಸ್ಥೆಗಳನ್ನು ಅರಿವುಳಿವುದೇ ಅದು. ಆ ನಿಷ್ಕಲವಾದ ಬ್ರಹ್ಮವೇ ನಾನು; ಭೂಮಿಯೇ ಮುಂತಾದ ಪಂಚಭೂತಗಳ ಸಮೂಹವಾದ ದೇಹ ನಾನಲ್ಲ.''

ಹೀಗೆ ಶ್ರೀಶಂಕರರ ಸಕಲನಾಮಗಳು ಅವರ ಹೃದಯದಿಂದ ಹೊಮ್ಮುವ ಸಹಜವಾಣಿ! ಗಾಳಿ ಬೀಸಿದಂತೆ, ಸೂರ್ಯ ಬೆಳಗುವಂತೆ, ಸಹಜವಾಗಿ ಅವರೆಲ್ಲ ಸ್ತೋತ್ರಗಳಲ್ಲಿಯೂ ಎಲ್ಲ ನಾಮಗಳಲ್ಲಿಯೂ ಅದ್ವೈತಾಮೃತ ಹೊರಹೊಮ್ಮುತ್ತದೆ. ಸರ್ವಾತ್ಮತ್ವದ ಭವ್ಯಾನುಭವವನ್ನು ಅಷ್ಟೇ ಪ್ರಕಾಶಪೂರ್ಣವಾಗಿ ಚಿತ್ರಿಸುವ ''ದಕ್ಷಿಣಾಮೂರ್ತಿ ಸ್ತೋತ್ರ'' ಶಂಕರಾಚಾರ್ಯರ ಅಂತಜ್ರ್ಯೋತಿಯೇ ವಾಗ್ರೂಪದಿಂದ ಅವತರಿಸಿದಂತಿದೆ.

**ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಮ್**
**ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ।।**

ದಶಶ್ಲೋಕಿಯಲ್ಲಿ ಹೇಳುವಂತೆ,

**ನ ಭೂಮಿರ್ನತೋಯಂ ನ ತೇಜೋ ನ ವಾಯುಃ**
**ನ ಖಂ ನೇಂದ್ರಿಯಂ ವಾ ನ ತೇಷಾಂ ಸಮೂಹಃ।**
**ಅನೇಕಾಂತಿತ್ವಾತ್ ಸುಷುಪ್ತ್ಯೇಕಸಿದ್ಧಃ।**
**ತದೇಕೋಽವಶಿಷ್ಟಃ ಕೇವಲೋಽಹಮ್।।**

ಜೀವನ್ಮುಕ್ತರಾದ ಶಂಕರಾಚಾರ್ಯರು ಉದ್ಗರಿಸಿದ ಸ್ತೋತ್ರಗಳೆಲ್ಲ ತಾನೇತಾನಾಗಿ ಉಕ್ಕಿ ಹರಿಯುವ ತಿಳಿನೀರಿನ ಚಿಲುಮೆಗಳು. ಇಲ್ಲಿ ಅದ್ವೈತ ಕೇವಲ ಬಾಯಿಂದ ಬರುವ ವಾಗದ್ವೈತವಲ್ಲ. ಇಲ್ಲಿಯ ವೈರಾಗ್ಯ ಕ್ಷಣಿಕ ವೈರಾಗ್ಯವಲ್ಲ; ಸ್ತೋತ್ರದ ಆಕಾರ ಹೊಂದಿದ್ದರೂ ಶ್ರೀ ಶಂಕರರ ಮೂಲ ಅಭೀಪ್ಸೆಯೆಂದರೆ ಸಕಲ ಭಕ್ತರನ್ನು ಅದ್ವೈತ ತತ್ತ್ವದೆಡೆ ಒಯ್ಯುವುದೇ ಆಗಿದೆ. ಆತ್ಮನು ಪಂಚಭೂತಗಳಿಂದ ಅತೀತನಾಗಿ ಕೇವಲ ಮಂಗಳಕಾರಿಯಾದ ಆತ್ಮನು ನಾನು ಎಂದು ಎಷ್ಟು ಮನನೀಯವಾಗಿ ಉದ್ಗರಿಸಿದ್ದಾರೆ!

ಸಂಪೂರ್ಣ ಮಾನವಕುಲವೇ ಉದ್ಧಾರವಾಗಿ ದಿವ್ಯಾನುಭವದಲ್ಲಿ ಸಹಭಾಗಿಯಾಗಲೆಂಬ ವಿಶ್ವಮಾನವ ಕಲ್ಯಾಣದ ವಿಶಾಲ ಹೃದಯದಿಂದ ಹೊಮ್ಮಿಬಂದ ಹೃದಯದ ಜ್ಯೋತಿರ್ಮಯ ಕಿಡಿಗಳು ಇವು. ಇವು ವಿಶ್ವಸಾಹಿತ್ಯದ ಅನರ್ಘ್ಯರತ್ನಗಳು. ಪ್ರಯತ್ನ, ಪರಿಶ್ರಮ, ಅನುಸಂಧಾನದಿಂದ, ಶ್ರದ್ಧೆಯಿಂದ ಪಾಲಿಸಿ, ಚಿಂತನ, ಮಂಥನ, ನಿದಿಧ್ಯಾಸನಗಳನ್ನು ನಿರಂತರವಾಗಿ ಮುಂದುವರಿಸಿದಲ್ಲಿ ಮಾನವ ಕೋಟಿಗೆ ಪರಮ ಪುರುಷಾರ್ಥದ ಸಾಧನೆ-ಸಿದ್ಧಿಗಳು ಲಭಿಸಿಯಾವು.

ಡಾ. ಎಸ್. ರಾಧಾಕೃಷ್ಣನ್‌ರವರ ವಾಣಿಯಿಂದ ಲೇಖನವನ್ನು ಸಮಾಪ್ತಿಗೊಳಿಸುವೆ –

''It is impossible to read Shankara's writings, packed as they are with serious and subtle thinking, without being conscious that one is in contact with a mind of a very fine penentration and profound spirituality.. his philosophy standsforth complete, needing neither a before nor an after ... whether we agree or we differ, the penetrating light of his mind never leaves us 'where we were' !''



## ಶಿವಪಂಚಾಕ್ಷರೀಸ್ತೋತ್ರಮ್

**ನಾಗೇಂದ್ರಹಾರಾಯ ತ್ರಿಲೋಚನಾಯ**
**ಭಸ್ಮಾಂಗರಾಗಾಯ ಮಹೇಶ್ವರಾಯ।**
**ನಿತ್ಯಾಯ ಶುದ್ಧಾಯ ದಿಗಂಬರಾಯ**
**ತಸ್ಮೈ ನಕಾರಾಯ ನಮಃ ಶಿವಾಯ ।।**

**ಮಂದಾಕಿನೀಸಲಿಲಚಂದನಚರ್ಚಿತಾಯ**
**ನಂದೀಶ್ವರಪ್ರಮಥನಾಥ ಮಹೇಶ್ವರಾಯ ।**
**ಮಂದಾರಪುಷ್ಪಬಹುಪುಷ್ಪ ಸುಪೂಜಿತಾಯ**
**ತಸ್ಮೈ ಮಕಾರಾಯ ನಮಃ ಶಿವಾಯ ।।**

**ಶಿವಾಯ ಗೌರೀವದನಾಬ್ಜಬಾಲ-**
**ಸೂರ್ಯಾಯ ದಕ್ಷಾಧ್ವರನಾಶಕಾಯ**
**ಶ್ರೀನೀಲಕಂಠಾಯ ವೃಷಭಧ್ವಜಾಯ ।**
**ತಸ್ಮೈ ಶಿಕಾರಾಯ ನಮಃ ಶಿವಾಯ ।।**

**ವಸಿಷ್ಠಕುಂಭೋದ್ಭವಗೌತಮಾರ್ಯ-**
**ಮುನೀಂದ್ರದೇವಾರ್ಚಿತಶೇಖರಾಯ ।**
**ಚಂದ್ರಾರ್ಕವೈಶ್ವಾನರಲೋಚನಾಯ**
**ತಸ್ಮೈ ವಕಾರಾಯ ನಮಃ ಶಿವಾಯ ।।**

**ಯಜ್ಞಸ್ವರೂಪಾಯ ಜಟಾಧರಾಯ**
**ಪಿನಾಕಹಸ್ತಾಯ ಸನಾತನಾಯ ।**
**ದಿವ್ಯಾಯ ದೇವಾಯ ದಿಗಂಬರಾಯ**
**ತಸ್ಮೈ ಯಕಾರಾಯ ನಮಃ ಶಿವಾಯ ।।**

*ಶ್ರೀ ಶಂಕರಾಚಾರ್ಯ*

# ಅನ್ನಮಾಚಾರ್ಯರು ಮತ್ತು ಕೀರ್ತನ ಭಕ್ತಿ

ಡಾ. ಎಚ್.ಎಲ್. ಚಂದ್ರಶೇಖರ್

ಕರ್ನಾಟಕದಲ್ಲಿ ಪುರಂದರದಾಸರಂತೆ ಆಂಧ್ರದಲ್ಲಿ ಪ್ರಸಿದ್ಧ ಸಂತರೂ ಸಂಗೀತಗಾರರೂ ಆದ ತಾಳ್ಳಪಾಕಂ ಅನ್ನಮಾಚಾರ್ಯರು ನೂತನ ಭಕ್ತಿಪರಂಪರೆಗೆ ನಾಂದಿ ಹಾಡಿದವರು. ಅವರ ಅಸಂಖ್ಯ ಹಾಡುಗಳಲ್ಲಿ ತಾತ್ತ್ವಿಕ ಹಿನ್ನೆಲೆಯ ಆಧ್ಯಾತ್ಮಿಕತೆ ಹೊರ ಹೊಮ್ಮುವಂತೆಯೇ ಭಗವಂತನ ಮೇಲೆ ಅವರಿಗಿದ್ದ ಭಕ್ತಿಭಾವ ವ್ಯಕ್ತವಾಗಿದೆ. ಅವರ ಜೀವನ ಮತ್ತು ಕೃತಿಗಳಲ್ಲಿ ನಾಮಮಹಿಮೆಯ ಮಹತ್ವವನ್ನು ಕುರಿತು ವಿವರಿಸಿರುವ ಡಾ.ಹೆಚ್.ಎಲ್. ಚಂದ್ರಶೇಖರ್ ಅವರು ಸಂಸ್ಕೃತದಲ್ಲಿ ಹಾಗೂ ಭಾರತೀಯ ತತ್ತ್ವಶಾಸ್ತ್ರದಲ್ಲಿ ವಿಶೇಷ ಅಧ್ಯಯನ ಮಾಡಿದ್ದು, ಪ್ರಸ್ತುತ ಮೈಸೂರು ವಿಶ್ವವಿದ್ಯಾನಿಲಯದ ತತ್ತ್ವಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀ ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಭಕ್ತಿಯನ್ನು ಕುರಿತ ಎರಡು ಮುಖ್ಯ ಹೇಳಿಕೆಗಳಿವೆ. ಒಂದು, **'ಭಕ್ತಿರ್ಮಹನೀಯ ವಿಷಯೇ ಪ್ರೀತಿಃ'** ಎಂಬುದು. ಎಂದರೆ ಪ್ರೀತಿಯೇ ಭಕ್ತಿ. ಈ ಪ್ರೀತಿಗೆ ಒಂದು ವಸ್ತುವಿರಬೇಕು. ಆದರೆ ಈ ವಸ್ತು ಸಾಧಾರಣ ವಸ್ತುವಾಗಿರ ಬಾರದು. ಅದು ಅಸಾಧಾರಣವಾಗಿರಬೇಕು. ಈ ಅಸಾಧಾರಣ ವಸ್ತುವೇ ಜಗತ್ತಿನ ಸೃಷ್ಟಿಸ್ಥಿತಿಲಯಕಾರಕವಾದ ಈಶ್ವರ. ವಿಶಿಷ್ಟಾದ್ವೈತ ದಲ್ಲಿ ಬರುವ ಮತ್ತೊಂದು ಪ್ರಮುಖ ಹೇಳಿಕೆಯೆಂದರೆ **'ಸ್ನೇಹ ಪೂರ್ವ ಮನಧ್ಯಾನಂ ಭಕ್ತಿರಿತ್ಯಭಿಧೀಯತೇ'** ಎಂಬುದು. ಎಂದರೆ ಭಕ್ತಿಯಲ್ಲಿ ಈಶ್ವರನನ್ನು ಕುರಿತ ಸ್ನೇಹ ಅಥವಾ ಪ್ರೀತಿಯಷ್ಟೇ ಅಲ್ಲ, ಏಕಾಗ್ರತೆಯೂ ಇರಬೇಕು. ಒಟ್ಟಾರೆ ಭಕ್ತಿಗೆ ಒಂದು ಮಹತ್ತಾದ ವಸ್ತು, ಪ್ರೀತಿ ಮತ್ತು ಏಕಾಗ್ರತೆ ಇವೆಲ್ಲವೂ ಅಗತ್ಯ. ಇವುಗಳ ಜೊತೆಗೆ ಸಿದ್ಧಾಂತವೂ ಮತ್ತೊಂದು ಅಂಶದ ಅವಶ್ಯಕತೆಯನ್ನೂ ಒತ್ತಿ ನುಡಿ ಯುತ್ತದೆ. ಅದೇ ಈಶ್ವರನನ್ನು ಕುರಿತ ಭಕ್ತನ ಪಾರತಂತ್ರ್ಯ ಭಾವನೆ, ಈಶ್ವರನ ಸರ್ವಶಕ್ತಿತ್ವಕ್ಕೆ ಹೋಲಿಸಿದಾಗ ತಾನು ಸ್ವತಂತ್ರನಲ್ಲವೆಂಬ ಪ್ರಜ್ಞೆ. ಸ್ಪಿನೋಜಾ ಎಂಬ ಡಚ್ ತಾತ್ತ್ವಿಕನು ಹೇಳುವಂತೆ ಮನುಷ್ಯನ ಸ್ವಾತಂತ್ರ್ಯ ಅಥವಾ ಮುಕ್ತಿಯು ಈಶ್ವರನಿಗೆ ತಾನು ಅಧೀನನೆಂಬ ಸಾಕ್ಷಾತ್ಕಾರದಲ್ಲಿದೆ.

ಭಕ್ತಿಯು ಈ ಪರಿಪೂರ್ಣ ಅರ್ಥದಲ್ಲಿ ಸಿದ್ಧಿಸಬೇಕಾದರೆ ಭಗವ ನ್ನಾಮ ಸಂಕೀರ್ತನೆಯು ಮಹತ್ವಪೂರ್ಣ ಪಾತ್ರವನ್ನು ವಹಿಸುತ್ತದೆ. ಕೀರ್ತನೆಯಲ್ಲಿ ಸ್ಥೂಲವಾಗಿ ನಾಲ್ಕು ವಿಧ. ಇಲ್ಲಿ ಭಕ್ತನು ಭಗವಂತನ ಸಾಕಾರವನ್ನು ಕೊಂಡಾಡುತ್ತಾನೆ, ಅಥವಾ ಆತನು ಭಗವಂತನ ಕಲ್ಯಾಣಗುಣಗಳ ಗಾನ ಮಾಡುತ್ತಾನೆ. ಇಲ್ಲವೇ ಆತನು ಭಗವಂತನ ಅನೇಕ ನಾಮಗಳನ್ನು ಪಾರಾಯಣ ಮಾಡುತ್ತಾನೆ. ಅಥವಾ ಆತನು ಗುರುವಿನಿಂದ ಉಪದಿಷ್ಟನಾಗಿ ಭಗವಂತನ ಒಂದೇ ಒಂದು ನಾಮವನ್ನು ಜಪಿಸುತ್ತಾನೆ.

ಶ್ರೀ ತಾಳ್ಳಪಾಕ ಅನ್ನಮಾಚಾರ್ಯರು ೧೫ನೇ ಶತಮಾನದ ಒಬ್ಬ ವಿಶಿಷ್ಟಾದ್ವೈತಿಗಳಷ್ಟೇ ಅಲ್ಲ, ಒಬ್ಬ ತೆಲುಗು ವಾಗ್ಗೇಯಕಾರರೂ ಹೌದು. ಪುರಂದರದಾಸರ ಹಿರಿಯ ಸಮಕಾಲೀನರಾದ ಅವರ ಪದ ಗಳಲ್ಲಿ ಕೀರ್ತನಭಕ್ತಿಯ ಹಿರಿಮೆಯ ಪ್ರಸ್ತಾಪವು ಪುನಃ ಪುನಃ ಬರು ತ್ತದೆ. ವಾಸ್ತವವಾಗಿ ಅನ್ನಮಾಚಾರ್ಯರು 'ಸಂಕೀರ್ತನಾಚಾ ರ್ಯುಡು' ಎಂದೇ ಪ್ರಸಿದ್ಧರು. ಅವರ ಪ್ರಕಾರ ಮಾನವನ ಮುಕ್ತಿಗೆ ಭಗವಂತನ ಒಂದೇ ಒಂದು ನಾಮದ ಸಂಕೀರ್ತನೆಯು ಸಾಕು, ಆತನ ಉಳಿದ ನಾಮಗಳು ಭಂಡಾರದಲ್ಲಿ ಗುಪ್ತವಾಗಿರಲಿ – ''ಒಕ್ಕ ಸಂಕೀರ್ತನೆ ಚಾಲು ವೊದ್ದಿಕೈ ಮಮ್ಮು ರಕ್ಷಿಂಚಗ ತಕ್ಕಿನವಿ ಭಂಡಾರಾನ ದಾಚಿ ವುಂಡನೀ''(೭–೧೦೪). ಆದರೆ ಭಗವನ್ನಾಮವನ್ನು ಯೋಗ್ಯ ಗುರುವಿನಿಂದ ಉಪದೇಶ ಪಡೆಯಬೇಕು – ''ಪರಮ ಶ್ರೀ ವೆಂಕಟ ಪತಿಸಂಕೀರ್ತನಸೊರಿದಿಗುರುಡೊಸಗುಸೂಕ್ಷ್ಮಮಿದಿ''(೮–೨೬೧). ಒಂದು ಕೃತಿಯಲ್ಲಿ ಅನ್ನಮಾಚಾರ್ಯರು ಭಗವಂತನ ಸಾಕಾರವನ್ನು ಹೇಗೆ ಕೀರ್ತಿಸಬೇಕೆಂಬುದನ್ನು ತೋರಿಸುತ್ತಾರೆ. ಆತನ ಸಾಕಾರವನ್ನು ಆತನ ದಿವ್ಯನಾಮಗಳಿಂದ ಸ್ತುತಿಸಿ, ಆತನ ಪಟ್ಟದ ರಾಣಿಯಾದ ಲಕ್ಷ್ಮಿಯನ್ನು, ಎರಡು ಕೈಗಳಲ್ಲಿರುವ ಶಂಖಚಕ್ರಗಳನ್ನು ಆತನ ಅಭಯ ಹಾಗೂ ವರದ ಹಸ್ತಗಳನ್ನು, ಭೂದೇವಿಯನ್ನು, ಆತನ ಚರಣಕಮಲಗಳನ್ನು, ನಾಭಿಕಮಲವನ್ನು, ಇಡೀ ಬ್ರಹ್ಮಾಂಡವನ್ನು ಹೊತ್ತಿರುವ ಆತನ ಉದರವನ್ನು ಮತ್ತು ಆತನ ಕಂಬುಕಂಠವನ್ನು, ಶಿರಸ್ಸಿನಲ್ಲಿರುವ ತುಲಸಿಯನ್ನು, ಎದೆಯಲ್ಲಿ ರಾರಾಜಿಸುತ್ತಿರುವ ಶ್ರೀವತ್ಸನನ್ನು ಮತ್ತು ಕಿವಿಗಳಲ್ಲಿ ಕಂಗೊಳಿಸುತ್ತಿರುವ ಮಕರಕುಂಡಲ ಗಳನ್ನು ಸ್ತುತಿಸಿ ಧನ್ಯರಾಗಬೇಕು. (೭–೧೨೫)

ಆದರೆ ಭಾವಶುದ್ಧಿಯಿಲ್ಲದ ಕೇವಲ ಬಾಹ್ಯವೂ ಯಾಂತ್ರಿಕವೂ ಆದ ನಾಮೋಚ್ಚಾರಣೆಯು ವ್ಯರ್ಥ. ಅದು ಕೇವಲ ಬೂಟಾಟಿಕೆ ಯಾಗುತ್ತದೆ. ಅನ್ನಮಯ್ಯ ಇಂತಹ ಬೂಟಾಟಿಕೆಯ ಜನರನ್ನು ರಕ್ಷಿಸೆಂದು ದೇವರಲ್ಲಿ ಮೊರೆಯಿಡುವ ಮೂಲಕ ಅವರ ಬಗ್ಗೆ ಆಧ್ಯಾತ್ಮಿಕ ಕಳಕಳಿಯನ್ನು ಮೆರೆಯುತ್ತಾರೆ. ''ಧ್ಯಾನಮಾಡುವ ರಾದರೂ ಜನರಿಗೆ ನಿನ್ನ ಬಗ್ಗೆ ನಿಶ್ಚಿತಜ್ಞಾನ ಬರಲಿಲ್ಲ, ನಿನ್ನ ಕಲ್ಯಾಣ ಗುಣಗಳನ್ನು ಸ್ತುತಿಸುವರಾದರೂ ಅವರಿಗೆ ನಿನ್ನ ಮಹಿಮೆಯನ್ನು ಗುರುತಿಸಲಾಗಲಿಲ್ಲ, ನಿನ್ನ ಪೂಜೆಯನ್ನು ಮಾಡುವರಾದರೂ ಅವರು ನಿನ್ನ ಸಾಕಾರ ದರ್ಶನವನ್ನು ಪಡೆಯಲಿಲ್ಲ, ನಿನ್ನ ದಿವ್ಯ ಕಥೆಗಳನ್ನು ಕೇಳಿದವರಾದರೂ ನಿನ್ನಲ್ಲಿನ ಭಕ್ತಿಯು ಅವರಲ್ಲಿ ಸ್ಥಿರ ವಾಗಲಿಲ್ಲ, ನಿನ್ನನ್ನು ಪದೇ ಪದೇ ಕೈಯೆತ್ತಿ ನಮಸ್ಕರಿಸುವರಾದರೂ ನಿನ್ನ ಮಹಿಮೆಯ ಬಗ್ಗೆ ಅವರಿಗೆ ನಂಬಿಕೆಯೇ ಇಲ್ಲ, ಇದು ಯಾರ ತಪ್ಪೋ ತಿಳಿಯದು. ಭಗವಂತ, ಇಂತಹ ಜೀವರನ್ನು ರಕ್ಷಿಸು.'' (೭–೫೩). ಇಲ್ಲಿ ನಾಮಸಂಕೀರ್ತನೆಯಲ್ಲಿ ಆಸಕ್ತಿ ಬರಬೇಕಿದ್ದರೂ ಭಗವದನುಗ್ರಹವು ಬೇಕೆಂಬ ಧ್ವನಿ ಅನ್ನಮಾಚಾರ್ಯರ ಈ ಮಾತು ಗಳಲ್ಲಿವೆ. ಈ ಅಂಶವನ್ನು ಮತ್ತೊಂದು ಸಾಲಿನಲ್ಲಿ ನೇರವಾಗಿಯೇ ಹೀಗೆ ಸ್ಪಷ್ಟಪಡಿಸುತ್ತಾರೆ, ''ಯಿಕ್ಕಡ ಶ್ರೀ ವೆಂಕಟೇಶ ಯಿಟು ನೀ ಕರುಣಚೇಕ ತಕ್ಕಗ ನಿನ್ನು ಸೇವಿಂಚಿ ತನಿಯಲೇದು.'' 'ನೀ ಕರುಣ ಚೇಕ' ಎಂದರೆ ನಿನ್ನ ಕರುಣೆಯಿಂದ ಎಂಬಲ್ಲೇ ನಾಮಸಂಕೀರ್ತನೆ ಯಲ್ಲಿನ ಆಸಕ್ತಿಗೆ ಭಗವಂತನ ದಯೆ ಬೇಕೆಂಬ ಅಂಶವು ಸ್ಪಷ್ಟವಾಗಿದೆ.

ಒಂದು ಕೃತಿಯಲ್ಲಿ ಅನ್ನಮಾಚಾರ್ಯರು ಭಗವಂತನನ್ನು ನಾವು ಹೇಗೆ ಕೀರ್ತಿಸಬೇಕೆಂಬುದನ್ನು ಪ್ರಾಯೋಗಿಕವಾಗಿ ತೋರಿಸುತ್ತಾರೆ. ಅವರು ರಚಿಸಿರುವ ಕೃತಿಗಳೆಲ್ಲವೂ ಈಶ್ವರನ ಪಾದಗಳಿಗೆ ಭಕ್ತಿಯಿಂದ ಅರ್ಪಿಸಿದ ಪುಷ್ಪಗಳಷ್ಟೆ. ಇವುಗಳಲ್ಲಿ ಒಂದು ಕೃತಿಯಷ್ಟೇ ಸಾಕು ಅವರಿಗೆ ಮುಕ್ತಿ ದೊರಕಿಸಿಕೊಡಲು, ಉಳಿದ ಕೃತಿಗಳು ಭಂಡಾರದಲ್ಲಿ ಅಡಗಿರಲಿ. ಭಗವಂತನ ನಾಮವು ದುಬಾರಿಯಲ್ಲ , ಆದರೆ ಅದು ನೀಡುವ ಫಲವು ಮಾತ್ರ ಶಾಶ್ವತವಾದದು. ಭಗವಂತನೇ ಅನ್ನಮಯ್ಯನ ನಾಲಿಗೆ ಮೂಲಕ ಆತನ ಸಂಕೀರ್ತನೆಯನ್ನು ಮಾಡಿಸಿರುವುದು. ''ನಿನ್ನನ್ನು ಸ್ತುತಿಸಲು, ಅಥವಾ ಸ್ತುತಿಸಿದೆ ಎಂದು ಸಾರಿಕೊಳ್ಳಲು ನಾನೆಷ್ಟರವನು?'' ಎಂದು ಅನ್ನಮಾಚಾರ್ಯರು ಹಾಡುತ್ತಾರೆ. 'ವಿನುತಿಂಚ ನೇನೆಂಕವಾಡ.' ಆದರೂ ದೇವರು ಈ ಪುಣ್ಯವನ್ನು ಅನ್ನಮಾಚಾರ್ಯರಿಗೆ ನೀಡಿದ್ದಾನೆ. 'ಕಾನಿಮ್ಮನಿ ನಾ ಕೀ ಪುಣ್ಯಮು ಗಟ್ಟಿಕಿ ವಿಂತೇಯಯ್ಯಾ.' ಹೀಗೆ ಹೇಳಿಕೊಳ್ಳುವಲ್ಲಿ ಅನ್ನಮಾಚಾರ್ಯರು ತಮ್ಮ ಗರ್ವವನ್ನು ತೋರಿಸುತ್ತಿಲ್ಲ. 'ಯೀ ಮಾಟ ಗರ್ವಮು ಗಾದು.' ಅವರು ಭಗವಂತನ ಮಹಿಮೆಯ ವಾಸ್ತವತೆಯನ್ನು ಹೇಳಲು ಯತ್ನಿಸುತ್ತಿದ್ದಾರೆ. ಈ ಮಾತುಗಳಲ್ಲೂ ಅವರು ತಮ್ಮ ಸ್ವಾತಂತ್ರ್ಯದ ಗರಿಮೆಯನ್ನು ಮರೆಯುತ್ತಿಲ್ಲ. 'ನಾ ಸ್ವಾತಂತ್ರ್ಯಮು ಚೆಪ್ಪಿನವಾಡಗಾನು.' ಅನ್ನಮಯ್ಯ ದಾಸ, ದೇವರು ಅವರ ಒಡೆಯ (೭–೧೦೪).

ಭಗವಂತನ ನಾಮಗಳ ನಿರಂತರ ಕೀರ್ತನೆಯಿಂದ ಆತನ ಸಾಕಾರವು ಭಕ್ತನ ಮನಸ್ಸಿನಲ್ಲಿ ಸ್ಥಿರವಾಗುತ್ತದೆ. ಭಗವನ್ನಾಮವನ್ನು ನಿಧಿಗೆ ಹೋಲಿಸಲಾಗಿದ್ದು, ಒಂದು ಕೃತಿಯಲ್ಲಿ ನಾಮಧನಕ್ಕೂ ಮತ್ತು ಪ್ರಾಪಂಚಿಕಧನಕ್ಕೂ ಇರುವ ವ್ಯತ್ಯಾಸಗಳನ್ನು ಸೂಚ್ಯವಾಗಿ ಸ್ಪಷ್ಟಪಡಿಸುತ್ತಾರೆ. ಮೊದಲನೆಯದಾಗಿ, ದಿವ್ಯನಾಮವೆಂಬ ಧನವು ಮನುಷ್ಯನ ಎಲ್ಲ ಬಯಕೆಗಳನ್ನೂ ತೀರಿಸುತ್ತದೆ. 'ಕೋರೇವೆಲ್ಲಾ ಇಚ್ಚೇಧನಮು.' ಆದರೆ ಐಹಿಕ ಧನವು ಮನುಷ್ಯನ ಎಲ್ಲ ಬಯಕೆಗಳನ್ನೂ ತೀರಿಸಲಾರದು, ಅದು ತೃಪ್ತಿಪಡಿಸುವುದು ಕೆಲವು ಬಯಕೆಗಳನ್ನು ಮಾತ್ರ. ಹಣವು ಮನುಷ್ಯನ ಎಲ್ಲ ಆಸೆಗಳನ್ನೂ ಪೂರೈಸಲಾರದು. ಎರಡನೆಯದಾಗಿ ದಿವ್ಯನಾಮವೆಂಬ ಧನವು **ಶಾಶ್ವತವಾಗಿ** ಬಯಕೆಗಳನ್ನು ತೀರಿಸುತ್ತದೆ. ಎಂದರೆ ಅದು ನೀಡುವ ಫಲವು ಬಯಕೆಗಳ ಶಾಶ್ವತ ತೃಪ್ತಿಯ ಸ್ಥಿತಿಯನ್ನು ಪ್ರತಿನಿಧಿಸುತ್ತದೆ. ಈ ಸ್ಥಿತಿಯನ್ನು ಪಡೆದ ನಂತರ ಮನುಷ್ಯನು ಪೂರೈಸಿಕೊಳ್ಳಬಹುದಾದ ಯಾವ ಬಯಕೆಯೂ ಉಳಿದಿರುವುದಿಲ್ಲ. 'ಪರಮಪದವಿಕಿ ಸಂಬಳಮೈನ ಧನಮು.' ಆದರೆ ಐಹಿಕ ಧನವು ಬಯಕೆಗಳನ್ನು ಈಡೇರಿಸುವುದಾದರೂ ಅದರಿಂದ ಬರುವ ತೃಪ್ತಿಯು ಕೇವಲ ತಾತ್ಕಾಲಿಕ. ಅದು ಈಡೇರಿಸುವ ಬಯಕೆಗಳ ಸಂಖ್ಯೆಯೂ ಸೀಮಿತ. ಅದರಿಂದ ಮನುಷ್ಯನಿಗೆ ಬರುವ ತೃಪ್ತಿಯೂ ತಾತ್ಕಾಲಿಕ. ವಾಸ್ತವವಾಗಿ ಐಹಿಕ ಬಯಕೆಯನ್ನು ತೃಪ್ತಿಪಡಿಸುವ ನಮ್ಮೆಲ್ಲ ಪ್ರಯತ್ನವೂ ವ್ಯರ್ಥ. ಅದನ್ನು ತೃಪ್ತಿಪಡಿಸಿದಷ್ಟೂ ಅದು ಅಧಿಕವಾಗುತ್ತದೆ. ಮೂರನೆಯದಾಗಿ ದಿವ್ಯನಾಮವೆಂಬ ಧನವು ಸುಲಭಗ್ರಾಹ್ಯ. 'ಅರಚೇಕಿ ಧನಮು' ಎಂದರೆ ಐಹಿಕ ಧನಕ್ಕೆ ವಿರುದ್ಧವಾಗಿ ಮನು ಷ್ಯನು ಶ್ರಮಪಡಬೇಕಿಲ್ಲ. ಆದರೆ ಅದರಿಂದ ಬರುವ ಫಲವು ಮಾತ್ರ ಶಾಶ್ವತ. ಕೊನೆಯದಾಗಿ ದಿವ್ಯನಾಮವೆಂಬ ಈ ಧನವನ್ನು ಬಳಸಿದಷ್ಟೂ, ಮತ್ತು ಹೆಚ್ಚು ಹೆಚ್ಚು ಜನರು ಅದನ್ನು ಹಂಚಿಕೊಂಡಷ್ಟೂ (ನಾಮಸಂಕೀರ್ತನೆಯಲ್ಲಿ ಪಾಲುಗೊಂಡಷ್ಟೂ) ಅದರಿಂದ ಭಕ್ತನಿಗೆ ಉಂಟಾಗುವ ಶಕ್ತಿಯು ಅಧಿಕವಾಗುತ್ತದೆ. ಆದ್ದರಿಂದಲೇ ಅನ್ನಮಾಚಾರ್ಯರು ದಿವ್ಯನಾಮವನ್ನು 'ಅಧಿಕಪು ಧನಮು, ನಿತ್ಯಮೈನ ಧನಮು' ಎಂದು ಸಾರುವುದು. ಆದರೆ ಪ್ರಾಪಂಚಿಕ ಧನವು ಹಾಗಲ್ಲ. ಅದನ್ನು ಬಳಸಿದಷ್ಟೂ ಮತ್ತು ಹೆಚ್ಚು ಜನರು ಅದನ್ನು ಹಂಚಿಕೊಂಡಷ್ಟೂ ಅದು ಕಡಿಮೆಯಾಗುತ್ತದೆ.(೮–೨೭).

ವಾಸ್ತವವಾಗಿ ಅನ್ನಮಾಚಾರ್ಯರು ನಾಮಜಪವನ್ನೇ ಗುರಿಯ ಮಟ್ಟಕ್ಕೆ ಏರಿಸುತ್ತಾರೆ. ಅವರ ಪ್ರಕಾರ ನಾಮಜಪವು ಗುರಿಯ ಸಾಧನವಲ್ಲ, ಅದೇ ಗುರಿ.

ನಾಮಜಪವು ಗಳಿಸಿಕೊಡುವ ಅನಂತ ಪುಣ್ಯವು ಎಷ್ಟುಮಾತ್ರಕ್ಕೂ ನಾಮಜಪಕ್ಕೆ ಸಮವಾಗಲಾರದು. ಅದು ಫಲದ ಸಾಧನವಲ್ಲ, ಅದೇ ಸಾಧ್ಯ. ಅನ್ನಮಾಚಾರ್ಯರು ಅದನ್ನು ಕ್ಷುಲ್ಲಕ ಬಯಕೆಗಳ ತೃಪ್ತಿಗಾಗಿ ಬಳಸಿಕೊಳ್ಳಲು ನಾಚುತ್ತಾರೆ. ಅವರು ಹಾಗೆ ಮಾಡುವವನನ್ನು ಕಬ್ಬಿಣವನ್ನು ತರಲು ಸಮುದ್ರಯಾನ ಮಾಡುವ ನಾವಿಕನಿಗೆ, ಮತ್ತು ಹುಲ್ಲನ್ನು ಕೊಳ್ಳಲು ಚಿನ್ನವನ್ನು ವೆಚ್ಚಮಾಡುವ ಮೂರ್ಖನಿಗೆ ಹೋಲಿಸುತ್ತಾರೆ. ಪಾಪನಿವಾರಣೆಗೆ ಭಗವನ್ನಾಮ ಬಳಸುವುದು ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಬಿಟ್ಟಂತೆ. ಮತ್ತು ಉಗುರಿನಿಂದ ಕೆರೆಯಬಹುದಾದ ಮುಳ್ಳನ್ನು ತೆಗೆಯಲು ಗುದ್ದಲಿ ಬಳಸಿದಂತೆ. 'ಗೋರ ಬೋವುಟಕು ಗೊದ್ದಲಿ ತಗುವಾ.' ಅನ್ನಮಾಚಾರ್ಯರ ದೃಷ್ಟಿಯಲ್ಲಿ ನಾಮಜಪವು ಸಾಯುಜ್ಯಕ್ಕಿಂತಲೂ ಶ್ರೇಷ್ಠ. ಭಗವಂತನು ಧ್ಯಾನದಿಂದ ಸಾಯುಜ್ಯಮೋಕ್ಷವನ್ನು ಪಡೆಯುವುದಕ್ಕಿಂತಲೂ ನಿನ್ನ ನಾಮ ಫಲವನ್ನು ಹೊಂದುವುದೇ ಮೇಲೆಂದು ಅವರು ಸಾರುತ್ತಾರೆ. 'ಜಟ್ಟಿ ಮಿಮು ಧ್ಯಾನಿಂಚಿ ಸಾಯುಜ್ಯಮಂದುಟಕಂಟೇ ಅಟ್ಟೆ ನೀ ನಾಮ ಫಲ ಮಂದುಟೆಕ್ಕುಡು' (೭–೨೪೯).

ಭಗವನ್ನಾಮಕೀರ್ತನೆಯಲ್ಲಿ ತ್ರಿಕರಣ ಶುದ್ಧಿಯಿರಬೇಕು. ಆಂತರಿಕ ಭಕಿಯಿಲ್ಲದೆ ಯಾಂತ್ರಿಕ ಉಚ್ಚಾರಣೆಯು ವ್ಯರ್ಥ. ನಾಮ ಸಂಕೀರ್ತನೆಯ ಆಂತರಿಕ ಮತ್ತು ಬಾಹ್ಯ ಎರಡರಲ್ಲೂ ಇರಬೇಕು. 'ಭಾವಮುಲೋನ ಬಾಹ್ಯಮುನಂದುಮು.' ದಿವ್ಯನಾಮವು ಸುಲಭವಾಗಿದ್ದರೂ ಅದರಲ್ಲಿ ಆಸಕ್ತಿ ಬರಲು ಪರಮಾತ್ಮನ ದಯೆ ಬೇಕೆನ್ನುವಲ್ಲಿ ಯಾವುದೇ ವಿರೋಧಾಭಾಸವಿಲ್ಲ. ಕಾರಣ, ಸುಲಭ ಪಥವಿದ್ದರೂ ಜನರು ಅಜ್ಞಾನದಿಂದ ತಮ್ಮ ಆಧ್ಯಾತ್ಮಿಕ ಹಿತಕ್ಕೆ ವಿರುದ್ಧವಾದ ಮಾರ್ಗವನ್ನು ಹಿಡಿಯುವುದು ಅನುಭವವೇದ್ಯ.

ಒಳ್ಳೆಯದನ್ನು ತಿರಸ್ಕರಿಸಿ ಅಹಿತವಾದುದನ್ನು ಅಪ್ಪಿಕೊಳ್ಳುವುದು ಮನುಷ್ಯನ ಸ್ವಭಾವ. ಆದ್ದರಿಂದ ನಾಮಮಹಿಮೆಯ ಬಗ್ಗೆ ಅರಿವು ಉಂಟಾಗಲಾದರೂ ಮನುಷ್ಯನಿಗೆ ಭಗವಂತನ ದಯೆ ಮತ್ತು ಸದ್ಗುರುವಿನ ಮಾರ್ಗದರ್ಶನ ಅಗತ್ಯ. ಈ ಅಂಶವನ್ನೇ ಹಿಂದೂ ಧರ್ಮವಿರಲಿ, ಜಗತ್ತಿನ ಎಲ್ಲ ಧರ್ಮಗಳೂ ಒತ್ತಿ ನುಡಿಯುವುದು.

**ಆಧಾರಗ್ರಂಥಗಳು:**


೧. ***ಅಧ್ಯಾತ್ಮ ಸಂಕೀರ್ತನಲು,*** ಆರ್. ಅನಂತಕೃಷ್ಣಶರ್ಮ ಮತ್ತು ಯು. ಶ್ರೀನಿವಾಸಾಚಾರ್ಯ (ಸಂ), ತಿರುಮಲ ತಿರುಪತಿ ದೇವಸ್ಥಾನಮು, ತಿರುಪತಿ, ೧೯೫೧, ಸಂಪುಟ ೭.

೨. ಅದೇ, ೧೯೫೨, ಸಂಪುಟ ೮.

೩. ***(Shri Annamacharya- A Philosophical Study,*** Dr. H.L.Chandrashekara, Vidyashankara Prakashana, Mysore, 1990)




# ನಾಮಯೋಗಿ ಶ್ರೀ ಬ್ರಹ್ಮಚೈತನ್ಯ ಮಹಾರಾಜ್

- ವಿಜಯಕುಮಾರ



**ನಾಮಜಪ ಎಂದ ಕೂಡಲೇ ನೆನಪಿಗೆ ಬರುವ ಪ್ರಸಿದ್ಧ ಸಂತರ ಸಾಲಿಗೆ ಸೇರುವವರು ಬ್ರಹ್ಮಚೈತನ್ಯ ಗೊಂದಾವಲೇಕರ್ ಮಹಾರಾಜ್ ಅವರು. ಅವರ ಅದ್ಭುತ ಜೀವನದ ವಿವರಗಳೊಂದಿಗೆ ಅವರ ಅಮೂಲ್ಯ ಉಪದೇಶಗಳ ಸಾರವನ್ನು ಮೇಳೈಸಿ ಬರೆದಿರುವ ಲೇಖಕರು ನುರಿತ ಬರಹಗಾರರಾಗಿದ್ದು, 'ವಿವೇಕಪ್ರಭ' ಕಾರ್ಯಾಲಯದಲ್ಲಿ ಅನೇಕ ವರ್ಷ ಸೇವೆ ಸಲ್ಲಿಸಿದ್ದಾರೆ.**

**ನಾಮಸ್ಮರಣಾದನ್ಯೋಪಾಯಂ ನ ಹಿ ಪಶ್ಯಾಮಿ ಭವ ತರಣೇ ।**

*'ಭವಸಾಗರವನ್ನು ದಾಟಲು ನಾಮಸ್ಮರಣೆಗಿಂತ ಸುಲಭೋಪಾಯ ಬೇರೊಂದಿಲ್ಲ '*

ಆಸೇತು ಹಿಮಾಚಲ ಪರ್ಯಂತ ಇತಿಹಾಸದುದ್ದಕ್ಕೂ ತಿರುಗಿ ನೋಡಿದಾಗ ಎಲ್ಲ ಜನಾಂಗಗಳಲ್ಲಿಯೂ ಭಗವತ್ಪ್ರಾಪ್ತಿಗೆ 'ನಾಮ ಸ್ಮರಣೆ'ಯನ್ನು ಅತ್ಯಂತ ಸುಲಭೋಪಾಯ ಎಂದು ಪರಿಗಣಿಸಿರುವುದನ್ನು ನೋಡುತ್ತೇವೆ. ಭಗವಂತನು ನಮ್ಮ ಸಾಮಾನ್ಯ ಇಂದ್ರಿಯಗಳಿಗೆ ಅಗೋಚರನಾಗಿದ್ದರೂ ಆತನ ಸಾನ್ನಿಧ್ಯವನ್ನು ಅನುಭವಿಸಲು ನಾಮಸ್ಮರಣೆಯ ಬಲದಿಂದ ಸಾಧ್ಯ ಎಂಬುದನ್ನು ವಿವಿಧ ಪಂಥಗಳ ಅನುಭಾವಿಗಳು ಮತ್ತೆ ಮತ್ತೆ ಸಾಬೀತುಪಡಿಸಿರುತ್ತಾರೆ. ಜನಸಾಮಾನ್ಯರಲ್ಲಿ ನಾಮಸ್ಮರಣೆಯಲ್ಲಿ ಶ್ರದ್ಧೆಯನ್ನು ಮೂಡಿಸುವುದನ್ನೇ ತಮ್ಮ ಜೀವಿತದ ಉದ್ದೇಶವಾಗಿಟ್ಟುಕೊಂಡವರು ಗೋಂದಾವಲೆಯ ಶ್ರೀ ಬ್ರಹ್ಮ ಚೈತನ್ಯ ಮಹಾರಾಜರು.

ಗೋಂದಾವಲೆ ಎಂಬುದು ಮಹಾರಾಷ್ಟ್ರದ ಸತಾರಾ ಜಿಲ್ಲೆಯಲ್ಲಿನ ಒಂದು ಸಣ್ಣ ಗ್ರಾಮ. ಹೊರಗೆ ಸಾಮಾನ್ಯರಂತೆ ಕಾಣುತ್ತಿದ್ದ ವೈರಾಗ್ಯ ಮತ್ತು ಭಗವಂತನ ಅಖಂಡ ಅನುಸಂಧಾನ ತುಂಬಿದ್ದ ನಾರಾಯಣ ರಾವ್ ಮತ್ತು ಗೀತಾಬಾಯಿ ಎಂಬ ದಂಪತಿಗಳಿಗೆ ೧೮೪೫ರ ಫೆಬ್ರವರಿ ೧೯ರಂದು ಜನಿಸಿದ ಮಗುವೇ ಗಣಪತಿ ಅಥವಾ ಗಣು. ಪಾಂಡುರಂಗವಿಠ್ಠಲನ ಪರಮಭಕ್ತನಾದ ಅಜ್ಜ ಲಿಂಗೋಪಂತನಿಗೆ ತಮ್ಮ ಮನೆಯಲ್ಲಿ ಹುಟ್ಟಿದ ಮಗು ಅಸಾಮಾನ್ಯ ಎಂದು ತಿಳಿಯಲು ಹೆಚ್ಚು ಹೊತ್ತು ಬೇಕಾಗಲಿಲ್ಲ.

ಒಮ್ಮೆ ತಮ್ಮ ಐದು ವರ್ಷದ ಮೊಮ್ಮಗನನ್ನು ಪರೀಕ್ಷೆ ಮಾಡಬೇಕೆಂದು ಅಜ್ಜನ ಮನಸ್ಸಿನಲ್ಲಿ ಬಂತು. ಅವರು ಕೇಳಿದರು, ''ಮಗೂ, ಗಣು, ನಿನಗೆ ಒಂದು ಹಂಡೆ ತುಂಬ ಮೊಹರು (ನಾಣ್ಯಗಳನ್ನು)ಕೊಟ್ಟರೆ ಏನು ಮಾಡುವಿ?'' ಬಾಲಕನು ಥಟ್ಟನೆ ಉತ್ತರಿಸಿದನು: ''ಕುರುಡರು, ಕುಂಟರು, ರೋಗಿಗಳು, ಬಡವರು ಮತ್ತು ಭಿಕ್ಷುಕರು ಮೊದಲಾದವರಿಗೆ ಎಲ್ಲವನ್ನೂ ಹಂಚಿಬಿಡುತ್ತೇನೆ.'' ಈ ಉತ್ತರ ಕೇಳಿ ಪಂತರ ಕಣ್ಣಲ್ಲಿ ಆನಂದಾಶ್ರುಗಳು ತುಂಬಿದವು. 'ಶ್ರೀಪಾಂಡುರಂಗನ ಕೃಪೆಯಿಂದಲೇ ಈ ಮಗು ನಮ್ಮ ಮನೆಯಲ್ಲಿ ಜನಿಸಿದೆ. ಖಚಿತವಾಗಿ ಈ ಮಗು ಯಾವುದೋ ಒಬ್ಬ ದೊಡ್ಡ ಯೋಗಭ್ರಷ್ಟನೇ ಇರಬೇಕು' ಎಂದು ಹೇಳಿದರು.

ಬಾಲಕ ಸಹಜವಾದ ತುಂಟತನ ಸ್ವಲ್ಪ ಹೆಚ್ಚೇ ಇದ್ದ ಇವನಿಗೆ ಒಮ್ಮೆ ಅವನ ತಾಯಿಯು, 'ನೀನು ನಿನ್ನ ತುಂಟಾಟ ಬಿಟ್ಟರೆ ನಾನು ಶ್ರೀರಾಮನಾಮವನ್ನು ಲಕ್ಷಗಟ್ಟಲೆ ಜಪ ಮಾಡುತ್ತೇನೆ' ಎಂದರು. ಅಂದಿನಿಂದಲೇ ಬಾಲಕನ ನಡತೆಯಲ್ಲಿ ಬದಲಾವಣೆ ಕಂಡುಬಂದಿತು. ಉಪನಯನವಾದ ಮೇಲಂತೂ ಬಾಲಕನು ಹೆಚ್ಚು ಅಂತರ್ಮುಖಿಯಾದನು, ದೇವರಿಗಾಗಿ ವ್ಯಾಕುಲಚಿತ್ತನಾದನು. ಒಮ್ಮೆ ಒಬ್ಬ ರಾಮದಾಸೀ ಪಂಥದ ಸಾಧುವು ಗೋಂದಾವಲೆಯ ಮಾರುತಿ ಮಂದಿರದಲ್ಲಿ ತಂಗಿದ್ದಾಗ ಎಲ್ಲ ಬೈರಾಗಿಗಳನ್ನೂ ಕೇಳುವಂತೆ,'ನಿಮಗೆ ದೇವರ ದರ್ಶನವಾಗಿರುವುದೇ?' ಎಂದು ಈತ ಕೇಳಿದಾಗ ಆ ರಾಮದಾಸಿಯು, 'ಇಲ್ಲ ಮಗೂ, ಸದ್ಗುರುವಿನ ಹೊರತು ಜೀವದ ತಳಮಳ ಶಾಂತವಾಗದು. ಯಾರಾದರೂ ಸಂತರು ಸಿಕ್ಕಾರೆಂದು ನಾನು ಊರೂರು ಅಲೆದಾಡುತ್ತಿದ್ದೇನೆ' ಎಂದರು. ಈ ಉತ್ತರವು ಸುಮಾರು ೧೦-೧೧ ವರ್ಷದ ಗಣಪತಿಯಲ್ಲಿ ಹೊಸ ವಿಚಾರವನ್ನೇ ಹುಟ್ಟು ಹಾಕಿತು. 'ಸದ್ಗುರುವಿನ ಹೊರತು ದೇವರ ದರ್ಶನವಾಗಲಾರದು. ಆದರೆ ಸದ್ಗುರು ಹೀಗೆ ಹಾದಿಯಲ್ಲಿ ಬಿದ್ದಿರುವನೇ? ನನಗೆ ಭಗವಂತನ

ದರ್ಶನ ಅವಶ್ಯಬೇಕು. ಆದ್ದರಿಂದ ನಾನು ಹೀಗೆ ಮನೆಯಲ್ಲಿ ಸುಮ್ಮನೆ ಕೂತರೆ ಹೇಗೆ? ಸದ್ಗುರುವಿನ ಶೋಧಕ್ಕಾಗಿ ಮನೆಬಿಟ್ಟು ಹೊರಬರಬೇಕು.' ಈ ವಿಚಾರಗಳು ಹೊಳೆಯುತ್ತಲೇ ಗುರುವಿನ ಶೋಧೆಗಾಗಿ ಮನೆಬಿಟ್ಟು ತೆರಳಿದನು.

ಬಾಲಕನು ಕೊಲ್ಹಾಪುರದ ಸಿದ್ಧೇಶ್ವರ ಎಂಬ ರಾಜಗುರುಗಳ ಭೇಟಿಮಾಡಿ ಅಲ್ಲಿರಲು, ಅವನ ಅಜ್ಜ ಲಿಂಗೋಪಂತನು ಅಲ್ಲಿಗೆ ಬಂದು ಅವನನ್ನು ಮತ್ತೆ ಗೋಂದಾವಲೆಗೆ ಕರೆದುಕೊಂಡು ಹೋದನು. ಅಜ್ಜನ ಅಪೇಕ್ಷೆಯಂತೆ ಹನ್ನೊಂದು ವರ್ಷದ ಬಾಲಕನಿಗೆ ಅಂದಿನ ಪದ್ಧತಿಯಂತೆ ಸತ್ಕುಲಪ್ರಸೂತಳಾದ ಕನ್ಯೆಯೊಂದಿಗೆ ವಿವಾಹವೂ ಆಯಿತು. ಲಿಂಗೋಪಂತನು ನವದಂಪತಿಗಳನ್ನು ಪಾಂಡು ರಂಗನ ಚರಣಗಳಲ್ಲಿ ಹಾಕಿ ಮನಃಪೂರ್ವಕವಾಗಿ ಪ್ರಾರ್ಥಿಸಿ ತನ್ನ ಇಹಲೋಕ ವ್ಯಾಪಾರವನ್ನು ತ್ಯಜಿಸಿದನು.

ಆದರೆ ಈ ಎಲ್ಲ ಬಾಹ್ಯ ವಿದ್ಯಮಾನಗಳಿಂದ ಗಣಪತಿಯಲ್ಲಿ ಗುರುವಿನ ಅನ್ವೇಷಣೆಯ ಸಂಕಲ್ಪ ಬದಲಾಗಲೇ ಇಲ್ಲ, ಮತ್ತಷ್ಟು ದೃಢ ಮನಸ್ಸಿನಿಂದ ಗುರುವಿನ ಶೋಧ ಮುಂದುವರೆಯಿತು. ೫-೬ ವರ್ಷಗಳವರೆಗೂ ದಕ್ಷಿಣಭಾಗವೇ ಅಲ್ಲದೆ ಉತ್ತರದ ಕಾಶಿಯವರೆಗೂ ಸುತ್ತಾಡಿ ಮಾರ್ಗದಲ್ಲಿ ಅನೇಕ ಸಾಧುಸಂತರನ್ನು, ಬೈರಾಗಿಗಳನ್ನು, ಅವಧೂತರನ್ನು ಕಂಡನು. ಕೊನೆಗೆ ೧೮೬೨ರಲ್ಲಿ ಒಬ್ಬ ಸಮರ್ಥ ಸಂಪ್ರದಾಯದ ಸಾಧುವಿನ ನಿರ್ದೇಶನದಂತೆ, ಏಳೆಗಾಂವ್‌ನ ಸಿದ್ಧಪುರುಷ ತುಕಾರಾಮ ಚೈತನ್ಯರನ್ನು ಕಾಣಲು ಹೊರಟನು. ತುಕಾರಾಮ ಚೈತನ್ಯರನ್ನು ತುಕಾಮಾಯಿ ಎಂದೂ ಕರೆಯುತ್ತಿದ್ದರು. ತಮ್ಮ ಬಳಿ ಶ್ರೇಷ್ಠನಾದ ಸಾಧಕ ಅಧಿಕಾರಿಯೊಬ್ಬ ಬರುವವನಿದ್ದಾನೆ ಎಂದು ಅವರು ತಮ್ಮ ಶಿಷ್ಯರ ಬಳಿ ಹೇಳುತ್ತಿರುವಂತೆಯೇ ತಾರುಣ್ಯದ ಹೊಸ್ತಿಲಿನಲ್ಲಿದ್ದ ಗಣಪತಿ ಅಲ್ಲಿ ತಲುಪಿದನು. ತುಕಾಮಾಯಿಯವರಲ್ಲಿ ಶಿಷ್ಯವೃತ್ತಿ ಅಷ್ಟೇನೂ ಸುಲಭವಾಗಿರಲಿಲ್ಲ. ಜ್ಞಾನಭಿಕ್ಷೆಗಾಗಿ ಬಂದ ಈ ಯುವಕನನ್ನು ವಿಧವಿಧವಾದ ರೀತಿಯಲ್ಲಿ ಪರೀಕ್ಷಿಸಿ ಕೊನೆಗೆ ರಾಮನವಮಿಯ ದಿವಸ ಅವನನ್ನು ಕೂರಿಸಿಕೊಂಡು, 'ನಾನು ಇಷ್ಟು ದಿವಸ ಬಹಳ ಕಷ್ಟ ಕೊಟ್ಟೆನು. ಆದರೆ ಈ ಹಿಂದೆ ವಸಿಷ್ಠರು ರಾಮಚಂದ್ರನಿಗೆ ಏನನ್ನು ಕೊಟ್ಟರೋ ಅದನ್ನೇ ನಾನು ನಿನಗೆ ಈ ಕ್ಷಣ ಕೊಡುತ್ತೇನೆ' ಹೀಗೆ ಹೇಳಿ ಆ ತರುಣನ ತಲೆಯಮೇಲೆ ತುಕಾಮಾಯಿಯವರು ಕೈ ಇಟ್ಟರು. ಕೂಡಲೇ ಆ ತರುಣನು ಸಮಾಧಿಯಲ್ಲಿ ಮುಳುಗಿದನು. ಬಹಳ ಹೊತ್ತಿನ ನಂತರ ಸಮಾಧಿ ಇಳಿದ ನಂತರ 'ಬ್ರಹ್ಮಚೈತನ್ಯ' ಎಂದು ಹೆಸರಿಟ್ಟು 'ಶ್ರೀರಾಮ ಜಯ ರಾಮ ಜಯ ಜಯ ರಾಮ' ಎಂಬ ತ್ರಯೋದಶ ಅಕ್ಷರ ಮಂತ್ರವನ್ನು ಜಪಿಸಿ ರಾಮೋಪಾಸನೆ ಮಾಡು ಎಂದು ಹೇಳಿ ಬ್ರಹ್ಮಚೈತನ್ಯರಿಗೆ ರಾಮದಾಸೀ ದೀಕ್ಷೆಯನ್ನು ಕೊಟ್ಟು ಅನುಗ್ರಹ ಕೊಡುವ ಅಧಿಕಾರವನ್ನೂ ದಯಪಾಲಿಸಿದರು. ಒಂದು ದಿನ ತುಕಾಮಾಯಿಯವರು ಬ್ರಹ್ಮಚೈತನ್ಯರಿಗೆ, 'ಮಗು, ಆತ್ಮಜ್ಞಾನ ಆಗಿದ್ದರೂ ಸಹ ಅದು ಚೆನ್ನಾಗಿ ಮೈಯಲ್ಲಿ ಅರಗಬೇಕು. ಆತ್ಮಜ್ಞಾನವು ಜೀರ್ಣವಾಗಬೇಕಾದರೆ ಏಕಾಂತದಲ್ಲಿ ಆಳವಾಗಿ ಚಿಂತನ ಮಾಡಬೇಕು. ಆದ್ದರಿಂದ ನೀನು ಹಿಮಾಲಯದ ಕಡೆಗೆ ಹೋಗು. ಅಲ್ಲಿ ಏಕಾಂತವಾಸ ಮಾಡಿ ತೀರ್ಥ ಕ್ಷೇತ್ರಗಳ ದರ್ಶನ ಪಡೆ. ಅದನ್ನು ಮುಗಿಸಿಕೊಂಡು ನಿನ್ನ ತಾಯಿತಂದೆ ಹಾಗೂ ಧರ್ಮಪತ್ನಿಯರ ಭೇಟಿಗೆ ಹೋಗು ಎಂದು ಆಜ್ಞಾಪಿಸಿದರು.

ಗುರುವಿನ ಆಜ್ಞೆಯಂತೆ ಬ್ರಹ್ಮಚೈತನ್ಯರು ನೈಮಿಷಾರಣ್ಯ, ಅಯೋಧ್ಯೆ, ಕಾಶಿ, ಹಿಮಾಲಯ ಮುಂತಾದ ಅನೇಕ ತೀರ್ಥಗಳನ್ನು ದರ್ಶಿಸಿ ಕೊನೆಗೆ ಸಜ್ಜನಗಡಕ್ಕೆ ಬಂದು ಗೋಂದಾವಲೆಗೆ ೧೮೭೫ರಲ್ಲಿ ಹಿಂತಿರುಗಿದರು.

ಇಲ್ಲಿಂದ ಮುಂದೆ ಅವರ ಬದುಕಿನಲ್ಲಿ ನಡೆದ ಪ್ರತಿಯೊಂದು ಘಟನೆಯಲ್ಲಿಯೂ ದೈವದ ಮಹಿಮೆಯನ್ನು ತಮ್ಮಲ್ಲಿಗೆ ಬಂದವರಿಗೆ ಅನೇಕ ರೀತಿಯಲ್ಲಿ ಮನದಟ್ಟು ಮಾಡಿಸುತ್ತಿದ್ದರು. ಪ್ರಾಪಂಚಿಕ ಜನರೊಂದಿಗೆ ವ್ಯವಹಾರ ಮಾಡುತ್ತಿದ್ದರೂ ಎಂದೂ ಯಾರ ವಿಷಯದಲ್ಲಿಯೂ ದೈನ್ಯತೆ ಹೊಂದಿರಲಿಲ್ಲ. ಅವರು ತಮ್ಮ ಚರಿತಾರ್ಥವನ್ನು ಸ್ವತಂತ್ರವಾಗಿಟ್ಟುಕೊಂಡಿದ್ದರು. ಅವರ ಮನೆತನದಲ್ಲಿ ಎಂದೂ ದ್ರವ್ಯಕ್ಕೆ ಕೊರತೆ ಇರದಿದ್ದರಿಂದ ಎಂದೂ ಯಾರಲ್ಲೂ ಕೈಚಾಚಲಿಲ್ಲ. ಹೀಗಾಗಿ ಲೋಕಸಂಗ್ರಹದ ವಿಷಯದಲ್ಲಿ ತಮ್ಮದೇ ಆದ ಸ್ವತಂತ್ರ ಅಭಿಪ್ರಾಯವನ್ನು ಇಟ್ಟುಕೊಂಡಿದ್ದರು.

ಶ್ರೀ ಬ್ರಹ್ಮಚೈತನ್ಯ ಮಹಾರಾಜರು ಜನಾನುರಾಗಿಗಳಾಗಿದ್ದರು. ಅವರು ಹೇಳುತ್ತಿದ್ದರು : ''ಯಾರು ಜನರಿಗೆ ಸೇರುತ್ತಾರೋ ಅವರು ಭಗವಂತನಿಗೆ ಸೇರುತ್ತಾರೆ. ಜನಾನುರಾಗಿಯಾಗಿರುವುದೆಂದರೆ ನಿಸ್ವಾರ್ಥಿಗಳಾಗಿರುವುದು ಎಂದರ್ಥ. ನಾವು ನಮಗಾಗಿ ಏನು ಮಾಡುತ್ತೇವೆಯೋ ಅದನ್ನು ಎಲ್ಲರಿಗಾಗಿ ಮಾಡುವುದು ಭಗವಂತನಿಗೆ ಪ್ರಿಯವಾಗುತ್ತದೆ. ನಾವು ನಮ್ಮ ಮಟ್ಟಿಗೆ ನೋಡದೆ ಸರ್ವತ್ರ ಭಗವಂತನೇ ಇರುತ್ತಾನೆ ಎಂದು ನೋಡಬೇಕು. ಜಗತ್ತನ್ನು ಮನುಷ್ಯನನ್ನು ಪ್ರೀತಿಸಲು ನಾವು ಧನಿಕರಾಗಿರಬೇಕು ಎಂದೇನೂ ಇಲ್ಲ. ಇದನ್ನು ನಾನು ನನ್ನ ಅನುಭವದಿಂದಲೇ ಹೇಳುತ್ತಿರುವೆ... ನನ್ನ ಜೀವನದಲ್ಲಿ ಪಾಲಿಸಿಕೊಂಡು ಬಂದ ನೀತಿಯೆಂದರೆ ಎಂದೂ ಇತರರ ಅಂತಃಕರಣವನ್ನು ನೋಯಿಸಿಲ್ಲ. ನನ್ನನ್ನು ಭೇಟಿಯಾದವರೆಲ್ಲರನ್ನೂ ನನ್ನವರೆಂದೇ ತಿಳಿದೆನು. . .(ಹಿಂದಿನ ಜನ್ಮದಲ್ಲಿ) ನಾಮ ತೆಗೆದುಕೊಳ್ಳುವ ನನ್ನ ಇಚ್ಛೆಯು ಪೂರ್ಣವಾಗಲಿಲ್ಲವಾದ್ದರಿಂದ ನಾನು ಪುನಃ ಜನ್ಮತಾಳಿ ಬಂದೆನು. ನನಗೆ ನೀವೆಲ್ಲರೂ ರಾಮರೂಪವಾಗಿ ಕಾಣಿಸುತ್ತಿರುವಿರಿ.''

ಶ್ರೀಮಹಾರಾಜರ ಬಾಯಿಂದ ಬಂದ ಪ್ರತಿಯೊಂದು ಶಬ್ದದಲ್ಲಿಯೂ ಮನುಷ್ಯರ ಕಲ್ಯಾಣದ ಕಳಕಳಿಯೇ ಇರುತ್ತಿತ್ತು. ಪ್ರತಿಯೊಬ್ಬ ಮನುಷ್ಯನಲ್ಲಿಯೂ ಭಗವಂತನ ಕಡೆಗೆ ಹೋಗಲು ಉಪಯೋಗವಾಗುವ ಗುಣ ಇದ್ದೇ ಇರುತ್ತದೆ. ಆ ಗುಣದ ಉಪಯೋಗ ಹಾಗೂ ವಿಕಾಸ ಮಾಡಿಕೊಂಡು ಭಗವಂತನ ಕಡೆಗೆ ಹೋಗಬೇಕು ಎನ್ನುತ್ತಿದ್ದ ಅವರು, ಅದನ್ನು ಹೇಗೆ ಸಾಧಿಸಬೇಕು ಎಂಬುದನ್ನು ಪ್ರತಿಯೊಬ್ಬರಿಗೂ ಹೇಳಿಕೊಡುತ್ತಿದ್ದರು.

ಅವರ ಪ್ರತಿಯೊಂದು ಶಬ್ದವೂ ಭಗವಂತನ ಪ್ರೇಮ, ನಾಮದ ನಿಷ್ಠೆ ಹಾಗೂ ಸರ್ವಭೂತಗಳ ಬಗ್ಗೆ ಅನುಕಂಪಗಳಿಂದ ತುಂಬಿ ತುಳುಕಿರುತ್ತಿದ್ದವು. ಭಗವಂತನ ಸಾನ್ನಿಧ್ಯದ ಹೊರತಾಗಿ ಮನುಷ್ಯನಿಗೆ ಜೀವನದಲ್ಲಿ ಸಮಾಧಾನ ಸಿಗಲು ಶಕ್ಯವಿಲ್ಲ. ಭಗವಂತನ ಸಾನ್ನಿಧ್ಯವನ್ನು ಸಾಧಿಸುವುದಕ್ಕಾಗಿ ಅವನ ಅನುಸಂಧಾನದಂತಹ ಬೇರೆ ಮಾರ್ಗವಿಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಭಗವಂತನ ಅನುಸಂಧಾನ ಅಥವಾ ಉಪಾಸನೆ ಮಾಡುವುದಕ್ಕೆ ಅವನ ನಾಮಸ್ಮರಣೆಗಿಂತಲೂ

ಸುಲಭವಾದ ಉಪಾಯವಿಲ್ಲ. ನಾಮದಲ್ಲಿ ಭಗವಂತನೇ ಅವತರಿಸಿರುತ್ತಾನೆ. ಆದ್ದರಿಂದ ಪ್ರತಿಯೊಬ್ಬರೂ ನಾಮವನ್ನೇ ಆಶ್ರಯಿಸಬೇಕು ಎಂಬುದು ಅವರ ಉಪದೇಶದ ಸೂತ್ರವಾಗಿತ್ತು.

ನಾಮವು ಸಾಧನೆಯೂ ಆಗಿರುತ್ತದೆ; ಹಾಗೂ ಸಾಧ್ಯವೂ ಆಗಿರುತ್ತದೆ. ಯಾವ ರೀತಿ ನಮ್ಮತನವು ನಮ್ಮ ಹೆಸರಿನಲ್ಲಿರುತ್ತದೆಯೋ ಅದೇ ರೀತಿ ದೇವರ ದೇವತ್ವವು ಅವನ ನಾಮದಲ್ಲಿರುತ್ತದೆ. ನೀರು ಶರೀರದ ಜೀವನವಾದಂತೆ ನಾಮವು ಮನಸ್ಸಿನ ಜೀವನವಾಗಬೇಕು. ನಾಮ ತೆಗೆದುಕೊಳ್ಳುವುದು ನಿತ್ಯನೇಮವಾಗಬೇಕು. ನಾಮವು ಎಷ್ಟು ಆಳವಾಗಿ ಹೋಗಬೇಕೆಂದರೆ ಪ್ರಾಣದ ಜೊತೆಗೇ ಹೊರಗೆ ಬರಬೇಕು. ಹೋಗುವಾಗ, ಬರುವಾಗ, ಎದ್ದಾಗ, ಕೂತಾಗ, ದಿನನಿತ್ಯದ ಕೆಲಸಗಳಲ್ಲಿ ಒಂದೇ ಸಮನೆ ಸತತ ನಾಮಸ್ಮರಣ ಮಾಡುತ್ತಿರಬೇಕು. ಆಗ ಅದು ಆಳವಾಗಿ ಹೋಗುತ್ತದೆ. ಒಮ್ಮೆ ಆಳದಲ್ಲಿ ಹೋಯಿತೆಂದರೆ, ನಮ್ಮ ಕೆಲಸ ಆಯಿತು. ಆಮೇಲೆ ನಾವು ನಾಮ ತೆಗೆದುಕೊಳ್ಳದಿದ್ದರೂ ಅದು ತನ್ನಷ್ಟಕ್ಕೆ ತಾನೇ ನಡೆಯುತ್ತದೆ. ಅಂತ್ಯ ಸಮಯದಲ್ಲಿ, ಅತ್ಯಂತ ಕೊನೆಗೆ ಹೊರಗೆ ಬರುವ ವಸ್ತುವೆಂದರೆ ಭಗವಂತನ ನಾಮವಾಗಬೇಕು. ನಾಮದಲ್ಲಿಯೇ ಕೊನೆಯ ಶ್ವಾಸ ಹೋಗಬೇಕು ಎನ್ನುತ್ತಿದ್ದರು.

ವೇದಗಳು ಭಗವಂತನ ವರ್ಣನೆ ಮಾಡುತ್ತವೆ. ನಾಮವು ಭಗವಂತನ ಅಸ್ತಿತ್ವವನ್ನು ಪ್ರಕಟಗೊಳಿಸುತ್ತದೆ. ಪ್ರತಿಯೊಂದು ವೇದ ಮಂತ್ರದ ಆರಂಭದಲ್ಲಿ **ಹರಿಃ ಓಂ** ಅಂತ ಇರುವುದು ನಾಮವೇ. ಹೇಗೆ ವೇದಗಳು ಅನಾದಿಯೋ ಹಾಗೆಯೇ ನಾಮವೂ ಅನಾದಿಯಾಗಿರುತ್ತದೆ. ವೇದವು ಅಪೌರುಷೇಯವಿದ್ದಂತೆ ನಾಮವೂ ಅಪೌರುಷೇಯವೇ. ವೇದ ಅನಂತವಿದ್ದಂತೆ ನಾಮವೂ ಅನಂತ. ಪ್ರತ್ಯಕ್ಷ ಶಿವನು ನಾಮ ತೆಗೆದುಕೊಂಡಿದ್ದರಿಂದ ನಾಮವು ಅನಾದಿ ಸಾಧನವಾಗಿದೆ. ಭಗವಂತನ ನಾಮವೇ ಸಚ್ಚಿದಾನಂದ ಸ್ವರೂಪಿಯಾದ ಸದ್ವಸ್ತು ಆಗಿರುತ್ತದೆ. ನಾಮದ ಉಚ್ಚಾರ ಮತ್ತು ಭಗವಂತ ಇವೆರಡೂ ಬೇರೆ ಇರಲು ಶಕ್ಯವೇ ಇಲ್ಲ. ಬಾಯಿಂದ ನಾಮೋಚ್ಚಾರಣೆ ಮಾಡುವವನ ಲಕ್ಷ್ಯವು ಭಗವಂತನ ಕಡೆಗೆ ಇರಲಿ ಅಥವಾ ಇಲ್ಲದೇ ಇರಲಿ ಅದು ಮಾತ್ರ ಸತ್ಕರ್ಮವೇ ಆಗಿರುತ್ತದೆ. ಯಾರು ನಾಮಸ್ಮರಣೆ ಮಾಡುತ್ತಾರೋ ಹಾಗೂ ಅವನ ಅನುಸಂಧಾನದಲ್ಲಿರುತ್ತಾರೋ ಅವರಿಗೆ ಭಗವಂತನ ಜಿಜ್ಞಾಸೆಯು ತಾನಾಗಿಯೇ ನಿರ್ಮಾಣವಾಗುತ್ತದೆ.

ನಾಮಸ್ಮರಣವು ಹೇಗೆ ಮನಸ್ಸಿನ ವಿಕಲ್ಪಗಳನ್ನು ಹತ್ತಿಕ್ಕಲು ನೆರವಾಗುತ್ತದೆ ಎಂಬುದನ್ನು ಶ್ರೀ ಮಹಾರಾಜರು ಹೀಗೆ ವಿವರಿಸುತ್ತಾರೆ: ''ನಾಮ ತೆಗೆದುಕೊಳ್ಳುವಾಗ ಮನಸ್ಸು ವಿಕಲ್ಪಗಳಿಂದ ಬಾಧಿತವಾಗಬಹುದು. ಆದರೆ ತಾಳ್ಮೆಯಿಂದ ನಾಮಸ್ಮರಣೆಯನ್ನು ಮುಂದುವರೆಸಿದ್ದೇ ಆದರೆ ವಿಕಲ್ಪಗಳ ಮೂಲಸ್ಥಾನಕ್ಕೇ ನಾಮದ ಅಗ್ನಿಯು ತಟ್ಟುತ್ತದೆ ಹಾಗೂ ಅವುಗಳ ಉಚ್ಚಾಟನೆಯಾಗುತ್ತದೆ. ಹಾಗೆ ನೋಡಿದರೆ ವಿಕಲ್ಪಗಳು ಹೆಚ್ಚಿನ ಆಸ್ಥೆಯಿಂದ ನಾಮವನ್ನು ತೆಗೆದುಕೊಳ್ಳುವಂತೆ ಪ್ರೇರೇಪಿಸುತ್ತವೆ... ಯೋಗವು ನಾಮಸ್ಮರಣೆಗೆ ಪೋಷಕವಾಗಿರುತ್ತದೆ. ಆದರೆ ನಾಮಸ್ಮರಣೆಯು ಯೋಗವನ್ನು ಮೀರಿ ಇರುತ್ತದೆ. ಎಲ್ಲ ಸಾಧನೆಗಳ ಪರ್ಯವಸಾನವೂ ನಾಮಸ್ಮರಣೆಯಲ್ಲಿಯೇ ಆಗುತ್ತದೆ. .. ಮನಸ್ಸು ಅಂಕೆಗೆ ಬರುವುದಕ್ಕಾಗಿ ಸದ್ಯದ ಪರಿಸ್ಥಿತಿಯಲ್ಲಿ ನಾಮಸ್ಮರಣೆಯ ಹೊರತಾಗಿ ಬೇರೆ ಸಾಧನವೇ ಇಲ್ಲ.'' ಈ 'ಸದ್ಯದ ಪರಿಸ್ಥಿತಿ' ಎಂಬುದನ್ನು ಇನ್ನೊಂದು ಪ್ರಸಂಗದಲ್ಲಿ ವಿವರಿಸುತ್ತಾ, ''ವೈದಿಕ ಕರ್ಮಗಳ ಮೇಲಿನ ಶ್ರದ್ಧೆಯು ಮೊದಲಿನಂತೆ ಜನರಲ್ಲಿ ಉಳಿದಿಲ್ಲ. ಮೇಲಾಗಿ ಉಳಿದ ಸಾಧನಗಳಿಗೆ ಮತ್ತು ವೈದಿಕ ಕರ್ಮಗಳಿಗೆ ಆಹಾರ ವಿಹಾರಗಳ ಬಂಧನಗಳಿರುತ್ತವೆ. ಭಗವಂತನ ನಾಮಕ್ಕೆ ಯಾವ ಬಂಧನಗಳೂ ಇಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಸಂಯಮದ ಬಂಧನಗಳು ಬಿಡುತ್ತ ನಡೆದಿವೆಯಾದ್ದರಿಂದ ಸಂತರು ಕಳವಳಗೊಂಡು 'ನಾಮ ತೆಗೆದುಕೊಳ್ಳಿರಿ' ಎಂದು ಹೇಳಿರುತ್ತಾರೆ '' ಎಂದು ತಿಳಿಸುತ್ತಾರೆ. ನಾಮದ ದಿವ್ಯ ಅನುಭವ ನಮಗಾಗಬೇಕಾದರೆ ''ನಾವು ಪ್ರತಿನಿತ್ಯ ಎದ್ದೊಡನೆ ಭಗವಂತನ ಸ್ಮರಣೆ ಮಾಡುವ ನಿಯಮ ಇಟ್ಟುಕೊಳ್ಳಬೇಕು. ಸ್ನಾನ ಮುಂತಾದುವುಗಳನ್ನು ಸಾಧ್ಯವಾದರೆ ಮಾಡಬೇಕು. ಆದರೆ ಅವುಗಳಿಗಾಗಿಯೇ ತಡೆದು ಕೂಡಬಾರದು. ಭಗವಂತನ ಸ್ಮರಣೆ ಮುಖ್ಯವಾಗಿರುತ್ತದೆ. ಅಖಂಡ ನಾಮಸ್ಮರಣೆಗೆ ಮಡಿಮೈಲಿಗೆಯ ಬಂಧನವಿರುವುದಿಲ್ಲ. ಅಖಂಡ ಸ್ಮರಣೆಯೇ ಮಡಿಯಾಗಿರುತ್ತದೆ.''

ಕಲಿಯುಗದಲ್ಲಿ ಚಿತ್ತಶುದ್ಧಿಯನ್ನು ನಾಮಸ್ಮರಣೆಯಿಂದಲೇ ಸಾಧಿಸಬಹುದೆಂಬುದನ್ನು ತಿಳಿಸುತ್ತಾ, ''ಚಿತ್ತಶುದ್ಧಿಯ ಸಲುವಾಗಿ ನಮ್ಮ ಪಾಲಿಗೆ ಬಂದಿರುವ ಕರ್ಮಗಳ ಸಂಗಡವೇ ಭಗವಂತನ ನಾಮವನ್ನು ತೆಗೆದುಕೊಳ್ಳಬೇಕು. ಶಾಸ್ತ್ರಗಳಲ್ಲಿ ಹೀಗೆ ಹೇಳಿದೆ: ಕೃತಯುಗದಲ್ಲಿ ಧ್ಯಾನದಿಂದ ತ್ರೇತಾಯುಗದಲ್ಲಿ ಹವನದಿಂದ ದ್ವಾಪರಯುಗದಲ್ಲಿ ದೇವತಾರ್ಚನೆಯಿಂದ ಭಗವಂತನ ಪ್ರಾಪ್ತಿಯು ಆಗುತ್ತದೆ. ಆದರೆ ಕಲಿಯುಗದಲ್ಲಿ ಇವು ಯಾವುವೂ ಸಾಧ್ಯವಿಲ್ಲದ್ದರಿಂದ ಭಗವಂತನ ನಾಮ ತೆಗೆದುಕೊಂಡರೆ ಮನುಷ್ಯನಿಗೆ ಭಗವಂತನ ದರ್ಶನವಾಗುವುದು. ಶಾಸ್ತ್ರದ ಈ ಸಿದ್ಧಾಂತದ ಅನುಭವವನ್ನು ಸಂತರು ಸಾಕ್ಷಾತ್ಕರಿಸಿಕೊಂಡು ಹೀಗೆ ಹೇಳಿದ್ದಾರೆ. ಮೂರೂವರೆ ಕೋಟಿ ಜಪಮಾಡಿದರೆ ಚಿತ್ತಶುದ್ಧಿಯಾಗುತ್ತದೆ.'' (***ಕಲಿಸಂತರಣೋಪನಿಷತ್ತಿ*** ನಿಂದ ಉಲ್ಲೇಖಿಸುತ್ತಾ ಮಹಾರಾಜರು ಈ ರೀತಿ ಹೇಳುತ್ತಾರೆ: **'ಸರ್ವಶ್ರುತಿ ರಹಸ್ಯಗೋಪ್ಯಂ ತತ್ ಶೃಣು.. ಭಗವದಾದಿ ಪುರುಷಸ್ಯ ನಾರಾಯಣಸ್ಯ ನಾಮೋಚ್ಚಾರಣಮಾತ್ರೇಣ ನಿರ್ಧೂತಕಲಿಃ ಭವತಿ । ನಾತಃ ಪರತರೋಪಾಯಃ ಸರ್ವವೇದೇಷು ದೃಶ್ಯತೇ। ನಾಸ್ಯ ವಿಧಿಃ । ಸರ್ವದಾ ಶುಚಿಃ ಅಶುಚಿಃ ವಾ ಪಠನ್ ಕೋಽಪಿ ಸಾಯುಜ್ಯತಾಮೇತಿ । ಯದಾ ಸಾರ್ಧ ತ್ರಿಕೋಟೀರ್ಜಪತಿ ತದಾ ಪೂತೋ ಭವತಿ । ಸದ್ಯೋ ಮುಚ್ಯತೇ ।')**

ನಾಮಸ್ಮರಣೆಯಿಂದ ನಮ್ಮಲ್ಲಿ ಆಗುವ ಆಧ್ಯಾತ್ಮಿಕ ಪರಿವರ್ತನೆ ನಮಗೆ ತಕ್ಷಣವೇ ಗೋಚರವಾಗದಿರಬಹುದು. ಆದರೆ ನಿಧಾನವಾದರೂ ಸಹ ನಮ್ಮ ಅಂತರಂಗದಲ್ಲಿ ಶಾಶ್ವತವಾದ ಬದಲಾವಣೆಯನ್ನು ತರುತ್ತದೆ ಎಂಬುದನ್ನು ತಿಳಿಸುತ್ತಾ ಹೇಳುತ್ತಾರೆ: ''ನಾಮವು ಅತ್ಯಂತ ಮೂಲದಿಂದ ಸುಧಾರಣೆ ಮಾಡುತ್ತದೆ. ನಾಮಸ್ಮರಣೆಯು ಪರಮಾತ್ಮನ ಕಡೆ ಹೋಗುವ ರಾಜಮಾರ್ಗವಾಗಿರುತ್ತದೆ.''

ಬರೇ ನಾಮ ತೆಗೆದುಕೊಂಡರೆ ಭಗವಂತನ ಪ್ರಾಪ್ತಿಯು ಹೇಗೆ ಆಗುವುದು ಎಂಬ ಜಿಜ್ಞಾಸೆಗೆ ಅವರು, ''ಭಗವಂತನು ಕೇವಲ ಜಡ ಅಲ್ಲ, ಆದರೆ ಅವನು ಅತ್ಯಂತ ಸೂಕ್ಷ್ಮ. ಜಡವಸ್ತುವಿನಲ್ಲಿ ಅದರ ರೂಪ ಮತ್ತು ನಾಮಗಳು ಬೇರೆ ಬೇರೆ ಇರುತ್ತದೆ. ಆದರೆ ಭಗವಂತನ

ವಿಷಯದಲ್ಲಿ ಎರಡೂ ಒಂದೇ ಇರುತ್ತದೆ. ರೂಪವು ಭಗವಂತನ ಜಡ ಗುರುತು, ಆದರೆ ನಾಮವು ಅವನ ಸೂಕ್ಷ್ಮ ಗುರುತು – ಅವನ ನಾಮವನ್ನು ತೆಗೆದುಕೊಂಡ ಕೂಡಲೆ ಅವನ ಲೀಲೆಯು ನೆನಪಾಗುತ್ತವೆ. ಆತನ ನಾಮವನ್ನು ಉಚ್ಚರಿಸಿದ ಮಾತ್ರಕ್ಕೆ ನಮ್ಮ ಭಾವನೆಗಳು ಉಕ್ಕೇರಿ ಬರುತ್ತವೆ.. ನಮ್ಮ ಜೀವನದ ಸಮಯವು ಇಷ್ಟು ಕಡಿಮೆ ಇರುತ್ತದೆ. ಹೀಗಿರುವಾಗ ನಾವು ನಮ್ಮ ಪ್ರಸಿದ್ಧಿಯ ಅಪೇಕ್ಷೆ ಮಾಡುವುದಾಗಲೀ, ಅಥವಾ ಅದಕ್ಕಾಗಿಯೇ ಪ್ರಯತ್ನ ಮಾಡುವುದಾಗಲೀ ಮೂರ್ಖತನವೇ ಆದೀತು'' ಎಂದು ಹೇಳುತ್ತಿದ್ದರು.

ಶ್ರೀಬ್ರಹ್ಮಚೈತನ್ಯ ಮಹಾರಾಜರ ಮಾತು, ಕ್ರಿಯೆಗಳೆಲ್ಲಾ ತಮ್ಮ ಬಳಿ ಬಂದವರೆಲ್ಲರಲ್ಲಿಯೂ ಭಗವಂತನ ನಾಮಸ್ಮರಣೆಯನ್ನು ಕುರಿತ ಜಾಗೃತಿಯನ್ನುಂಟುಮಾಡುವುದಾಗಿತ್ತು. ಶ್ರೀ ಮಹಾರಾಜರು ಯಾವುದೇ ಗ್ರಂಥರಚನೆ ಮಾಡಲಿಲ್ಲ. ಆದರೂ ಪ್ರಸಂಗಾನುಸಾರ 'ಪ್ರವಚನ' ಮಾಡುತ್ತಿದ್ದರು. ನಾಮಸ್ಮರಣೆ ಹಾಗೂ ಭಗವದ್ಭಕ್ತಿಗಳೇ ಪ್ರಧಾನ ವಿಷಯಗಳಾಗಿದ್ದ ಈ ಪ್ರವಚನಗಳಲ್ಲಿ ಸಾಮಾನ್ಯ ಪ್ರಾಪಂಚಿಕ ಮನುಷ್ಯನು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಎಲ್ಲರಿಗೂ ತಿಳಿಯುವಂತಹ ಸರಳ ಭಾಷೆಯಲ್ಲಿ ಹಾಗೂ ದಿನನಿತ್ಯದ ಉದಾಹರಣೆಗಳೊಂದಿಗೆ ಹೇಳುವುದನ್ನು ಕೇಳಿದರೆ, ಎಂಥ ಮನುಷ್ಯನಿಗೂ 'ಭಗವಂತನನ್ನು ಕಾಣಲು ಸಾಧ್ಯ' ಎಂಬ ವಿಶ್ವಾಸ ಮೂಡುತ್ತಿತ್ತು. ಶ್ರೀಮಹಾರಾಜರು ತಮ್ಮ ಜೀವನದಿಂದಲೇ ಜನರಿಗೆ ಮೇಲ್ಪಂಕ್ತಿ ಹಾಕಿಕೊಟ್ಟರು. 'ನಾಮವನ್ನು ತಕ್ಕೊಳ್ಳಿ' ಎಂಬುದನ್ನು ಬಂದವರೆಲ್ಲರಿಗೂ ಕಳಕಳಿಯಿಂದ ಹೇಳುತ್ತಿದ್ದರು. ತೀರ್ಥಕ್ಷೇತ್ರಗಳಲ್ಲಿ ಪಂಡರಾಪುರದ ಮೇಲೆ ವಿಶೇಷ ಪ್ರೇಮ. ಎಷ್ಟೇ ಆಗಲಿ ಪಂಡರಾಪುರಕ್ಕೆ ನಾಮದ ಸಂತೆ ಎಂದೇ ಹೆಗ್ಗಳಿಕೆ ಇದೆ. **'ಪಂಡರೀ ನಾಮಾಚಾ ಬಜ್ಹಾರ್ । ನಾಮ ಹಿ ಘೇತಾ ನಾಮ ಹಿ ಲೇತಾ ಹೋತೊ ಕುಲ ಉದ್ಧಾರ್ ।'**

೧೯೧೩ರಲ್ಲಿ ಗೋಂದಾವಲೆಯಲ್ಲಿ ಆದ ರಾಮ ನವಮಿ ಉತ್ಸವವೇ ಶ್ರೀ ಬ್ರಹ್ಮಚೈತನ್ಯ ಮಹಾರಾಜರ ಜೀವನ ದಲ್ಲಿಯ ಕೊನೆಯ ರಾಮೋತ್ಸವವಾಗಿರುತ್ತದೆ. ಒಂಬತ್ತು ದಿನಗಳ ವರೆಗೆ ಅಹೋರಾತ್ರಿ ಅಖಂಡ ನಾಮಸ್ಮರಣೆ ನಡೆದಿತ್ತು. ಸುಮಾರು ಐದುಸಾವಿರ ಜನರು ಗೋಂದಾವಲೆಯಲ್ಲಿ ನೆರೆದಿದ್ದರು. ಕೊನೆಯದಿನ ನಮಸ್ಕಾರ ಮಾಡಲು ಬರುವ ಪ್ರತಿಯೊಬ್ಬ ಮನುಷ್ಯನ ಬೆನ್ನಮೇಲೆ ಕೈಯಾಡಿಸಿ ಶ್ರೀಮಹಾರಾಜರು ಅವನಿಗೆ, ''ಮಗೂ ಭಗವಂತನು ನಮ್ಮನ್ನು ಪ್ರಪಂಚದಲ್ಲಿ ಯಾವ ಪರಿಸ್ಥಿತಿಯಲ್ಲಿ ಇಟ್ಟಿರುತ್ತಾನೋ ಅದರಲ್ಲಿ ಸಮಾಧಾನ ಹೊಂದಬೇಕು. ಹಾಗೂ ಅವನ ನಾಮವನ್ನು ಎಂದೂ ಮರೆಯಬಾರದು. ಯಾರು ನಾಮ ತೆಗೆದುಕೊಳ್ಳುತ್ತಾರೋ, ಅವರ ಹಿಂದೆ ದೇವರು ನಿಂತೇ ಇರು ತ್ತಾನೆ'' ಎಂದು ಆಶೀರ್ವದಿಸಿದರು.

ಸಿದ್ಧಾಸನ ಹಾಕಿ ಕಣ್ಣು ಮುಚ್ಚಿ ಕೂತ ಶ್ರೀಮಹಾರಾಜರು ಯೋಗಿಯಂತೆ ಕಾಣುತ್ತಿದ್ದರು. ನಂತರ ಶ್ರೀರಾಮನ ಮುಂದೆ ಸಾಷ್ಟಾಂಗ ನಮಸ್ಕಾರ ಹಾಕಿದರು ಮತ್ತು 'ನನ್ನ ಜನರನ್ನು ಸಂಭಾಳಿಸು' ಎಂದು ಪ್ರಾರ್ಥಿಸಿದರು. ಹತ್ತಿರವೇ ಇದ್ದ ಭಕ್ತನೊಬ್ಬನು ನಮಸ್ಕರಿಸಿದಾಗ ಅವನ ತಲೆಯ ಮೇಲೆ ಕೈ ಇಟ್ಟು ಪ್ರೇಮದಿಂದ ನುಡಿದರು: ''ಎಲ್ಲಿ ನಾಮವೋ ಅಲ್ಲಿ ನನ್ನ ಪ್ರಾಣ!'' ಎನ್ನುತ್ತಾ ಅಲ್ಲಿದ್ದವರನ್ನೆಲ್ಲಾ ಪ್ರೇಮ ದೃಷ್ಟಿಯಿಂದ ನೋಡುತ್ತಾ ಕಣ್ಣು ಮುಚ್ಚಿದರು. ಜೋರಾಗಿ ಬರುತ್ತಿದ್ದ ಶ್ವಾಸವು ಭಕ್ತಾದಿಗಳಲ್ಲಿ ಕಳವಳವನ್ನುಂಟುಮಾಡಿತು. ಸ್ವಲ್ಪ ಸಮಯ ವಾದ ನಂತರ ಮಹಾರಾಜರು ದೇಹವನ್ನು ಬಿಟ್ಟಿರುವುದು ಭಕ್ತರ ಗಮನಕ್ಕೆ ಬಂದಿತು. ಋಷಿಪರಂಪರೆಯಲ್ಲಿ ಬಂದ ನಾಮಯೋಗಿ ಪರಮಾತ್ಮನಲ್ಲಿ ಐಕ್ಯವಾಗಿದ್ದರು.



ಭಾವಪೂರಿತರಾಗಿ ಜಪಿಸಿರಿ. ಮಂತ್ರದ ಅರ್ಥವನ್ನು ಅರಿಯಿರಿ. ಆತನ ವ್ಯಾಪಕತೆಯನ್ನು ಎಲ್ಲದರಲ್ಲೂ ಎಲ್ಲೆಡೆಯಲ್ಲೂ ಅನುಭವಿಸಿರಿ. ನೀವು ಜಪದ ಮಂತ್ರವನ್ನು ಪುರಶ್ಚರಣೆ ಮಾಡು ವಾಗ ಆತನ ಸಮೀಪಕ್ಕೆ ಸೇರಿರಿ. ಆತನು ನಿಮ್ಮ ಹೃದಯಾಂತ ರಾಳದಲ್ಲಿ ಬೆಳಗುತ್ತಿರುವಂತೆ ಎಣಿಸಿರಿ.

*–ಸ್ವಾಮಿ ಶಿವಾನಂದ (ದಿವ್ಯ ಜೀವನ ಸಂಘ)*

ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ
ಸಲಹುತ್ತ, ಶಿವಶಿವಾ ಎಂದೋದಿಸಯ್ಯ.
ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲಹು
ಕೂಡಲಸಂಗಮದೇವಾ. *–ಬಸವಣ್ಣ*

ನಾರಾಯಣ ನಿನ್ನ ನಾಮದ ಬೀಜವ
ನಾನೆಲ್ಲಿ ಬಿತ್ತಿ ಬೆಳೆಯಲಿ । ನಿನ ನಾಮ
ನಾಲೀಗೆ ಮೇಲೆ ಬೆಳೆದೇನೋ॥ *–ಜಾನಪದ ಹಾಡು*

ಕಿವಿಗೆ ಗಾನವು ಲೇಸು ಕವಿಗೆ ನವರಸ ಲೇಸು
ಭವಬಂಧ ಕಳೆವ ಗುರುಲೇಸು । ಮುಕ್ತಿಗೆ
ಶಿವಮಂತ್ರ ಲೇಸು ಸರ್ವಜ್ಞ ॥

ಎಣಿಸುತಿರ್ಪುದು ಬೆರಳು ಗುಣಿಸುತಿಹುದು ಜಿಹ್ವೆ
ಮನಹೋಗಿ ಹಲರ ನೆನೆದರದು । ಹಾಳೂರ
ಶುನಕನಂತಕ್ಕು ಸರ್ವಜ್ಞ ॥ *–ಸರ್ವಜ್ಞ*

ಯಾವುದೇ ಬಗೆಯಲ್ಲಾಗಲೀ ಶ್ರೀರಾಮಚಂದ್ರನ ನಾಮ ಸ್ಮರಣೆ ಮಾಡುವವನು ಧನ್ಯ. ಅವನನ್ನು ಹೆತ್ತವರು ಧನ್ಯರು. ರಾತ್ರಿ ಹಗಲು ಶ್ರೀರಾಮಚಂದ್ರನ ನಾಮಸ್ಮರಣೆ ಮಾಡು ವವನು ಅಸ್ಪೃಶ್ಯನಾದರೂ ಧನ್ಯನು. ರಾಮನಾಮವನ್ನು ಜಪಿಸದವನು ಉಚ್ಚಕುಲದವನಾದರೇನು ಪ್ರಯೋಜನ? *–ತುಳಸೀದಾಸ*

ನನ್ನ ರಾಮ, ನಮ್ಮ ಪ್ರಾರ್ಥನೆಯ ರಾಮ, ಅಯೋಧ್ಯಾಪತಿ ದಶರಥ ಸುತನಲ್ಲ, ಚಾರಿತ್ರಿಕ ರಾಮನಲ್ಲ. ಅವನು ಸನಾತನನೂ ಅನಾದಿಯೂ ಅದ್ವಿತೀಯೂ ಆಗಿದ್ದಾನೆ. *–ಗಾಂಧೀಜಿ*

# ಜೈನ ದರ್ಶನದಲ್ಲಿ ದೇವ ನಾಮ ಸ್ಮರಣೆ

ಡಾ.ಪ್ರೀತಿ ಶುಭಚಂದ್ರ

**ಜೈ**ನ ಪರಂಪರೆಯ ಪ್ರಕಾರ ಈ ಜಗತ್ತಿಗೆ ಯಾವನೇ ಸೃಷ್ಟಿಕರ್ತನೆಂಬುವವನಿಲ್ಲ. ಅದರ ಪಾಲಕ, ಸಂಹಾರಕನೂ ಇಲ್ಲ. ರಾಗ ದ್ವೇಷಾದಿ ಹದಿನೆಂಟು ದೋಷಗಳಿಲ್ಲದ ಆಪ್ತನನ್ನು ಶ್ರಾವಕವೃಂದ ತನ್ನ ಶ್ರದ್ಧೆ- ಭಕ್ತಿಗಳ ಕೇಂದ್ರವಾಗಿಟ್ಟುಕೊಂಡಿದೆ. ಈ ಆಪ್ತ ಯಾವ ಹೆಸರನ್ನು ಧಾರಣೆ ಮಾಡಿದರೂ ವಿವಾದವಿಲ್ಲವೆನ್ನುತ್ತಾರೆ ಆಚಾರ್ಯ ಉಮಾ ಸ್ವಾಮಿಯವರು:

**ವಿಷ್ಣುಃ ಸ ಏವ ಸ ಬ್ರಹ್ಮಾ ಸ ದೇವಃ ಸ ಮಹೇಶ್ವರಃ ।**
**ಬುದ್ಧಃ ಸ ಏವ ಯಃ ಸರ್ವಸುರಾಸುರಸಮರ್ಚಿತಃ ॥**
**ನಿರ್ಮಲಃ ಸರ್ವವಿತ್ಸಾರ್ವಃ ಪರಮಃ ಪರಮೇಶ್ವರಃ ।**
**ಪರಂಜ್ಯೋತಿರ್ಜಗತ್ಕರ್ತಾ ಶಾಸ್ತಾಪ್ತಃ ಪರಿಗೀಯತೇ ॥**

ಯಾವನು ಹದಿನೆಂಟು ದೋಷಗಳಿಲ್ಲದವನೋ ಅವನೇ ವಿಷ್ಣುವು, ಅವನೇ ಬ್ರಹ್ಮನು, ಅವನೇ ದೇವ, ಅವನೇ ಮಹಾದೇವ, ಅವನೇ ಬುದ್ಧ. ಅವನೇ ಸಮಸ್ತ ದೇವತೆಗಳಿಂದ ಮತ್ತು ಭವನ ವಾಸಿ, ವ್ಯಂತರ ಜ್ಯೋತಿಷ್ಕದೇವರಿಂದ ಪೂಜ್ಯನಾದ – ನಿರ್ಮಲ, ಸರ್ವಜ್ಞ, ಸರ್ವಹಿತಕಾರಿ, ಶ್ರೇಷ್ಠ, ಪರಮೇಶ್ವರ, ಉತ್ತಮ ಜ್ಞಾನಿ, ಮೂರು ಲೋಕದ ಸ್ವಾಮಿ, ಅವನೇ ಉಪದೇಶಕನೂ ಮತ್ತು ದೇವಾಧಿದೇವನಾದ ಆಪ್ತನೆಂದು ಹೇಳಲ್ಪಡುತ್ತಾನೆ.

ಜೈನ ದರ್ಶನದಲ್ಲಿ ಜಿನ, ದೇವ ಎಂದರೆ ಅವನು ಒಂದು ಆದರ್ಶವೇ ಹೊರತು ವರ–ಶಾಪಗಳನ್ನು ನೀಡುವ ಶಕ್ತಿಯಲ್ಲ. ಜಿನನ ನಾಮಸ್ಮರಣೆಯೆಂದರೆ ಅವನ ಗುಣಗಳ ಸ್ಮರಣೆ. ಆ ಗುಣಗಳು ತನಗೂ ದೊರೆಯಲಿ ಎಂಬ ಕಾರಣಕ್ಕಾಗಿ ನಾಮ ಸ್ಮರಣೆ ಮಾಡಲಾಗುತ್ತದೆ.

**ಮೋಕ್ಷಮಾರ್ಗಸ್ಯ ನೇತಾರಂ ಭೇತ್ತಾರಂ ಕರ್ಮಭೂಭೃತಾಂ ।**
**ಜ್ಞಾತಾರಂ ವಿಶ್ವತತ್ತ್ವಾನಾಂ ವಂದೇ ತದ್ಗುಣಲಬ್ಧಯೇ ॥**

ಎಂಬ ಶ್ಲೋಕದಲ್ಲಿ ಜಿನನ ಸ್ಮರಣೆಯೊಂದಿಗೇ ಅವನ ಗುಣಗಳು ತನಗೂ ಲಭಿಸುವಂತಾಗಲಿ ಎಂಬ ಕಾರಣಕ್ಕಾಗಿ ವಂದಿಸುವ ಆದರ್ಶವಿದೆ.

ಇಂದ್ರನಿಂದ ಪೂಜೆ, ಗೌರವಗಳು; ಭುವನವೇ ಹೊಗಳುವಂಥ ಕೀರ್ತಿ; ಹಾಗೂ ಮುಕ್ತಿ ದೊರೆಯುವ ಲಾಭ – ಇವುಗಳು ಜಿನೇಂ ದ್ರನ ಸ್ಮರಣೆ ಹಾಗೂ ಅವನ ಗುಣಗಳ ಸ್ತುತಿಯಿಂದ ತಾವೇ ಬರುತ್ತವೆ. ಜಿನನ ಗುಣಗಳ ಸ್ಮರಣೆಯಿಂದ ದೊರೆಯುವ ಫಲ ಬರಿಯ ಲೌಕಿಕ ನೆಲೆಯಲ್ಲಷ್ಟೇ ನಿಲ್ಲದೆ ಆಧ್ಯಾತ್ಮಿಕ ಆತ್ಯಂತಿಕ ಸುಖದ ಲಾಭ ವನ್ನೂ ಕೊಡುತ್ತದೆ.

ಮಂತ್ರರಾಜ **ಣಮೋಕಾರ ಮಂತ್ರ**ದ ಅರ್ಥ ಮತ್ತು ಪರಿಣಾಮಗಳನ್ನು ಪ್ರತ್ಯೇಕವಾಗಿ ವ್ಯಾಖ್ಯಾನಿಸಲು ಆಗುವುದೇ



**ತಪಸ್ಸು, ಸಾಧನೆ, ಮಂತ್ರಜಪಗಳಿಗೆ ಜೈನಧರ್ಮದಲ್ಲಿ ವಿಶಿಷ್ಟವಾದ ಸ್ಥಾನವಿದೆ. ಪಂಚ ಣಮೋಕಾರವೇ ಮೊದಲಾದ ಮಂತ್ರಗಳು ಜೈನ ತತ್ತ್ವಗಳ ಅವಿಭಾಜ್ಯ ಅಂಗವಾಗಿರುವಂತೆಯೇ, ಧಾರ್ಮಿಕ ಜೀವನದ ಪ್ರಧಾನ ಆಚರಣೆಗಳಾಗಿವೆ ಎಂಬುದನ್ನು ವಿವರಿಸಿರುವ ಲೇಖಕಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ.**

ಇಲ್ಲ. ಪಂಚ ಪರಮೇಷ್ಠಿಗಳ ಸ್ತುತಿ–ನಮನಕ್ಕೆ ಜೈನ ಪರಂಪರೆಯಲ್ಲಿ ಮಹತ್ವದ ಸ್ಥಾನವಿದೆ.

ನಮಗೆಲ್ಲರಿಗೂ ಗುರಿಯ ಬಗ್ಗೆ ಕಲ್ಪನೆ ಇದೆ. ಆದರೆ ಅದನ್ನು ತಲುಪುವ ದಾರಿ ಗೊತ್ತಿಲ್ಲ. ನಮ್ಮ ಹಿಡಿತದಲ್ಲಿ ಕೆಲವು ನಿಷ್ಪತ್ತಿ (conclusions)ಗಳಿವೆ. ಆದರೆ ಅದನ್ನು ಸಾಧ್ಯವಾಗಿಸುವ ಮಾರ್ಗದ ಅರಿವಿಲ್ಲ. ಣಮೋಕಾರ ಮಂತ್ರವೂ ಈ ನಿಷ್ಪತ್ತಿ ಶಿಖರದಂತೆ. ಮಾರ್ಗದ ಅರಿವಿಲ್ಲದಿದ್ದರೆ ಗುರಿ ನಿಷ್ಫಲ. ಶಿಖರವೇರಲು ಮೆಟ್ಟಿಲು, ಏಣಿ ಬೇಕು.

ಹಿಮಾಲಯದ ಶಿಖರಗಳಲ್ಲಿ ಗೌರೀಶಂಕರ ಹೇಗೋ ಹಾಗೆ ಮಾನವ ವ್ಯಕ್ತಿಗಳಲ್ಲಿ ಮಹಾವೀರ. ಗೌರೀಶಂಕರ ಶಿಖರವನ್ನು ನೆಲದಲ್ಲಿ ನಿಂತು ಕತ್ತೆತ್ತಿ ನೋಡಬಹುದು. ಆದರೆ ಶಿಖರವನ್ನು ಹತ್ತಿ, ತಲುಪಲು ದೀರ್ಘ ಶ್ರಮ, ತಯಾರಿ ಬೇಕು. ಮಹಾವೀರರನ್ನೂ ಹಾಗೆಯೇ, ದೂರನಿಂತು ನೋಡಿ ಸ್ಥೂಲ ಪರಿಚಯ ಹೊಂದುವುದು ಸುಲಭ. ಆದರಿದು ಮಹಾವೀರರ ವಾಸ್ತವ ಜ್ಞಾನವನ್ನು ದೊರಕಿಸಿಕೊಡದು. ಮಹಾವೀರ ಹಾಗೂ **ಣಮೋಕಾರಮಂತ್ರ**ವನ್ನು ಸಂಬಂಧಿಸುವ ರೀತಿ ಸ್ವಾರಸ್ಯಕರವಾಗಿದೆ.

ಬಹುದೊಡ್ಡ ಸಂಸ್ಕೃತಿಯ ಅಂತಿಮ ವ್ಯಕ್ತಿ ಮಹಾವೀರ. ಮಹಾವೀರರ ನಂತರ ಆ ಸಭ್ಯತೆ, ಸಂಸ್ಕೃತಿ ಕಣ್ಮರೆ ಯಾಗುತ್ತಾ ಬಂದಿತು. ವ್ಯಕ್ತಿ ಅನೇಕ ಬಾರಿ ಮಹಾವೀರರಂಥ ಶಿಖರವನ್ನು ಕಳೆದುಕೊಳ್ಳುತ್ತಾನೆ. ಶಿಖರವನ್ನು ಕಳೆದುಕೊಳ್ಳುವುದೆಂದರೆ – ಆಧುನಿಕ ನಾಗರಿಕತೆ ಆತ್ಮಚೈತನ್ಯದ ಸ್ವರೂಪ ಸಾಮರ್ಥ್ಯಗಳ ಕಲ್ಪನೆ ಕೂಡ ಮಾಡಿಕೊಳ್ಳಲಾರದಷ್ಟು ಶ್ರದ್ಧೆಯ ಕೇಂದ್ರವನ್ನು ದುರ್ಬಲ ಗೊಳಿಸಿಕೊಂಡಿರುವುದೇ ಆಗಿದೆ. ಚೀನಾ ಮತ್ತು ಟಿಬೆಟ್ ಮಧ್ಯೆ ಬುಕಾನ್ ಪರ್ವತವಿದೆ. ಈ ಪರ್ವತದ ಗುಹೆಯ ಕಲ್ಲುಗಳಲ್ಲಿ ಗ್ರಾಮೋಫೋನ್ ರೆಕಾರ್ಡಿನಲ್ಲಿರುವಂತೆ ಕೊರೆಯಲ್ಪಟ್ಟ ಗೆರೆಗಳಿವೆ. ರಷ್ಯಾದ ವಿಜ್ಞಾನಿಯೊಬ್ಬನ ಪ್ರಕಾರ ಈ ಗೆರೆಗಳಲ್ಲಿ ಸಂಗ್ರಹವಾಗಿರುವ ಧ್ವನಿಯನ್ನು ಕೇಳಿಸಿಕೊಳ್ಳಲು ನಮಗೆ ರೆಕಾರ್ಡರಿನ ಸೂಜಿ ಮೊನೆಯಂಥ ಸಾಧನದ ಅಗತ್ಯವಿದೆ. ಸೃಷ್ಟಿಗೊಂಡ ಯಾವುದೇ ಧ್ವನಿ ಶಕ್ತಿರೂಪದ್ದಾಗಿದ್ದು ನಷ್ಟಗೊಳ್ಳದು. ಆಕಾಶದ ಸೂಕ್ಷ್ಮತಲ್ಪದಲ್ಲಿ ಕೊರೆಯಲ್ಪಟ್ಟ ಗೆರೆಯೊಳಗೆ ಅವು ಸಂಗ್ರಹಗೊಳ್ಳುತ್ತವೆ.

ಈ ಧ್ವನಿ ತರಂಗಗಳಂತೆಯೇ ಪ್ರತಿ ವ್ಯಕ್ತಿಯನ್ನು ಆಭಾ ಮಂಡಲ ಆವರಿಸಿರುತ್ತದೆ. ಪ್ರತಿ ಜೀವಿಯೂ ತನ್ನ ಜೊತೆ ವಿದ್ಯುತ್ ಮಂಡಲ ವನ್ನು ಹೊತ್ತೇ ಚಲಿಸುತ್ತಿರುತ್ತಾನೆ. ಸಾಯುವವ್ಯಕ್ತಿಯ ಆಭಾಮಂಡಲ ಆರು ತಿಂಗಳಿರುವಾಗಲೇ ಕ್ಷೀಣವಾಗುತ್ತದೆ. ವಾಸ್ತವಿಕ ಮೃತ್ಯು ಸಂಭವಿಸಿದ ಮೂರು ದಿನಗಳವರೆಗೂ ಈ ಆಭಾಮಂಡಲವಿದ್ದು, ನಂತರ ಇಲ್ಲವಾಗುತ್ತದೆ. ರಷ್ಯಾದ ಕಿರ್ಲಿಯನ್ನಿನ ವಿಜ್ಞಾನಿ ತಯಾರಿಸಿದ ಅತ್ಯಧಿಕ ವಿದ್ಯುತ್ ಕಂಪಿತ ಛಾಯಾಗ್ರಹಣ (high frequency photography) ಯಂತ್ರವು ಶರೀರದ ಸುತ್ತ ಮುತ್ತಲಿನ ವಿದ್ಯುತ್ ತರಂಗಗಳ ಚಿತ್ರವನ್ನು ಸೆರೆಹಿಡಿದಿದೆ. ಶುದ್ಧ ಭಾವನೆಗಳಿಂದ ವ್ಯಕ್ತಿ ಕೂಡಿದ್ದರೆ ಆತನ ಕೈಯ ಸುತ್ತ ಮುತ್ತಲಿನ ಕಿರಣಗಳು ಸುಂದರವೂ ಲಯಬದ್ಧವೂ ವ್ಯವಸ್ಥಿತವೂ ಆಗಿರುತ್ತವೆ. ಸದ್ಭಾವ, ಮಂಗಲ ಕಾಮನೆಯಿಂದ ಕೂಡಿದ ವ್ಯಕ್ತಿಯ ಕೈಯ ಕುಂಭದೊಳಗಿನ ಜಲವೂ ಗುಣಾತ್ಮಕವಾಗಿ ಪರಿಣಾಮಗೊಳ್ಳುತ್ತದೆ. ಅಂಥ ಸೇಚನದಿಂದ ಅಂಕುರಿತಗೊಂಡ ಬೀಜವೂ ಉತ್ಕೃಷ್ಟ, ಪುಷ್ಪ, ಫಲಗಳನ್ನು ನೀಡುತ್ತದೆ. ಅದೇ ಅಮಂಗಲಭಾವದಿಂದ ಕೂಡಿದ ವ್ಯಕ್ತಿಯ ಕೈಯ ಜಲವು ಅಂಕುರವನ್ನು ನಷ್ಟ ಮಾಡುತ್ತದೆ. ಈ ವ್ಯತ್ಯಾಸವನ್ನಳೆಯಲು ಬಾಹ್ಯ ಉಪಕರಣಗಳಿಲ್ಲ. ಏಕೆಂದರೆ ಇಲ್ಲಿ ಜಲದ ರಾಸಾಯನಿಕ ಬದಲಾವಣೆಯಾಗಿಲ್ಲ. ಆತ್ಮಿಕ ಬದಲಾವಣೆಯಾಗಿದೆ. ವ್ಯಕ್ತಿ ಕರ್ಮವನ್ನು ಮಾಡಲು ಆಭಾಮಂಡಲವಿರಲೇಬೇಕು. ಪಾಪ ವನ್ನು ಮಾಡಲು ಪ್ರೇರಕವಾಗಬಲ್ಲ ಆಭಾಮಂಡಲವಿದ್ದಾಗಲೇ ಪಾಪಕರ್ಮ ಸಾಧ್ಯ. ವಿಶಿಷ್ಟ ರೀತಿಯ ಆಭಾಮಂಡಲವಿಲ್ಲದೆ ಪಾಪವನ್ನು ಯಾವ ಕಳ್ಳ, ಕೊಲೆಗಾರರೂ ಮಾಡಲಾರರು. ಹಾಗಾಗಿ **ಣಮೋಕಾರ ಮಂತ್ರ**, ನೇರವಾಗಿ ಪಾಪವನ್ನು ನಷ್ಟ ಗೊಳಿಸದು. ಣಮೋಕಾರದಿಂದ ವ್ಯಕ್ತಿಯ ಸುತ್ತಲಿನ ವಿದ್ಯುತ್ ಗತಿ ಶಕ್ತಿ ಆವರಣ (electro dynamic field) ನಿರ್ಮಾಮ ಗೊಳ್ಳುತ್ತದೆ. **ಣಮೋಕಾರ ಮಂತ್ರ** ಆಭಾಮಂಡಲವನ್ನು ಹೇಗೆ ಬದಲಿಸುತ್ತದೆ?

ಅದೊಂದು ರಸವಿದ್ಯೆ. ಅವಲೋಹವನ್ನು ಚಿನ್ನವಾಗಿ ಪರಿವರ್ತಿಸುವ ರಸವಿದ್ಯೆಯ ಕುರಿತಂತೆ ಅನೇಕ ಕಥನಗಳು ಜನಜನಿತವಾಗಿವೆ. ಆದರೆ ಗುಣಾತ್ಮಕವಾಗಿ ವ್ಯಕ್ತಿ ಯನ್ನು ಮಾರ್ಪಡಿಸುವ ಆಧ್ಯಾತ್ಮ ರಸವಿದ್ಯೆಯ ರಹಸ್ಯವನ್ನು **ಣಮೋಕಾರ ಮಂತ್ರ**ದ ವ್ಯಾಖ್ಯಾನದಲ್ಲಿ ಓಶೋ ರಜನೀಶ್ ಬಹಿ ರಂಗಗೊಳಿಸುತ್ತಾರೆ.

ನಮ್ಮ ಭಾವ ಬದಲಾದಂತೆಲ್ಲ ನಮ್ಮ ಸುತ್ತಲಿನ ವಿದ್ಯುತ್ ಮಂಡಲವೂ ಬದಲಾಗುತ್ತದೆಂಬುದು ಸೂಕ್ಷ್ಮ ಛಾಯಾಗ್ರಹಣದ ಮೂಲಕ ಸಾಬೀತಾಗಿದೆ. ಕಳ್ಳತನದ ವಿಚಾರ ಬಂದೊಡನೆಯೇ ಆಭಾ ಮಂಡಲವು ಉದಾಸ, ರುಗ್ಣ, ಕೊಲೆಗಡುಕ ಭಾವಗಳ ಬಣ್ಣದಿಂದ ತುಂಬಿಕೊಳ್ಳುತ್ತದೆ. ವಾಸಿಲಿಯೋ ಖಿಮಿಲಿಯೋ ಎಂಬಾತ ಮೆಖಾಲೋವಾ ಎಂಬ ಮಹಿಳೆ ಧ್ಯಾನಸ್ಥಳಾಗಿದ್ದಾಗಿನ ಆಭಾಮಂಡಲದ ಚಿತ್ರಣವನ್ನು ಮಾಡಿದ್ದಾನೆ. ಧ್ಯಾನಸ್ಥ ಸ್ಥಿತಿಯಲ್ಲಿ ಆಕೆಯ ಸುತ್ತಲಿನ ಆಭಾಮಂಡಲ ವ್ಯವಸ್ಥಿತಗೊಂಡು ಏಕಧಾರೆ ಯಾಗಿ ಹರಿಯುತ್ತ ನೆಲೆಗೊಳ್ಳುತ್ತದೆ. ಆಕೆ ಯಾವ ವಸ್ತುವಿನ ಮೇಲೆ ಗಮನ ಕೇಂದ್ರೀಕರಿಸುತ್ತಾಳೋ ಆ ವಸ್ತುವಿನ ಸುತ್ತ ಆ ಆಭಾಮಂಡಲದ ಕಿರಣಗಳು ಕೇಂದ್ರೀಕೃತಗೊಳ್ಳುತ್ತಿದ್ದವು. ಆ ವಸ್ತುವಿನ ಸುತ್ತಲೂ ಸಮುದ್ರದ ಅಲೆಗಳಂತೆ ಆ ಕಿರಣಗಳು ತರಂಗಿತಗೊಳ್ಳುತ್ತಿದ್ದವು. ಈ ತರಂಗಗಳ ಆಘಾತದಿಂದ ವಸ್ತುಗಳ ಚಲನೆಯುಂಟಾಗುತ್ತಿತ್ತು. ವಸ್ತುಗಳನ್ನು ದೂರ, ಹತ್ತಿರ ಚಲಿಸು ವಂತೆ ಮಾಡಬಲ್ಲ ಸಾಮರ್ಥ್ಯ ಮೆಖಾಲೊವಾಗೆ ಇತ್ತು.

ಹೀಗೆ, ನಾಲ್ಕೂ ಕಡೆ ಹರಡಿರುವ ಊರ್ಜಾ ಶಕ್ತಿಯನ್ನು ಮಂತ್ರಗಳ ಮೂಲಕ ಸಂಗ್ರಹಮಾಡಿ, ಅದರಿಂದ ಆ ವ್ಯಕ್ತಿಯ ಮೂಲಭಾವವನ್ನು ಪುನಃಸೃಷ್ಟಿ ಮಾಡಲು ಸಾಧ್ಯ. ವಸ್ತುವನ್ನು ತನ್ನ ಬಳಿ ಸೆಳೆದುಕೊಳ್ಳುವ ಸಮಯದಲ್ಲಿ ಮೆಖಾಲೊವಾಳ ಶರೀರದಿಂದ ಹೊರ ಬರುವ ಊರ್ಜಾಶಕ್ತಿಯನ್ನು ಯಂತ್ರದಿಂದ ಸಂಗ್ರಹಮಾಡಿ ಇಟ್ಟುಕೊಳ್ಳಲಾಗಿತ್ತು. ಆ ಯಂತ್ರವಿಟ್ಟ ಕೊಠಡಿ ಯೊಳಗೆ ಪ್ರವೇಶಿಸಿದವರನ್ನು ಸಹಜವಾಗಿಯೇ ತನ್ನತ್ತ ಆ ಯಂತ್ರವು ಸೆಳೆದುಕೊಳ್ಳುತ್ತಿತ್ತು. ವಸ್ತುಗಳನ್ನು ದೂರ ಕಳುಹಿಸು ತ್ತಿರುವಾಗಿನ ಆಕೆಯ ಊರ್ಜಾಶಕ್ತಿ ಸಂಗ್ರಹಗೊಂಡಿದ್ದರೆ, ಆ ಯಂತ್ರವು ದೂರ ಹೋಗುವಂತೆ ಮನಸ್ಸನ್ನು ಪ್ರೇರಿಸುತ್ತಿತ್ತು. ಹೀಗೆ ಶಬ್ದ, ವಿಚಾರ, ತರಂಗಗಳಲ್ಲಿ ಭಾವವು ಸಂಗ್ರಹಗೊಳ್ಳುತ್ತದೆ, ಹಾಗೂ ಸಮಾವಿಷ್ಟಗೊಳ್ಳುತ್ತದೆ.

**ಣಮೋಕಾರ ಮಂತ್ರ**ವನ್ನೂ ಇದೇ ಮೂಲ ಆಧಾರದಿಂದ ಸಿದ್ಧಪಡಿಸಲಾಗಿದೆ. **ಣಮೋ ಅರಿಹಂತಾಣಂ** – ಅರ್ಹಂತರಿಗೆ ನಮಸ್ಕಾರ ಮಾಡುತ್ತೇನೆ ಎಂಬುದು ಬರೇ ಶಾಬ್ದಿಕ ಅಭಿವ್ಯಕ್ತಿಯಲ್ಲ. ಸರ್ವ ಸಮರ್ಪಣದ ಭಾವವೆಂದು ರಜನೀಶ್ ಹೇಳುತ್ತಾರೆ. ಯಾರು ಶಿಖರವನ್ನು ಹೊಂದಿದ್ದಾರೋ, ಅರಿವನ್ನು ಹೊಂದಿ ದ್ದಾರೋ ಅವರ ಚರಣಕ್ಕೆ ಶಿರವನ್ನಿಡುತ್ತೇನೆಂಬ ಭಾವವೇ ಈ ಮಂತ್ರದ ಸಾಮರ್ಥ್ಯ. ಯಾವ ವ್ಯಕ್ತಿ ತನ್ನನ್ನು ತಾನು ಗೆದ್ದು, ಅರಿತಿದ್ದಾನೋ ಅವನ ಚರಣದಲ್ಲಿ ನಮಿಸುತ್ತೇನೆ ಎಂಬ ಭಾವ ಉದಯಿಸಿದಾಗ ಅಹಂಕಾರವು ನಿರಸನಗೊಳ್ಳುತ್ತದೆ. ಯಾರೆಲ್ಲ

ಅರ್ಹಂತನ ಚರಣದಲ್ಲಿ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೋ ಅವರೆಲ್ಲರ ಶಕ್ತಿಗಳೂ ಅರ್ಹಂತರ ಮಹಾಧಾರೆಯಲ್ಲಿ ವಿಲೀನಗೊಂಡು ಸಂಗ್ರಹಗೊಳ್ಳುತ್ತದೆ. ಅರ್ಹಂ ತರ ಭಾವಮೂಲ ಶಕ್ತಿ ತರಂಗಗಳು ಆಕಾಶದಲ್ಲಿ ನಿರ್ಮಿತವಾದ ಕೊರೆದ ಗೆರೆಗಳಲ್ಲಿ ಸಂಗ್ರಹಿತವಾಗಿವೆ. ಈ ಸಂಗ್ರಹಿತ ತರಂಗಗಳೊಂದಿಗೆ ಶರಣಾಗತರಾದವರ ಶಕ್ತಿ ತರಂಗಗಳು ಸಂಪರ್ಕ ಹೊಂದಿ ಆಘಾತಗೊಳ್ಳುತ್ತವೆ. ಆಗ ಮೋಡಕ್ಕೆ ಮೋಡ ಢಿಕ್ಕಿ ಹೊಡೆದಂತೆ ಶರಣಾಗತರ ಸುತ್ತ ನಾಲ್ಕೂ ಕಡೆ ವರ್ಷಧಾರೆ ಸುರಿಯುತ್ತದೆ. ಇದು ಅಗೋಚರ. ನಾಲ್ಕೂಕಡೆ ದಿವ್ಯತ್ವದ, ಭಗವತ್ವದ ಲೋಕ ನಿರ್ಮಾಣಗೊಳ್ಳುತ್ತದೆ. ಅರ್ಹಂತರ ಭಾವಲೋಕದೊಳಗೆ ನೆಲೆಗೊಂಡ ವ್ಯಕ್ತಿ ಇನ್ನು ಸಾಧಾರಣ ಲೌಕಿಕನಾಗಿ ಉಳಿಯನು. ಸ್ವಯಂನ ಸುತ್ತ ಮುತ್ತಲಿನ ಆಕಾಶ, ಆಭಾಮಂಡಲವನ್ನು ಬದಲಿಸಿಬಿಡಬಲ್ಲ ರಸವಿದ್ಯೆಯಾಗಿ, ಕೀಲಿಕೈಯಾಗಿ **ಣಮೋಕಾರ ಮಹಾಮಂತ್ರ**ವಿದೆ. ರಸವಿದ್ಯೆಯನ್ನು ಆಧ್ಯಾತ್ಮಿಕರೂಪಕವಾಗಿ ಪೂಜ್ಯಪಾದಾಚಾರ್ಯರು ಸ್ವೀಕರಿಸಿದರೆ, ಲೌಕಿಕ ಪ್ರಯೋಜನದ ನೆಲೆಯಲ್ಲಿ ನಾಗಾರ್ಜುನ ಸ್ವೀಕರಿಸಿವೆ. **ಣಮೋಕಾರ ಮಂತ್ರ**ದ ಸ್ಮರಣದಲ್ಲೇ ವ್ಯಕ್ತಿ ಪೂರ್ಣ ಮುಳುಗಿ ಹೋದಾಗ ಆತ ಅದೇ ವ್ಯಕ್ತಿಯಾಗಿ ಉಳಿಯುವುದಿಲ್ಲ.

ಷಟ್ಖಂಡಾಗಮದ ಆದಿ ನಮಸ್ಕಾರಾತ್ಮಕ ಮಂಗಲಸೂತ್ರವೂ ಇದೇ ಆಗಿದೆ:

**ಣಮೋ ಅರಿಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯಿರಿಯಾಣಂ।**
**ಣಮೋ ಉವಜ್ಝಾಯಾಣಂ, ಣಮೋ ಲೋಏ ಸವ್ವಸಾಹೂಣಂ ॥೧॥**

ಎಲ್ಲ ಕರ್ಮಗಳನ್ನು ನಾಶಗೊಳಿಸಿರುವ ಅರ್ಹಂತರಿಗೆ ಪ್ರಥಮ ನಮನಗಳು ಸಲ್ಲುತ್ತವೆ. ತನ್ನೊಳಗಿನ ಕಾಮ, ಕ್ರೋಧ, ಲೋಭ, ಮೋಹ, ಅಹಂಕಾರ, ಅಜ್ಞಾನಗಳ ವಿರುದ್ಧದ ಹೋರಾಟವು ಅರ್ಹಂತರಲ್ಲಿ ಮುಕ್ತಾಯಗೊಂಡಿದೆ. ಇನ್ನು ಹೋರಾಡಬೇಕಾದುದೇನೂ ಇಲ್ಲ. ಹಾಗಾಗಿ ನಿರ್ದ್ವಂದ್ವ ಅಸ್ತಿತ್ವ ನೆಲೆಗೊಂಡಿದೆ. ಅರ್ಹಂತ ಸ್ಥಿತಿ ಶಿಖರಸದೃಶವಾದುದು. ಶಿಖರವೇರಿದ ನಂತರ ಮುಂದೆ ಯಾತ್ರೆ ಇಲ್ಲ. ಅದೇ ಕೊನೆಯ ನಿಲ್ದಾಣ. ಇಲ್ಲಿ ಪಡೆದುಕೊಳ್ಳಬೇಕಾದುದೇನೂ ಇಲ್ಲ. ತ್ಯಜಿಸಬೇಕಾದುದೂ ಏನಿಲ್ಲ. ಎಲ್ಲವೂ ಸಮಾಪ್ತಗೊಂಡ ಶುದ್ಧ ಅಸ್ತಿತ್ವ ಮಾತ್ರವಿದೆ.

ಯಾವ ವ್ಯಕ್ತಿಯ ಹೆಸರನ್ನೂ ಈ ಮಹಾಮಂತ್ರ ಹೇಳದಿರುವುದೇ ಒಂದು ಅದ್ಭುತ. ಅರ್ಹಂತರು ಜೈನಪರಂಪರೆಯಲ್ಲಿ ಮಾತ್ರವಲ್ಲ, ಎಲ್ಲ ಪರಂಪರೆಯಲ್ಲಿಯೂ ಇದ್ದಾರೆ ಎಂಬುದನ್ನು ಜೈನ ಪರಂಪರೆ ಸ್ವೀಕರಿಸಿದೆ. ವ್ಯಕ್ತಿಗಿಂತ ಶಕ್ತಿಯನ್ನು ಕುರಿತಂತೆ ಈ ಮಂತ್ರದ ಮುಖೇನ ಧ್ಯಾನಿಸಲಾಗುತ್ತದೆ. ಮಹಾವೀರನ ಮೇಲೆ ಪ್ರೇಮವಿದ್ದವರು ಅರ್ಹಂತರಿಗೆ ನಮಸ್ಕಾರ ಎಂದರೆ ಮಹಾವೀರರಿಗೆ ನಮಸ್ಕಾರವೆಂದಾಗುತ್ತದೆ. ರಾಮನ ಮೇಲೆ ಪ್ರೇಮವಿದ್ದವರು ಅರಿಹಂತನಿಗೆ ನಮಸ್ಕಾರವೆಂದರೆ ರಾಮನಿಗೆ ನಮಸ್ಕಾರವೆಂದಾಗುತ್ತದೆ. ಹಾಗಾಗಿ ಈ ನಮಸ್ಕಾರ ಬೃಹತ್ ರೂಪದ್ದು, ವಿರಾಟ್ ಸ್ವರೂಪದ್ದು. ಇಷ್ಟು ಸರ್ವಾಂಗೀಣವಾದ ವ್ಯಾಪಕವೆನಿಸಬಹುದಾದ ಮಹಾಮಂತ್ರ ಬೇರೆ ಯಾವ ಪರಂಪರೆಯಲ್ಲಿಯೂ ಇಲ್ಲ. ಯಾರೆಲ್ಲರ ಅಂತಿಮಗುರಿ ಸಾಧಿತಗೊಂಡಿದೆಯೋ ಅವರೆಲ್ಲರಿಗೂ ನಮಸ್ಕಾರವೆಂದಾಗುತ್ತದೆ. ಆ ಅಂತಿಮ ಗುರಿಗೆ ನಮಸ್ಕಾರವೆಂದಾಗುತ್ತದೆ.

ಈ ಜಗತ್ತಿನಲ್ಲಿ ಶ್ರೇಷ್ಠವಾದ ಅವಸ್ಥೆಯನ್ನು ನೀತಿಮಾರ್ಗದಲ್ಲಿ ವಿವರಿಸಲಾಗುತ್ತದೆ. ವಿಧಾಯಕ ಶಬ್ದದಲ್ಲಿ ಅದು ಪ್ರಕಟಗೊಳ್ಳುವುದಿಲ್ಲ. ಏಕೆಂದರೆ ವಿಧಾಯಕ (+ve) ಶಬ್ದಗಳಲ್ಲಿ ನಿರ್ದಿಷ್ಟ ಸೀಮೆ ಇರುತ್ತದೆ. ಆದರೆ ನಿಷೇಧದಲ್ಲಿ ಅದಿರದು. ಯಾರಲ್ಲಿ ಲೋಭವಿಲ್ಲ, ಮೋಹವಿಲ್ಲ, ಕಾಮವಿಲ್ಲ... ಹೀಗೆ ಏನೂ ಇಲ್ಲ ಎನ್ನುವುದು ಅಗಣಿತ ಅನಂತದವರೆಗೂ ಸಾಗುತ್ತದೆ. ಇಲ್ಲ , ಅಲ್ಲ ಎಂಬ ಶಬ್ದಗಳ ಮುಂದೆ ಇದೆ ಎಂಬುದು ಸೀಮೆಯುಳ್ಳ ಚಿಕ್ಕ ಶಬ್ದ. ಅಲ್ಲವೆಂಬುದು ವಿರಾಟ್. ಯಾರಲ್ಲಿ ಅಂತರ್‌ದ್ವಂದ್ವ ಸಮಾಪ್ತಗೊಂಡು ಶತ್ರುಗಳೆಲ್ಲ ಸಮಾಪ್ತರಾಗಿದ್ದಾರೆಯೋ ಆತನನ್ನು, ಅರ್ಹಂತರನ್ನು ಪರಮ ಶಿಖರದಲ್ಲಿ ಸ್ಥಾಪಿಸಲಾಗಿದೆ. **ಅರಿಹಂತ** ಶಬ್ದ ಅತ್ಯಂತ ಅಮೂರ್ತ. ಇದನ್ನು ಹಿಡಿಯಲು ಸಾಧ್ಯವಾಗದೆ ಹೋದಾಗ ಮತ್ತೊಂದು ಶಬ್ದ ಇಟ್ಟುಕೊಳ್ಳಲಾಗಿದೆ. ಅದೇ – **ಣಮೋ ಸಿದ್ಧಾಣಂ.** ಅರಿಹಂತದ ಅರ್ಥವು ಯಾರು ತ್ಯಜಿಸಿದ್ದಾರೋ ಅವರು ಎಂದಾದರೆ, ಯಾರು ಸಿದ್ಧಿಯನ್ನು ಹೊಂದಿದ್ದಾರೋ, ಪಡೆದಿದ್ದಾರೋ ಸಾಧಿಸಿದ್ದಾರೋ ಅವರು ಎಂಬ ಅರ್ಥ '**ಸಿದ್ಧ**' ಪದಕ್ಕಿದೆ.

ಅರ್ಹಂತರ ನಂತರ ನಮನಗೊಳ್ಳುವ ಸಿದ್ಧರೂ ಅರ್ಹಂತರು ತಲುಪುವ ಸಾಧನೆಯ ಶಿಖರಕ್ಕೇ ಬಂದು ತಲುಪಿದವರು. ನಿಷೇಧದ ಮೂಲಕ ಪರಿಚಯಕ್ಕೆ ಬರುವ ಅರ್ಹಂತರದು ಶೂನ್ಯ ಸ್ಥಿತಿ. ಅದರ ನಂತರ ಶಿಖರ ತಲುಪಿದವರು ಎಂಬ ವಿಧಾಯಕ ಅರ್ಥದ ಮೂಲಕ ಸಿದ್ಧರು ಪರಿಚಯಕ್ಕೆ ಬರುತ್ತಾರೆ. ನಿರ್ವಾಣ ಹೊಂದಿದ ಇಬ್ಬರೂ ನಮ್ಮಿಂದ ದೂರವೇ. ಅಪ್ರಕಟಿತ ವೃಕ್ಷವನ್ನು ತನ್ನಲ್ಲಿ ಅಡಗಿಸಿಕೊಂಡ ಬೀಜದಂತೆ ಈ ಸಿದ್ಧರು. ಪದ್ಮನಂದಿ ಮುನಿಗಳ ***ಪಂಚವಿಂಶತಿಕಾ***ದಲ್ಲಿ ಸಿದ್ಧ ಸ್ಥಿತಿಯನ್ನು ಸುಂದರವಾದ ಉಪಮೆಯ ಮೂಲಕ ವಿವರಿಸಲಾಗಿದೆ. ಮೇಣದ ಬೊಂಬೆ ಮಾಡಿ, ಅದರ ಮೇಲೆ ಮಣ್ಣಿನ ಹೊರ ಲೇಪನ ಮಾಡಿ ಬೆಂಕಿಗೊಡ್ಡಿದಾಗ ಮೇಣ ಕರಗಿ ಮಣ್ಣಿನಾಕೃತಿ ಮಾತ್ರ ಉಳಿಯುತ್ತದೆ. ಮೇಣ ಕರಗಿದಲ್ಲಿ ಉಂಟಾದ ಖಾಲಿ ಜಾಗವೇ ಸಿದ್ಧರ ಅವಸ್ಥೆಯನ್ನು ಸೂಚಿಸುತ್ತದೆ. ಅರಿಹಂತ, ಸಿದ್ಧರಿಗೆ ಯಾವ ವಿಶೇಷಣವೂ ಲಗತ್ತಾಗಿಲ್ಲ. ಸಿದ್ಧರು ಮಾತನಾಡರು. ಅರಹಂತರೂ ಮಾತನಾಡುವುದಿಲ್ಲ. ಸಮಸ್ತ ಕರ್ಮಲೇಪವಿಲ್ಲದ ಸಿದ್ಧರಿರುವಾಗ ಅಘಾತಿ ಕರ್ಮಲೇಪಯುಕ್ತರಾದ ಅರ್ಹಂತರಿಗೆ ಏಕೆ ಮೊದಲು ನಮಸ್ಕಾರ? ಎಂಬ ಸಂದೇಹಕ್ಕೆ ***ಷಟ್ಖಂಡಾಗಮ***ದ ಧವಲಾ ವ್ಯಾಖ್ಯಾನ ಹೀಗೆ ಉತ್ತರಿಸುತ್ತದೆ: ಅಧಿಕ ಗುಣವುಳ್ಳ ಸಿದ್ಧರಲ್ಲಿ ಹೆಚ್ಚು ಶ್ರದ್ಧೆಯನ್ನುಂಟುಮಾಡಲು ಅರ್ಹಂತರು ಕಾರಣರು. ಅವರ ಉಪದೇಶದಿಂದಲೇ ಗುಣಾಧಿಕ್ಯವುಳ್ಳ ಸಿದ್ಧರ ಸ್ವರೂಪವೂ ಗೊತ್ತಾಗಿ ಅವರಲ್ಲಿ ವಿಶೇಷ ಭಕ್ತಿ ಶ್ರದ್ಧೆಗಳುಂಟಾಗುವುದು. ಹಾಗಾಗಿ ಉಪಕಾರ ದೃಷ್ಟಿಯಿಂದ ಅರ್ಹಂತರಿಗೆ ಮೊದಲ ನಮಸ್ಕಾರ. ಜೈನ ಶಾಸ್ತ್ರ ಪರಂಪರೆಯು, ರತ್ನತ್ರಯ ಗುಣ ಸತ್ವವು ಪಂಚಪರಮೇಷ್ಠಿಗಳಲ್ಲಿ ಸಮಾನವಾಗಿ

ದ್ದರೂ ಅವು ಪ್ರಕಟಗೊಳ್ಳುವಲ್ಲಿ ಕಲ್ಪಿತವಾದ ಕರ್ಮಾವರಣಗಳ ಕಾರಣ ಗುಣಸ್ಥಾನಗಳ ತರತಮವನ್ನು ಏರ್ಪಡಿಸಿದೆ. ರಜನೀಶ್‌ರ ವ್ಯಾಖ್ಯಾನವು ಈ ಶಾಸ್ತ್ರೀಯ ತಿಳುವಳಿಕೆಯನ್ನು ಪೂರ್ಣ ಪ್ರಮಾಣದಲ್ಲಿ ಅನುಸರಿಸುವುದಿಲ್ಲ. ನೇಮಿಚಂದ್ರಾಚಾರ್ಯರ ದ್ರವ್ಯ ಸಂಗ್ರಹದಲ್ಲಿ ಹೇಳಿರುವಂತೆ ಸಿದ್ಧರು ಎಂಟು ವಿಧದ ಕರ್ಮಗಳಿಂದ ಹುಟ್ಟಿದ ದೇಹವನ್ನು ಹೊಂದಿಲ್ಲ. ವ್ಯವಹಾರ ದೃಷ್ಟಿಯಿಂದ ದೇಹ ಧಾರಿಗಳಾದರೂ ನಿಶ್ಚಯ ನಯಕ್ಕನುಸಾರ ಸಂಪೂರ್ಣ ವಿದೇಹರೇ. ಅರ್ಹಂತರಿಗೂ ಸಪ್ತಧಾತು ರಹಿತ ಪವಿತ್ರ ದೇಹವಿದೆ ಎಂದು ವ್ಯವಹಾರ ನಯವನ್ನನುಸರಿಸಿ ಹೇಳುತ್ತಾರೆ. ಆದರೆ ನಿಶ್ಚಯನಯದಿಂದ ಇವರೂ ಅಶರೀರಿಗಳು. ಜೀವಿಗಳ ಇಂದ್ರಿಯ ಸಂವೇದನೆ ಹಾಗೂ ಜ್ಞಾನಸಾಧ್ಯತೆಗಳನ್ನು ಆಧಾರವಾಗಿಟ್ಟುಕೊಂಡು ಜೀವವಿಕಾಸದ ಲಂಬರೇಖೆಯಲ್ಲಿ (life axis) ಸಿದ್ಧಪದವಿ ತುತ್ತತುದಿಯ ಸ್ಥಾನವನ್ನು ಹೊಂದಿರುವುದಾಗಿ ಕೆ.ವಿ. ಮಾರ್ಡಿಯಾ ಅಭಿಪ್ರಾಯ ಪಡುತ್ತಾರೆ:

''Some form of ascending scores can be connected to the idea of the spiritual advancement of individuals. At the first stage are the saints who are supposed to walk on the spiritual path with single-mindedness. Those at the second stage are those spiritual teachers who have experienced truth. The third are the spiritual masters who practice what they preach, being true masters. The fourth category are the perfect living beings who have conquered their inner enemies. Those in the final category are pure souls (liberated souls) which are a form of absolute energy.''

*(The scientific foundations of Jainism, P.25).*

ಬೀಜದಲ್ಲಡಗಿದ ವೃಕ್ಷದಂತೆ ರಹಸ್ಯವಾದದ್ದರಿಂದ ಅದನ್ನು ಪ್ರಕಟಗೊಳಿಸುವಲ್ಲಿ ಸಿದ್ಧರು ಅನಾಸಕ್ತರು. ಅರ್ಹಂತ ಪದವಿಯನ್ನು ಕೂಡ ಮಾತುಗಳಲ್ಲಿ ಹಿಡಿದಿಡಲಾಗದು. ಮೊದಲಿನ ಈ ಎರಡು ಸ್ಥಾನಗಳಿಗೇರಲು ಏಣಿಯ ಅಗತ್ಯವಿದೆ. ಅತೀತರೆನಿಸುವ ಸಿದ್ಧರು, ಅರ್ಹಂತರನ್ನು ಹಿಡಿಯಲು ಇರುವ ತೊಡಕು ಆಚಾರ್ಯರ ವಿಷಯದಲ್ಲಿ ಕೊಂಚ ಬಗೆಹರಿಯುತ್ತದೆ. ಯಾರು ಅರಿವನ್ನು ಪಡೆದು, ಆಚರಣೆಯಿಂದ ಪ್ರಕಟಗೊಂಡಿದ್ದಾರೋ ಅವರು ಆಚಾರ್ಯರು. ಜ್ಞಾನ ಹಾಗೂ ಆಚರಣೆಗಳು ಒಂದೇ ಆದಂಥ ಅತ್ಯಪೂರ್ವ ಅವಸ್ಥೆ ಆಚಾರ್ಯರದು. ಅರ್ಹಂತ, ಸಿದ್ಧರ ಜ್ಞಾನವೂ ಆಚರಣೆಯೊಂದಿಗೆ ಅಭಿನ್ನ. ಆದರೆ ಅರ್ಹಂತರ ಆಚರಣೆ ನಿರಾಕಾರ, ಶೂನ್ಯ. ಹಾಗಾಗಿ ಅವರನ್ನು ಹಿಡಿಯಲಸಾಧ್ಯ. ಹೀಗೆ ಹಿಡಿಯಬೇಕಾದರೆ ಒಂದು ಚೌಕಟ್ಟು ಬೇಕು. ಹಾಗಾಗಿ ಆಚಾರ್ಯರೊಂದಿಗೆ ನಮಗೊಂದಿಷ್ಟು ನಿಕಟತೆಯ ಅನುಭವವಾಗುತ್ತದೆ.

ಜ್ಞಾನ, ಆಚರಣೆಗಳಲ್ಲಿ ಆಚರಣೆಯನ್ನು ಗುರುತಿಸುವಷ್ಟು ಸುಲಭವಾಗಿ ಜ್ಞಾನದ ಗುರುತು ಆಗದು. ಆಚರಣೆಯ ವಿಷಯದಲ್ಲಿ ದೊಡ್ಡ ಅಪಾಯವೆಂದರೆ, ಒಬ್ಬ ವ್ಯಕ್ತಿ ಲೋಭಿಯಾಗಿದ್ದೂ ನಿರ್ಲೋಭದ ಆಚರಣೆ ಮಾಡಬಲ್ಲ. ಹಿಂಸಾತ್ಮಕನಾಗಿದ್ದೂ ಅಹಿಂಸಕನ ಆಚರಣೆ ಮಾಡಬಲ್ಲ. ಇಲ್ಲಿ ಆಚರಣೆ ಒಂದು ನಟನೆ, ಅಪ್ರಾಮಾಣಿಕ ವಂಚನೆ. ಆದರೆ ಒಬ್ಬ ವ್ಯಕ್ತಿ ಅಹಿಂಸಕನಾಗಿದ್ದರೆ ಅಹಿಂಸೆಯ ಆಚರಣೆಯನ್ನು ಮಾತ್ರ ಮಾಡುತ್ತಾನಲ್ಲದೆ ಹಿಂಸೆಯ ಆಚರಣೆಯಲ್ಲಿ ತೊಡಗಲಾರ.

ಎಲ್ಲಿ ಸೀಮೆಗಳು, ಚೌಕಟ್ಟುಗಳು ಕಾಣಿಸಿಕೊಳ್ಳುತ್ತವೆಯೋ ಆಗಲೇ ನಾವು ಕುರುಡಾಗುವ ಭಯವಿದೆ. ಜ್ಞಾನದ ಸ್ಪರ್ಶವಿಲ್ಲದ ಬರೇ ಆಚರಣೆಯುಳ್ಳವರನ್ನು ಮಹಾನ್ ಆಚಾರ್ಯರೆಂದು ಭ್ರಮಿಸುವ ಅಪಾಯ ಒದಗುತ್ತದೆ. ಯಾರ ಜ್ಞಾನವು ಅವರ ಆಚರಣೆಯೇ ಆಗಿದೆಯೋ ಅವರಿಗೆ ನಮ್ಮ ನಮನಗಳನ್ನು ಸಲ್ಲಿಸುತ್ತೇವೆ ಎಂಬ ಭಾವ ಮಹಾಮಂತ್ರದ್ದು. ಈ ಆಚಾರ್ಯರಿಗೂ ಯಾವುದೇ ವಿಶೇಷಣ ಗಳಿಲ್ಲ. ಜ್ಞಾನ ಹಾಗೂ ಆಚರಣೆಗಳು ಏಕವಾದ ವ್ಯಕ್ತಿ, ಆತ ಆಚಾರ್ಯನಲ್ಲ; ಆತ ಸಿದ್ಧ, ಅರ್ಹಂತನೂ ಆಗಬಲ್ಲ. ಈತ ಆಚರಣೆ ಮೂಲಕ ನಮ್ಮ ಹಿಡಿತಕ್ಕೆ ದೊರಕುತ್ತಾನೆ.

ಸ್ಥೂಲಬುದ್ಧಿಯ ಜನಕ್ಕೆ ಆಚರಣೆಯ ಸೂಕ್ಷ್ಮತೆ ಗೊತ್ತಿಲ್ಲ. ಮಹಾವೀರರ ನಗ್ನತೆ ಇಂಥವರಿಗೆ ಆಚರಣಾಹೀನತೆ ಎನಿಸಿತು. ಊರಿಂದೂರಿಗೆ ಮಹಾವೀರರನ್ನು ಅಟ್ಟಾಡಿಸಿ ಓಡಿಸಲಾಯ್ತು. ಅವರ ಮೇಲೆ ಕಲ್ಲಿನ ಸುರಿಮಳೆಯಾಯ್ತು. ಮಹಾವೀರರ ನಿರ್ದೋಷ ಆಚರಣೆ ಎಷ್ಟು ಸರಳವೆಂದರೆ ಬಚ್ಚಿಡುವಂಥದ್ದೇನೂ ಅವರಲ್ಲಿ ಉಳಿದಿರಲೇ ಇಲ್ಲ. ಅವರ ದೇಹದ ವಿದ್ಯುತ್ ಆಯಸ್ಕಾಂತೀಯ ಕ್ಷೇತ್ರದಲ್ಲಾದ ಬದಲಾವಣೆಯ ಪರಿಣಾಮ ಚರ್ಮ, ಮೂಳೆಗಳ ಭಾರದ ಹೊರೆಯೂ ನೀಗಿ ಹೋಯ್ತು. ಅವರ ದೇಹದಿಂದ ಬಟ್ಟೆಗಳು ತಾವಾಗಿ ಕಳಚಿ ಬಿದ್ದವು. ಆಚರಣೆಯ ಹಾದಿ ಸೂಕ್ಷ್ಮ, ಕಠಿಣ. ಇದರ ಬಗ್ಗೆ ಸಾಮಾನ್ಯರಾದ ನಾವು ನಿರ್ಣಯಗಳನ್ನು ಕೊಡುತ್ತಿರುತ್ತೇವೆ. ಸವಾಲಿನ ಸಂದರ್ಭದಲ್ಲಿ ರಾಜಿಯಾಗಿ ಶವಸಮಾನರಾಗುತ್ತಿರುತ್ತೇವೆ. ಆದರೆ ಜ್ಞಾನವು ಪರಮ ಸ್ವತಂತ್ರ. ಆ ಜ್ಞಾನವೇ ಆಚರಣೆಯನ್ನು ಮಾಡುತ್ತದೆ.

ಉಪಾಧ್ಯಾಯರಲ್ಲಿ ಜ್ಞಾನಮಾತ್ರವಲ್ಲ, ಆಚರಣೆ ಮಾತ್ರವಲ್ಲ, ಉಪದೇಶವೂ ಇದೆ. ಯಾರು ಏನನ್ನು ಅರಿಯುತ್ತಾರೋ ಅರಿತು ಅದರಂತೆ ಬದುಕುತ್ತಾ ಅರಿಯುತ್ತಾರೋ ಅದರಂತೆ ಹೇಳುತ್ತಾರೋ ಅವರೇ ಉಪಾಧ್ಯಾಯರು. ಆಚಾರ್ಯರಿಗೆ ತನ್ನ ಆಚರಣೆಯನ್ನು ಇತರರಿಗೆ ತೋರಿಸುವ ಆವಶ್ಯಕತೆಯಿಲ್ಲ. ಈ ವಿಷಯದಲ್ಲಿ ಅವರು ಮೌನಿ. ಆದರೆ ಉಪಾಧ್ಯಾಯರು ದಯೆಯಿಟ್ಟು ಮಾತನಾಡುತ್ತಾ ತಿಳಿಸುತ್ತಾರೆ. ಹೀಗೆ ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ – ನಾಲ್ಕು ಸುಸ್ಪಷ್ಟ ರೇಖೆಗಳಿವೆ. ಆದರೆ ಜ್ಞಾನಿಗಳು ಸ್ವತಂತ್ರರು. ಅವರನ್ನು ವರ್ಗೀಕರಣದಲ್ಲಿ ನೆಲೆಗೊಳಿಸಲಾಗದು. ಮಂತ್ರವನ್ನು ಈ ನಾಲ್ವರಿಗೇ ಸೀಮಿತಗೊಳಿಸಲಾಗದು. ಲೋಕ, ಕಾಲ ವಿಶೇಷಗಳಲ್ಲಿರುವ ಎಲ್ಲ ಸಾಧುಗಳಿಗೆ ನಮಸ್ಕಾರ

ವನ್ನು ಮಹಾಮಂತ್ರ ಹೇಳುತ್ತದೆ. ಸಾಧುಗಳು ಎಷ್ಟು ಸರಳರೆಂದರೆ, ಉಪದೇಶಿಸಲು ಸಂಕೋಚ ಪಡುವವರೂ ಆಚರಣೆಯನ್ನು ಗುಪ್ತವಾಗಿಟ್ಟುಕೊಳ್ಳುವವರೂ ಆಗಿರಬಲ್ಲರು. ಮೊದಲ ನಾಲ್ವರಲ್ಲಿ ಈ ಸಾಧುಗಳು ಸೇರಿ ಹೋಗಿರಬಹುದು. ಹಾಗೆ ಸೇರಿ ಹೋದ ಸಾಧುಗಳಿಗೆ ನಮ್ಮ ನಮನಗಳು ತಪ್ಪಿ ಹೋಗದಿರಲೆಂದು ಸರ್ವಸಾಧುಗಳಿಗೆ ನಮನಗಳನ್ನು ಸಲ್ಲಿಸಲಾಗಿದೆ.

ಪಂಚಪರಮೇಷ್ಠಿಗಳಿಗೆ ಮಾಡುವ ನಮನದಿಂದ ಅವರಿಗೇನೇನೂ ಲಾಭವಿಲ್ಲ. ಈ ನಮನ ನಮ್ಮನ್ನು ರೂಪಾಂತರಿಸುತ್ತದೆ. ಈ ರೂಪಾಂತರದ ಹಿಂದಿನ ಮನೋವ್ಯಾಪಾರವನ್ನು ಹೀಗೆ ಸ್ಪಷ್ಟೀಕರಿಸಬಹುದು. ನಮನ ಮಾಡುವಲ್ಲಿ ಅಹಂಕಾರವಿದ್ದರೆ ಸಂದೇಹ ಪ್ರಶ್ನೆಗಳು ಏಳುತ್ತವೆ. ಅರ್ಹಂತರ ಮುಂದೆ ನಿಂತು, 'ಅರ್ಹಂತ ಎನ್ನುವವನಿದ್ದಾನೆಯೆ?' ಎಂದು ಪ್ರಶ್ನಿಸಿದ ವ್ಯಕ್ತಿಗಳು ಆತನ ತೀರ್ಥಂಕರತ್ವವನ್ನು ಸುಳ್ಳೆಂದರು. ಆ ಅಧಿಕಾರ, ಹಕ್ಕೂ ಸುಳ್ಳೆಂದರು. ಆದರೂ ಮಹಾವೀರರ ಪ್ರಭಾವದಿಂದ ಆ ಜನ ತಪ್ಪಿಸಿಕೊಳ್ಳಲಾರರು. ಯಾರು ಸಿದ್ಧ, ಯಾರು ಸಿದ್ಧರಲ್ಲ ಎಂಬ ಕಾರಣಕ್ಕೆ ಪಂಚಪರಮೇಷ್ಠಿಗಳು ಮುಖ್ಯರಾಗುತ್ತಾರೆ. ಸಾಧನೆಯ ನಿಜವಾದ ಹಾದಿ ನಮನದಲ್ಲಿದೆ. ಕಲ್ಲು , ಮರ, ಪರ್ವತಗಳಲ್ಲಿಯೂ ನಮಗೆ ಭಗವಂತ ಕಾಣಿಸಬಲ್ಲನಾದರೆ ನಮಗೆ ನಮನ ಉಪಲಬ್ಧವಾಗುತ್ತದೆ. ನಮ್ಮ ತಲೆ ಮಣಿಯಲು ಅಸ್ತಿತ್ವದಲ್ಲಿ ಯಾವುದಾದರೂ ನೆಲೆ ಇದೆಯೇ ಎನ್ನುವುದು ಮುಖ್ಯವಾಗಬೇಕೇ ಹೊರತು ಅಜ್ಞಾನ, ಅಂಧಕಾರದ ಬಗ್ಗೆ ಚಿಂತಿತರಾಗಬೇಕಿಲ್ಲ. ಏಕೆಂದರೆ ಈ ಅಸ್ತಿತ್ವದಲ್ಲಿ ಕತ್ತಲೆ–ಬೆಳಕು, ಜ್ಞಾನ ಅಜ್ಞಾನ, ಇತ್ಯಾದಿ ದ್ವಂದ್ವಗಳ ಬೃಹತ್ ಜಾಲವೇ ಇದೆ. ಹೆಚ್ಚಿನ ಅಜ್ಞಾನವಿದ್ದರೂ ಅಷ್ಟೇ ದೊಡ್ಡ ಜ್ಞಾನವೂ ಇರುತ್ತದೆ ಎಂಬ ತೀವ್ರ ಶ್ರದ್ಧೆಯಿಂದ ಯಾರು ಈ ಐದು ನಮನಗಳನ್ನು ಸಲ್ಲಿಸುತ್ತಾರೋ ಅವರು ಈ **ಣಮೋಕಾರ ಮಂತ್ರ** ಸೂತ್ರದಲ್ಲಿನ ಮಂಗಲದ ಬಗ್ಗೆ ನಿಶ್ಚಿತ ಭಾವವುಳ್ಳವರಾಗಿದ್ದಾರೆ. ಪಂಚಪರಮೇಷ್ಠಿಗಳ ಚರಣವು ಶ್ರದ್ಧಾಭಾವವನ್ನು ತುಂಬಿಕೊಳ್ಳಲು ನಿಮಿತ್ತ ಮಾತ್ರ.

ವಾಸ್ತವವಾಗಿ, ಇತರರಿಗೆ ಶರಣಾಗುವುದೆಂದರೆ ಮನಸ್ಸಿಗೆ ಹಿಂಸೆ ಎನಿಸುತ್ತದೆ. ರಜನೀಶ್ ಹೇಳುತ್ತಾರೆ, ಮಹಾವೀರರು ಬಂದು ನಿಮ್ಮ ಪಾದಕ್ಕೆ ನಮಸ್ಕರಿಸುತ್ತೇನೆಂದರೆ ನೀವು ಸುಪ್ರಸನ್ನರಾಗುವಿರಿ, ಅವರಿಗೆ ಕಲ್ಲು ಹೊಡೆಯಲಾರಿರಿ. ಆದರೆ ಇದರಿಂದ ನಿಮಗೆ ಲಾಭಕ್ಕಿಂತ ನಷ್ಟವೇ ಆಗುತ್ತದೆ. ಸಾಧು ಎಷ್ಟು ನಿರಹಂಕಾರಿ ಎಂದರೆ ಎಲ್ಲರ ತಲೆಯ ಮೇಲೂ ಶಿರವನ್ನು ಇಡಬಲ್ಲಷ್ಟು. ಆದರೆ ಆತ ನಮಸ್ಕರಿಸಿದರೆ ನಿಮ್ಮ ನಮನಕ್ಕೆ ಆತ ನಿಮಿತ್ತನಾಗಲಾರ. ಆದ್ದರಿಂದ ಸಾಧು ನಿಮಗೆ ನಮಸ್ಕಾರ ಮಾಡದೆ ಕೇವಲ ನಿಮಿತ್ತನಾಗಬಯಸುತ್ತಾನೆ.

ನಮನದ ಅರ್ಥಗ್ರಹಣತೆ ಏನೆಂದರೆ – ನಮನ ಮಾಡುತ್ತಲೇ ನಮ್ಮ ಹೃದಯ ಅತ್ಯಮೂಲ್ಯವಾದುದನ್ನು ಬರಮಾಡಿಕೊಳ್ಳಲು ಮುಕ್ತವಾಗುತ್ತದೆ. ನಮನದ ಮೂಲಕ ಯಾರ ಚರಣದಲ್ಲಿ ತಲೆ ಇಡಲಾಗುತ್ತದೆಯೋ ಅವರು ಅವರೊಳಗೆ ಪ್ರವೇಶಿಸಲು ಆಮಂತ್ರಣ ನೀಡಲಾಗುತ್ತದೆ. ಯಾರಿಗೆ ಶ್ರದ್ಧೆಯನ್ನು ಪ್ರಕಟಿಸಲಾಗಿದೆಯೋ ಅವರಿಗಾಗಿ ಮನೆ, ದ್ವಾರ ತೆಗೆದುಕೊಳ್ಳುತ್ತದೆ. ಈ ಶ್ರದ್ಧೆ, ಭರವಸೆ ಇಲ್ಲದಿದ್ದಲ್ಲಿ ನಮನವಿಲ್ಲ, ಅದಿಲ್ಲದೆ ಅರಿವೂ ಇಲ್ಲ. ವ್ಯಕ್ತಿಯ ಗ್ರಹಣ ಸಾಮರ್ಥ್ಯದ ಬಗ್ಗೆ ವಾಸಿಲಿಯೋ ದೊಡ್ಡ ಪ್ರಯೋಗ ಮಾಡಿದ್ದರು. ಅದೇ ರೀತಿಯ ಪ್ರಯೋಗವನ್ನು ಮಹಾವೀರರು ಭಾರತದಲ್ಲಿ ಬೇರೆ ಆಯಾಮದಲ್ಲಿ ಮಾಡಿದ್ದರು. ವ್ಯಕ್ತಿ ತನ್ನ ಮುಂದಿನ ಯಾತ್ರೆಯನ್ನು ಮಾಡುವುದಾದರೆ ಹಿಂದಿನ ಜನ್ಮದ ನೆನಪನ್ನು ಹೊಂದಿರಬೇಕು ಎಂದು ಅವರ ಅಭಿಪ್ರಾಯ. ಸಮ್ಮೋಹಿನಿಯಿಂದ ಕೃತಕ ಪುನರ್ಜನ್ಮದ ಅನುಭವವನ್ನು ಸೃಷ್ಟಿಸಿದ ವಾಸಿಲಿಯೋ ಅದರಿಂದ ವ್ಯಕ್ತಿ ಜೀನಿಯಸ್ ಆಗಬಲ್ಲ ಎಂದ. ಮನೆಯೊಳಗಿನ ಸಣ್ಣ ಛಿದ್ರದಿಂದ ಜಗತ್ತನ್ನು ಕಾಣುವುದಕ್ಕೆ ಬದಲಾಗಿ ಕಿಟಕಿ ಬಾಗಿಲನ್ನು ತೆರೆದು ದೃಷ್ಟಿಯನ್ನು ವಿಸ್ತಾರಗೊಳಿಸಿದರೆ ಮಾತ್ರ ತಾನು ದೊಡ್ಡವ ಎಂಬ ಭರವಸೆ ತುಂಬುತ್ತದೆ. ಈ ಭರವಸೆಯೇ ಜ್ಞಾನಿಯಾಗಲು ಪ್ರೇರಕ.

**ಣಮೋಕಾರ ಮಂತ್ರ**ದಿಂದ ಚಿತ್ತವು ಶಾಂತಗೊಳ್ಳುತ್ತದೆ. ಆಲ್ಫಾ ತರಂಗಗಳು ಹುಟ್ಟುತ್ತವೆ. ಶ್ರದ್ಧೆ, ಸೂಕ್ಷ್ಮತೆಗಳಿದ್ದಾಗ ಪಶು ಪಕ್ಷಿಗಳಿಗೆ ಸಾಧ್ಯವಾಗುವ ಟೆಲಿಪತಿಲೋಕಕ್ಕೆ ನಮ್ಮ ಪ್ರವೇಶವಾಗುತ್ತದೆ. ಹೃದಯವನ್ನು ಮುಕ್ತವಾಗಿಟ್ಟುಕೊಂಡು ನಮ್ಮ ಚೇತನದ ಆಳದಲ್ಲಿ ಮುಳುಗಿ ಮಂತ್ರದಲ್ಲಿ ತಲ್ಲೀನಗೊಂಡಾಗಿನ ಪ್ರಯೋಜನವೆಂದರೆ – ಸರ್ವ ಪಾಪಗಳ ನಾಶ. ಇಂಥ ಮಹಾಮಂತ್ರವನ್ನು ಅಂತರಂಗದಲ್ಲಿ ಪಡಿಮಿಡಿಯುವಂತೆ ಮಾಡಿಕೊಳ್ಳಬೇಕಾಗುತ್ತದೆ. ❖

ಪ್ರಿಯ, ನಿನ್ನ ನಾಮವೆ ಚಂದ,
ನಾಮ ಪೇಳಿದವ ಕಲ್ಲಾದರೂ
ತೇಲಿದ ಭವತೊರೆಯಿಂದ!
ಗಣಿಕೆ ವೈಕುಂಠಕೆ ಹೋದಳು, ಗಿಳಿಪಾಠದಿಂದ!
ಅರ್ಧನಾಮ ಪೇಳಿದ ಆನೆಯ
ಬಿಡಿಸಿದೆ ಆವಾಗಮನದಿಂದ,
ಗರುಡನ ತೊರೆದು ನನ್ನ ದೊರೆ ನಡೆದು ಬಂದ!
ಅಧಮ ಅಜಾಮಿಳ, ಹೆಸರು ಹೇಳಿ ಮುಕ್ತಿಗೆ ಸಂದ!
ಶರಣಾಗತರನಿಂತು ನೀ ಪೊರೆದೆ ಗೋವಿಂದ!
ಮೀರಾ ನಿನ್ನವಳೆಂದು ತಿಳಿಯೋ ಖಾವಿಂದ!

* * *

ಎನ್ನ ಮನ ಮಾಡುವುದು ಶ್ಯಾಮ ನಾಮಜಪ!
ಶ್ಯಾಮನಾಮ ಜಪಿಸೋ ಜಗ ಜೀವ,
ಕಳೆವುದೋ ಕೋಟಿ ಪಾಪ!
ಆ ಜನುಮಜನುದ ಹಳೆಯ ಪಾಪ ತೊಳೆವುದಪ್ಪ!
ಚಿನ್ನದ ಬಟ್ಟಲಲಿ ತುಂಬಿದೆ ಅಮೃತ,
ಯಾರಿಗೆ ಬೇಡಪ್ಪ?
ಮೀರಾ ದೊರೆ ಹರಿ, ತನು ಮನಕೆ
ಅವನದೇ ಲೇಪ, ಒಪ್ಪ!

*–ಮೀರಾಬಾಯಿ*

# ಬೌದ್ಧಧರ್ಮ ಮತ್ತು ನಾಮಜಪ

ಪ್ರೊ.ಬಿ.ನಂ ಚಂದ್ರಯ್ಯ



**ಬೌದ್ಧಧರ್ಮ ಭಾರತದಲ್ಲಿ ಬಹಳ ಪ್ರಾಚೀನಕಾಲದಿಂದಲೇ ಪ್ರಚಲಿತವಾಗಿದ್ದು, ಕಾಲಾಂತರದಲ್ಲಿ ಪೂರ್ವ ಏಷ್ಯಾದೇಶಗಳಲ್ಲೆಲ್ಲ ವ್ಯಾಪಿಸಿ ತನ್ನ ಪ್ರಭಾವವನ್ನು ಬೀರಿತು. ಜ್ಞಾನಮಾರ್ಗವನ್ನೇ ಅವಲಂಬಿಸುವ ಧರ್ಮ ಇದಾಗಿದ್ದರೂ, ದೈನಂದಿನ ಅನುಷ್ಠಾನಗಳಲ್ಲಿ ಭಕ್ತಿಪರವಾದ ಆಚರಣೆಗಳು, ನಾಮಜಪವೇ ಮೊದಲಾದ ಸಾಧನೆಗಳು ಅಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ. ಈ ವಿಷಯದ ಬಗ್ಗೆ ವಿಸ್ತೃತವಾಗಿ ಬರೆದಿರುವ ಲೇಖಕರು ತಮಿಳು, ಹಿಂದಿ, ಅಪಭ್ರಂಶ, ಪಾಲಿ ಭಾಷೆಗಳನ್ನು ಬಲ್ಲವರಾಗಿದ್ದು, ಅನೇಕ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಬೌದ್ಧಧರ್ಮವನ್ನು ಕುರಿತು ಆಳವಾಗಿ ಅಧ್ಯಯನ ಮಾಡಿರುವ ಅವರು ನಿವೃತ್ತ ಕನ್ನಡ ಪ್ರಾಧ್ಯಾಪಕರಾಗಿದ್ದು, ಉತ್ತಮ ಭಾಷಣಕಾರರೂ ಹೌದು.**

ಧರ್ಮ ಮತ್ತು ಭಕ್ತಿ ಪರಸ್ಪರ ಕಾರ್ಯನಿರ್ವಹಿಸುವಂಥವು. ಇತರ ಧರ್ಮಗಳಿಗಿಂತ ಬೌದ್ಧಧರ್ಮದಲ್ಲಿ ಇದು ಸತ್ಯ. ಬೌದ್ಧಧರ್ಮ ಎಲ್ಲಾ ಸಂದರ್ಭಗಳಲ್ಲಿಯೂ ವೈಚಾರಿಕತೆ ವೈಜ್ಞಾನಿಕತೆ ಮತ್ತು ವಿವೇಕ ದಿಂದ ಕೂಡಿರುವ ಧರ್ಮ. ಹಾಗಾಗಿ ಈ ಧರ್ಮ ಅತಿಯಾದ, ಅತಿರೇಕದ ಭಕ್ತಿಯನ್ನು ಆಚರಿಸುವುದಿಲ್ಲ, ಪ್ರೋತ್ಸಾಹಿಸುವುದೂ ಇಲ್ಲ. ಸಮತೂಕದ ಮನಸ್ಸು ಸಾಮೀಪ್ಯದ ಲಕ್ಷಣಗಳನ್ನು ವಿವರಿಸುತ್ತದೆ. ಈ ಕಾರಣಕ್ಕಾಗಿ ಕೆಲವರು ಥೇರಾವಾದ ಬುದ್ಧಧರ್ಮವನ್ನು ಕೇವಲ ಶುಷ್ಕ, ನೀರಸ, ಬೌದ್ಧಿಕ; ಇಲ್ಲಿ ಭಾವುಕತೆಯಿಲ್ಲವೆಂದು ನಿಂದಿಸುತ್ತಾರೆ. ಕೇವಲ ಬೌದ್ಧಿಕ ಸತ್ಯವನ್ನು ನಂಬಿದವರಲ್ಲಿ ಮಾತ್ರ ಈ ಭಾವನೆ ಇದೆ.

ಥೇರಾವಾದ ಬೌದ್ಧ ಧರ್ಮವನ್ನು ನಿಜವಾದ ಅರ್ಥದಲ್ಲಿ ಒಪ್ಪಿ ಅಪ್ಪಿಕೊಂಡು ನಡೆಯುವವರಿಗೆ ಮೋಕ್ಷಪಡೆಯಲು ಈ ಭಕ್ತಿಸಮರ್ಪಣಾ ಮನೋಭಾವ ಅನಿವಾರ್ಯ. ಅಂಥವರಿಗೆ ಬುದ್ಧನ ಹೆಸರೇ ಭಾವೋದ್ರೇಕವನ್ನು ಉಕ್ಕಿಸಿ ಭಾವಾನಂದವನ್ನು ಉಂಟುಮಾಡುತ್ತದೆ. ಆದರೆ ಹೀಗೆ ಭಾವೋದ್ರೇಕದಿಂದ ಕೂಡಿದ ಭಕ್ತಿ ಅಪಾಯಕಾರಿ ಮತ್ತು ಅತಿಸೂಕ್ಷ್ಮತೆ, ಧರ್ಮಾಂಧತೆ ಮತ್ತು ಕುರುಡು ನಂಬಿಕೆಗಳಿಗೆ ಅವಕಾಶ ಮಾಡಿಕೊಡುತ್ತದೆ ಎಂಬುದನ್ನು ಅವರು ತಿಳಿದವರಾಗಿರುತ್ತಾರೆ.

ಕೇವಲ ಭಾವೋದ್ರೇಕಕ್ಕೆ ಒತ್ತು ಕೊಡುವ ಧರ್ಮಗಳಿಗಿಂತ ಥೇರಾವಾದ ಬೌದ್ಧಧರ್ಮದ ಭಕ್ತಿಯ ಕಲ್ಪನೆ ಭಿನ್ನವಾದದು. ಅಂತರ್ದೃಷ್ಟಿಯುಳ್ಳ ಭಕ್ತಿಯ ಕಾರ್ಯ ಆಧ್ಯಾತ್ಮಿಕ ಸಾಧನೆ, ಆ ಮೂಲಕ ಮನಶ್ಶಕ್ತಿಯಿಂದ ವಿವೇಕ, ಭಾವುಕತೆ ಮುಂತಾದವುಗಳನ್ನು ವಿಕಾಸಗೊಳಿಸುವುದು ಅದರ ಉದ್ದೇಶ. ಆದುದರಿಂದ ಪರಿಷ್ಕೃತಗೊಂಡ ಮನಸ್ಸು ಮಾನಸಿಕ ಶಕ್ತಿಗಳನ್ನು ಸಮಾನ ರೂಪದಲ್ಲಿ ವಿಕಾಸಗೊಳಿಸುತ್ತದೆ. ಹಾಗೆ ಮಾಡುವಾಗ ನಿಬ್ಬಾನ(ನಿರ್ವಾಣ)ವನ್ನು ಪಡೆದುಕೊಳ್ಳಲು ಬೇಕಾದ ಸಮಗ್ರ ಶಕ್ತಿಯನ್ನು ತಂದುಕೊಡುತ್ತದೆ. ಅದರ ಪರಿಣಾಮವಾಗಿ ಅಲೌಕಿಕವಾದ ಎತ್ತರವನ್ನು ತಲುಪುತ್ತದೆ. ವಾಸ್ತವವಾಗಿ ಆತ್ಮಸಂಯಮ, ಶಿಸ್ತು ಮತ್ತು ಪರಿಶುದ್ಧತೆಯ ಮೂಲಕ ಪಡೆದುಕೊಳ್ಳಬಹುದಾದ ಪರಿಪೂರ್ಣತೆಗೆ ಭಕ್ತಿ ಆದರ್ಶವಾದ ಆಸೆಯೊಂದನ್ನು ವ್ಯಕ್ತಪಡಿಸುತ್ತದೆ. ಅಂಥ ಉನ್ನತ ಗುರಿ ಮುಟ್ಟಲು ಕೈಗೊಳ್ಳುವ ನಡೆ ಆರಂಭದಲ್ಲಿ ಗೌಣವೆಂದು ತೋರಬಹುದು. ಆದರೆ ಅಂಥ ಭಕ್ತಿಕಾರ್ಯ ಸತತವಾಗಿ ನಡೆಯುತ್ತಾ ಸಾಮೂಹಿಕ ಪರಿಣಾಮವಾಗುವುದು. ಅದು ಸಮತೋಲಿತ ಮನಸ್ಸು ಆಧ್ಯಾತ್ಮಿಕ ಬೆಳವಣಿಗೆಯ ಮೂಲಕ ಪ್ರಜ್ಞಾಪರಿವರ್ತನೆಯ ಪರಾಕಾಷ್ಠೆಯನ್ನು ತಲುಪಿ ಪಕ್ವವಾದ ಮಾನಸಿಕ ಶಕ್ತಿಯ ಚೌಕಟ್ಟನ್ನು ಸೃಷ್ಟಿಸುವುದು.

ಸಾಮಾನ್ಯವಾಗಿ ಎಲ್ಲಾ ಧರ್ಮಗಳಲ್ಲಿಯೂ ಆಯಾ ಧರ್ಮಗಳಲ್ಲಿ ಪ್ರಧಾನವಾಗಿ ಬರುವ ದೇವ-ದೇವಿಯರಲ್ಲಿ ನಂಬಿಕೆ ಶ್ರದ್ಧೆ, ಭಕ್ತಿಗಳಿಂದ ಕೂಡಿದ ಭಕ್ತರು ಶ್ಲೋಕ, ಮಂತ್ರ, ಗಾಥಾ, ದೋಹಾ ಇತ್ಯಾದಿಗಳನ್ನು ಸೃಷ್ಟಿಸಿಕೊಂಡು ಶ್ರದ್ಧಾಭಕ್ತಿಗಳಿಂದ ಪಠಿಸುವುದು, ಜಪಿಸುವುದು ಸರ್ವೇಸಾಮಾನ್ಯ.

ಎಲ್ಲಾ ಪೂಜಾ ಸಂದರ್ಭಗಳಲ್ಲಿ, ಹಬ್ಬ ಹರಿದಿನಗಳಲ್ಲಿ ಸ್ನಾನಾದಿಗಳನ್ನು ಮುಗಿಸಿಕೊಂಡು ಶುಚಿರ್ಭೂತರಾಗಿ ನಿರ್ಮಲ ಮನಸ್ಸಿನಿಂದ ಆಯಾಯ ಮಂತ್ರೋಚ್ಚಾರಣೆ ಮಾಡುವುದು ಜಪಿಸುವುದು ಸನಾತನ ಸಂಪ್ರದಾಯ. ಬೌದ್ಧ ಧರ್ಮದಲ್ಲೂ ಅಂಥಾ ಸಂಪ್ರದಾಯವಿದೆ. ಬೌದ್ಧಧರ್ಮ ವೈಚಾರಿಕ, ವೈಜ್ಞಾನಿಕ, ಮತ್ತು ವಿವೇಕದ ನೆಲೆಗಟ್ಟಿನ ಮೇಲೆ ನಿಂತಿರುವಂತಹದು.

ಬುದ್ಧನಿಂದ ಬೌದ್ಧಧರ್ಮ ಎಂಬುದು ಸಾಮಾನ್ಯ ಭಾವನೆ. ಹಾಗಿದ್ದರೆ ಈ ಬುದ್ಧ ಯಾರು? ಕಪಿಲವಸ್ತುವಿನ ರಾಜ ಶುದ್ಧೋದನನ ಪುತ್ರ ಸಿದ್ಧಾರ್ಥ ಗೌತಮನೇ ಬುದ್ಧ; ಆತ ಸ್ವಪ್ರಯತ್ನದಿಂದ, ಅನವರತ ಸಾಧನೆಯಿಂದ ಬುದ್ಧನಾದವನು. ಭೂಮಿಯ ಮೇಲಿನ ಜೀವ ಸಂತತಿ ಅನೇಕ ರೀತಿಯ ದುಃಖಗಳಿಗೆ ಸಿಲುಕಿ ನಿರಂತರವಾಗಿ ನರಳಿ ನರಳಿ ಸಾಯುತ್ತಿವೆ. ಈ ದುಃಖದಿಂದ ಜೀವಿಗಳನ್ನು ರಕ್ಷಿಸಬೇಕು, ಬಿಡುಗಡೆಗೊಳಿಸಬೇಕು ಎಂಬ ಉದಾತ್ತ ಧ್ಯೇಯದಿಂದ ತನ್ನೆಲ್ಲಾ ಸುಖ ಭೋಗಗಳನ್ನು, ರಾಜ್ಯ ಕೋಶಗಳನ್ನು ತ್ಯಜಿಸಿ ಕಾಡಿಗೆ ಬಂದು ಕಾಷಾಯ ವಸ್ತ್ರ ಧರಿಸಿ ಸಂನ್ಯಾಸಿಯಾಗಿ, ಸತತವಾದ ಧ್ಯಾನ ಸಾಧನೆಗಳಿಂದ ಬುದ್ಧನಾದವನು. ಆದುದರಿಂದ ಸ್ವಪ್ರಯತ್ನ ಸಾಧನೆಗಳಿಂದ ಯಾರು ಬೇಕಾದರೂ ಬುದ್ಧನಾಗಬಹುದು ಎಂದು ಹೇಳಿದವನು ಬುದ್ಧ. ಹಾಗಾಗಿ ಆತ ಹೇಳುವುದೇನೆಂದರೆ, 'ನಾನು ಬೌದ್ಧ ಧರ್ಮ ಸ್ಥಾಪಕನಲ್ಲ, ನಾನು ಯಾವ ಧರ್ಮವನ್ನೂ ಸ್ಥಾಪಿಸಿದವನಲ್ಲ, ನಾನು ದೇವನಲ್ಲ, ದೈವಸಹಾಯವನ್ನು ಬೇಡಿದವನಲ್ಲ. ಯಾವ

ಅಲೌಕಿಕ ಶಕ್ತಿಯೂ ನನ್ನನ್ನು ಬುದ್ಧನನ್ನಾಗಿ ಮಾಡಲಿಲ್ಲ. ನನ್ನ ವೈಚಾರಿಕ, ವೈಜ್ಞಾನಿಕ, ಚಿಂತನೆಗಳಿಂದ ನಾನು ಬುದ್ಧನಾದವನು. ಹಾಗಾಗಿ ನಾನು ದೇವನಲ್ಲ, ದೇವದೂತನೂ ಅಲ್ಲ. ಅಲೌಕಿಕ ಶಕ್ತಿಗಳನ್ನು ವಶಪಡಿಸಿಕೊಂಡು ಪವಾಡಗಳನ್ನು, ಅದ್ಭುತಕಾರ್ಯಗಳನ್ನು ಮಾಡುವ ಮಾಂತ್ರಿಕನೂ ಅಲ್ಲ. ಎಲ್ಲರಂತೆ ನಾನೂ ಒಬ್ಬ ಮನುಷ್ಯ, ಕೇವಲ ಮನುಷ್ಯ ಅಷ್ಟೆ. ಸ್ವಪ್ರಯತ್ನದಿಂದ ಹಾಗೂ ಸಾಧನೆಗಳಿಂದ ಯಾರು ಬೇಕಾದರೂ ಬುದ್ಧನಾಗಬಹುದು. ಬುದ್ಧ ಎಂದರೆ ಬೆಳಕು ಕಂಡವನು ಸುಜ್ಞಾನಿ, ಸತ್ಯದರ್ಶಿ, ದ್ರಷ್ಟಾರ.'

ಈ ಧರ್ಮದಲ್ಲಿ ಎರಡು ಅತಿಗಳಿಗೆ ಕೇವಲ ಭಾವುಕತೆಗೆ, ಕುರುಡುನಂಬಿಕೆಗಳಿಗೆ ಆಸ್ಪದವಿಲ್ಲ. ಹಾಗೆಂದು ಕೇವಲ ಶುಷ್ಕ ಎಂದಾಗಲಿ ಭಾವನೆಗಳೇ ಇಲ್ಲ ಎಂದಾಗಲಿ ಅಲ್ಲ. ಹಾಗಾದರೆ ಈ ಧರ್ಮದಲ್ಲಿನ ದಶಗುಣಗಳೆನಿಸಿದ ಮೆತ್ತಾ, ಮುದಿತಾ, ಕರುಣಾ, ಮುಂತಾದವುಗಳಿಗೆ ಬೆಲೆಯೇ ಇಲ್ಲ ಎಂದಾಗುತ್ತದೆ. ಪ್ರತಿಯೊಂದನ್ನೂ ವೈಚಾರಿಕತೆಯ, ನಿಕಷಕ್ಕೊಡ್ಡಿ ಅದು ಸತ್ಯ, ಅದು ನನ್ನ ಬುದ್ಧಿಗೆ ಒಪ್ಪಿತ ಎಂದೆನಿಸಿದರೆ ಮಾತ್ರ ಅದನ್ನು ಸ್ವೀಕರಿಸಬೇಕೆಂಬುದು ಈ ಧರ್ಮದ ಉದ್ದೇಶ.

ಬೌದ್ಧಧರ್ಮದಲ್ಲಿ ಬುದ್ಧನೇ ಕೇಂದ್ರಬಿಂದು. ಆತನೇ ಸರ್ವಸ್ವ. ಆತ ನುಡಿದ ನುಡಿಮುತ್ತುಗಳೇ ಬೌದ್ಧಧರ್ಮದ ನೀತಿ ತತ್ತ್ವ ಸಿದ್ಧಾಂತಗಳು. ಹಾಗಾಗಿ ಬೌದ್ಧ ಭಿಕ್ಖು ಭಿಕ್ಖುಣಿಯರಿಗೆ ಬುದ್ಧನೇ ಸರ್ವಸ್ವ ಆಗಿರುವುದರಿಂದ ಬುದ್ಧವಂದನೆ, ಬುದ್ಧಪ್ರಾರ್ಥನೆ, ಬುದ್ಧ ನಾಮಜಪ ಮಾಡುವುದು ಬೌದ್ಧಧರ್ಮದಲ್ಲಿ ಎದ್ದು ಕಾಣುವ ಸಾರ್ವತ್ರಿಕ ಶ್ರದ್ಧಾಭಕ್ತಿಯ ಸಂಕೇತವಾಗಿದೆ.

ಬುದ್ಧನಲ್ಲಿ ಹಾಗೂ ಬೌದ್ಧಧರ್ಮದಲ್ಲಿ ನಂಬಿಕೆ, ಶ್ರದ್ಧೆ, ಭಕ್ತಿಯುಳ್ಳವರು ಮೊಟ್ಟಮೊದಲು ತಿಸರಣಕ್ಕೆ ಶರಣುಹೋಗಬೇಕು. ಬುದ್ಧ–ಧಮ್ಮ–ಸಂಘ ಈ ಮೂರು ಬೌದ್ಧಧರ್ಮದ ಶ್ರೇಷ್ಠ ತಿಸರಣ ಗಳು. ಈ ಧರ್ಮದ ಪ್ರಮುಖ ಆಶ್ರಯತಾಣಗಳಾದ ತಿಸರಣಕ್ಕೆ ಶರಣು ಹೋದವನು ಈ ಮೂರರಲ್ಲಿಯೂ ಸಂಪೂರ್ಣ ನಂಬಿಕೆ ಇಟ್ಟು ಮೂರು ಮೂರು ಸಾರಿ ಉಚ್ಚರಿಸುತ್ತಾನೆ ಅಥವಾ ಜಪಿಸುತ್ತಾನೆ:

**''ಬುದ್ಧಂ ಸರಣಂ ಗಚ್ಛಾಮಿ'' = ಬುದ್ಧನಿಗೆ ಶರಣು ಹೋಗುತ್ತೇನೆ.**
**''ಧಮ್ಮಂ ಸರಣಂ ಗಚ್ಛಾಮಿ'' = ಧರ್ಮಕ್ಕೆ ಶರಣು ಹೋಗುತ್ತೇನೆ.**
**''ಸಂಗಂ ಸರಣಂ ಗಚ್ಛಾಮಿ'' = ಸಂಘಕ್ಕೆ ಶರಣು ಹೋಗುತ್ತೇನೆ.**

ಈ ತಿಸರಣವನ್ನು ಎಲ್ಲಾ ಪೂಜಾಸಮಯಗಳಲ್ಲಿ ಗಟ್ಟಿಯಾಗಿ ಜಪಿಸುತ್ತಿರಬೇಕು. ಬೌದ್ಧರಿಗೆ ಚಿರಪರಿಚಿತವಾಗಿರುವ, ಮುಖ್ಯ ಎನಿಸಿರುವ ತಿಸರಣದ ಜೊತೆಗೆ ಸದ್ಗುಣಗಳನ್ನು ಅಂದರೆ ಬುದ್ಧನ ೯ ಗುಣಗಳು, ಧರ್ಮದ ೬ ಗುಣಗಳು ಮತ್ತು ಸಂಘದ ೧೦ ಗುಣಗಳನ್ನು ಒಳಗೊಂಡ ತಿಸರಣ ಮಂತ್ರವನ್ನು ಜಪಿಸುವುದರಿಂದ, ಅವು ಅಂತರಂಗದಲ್ಲಿ ಪ್ರತಿಷ್ಠಾಪಿತವಾಗುವುವು. ಇದರಿಂದ ಆಂತರಿಕ ವಿಕಾಸ ಉಂಟಾಗುತ್ತದೆ. ಉದಾ: ಬುದ್ಧನ ಗುಣಗಳನ್ನು ಧ್ಯಾನಿಸುವುದರಿಂದ ಪ್ರತಿಯೊಬ್ಬರೂ ಪಡೆದ ಸಿದ್ಧಿಯೊಂದಿಗೆ ಬುದ್ಧನ ಬದುಕಿನಲ್ಲಿ ನಡೆದ ಘಟನೆಗಳೊಂದಿಗೆ ತಮ್ಮನ್ನು ತಾವು ಮಾನಸಿಕವಾಗಿ ಗುರುತಿಸಿಕೊಳ್ಳುತ್ತಾರೆ. ಅನಂತರ ತಮ್ಮ ಬದುಕಿನೊಂದಿಗೆ ಅವುಗಳನ್ನು ಅಳವಡಿಸಿಕೊಳ್ಳಬಹುದು. ಆಗ ಅದು ಆಧ್ಯಾತ್ಮಿಕ ಬೆಳವಣಿಗೆಗೆ ಕಾರಣವಾಗುವುದು. ನಾಮಜಪ ಮಂತ್ರದಲ್ಲಿ ಹೇಳಿರುವ ಬುದ್ಧನ ಒಂಬತ್ತು ಗುಣಗಳನ್ನು ಧ್ಯಾನಿಸುವುದು ನಾಮಜಪ ಮಾಡಿದಂತೆ:

**೧. ಅರಹಂ = ಪರಿಪೂರ್ಣ**
**೨. ಸಮ್ಮಾ ಸಂಬುದ್ಧೊ = ಅತ್ಯುನ್ನತವಾದ ಸತ್ಯಸಾಕ್ಷಾತ್ಕಾರ ಮಾಡಿಕೊಂಡವನು**
**೩. ವಿಜ್ಜಾಚರಣ ಸಂಪನ್ನೊ = ವಿದ್ಯೆ–ವಿನಯಗಳ ಆಚರಣ ಸಂಪನ್ನ**
**೪. ಸುಗುತೊ = ಸರ್ವೋನ್ನತ ಸ್ಥಿತಿಯಲ್ಲಿರುವವನು**
**೫. ಲೋಕವಿದು = ಎಲ್ಲಾ ಲೋಕಗಳನ್ನು ಅರಿತವನು**
**೬. ಅನುತ್ತರೊ ಪುರಿಸಧಮ್ಮಸಾರಥಿ = ಸಾಧು (ಸಂನ್ಯಾಸಿ) ಆಗಲು ಸಿದ್ಧನಿರುವವನನ್ನು ಮುನ್ನಡೆಸುವ ಸಾರಥಿ (ಗುರು)**
**೭. ಸತ್ತಾ ದೇವಮನುಸ್ಸಾನಂ = ದೇವ ಮನುಷ್ಯರ ಉನ್ನತ ಗುರು.**
**೮. ಬುದ್ಧೊ= ಬೋಧಿ ಜ್ಞಾನ ಪಡೆದವನು.**
**೯. ಭಗವಾ ಇತಿ = ಭಗವಂತ, ಈ ಗುಣಗಳನ್ನುಳ್ಳವನು ಬುದ್ಧ.**

ಹೀಗೆ ಗುಣಾನ್ವಿತವಾದ ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಳ್ಳುವ ಬುದ್ಧನ ಹೆಸರು ಅಥವಾ ನಾಮಗಳನ್ನು ಹಿಂದು ಮುಂದು ಮಾಡಿ ಉಚ್ಚರಿಸುತ್ತ, ಪಠಿಸುತ್ತ ಬುದ್ಧ ನಾಮಜಪ ಮಾಡಬೇಕು. ಒಂಬತ್ತು ಗುಣಗಳಿಂದ ಕೂಡಿದ ಬುದ್ಧನನ್ನು ಶ್ರದ್ಧಾಭಕ್ತಿಗಳಿಂದ ಜಪಿಸುತ್ತಿದ್ದರೆ, ಬುದ್ಧ ಸದಾ ನಮ್ಮಲ್ಲಿದ್ದುಕೊಂಡು ನಮ್ಮ ಮನಸ್ಸಿನಲ್ಲಿ ಸುತ್ತಿಕೊಂಡಿರುವ ಕೊಳೆಯನ್ನು ತೊಳೆದು ಪವಿತ್ರಗೊಳಿಸುತ್ತಾನೆ ಎಂಬ ನಂಬಿಕೆ ಬೌದ್ಧರಲ್ಲಿ ದೃಢವಾಗಿದೆ.

### ದಮ್ಮದ ಗುಣಗಳ ಸ್ಮರಣೆ

೧. ಧಮ್ಮದ ಗುಣಗಳ ಸ್ವಕ್ಖಾತೊ ಭಗವತಾ ಧಮ್ಮೊ = ಬುದ್ಧನಿಂದ ಪರಿಪೂರ್ಣವಾಗಿ ಸ್ಪಷ್ಟವಾಗಿ, ಸ್ಪಷ್ಟಪಡಿಸಲಾಯಿತು. ೨.ಸಂದಿಟ್ಠಿಕೊ = ಇಲ್ಲಿ ಅಲ್ಲಿ ಇದನ್ನು ಯಾವಾಗ ಬೇಕಾದರೂ ಎಲ್ಲಿ ಬೇಕಾದರೂ ಪರೀಕ್ಷಿಸಿಕೊಳ್ಳುವುದು. ೩. ಅಕಾಲಿಕೊ= ಕ್ಷಣದ ಪರಿಣಾಮದೊಂದಿಗೆ, ಎ ಹಿ ಪಸ್ಸಿಕೊ = ತಮಗೆ ತಾವೇ ಪರೀಕ್ಷಿಸಿಕೊಳ್ಳಲು ಆಹ್ವಾನಿಸುವುದು. ೫. ಒಪನಯಿಕೊ= ನಿಬ್ಬಾನದತ್ತ ಕರೆದೊಯ್ಯುವುದು. ೬. ಪಚ್ಚಟ್ಟಂ ವೆದಿತಬ್ಬೊ ವಿಜ್ಞಾನೂ ಹಿ ತಿ = ಪ್ರತಿಯೊಂದನ್ನು ತನಗೆ ತಾನೆ ಪ್ರಜ್ಞಾವಂತರಿಂದ ಅರ್ಥಮಾಡಿಸಿಕೊಳ್ಳಬೇಕು.

ಧರ್ಮದ ಮೇಲಿನ ಪ್ರತಿಬಿಂಬಿತ ಧ್ಯಾನ ಕೇವಲ ಬೌದ್ಧಿಕ ಅಭ್ಯಾಸದಿಂದ ಬಹಳ ದೂರ. ಅದು ಧರ್ಮದ ಒಳಹೊಕ್ಕು, ಸೂಕ್ಷ್ಮವನ್ನು ಗ್ರಹಿಸುವ, ಭಯ ಮತ್ತು ಅಪರಾಧಿ ಪ್ರಜ್ಞೆಗಳನ್ನು ನಿವಾರಿಸಿ ಸ್ಫೂರ್ತಿ ನೀಡುತ್ತದೆ. ಮನಸ್ಸಿನಲ್ಲಿ ಗುಣಾತ್ಮಕ ವೃದ್ಧಿಯನ್ನು ತರುತ್ತದೆ; ಭಕ್ತಿಯ ಅಭ್ಯಾಸ ವೃದ್ಧಿಸುತ್ತದೆ, ಅರ್ಪಣಭಾವವನ್ನು ಹೆಚ್ಚಿಸುತ್ತದೆ. ಇದು ಕೇವಲ ಬೌದ್ಧಿಕ ಚಿಂತನೆಗಿಂತ ಬೇರಾದದ್ದು.

### ಸಂಘದ ಗುಣಗಳ ಸ್ಮರಣೆ

**ಸಂಪತಿಪಣ್ಣೊ ಭಗವತೊ ಸಾವಕಸಂಘೊ, ಉಜುಪಟಿಪಣ್ಣೊ ಭಗವತೊ ಸಾವಕಸಂಘೊ, ನಾಯಕ ಪಟಿಪಣ್ಣೊ ಭಗವತೊ ಸಾವ ಸಂಘೊ/ ನಾಯಾಪಟಿಪಣ್ಣೊ, ಭಗವತೊ ಸಾವಕ ಸಂಘೊ, ಸಾಮೀಚಿಪಟಿಪಣ್ಣೊ ಭಗವತೊ ಸಾವಕಸಂಘೊ,ಯದಿದಂ ಚತ್ತಾರಿ ಪುರಿಸಯುಗಾನಿ ಅಟ್ಠಪುರಿಸಪುಗ್ಗಲಾ/ ಎಸ ಭಗವತೊ ಸಾವಕ ಸಂಘೊ;/ ಆಹುನೆಯ್ಯೊ, ಪಾಹುನೆಯ್ಯೊ, ದಕ್ಖನೆಯ್ಯೊ, ಅಂಜಲಿಕರನೀಯೊ,/ ಅನುತ್ತರಂ ಪುಞ್ಞಕ್ಖೆತ್ತಂ ಲೊಕಸ್ಸಾತಿ.**

'ಬುದ್ಧನ ಆರ್ಯಶಿಷ್ಯರ ಪವಿತ್ರ ಸಂಘ ಸರಿಮಾರ್ಗದಮೇಲೆ ಸ್ಥಾಪಿತವಾಯಿತು. ಬುದ್ಧರ ಆರ್ಯಶಿಷ್ಯರ ಪವಿತ್ರ ಸಂಘ ನೇರ ಮಾರ್ಗದ ಮೇಲೆ ಸ್ಥಾಪಿತವಾಯಿತು. ಬುದ್ಧರ ಆರ್ಯಶಿಷ್ಯರ ಸಂಘ ನ್ಯಾಯಮಾರ್ಗದ ಮೇಲೆ ಸ್ಥಾಪಿತವಾಯಿತು/ ಬುದ್ಧರ ಆರ್ಯಶಿಷ್ಯರ ಸಂಘ ತಕ್ಕ ಮಾರ್ಗದ ಮೇಲೆ ಸ್ಥಾಪನೆಯಾಯಿತು.

'ನಾಲ್ಕು ಜೊತೆ ಆರ್ಯವ್ಯಕ್ತಿಗಳನ್ನೊಳಗೊಂಡ ಎಂಟು ಆಧ್ಯಾತ್ಮಿಕವಾಗಿ ಪರಿವರ್ತನೆಗೊಂಡ ವ್ಯಕ್ತಿಗಳ, ಈ ಬುದ್ಧನ ಪವಿತ್ರ ಸಂಘದ ಆರ್ಯಶಿಷ್ಯರು ಸದಾಕಾಲ ಅತಿಥಿಸತ್ಕಾರ ಮತ್ತು ಅರ್ಪಣೆಗಳಿಗೆ ಯೋಗ್ಯರಾದವರು, ಕೊಡುಗೆ ಮತ್ತು ಗೌರವಪೂರ್ಣ ನಮನಗಳಿಗೆ ಅರ್ಹರಾದವರು ಮತ್ತು ಜಗತ್ತಿಗೆ ಅಸದೃಶ್ಯವಾದ ಅರ್ಹತೆಯುಳ್ಳ ಅಸಾಧಾರಣರು.'

**ಅಟ್ಠವಿಸತಿ ಬುದ್ಧವಂದನಾ : ೨೮ ಬುದ್ಧರಿಗೆ ವಂದನೆ.**

ಬೇರೆ ಬೇರೆ ಕಾಲಗಳಲ್ಲಿ ಈ ಭೂಮಿಯ ಮೇಲೆ ಹುಟ್ಟಿ ಹೋದ ಇಪ್ಪತ್ತೆಂಟು ಬುದ್ಧರ ಹೆಸರುಗಳನ್ನು ಪಠಿಸುತ್ತಾ, ಅವರ ನಾಮಜಪ ಮಾಡುತ್ತ, ಆ ಬುದ್ಧರುಗಳಿಗೆ ವಂದನೆ ಸಲ್ಲಿಸುತ್ತಾರೆ ಬೌದ್ಧರು. ಬುದ್ಧರ ಪವಿತ್ರ ಗ್ರಂಥಗಳು ಈ ೨೮ ಬುದ್ಧರ ಹೆಸರುಗಳನ್ನು ದಾಖಲಿಸಿವೆ. ಅನೇಕ ಸಾರಿ ಕಾಣಿಸಿಕೊಂಡು ಹಾಗೂ ಚೆದುರಿಹೋದ ಈ ವಿಶ್ವದಲ್ಲಿ ಕಾಣಿಸಿಕೊಂಡ ಅನೇಕ ಬುದ್ಧರನ್ನು ಈಗಿನ ಬುದ್ಧ ಕಂಡುಕೊಂಡಿದ್ದಾನೆ.

ಪ್ರಾಚೀನ ಕಾಲದ ಬುದ್ಧರು ಅಸಂಖ್ಯರು. ಗೊತ್ತಿರುವ ೨೮ ಬುದ್ಧರಲ್ಲಿ ಕೇವಲ ನಾಲ್ಕು ಮಂದಿ ಬುದ್ಧರು ಮಾತ್ರ ವರ್ತಮಾನ ಯುಗಕ್ಕೆ ಸೇರಿದವರು. ಅವರಲ್ಲಿ ಕೊನೆಯವನಾದ ನಾಲ್ಕನೇ ಗೌತಮ ಬುದ್ಧನ ಉಪದೇಶಗಳನ್ನು ನಾವು ಪಾಲಿಸುತ್ತಿದ್ದೇವೆ. ಬರಲಿರುವ ಕಾಲಘಟ್ಟದಲ್ಲಿ, ವರ್ತಮಾನಕಾಲದ ಯುಗದಲ್ಲಿ ಇನ್ನೊಬ್ಬ ಬುದ್ಧ ಕಾಣಿಸಿಕೊಳ್ಳುತ್ತಾನೆ. ಆತನೇ ಮೈತ್ರೇಯಿ ಬುದ್ಧ, ಹಾಗಾಗಿ ವರ್ತಮಾನ ಯುಗದಲ್ಲಿ ಒಟ್ಟು ಐವರು ಬುದ್ಧರಾಗುತ್ತಾರೆ. ಆದ್ದರಿಂದ ಬೌದ್ಧರ ಪ್ರಕಾರ ಈ ಪ್ರಪಂಚ ಸದ್ಯಕ್ಕೆ ಮಾಯವಾಗುವಂಥದಲ್ಲ, ದೀರ್ಘಕಾಲ ಇರುವಂಥದು.

ಬೌದ್ಧರ ಈ ಎಲ್ಲಾ ಬುದ್ಧರಿಗೂ ಭಕ್ತಿಪೂರ್ವಕವಾಗಿ ಗೌರವಾದರಗಳನ್ನು ಸಲ್ಲಿಸುತ್ತಾರೆ. ಈ ಎಲ್ಲ ಬುದ್ಧರೂ ಸ್ವಪ್ರಯತ್ನದಿಂದ ಬೋಧಿಯನ್ನು ಪಡೆದು ನಿರ್ವಾಣ ಹೊಂದಿದವರು. ಎಲ್ಲ ವಿಷಯಗಳಲ್ಲೂ ಅವನಂತೆ ವರ್ತಿಸಿದವರು. ಅವರೆಲ್ಲರೂ ಸಾರ್ವತ್ರಿಕವಾಗಿ ಸತ್ಯ (ಧರ್ಮ) ವನ್ನು ಶಾಕ್ಯಮುನಿ ಬುದ್ಧನಂತೆ ಸಾಕ್ಷಾತ್ಕರಿಸಿಕೊಂಡವರು ಮತ್ತು ಅವನ ಎಲ್ಲ ಗುಣಗಳನ್ನು ಹೊಂದಿದ್ದವರು.

೧. **ವಂದೆ ತಣ್ಹಂಕರಂ ಬುದ್ಧಂ, / ವಂದೆ ಮೇಧಂಕರಂ ಮುನಿಂ, / ಸರಣಂಕರಂ ಮುನಿಂ ವಂದೆ /ದೀಪಂಕರಾ ಜಿನಂ ನಾಮೆ/**

'ಸಂಪೂರ್ಣ ಬೋಧಿಜ್ಞಾನ ಪಡೆದ ತಣ್ಹಂಕರನಿಗೆ, ಶ್ರೇಷ್ಠ ಮುನಿ ಮೇಧಂಕರನಿಗೆ, ಆರ್ಯಋಷಿ ಸರಣಂಕರನಿಗೆ, ನಿಜವಾದ ವಿಜಯಿ ದೀಪಂಕರನಿಗೆ ವಂದಿಸುತ್ತೇನೆ.'

೨. **ವಂದೆ ಕೊಂಡಣ್ಣಾ ಸತ್ಥಾರಂ/ ವಂದೆ ಮಂಗಲ ನಾಯಕಂ / ವಂದೇ ಸುಮನ ಸಂಬುದ್ಧಂ / ವಂದೆ ರೆವತ ನಾಯಕಂ .**

'ಮಹೋಪಾಧ್ಯಾಯ ಕೊಂಡಣ್ಣನಿಗೆ, ಮಹಾನಾಯಕ ಮಂಗಲನಿಗೆ, ಪೂರ್ಣ ಬೋಧಿಜ್ಞಾನ ಪಡೆದ ಸುಮನನಿಗೆ, ಮಹೋನ್ನತ ಮಾರ್ಗದರ್ಶಿಯಾದ ರೇವತನಿಗೆ ನಮಸ್ಕಾರ.'

೩. **ವಂದೆ ಸೊಭಿತಾ ಸಂಬುದ್ಧಂ / ಅನೊಮ ದಸ್ಸಿಂ ಮುನಿಂ ನಮೆ/ ವಂದೆ ಪದುಮ ಸಂಬುದ್ಧಂ / ವಂದೆ ನಾರದ ನಾಯಕಂ.**

'ಪೂರ್ಣ ಬೋಧಿಜ್ಞಾನ ಪಡೆದ ಸೊಭಿತ್ತಾನಿಗೆ, ಮಹರ್ಷಿ ಅನೊಮ ದರ್ಶಿಗೆ, ಪೂರ್ಣ ಬೋಧಿ ಜ್ಞಾನ ಪಡೆದ ಪದುಮನಿಗೆ, ಸರ್ವೋನ್ನತ ಮಾರ್ಗದರ್ಶಿ ನಾರದನಿಗೆ ನಮಸ್ಕಾರ.'

೪. **'ಪದುಮುತ್ತರಂ ಮುನಿಂ ವಂದೆ / ವಂದೆ ಸುಮೆಧ ನಾಯಕಂ/ ವಂದೆ ಸುಜಾತ ಸಂಬುದ್ಧಂ / ಪಿಯದಸ್ಸಿಂ ಮುನಿಂ ನಮೆ.**

'ಪದುಮುತ್ತರ ಪ್ರಶಾಂತಮುನಿಗೆ, ಮಹಾನಾಯಕ ಸುಮೆದನಿಗೆ, ಪೂರ್ಣ ಬೋಧಿಜ್ಞಾನ ಪಡೆದ ಸುಜಾತಗೆ, ಮಹರ್ಷಿ ಪಿಯದರ್ಶಿಗೆ ನಮಸ್ಕಾರ.'

೫. **ಅತ್ಥದಸ್ಸಿಂ ಮುನಿಂ ವಂದೆ / ವಂದೆ ಸಿದ್ಧತ್ಥಂ ಸತ್ಥಾರಂ / ವಂದೆ ತಿಸ್ಸಾಮಹಾಮುನಿಂ.**

'ಮಹರ್ಷಿ ಅತ್ಥದಸ್ಸಿಗೆ, ನಿಜವಾದ ವಿಜಯಶಾಲಿ ಧಮ್ಮದಸ್ಸಿಗೆ ಪವಿತ್ರ ಗುರು ಸಿದ್ಧತ್ಥನಿಗೆ ನಮಸ್ಕಾರ.'

೬. **ವಂದೇ ಪುಸ್ಸ ಮಹಾವೀರಂ/ ವಂದೇ ವಿಪಸ್ಸೀನಾಯಕಂ/ ಸಿಖಿಂ ಮಹಾಮುನಿಂ ವಂದೇ / ವೆಸ್ಸಬು ನಾಯಕಂ ವಂದೆ /**

'ಮಹಾನಾಯಕ ಪುಸ್ಸನಿಗೆ, ಪವಿತ್ರ ಮಾರ್ಗದರ್ಶಿ ವಿಪಸ್ಸಿಗೆ, ಮಹರ್ಷಿ ಸಿಖಿಗೆ, ನಿಜವಾದ ನಾಯಕ ವೆಸ್ಸಬುಗೆ ನಮಸ್ಕಾರ.'

೭. **ಕಕುಸಂಧಂ ಮುನಿಂ ವಂದೆ/ ವಂದೆ ಕೊನಾಗಮನ ನಾಯಕಂ/ ಕಸ್ಸಪಂ ಸುಗತಂ ವಂದೆ/ವಂದೆ ಗೊತಮ ನಾಯಕಂ/**

'ಪ್ರಶಾಂತ ಕಕುಸಂಧನಿಗೆ, ಪವಿತ್ರ ಮಾರ್ಗದರ್ಶಕ ಕೊನಾಗಮನನಿಗೆ, ಮಹೋನ್ನತ ಕಸ್ಸಪನಿಗೆ, ಆರ್ಯಮಾರ್ಗ ದರ್ಶಕ ಗೊತಮನಿಗೆ ನಮಸ್ಕಾರ.'

೮. **ಅಟ್ಠವೀಸತಿ ಇಮೆ ಬುದ್ಧಾ/ನಿಬ್ಬಾನ ಮತ ನಾಯಕ/ ನಮಾಮಿ ಸಿರಸಾ ನಿಚ್ಚಂ/ತೆ ಮಂ ರಕ್ಖಂತಾ ಸಬ್ಬದಾ/**

ಈ ೨೮ ಮಂದಿ ಬುದ್ಧರು ಸರ್ವೋನ್ನತ ಬೋಧಿಜ್ಞಾನ (ಬೆಳಕು) ಪಡೆದವರು. ಶಾಶ್ವತ ನಿಬ್ಬಾನ ನೀಡುವವರು! ಕಣ್ಣುಬ್ಬಿ ನೊಂದಿಗೆ (ಸಿರಸಾ) ಸದಾ ಸಾಷ್ಟಾಂಗ ನಮಸ್ಕಾರ ಮಾಡಿಸಿ ಕೊಳ್ಳುವವರು ಆದ ೨೮ ಬುದ್ಧರು ಸದಾ ನಮ್ಮನ್ನು ರಕ್ಷಿಸುತಿರಲಿ.

ಹೀಗೆ ಅಸಂಖ್ಯ ಬುದ್ಧ ನಾಮಜಪಗಳು ಬೌದ್ಧಧರ್ಮದಲ್ಲಿ ಇವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಬೆಳಿಗ್ಗೆ ಸಂಜೆ ಎಲ್ಲಾ ಪೂಜಾಸಮಯಗಳಲ್ಲಿ ಬೌದ್ಧಭಿಕ್ಸು-ಭಿಕ್ಸುಣಿಯರು, ಉಪಾಸಕರು ಬುದ್ಧನ ನಾಮಜಪ ಮಾಡುತ್ತಾರೆ. ಈ ಎಲ್ಲರೂ ತಮ್ಮ ಮನಸ್ಸಿನಲ್ಲಿ ಉಂಟಾಗುವ ಭಯ,ಆತಂಕ,ಮಾನಸಿಕ ಪಾಪಗಳು ಇತ್ಯಾದಿಗಳನ್ನು ನಿವಾರಿಸಿಕೊಂಡು ಪುಣ್ಯಸಂಚಯನ ಮಾಡುತ್ತಾ ನಿಬ್ಬಾನದೆಡೆಗೆ ಹೋಗಲು ಬೇಕಾದ ಮನಶುದ್ಧಿಯನ್ನು ಸಂಪಾದಿಸಿ ಕೊಳ್ಳುತ್ತಾರೆ.



# ಇಸ್ಲಾಂ ಧರ್ಮದಲ್ಲಿ ನಾಮಸ್ಮರಣೆ

ಸಮೀರ್

**ಎಲ್ಲ ಧರ್ಮಗಳಲ್ಲೂ ನಾಮಜಪಕ್ಕೆ ಮಹತ್ವ ನೀಡಲಾಗಿರುವಂತೆಯೇ, ನಿರಾಕಾರ-ನಿರ್ಗುಣ ಭಾವದ ಉಪಾಸನೆಯೇ ಪ್ರಧಾನವಾಗಿರುವ ಇಸ್ಲಾಂ ಧರ್ಮದಲ್ಲೂ ಭಗವಂತನ ನಾಮಸ್ಮರಣೆ ಆಧ್ಯಾತ್ಮಿಕ ಸಾಧನೆಯ ಅಂಗವಾಗಿದೆ. ಲೇಖಕರು ಮೈಸೂರು ನಿವಾಸಿಗಳು ಹಾಗೂ ಔಷಧಿ ವಿತರಕರು. ಉಪನಿಷತ್ತು , ಗೀತೆ, ಕುರಾನ್‌ಗಳನ್ನು ಆಳವಾಗಿ ಅಭ್ಯಸಿಸಿರುವ ಅವರು ಧಾರ್ಮಿಕವಾಗಿ ವಿಶಾಲಭಾವನೆಯನ್ನು ಮೈಗೂಡಿಸಿಕೊಂಡಿದ್ದಾರೆ.**



ಇಸ್ಲಾಂ ಎಂದರೆ ಪರಮದೇವನಾದ ಆಲ್ಲಾಹ್‌ನಲ್ಲಿ ಸಂಪೂರ್ಣ ಶರಣಾದವನು ಎಂದು ಅರ್ಥ. ಅಲ್ಲಾಹ್‌ನಿಗೆ ರೂಪವಿಲ್ಲ. ನಿರಾಕಾರ.

ಅಂದ ಮೇಲೆ ದೈವಭಕ್ತಿ, ದೈವನಿಷ್ಠೆ ಬಗ್ಗೆ ಹೇಳಬೇಕಾದ್ದೇ ಇಲ್ಲ. ಆತ ಮಾಲೀಕ. ಎಲ್ಲ ಜೀವಿಗಳೂ ಆತನ ದಾಸರು. ವಿಶ್ವಕ್ಕೆಲ್ಲ ಅಲ್ಲಾಹ್ ಒಬ್ಬನೆ ದೇವರು. ಅದ್ವಿತೀಯ, ಸರ್ವಶಕ್ತ, ಸರ್ವಜ್ಞಾನದ ಮೂಲ. ಅವನು ಎಲ್ಲೆಲ್ಲಿಯೂ ಇದ್ದಾನೆ. ಅವನಿಗೆ ರೂಪವಿಲ್ಲ ನಿರಾಕಾರ. ಆದರೆ ಸರ್ವಶ್ರೇಷ್ಠ ಗುಣಗಳೂ ಅವನಲ್ಲಿವೆ. ಆ ಗುಣಗಳೆಲ್ಲ ಅವನಿಂದಲೇ ಮನುಷ್ಯರಿಗೆಲ್ಲ ಬಂದಿವೆ! ಆ ಗುಣಗಳನ್ನು ಸ್ಮರಿಸುತ್ತ ಅಲ್ಲಾಹ್(ಕರುಣಾಮಯ)ನ ಗುಣಗಾನ ಮಾಡುವವರು ಆತನಿಗೆ ಪ್ರಿಯರಾಗುತ್ತಾರೆ. ತಿಳಿದೋ ತಿಳಿಯದೆಯೋ ಅವರು ಮಾಡಿದ ಎಲ್ಲಾ ತಪ್ಪುಗಳನ್ನೂ ಕ್ಷಮಾಶೀಲನಾದ ಅಲ್ಲಾಹ ಕ್ಷಮಿಸಿ ತಪ್ಪು ಮಾಡದ ಸತ್ಪಥದಲ್ಲಿ ಅವರನ್ನು ನಡೆಸುತ್ತಾನೆ.

ಕುರ್‌ಆನ್ ಮುಸ್ಲಿಮರ ಪವಿತ್ರಗ್ರಂಥ, ಅದು ದೈವವಾಣಿ. ಅಜ್ಞಾನದ ಕತ್ತಲಲ್ಲಿ ತಡಕಾಡುತ್ತಿರುವವರಿಗೆ ಮಾರ್ಗದರ್ಶಿ ಬೆಳಕು. (ಕುರ್‌ಆನ್ ಅಧ್ಯಾಯ ೩೩ ಅಲ್‌ಅಹ್‌ಝಾಬ್, ಅಯತ್, ಶ್ಲೋಕ ೪೧-೪೨ ರಲ್ಲಿ ದೈವ ಭಕ್ತರೇ, ಅಲ್ಲಾಹ್‌ನನ್ನು ಹಗಲಿರುಳೆನ್ನದೆ ಸದಾಗುಣಗಾನ ಮಾಡುತ್ತಾ ಸ್ಮರಿಸಿರಿ. ನಿಮ್ಮೆಲ್ಲ ಕಷ್ಟಗಳೂ ಪರಿಹಾರ ವಾಗುವುವು ಎಂದಿದೆ.) ಈ ಶ್ಲೋಕದ ಬಗ್ಗೆ ಹಜರತ್ ಅಬ್ದುಲ್ಲಾ ಇಬ್ನೆ ಅಬ್ಬಾಸ್(ರ.ಅ) ವ್ಯಾಖ್ಯಾನ ಮಾಡುತ್ತಾ ಅಲ್ಲಾಹ್‌ನು ಪ್ರಾರ್ಥನೆ, ವ್ರತ ಮುಂತಾದ ಧಾರ್ಮಿಕ ಕಾರ್ಯಗಳಿಗೆ ಮಿತಿಯನ್ನು ಹಾಕಿದ್ದಾನೆ. ದೈನಂದಿನ ಪ್ರಾರ್ಥನೆಯನ್ನು ಐದು ಸಲಕ್ಕೆ, ರಂಜಾನ್ ಉಪವಾಸವನ್ನು ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ, ಅದು ವರ್ಷದಲ್ಲಿ ಇಂಥಾ ಒಂದು ತಿಂಗಳು ಮಾತ್ರ ಎಂದು, ಝಕಾತ್ ವರ್ಷಕ್ಕೊಮ್ಮೆ ವರಮಾನದಲ್ಲಿ ಒಂದು ಬಾರಿ ಎಂದು ನಿಗದಿಗೊಳಿಸಿದ್ದಾನೆ. ಆದರೆ ತನ್ನ ನಾಮಸ್ಮರಣೆಗೆ ಯಾವ ಮಿತಿ-ನಿರ್ಬಂಧಗಳನ್ನೂ ಹಾಕಿಲ್ಲ. ಗುಣ(ನಾಮ) ಸ್ಮರಣೆಯನ್ನು ಎಲ್ಲೆಂದರಲ್ಲಿ ಬೇಕಾದರೂ ಮಾಡಬಹುದಾಗಿದೆ. ಆರೋಗ್ಯವಾಗಿರಲಿ, ಅನಾರೋಗ್ಯದಲ್ಲೇ ಇರಲಿ ಅಲ್ಲಾಹ್‌ನ ನಾಮ ಸ್ಮರಣೆ ಮಾಡಬಹುದು.

ಪ್ರವಾದಿವರನ ಮತ್ತೊಂದು ವಚನ ಸ್ಮರಣೆ, ಪ್ರಾರ್ಥನೆಗಳಿಗೆ ಖಂಡಿತ ಫಲ ದೊರೆತೇ ದೊರೆಯುತ್ತದೆ ಎಂದು ಆಶ್ವಾಸನೆ ನೀಡುತ್ತದೆ. ಅಲ್ಲಾಹ್‌ನ ನಾಮಸಂಕೀರ್ತನೆಯಲ್ಲಿ ಅತ್ಯುನ್ನತವಾದುದು ಲಾ-ಇಲ್ಲಾಹ್ ಇಲ್ಲಾಲ್ಲಾಹ್ ('ಅಲ್ಲಾಹ್‌ನ ಹೊರತು ಬೇರಾರೂ ಆರಾಧನೆಗೆ ತಕ್ಕವರಲ್ಲ') ಪ್ರಾರ್ಥನೆಯಲ್ಲಿ ಕ್ಷಮಾಪರಾಧದ ಮಾತಿದೆ. ಅಸ್ತಗ್ ಫಿರುಲ್ಲಾಹ್ ('ಓ ದೇವಾ ನನ್ನ ಪಾಪಗಳನ್ನು ಕ್ಷಮಿಸು') ಕುರ್‌ಆನ್‌ನ ಈ ಎಲ್ಲ ಶ್ಲೋಕಗಳಿಂದ, ಪ್ರವಾದಿಯವರ ಮಾತಿನಿಂದ ಹಜರತ್‌ರವರ ವ್ಯಾಖ್ಯಾನದಿಂದ ಅಲ್ಲಾಹ್‌ನ ನಾಮಸ್ಮರಣೆ ಮಹತ್ವ ವ್ಯಕ್ತವಾಗುತ್ತದೆ.

ಇಸ್ಲಾಂ ಧರ್ಮದವರಲ್ಲಿ ಸಾಧಕ ಭಕ್ತರು ಅಲ್ಲಾಹ್‌ನ ೯೯ ಸದ್ಗುಣಗಳನ್ನು ಅನೇಕಬಾರಿ ಸ್ಮರಿಸುವ ಅನುಕೂಲಕ್ಕಾಗಿ, ಎಣಿಕೆಯ ಸೌಲಭ್ಯಕ್ಕಾಗಿ, ಅಷ್ಟು ಸಂಖ್ಯೆಯ ಮಣಿಗಳಿರುವ (ಜಪ)ಸರವನ್ನು ಇಟ್ಟುಕೊಂಡಿರುತ್ತಾರೆ. ಗಂಡಸರು, ಹೆಂಗಸರು, ಪ್ರಾಯದವರು, ಮುದುಕರು ಎಂಬ ಭೇದವಿಲ್ಲ. ಆದರೆ ಹೆಂಗಸರು ಹೊರಗಾದಾಗ ಮೂರು ದಿನಗಳ ಮೈಲಿಗೆಯ ಕಾರಣ ಜಪಮಾಲೆಯನ್ನು ಹಿಡಿದು ನಾಮಸ್ಮರಣೆ ಮಾಡುವ ಹಾಗಿಲ್ಲ ಎಂಬೊಂದು ಧಾರ್ಮಿಕ ಕಟ್ಟಲೆ ಬಿಟ್ಟರೆ ಉಳಿದ ಎಲ್ಲ ಕಾಲದಲ್ಲೂ ಜಪಮಾಡಲು ಅಭ್ಯಂತರವಿಲ್ಲ.

ಇಸ್ಲಾಂ ಧರ್ಮದಲ್ಲಿ ಅಲ್ಲಾಹ್‌ನ ಗುಣಗಾನದ (ಜಪದ) ಮೊದಲ ಮೂವತ್ತೊಂದು ಸದ್ಗುಣಗಳನ್ನಿಲ್ಲಿ ಉದಾಹರಿಸಿದೆ:-

೧. ಅಲ್ ಅಹದ್ (ಏಕಮಾತ್ರ - ಎರಡನೆಯವರಿಲ್ಲ) ೨. ಅಸ್ಸಮದ್ (ಅವನೇ ಎಲ್ಲರಿಗೂ ಆಸರೆ, ಆತ ಮಾತ್ರ ನಿರಾವಲಂಬಿ.) ೩. ಅಲ್ ರಝಾಖು (ಅವನು ಕೊಡುವ ಆಹಾರ ಅಕ್ಷಯವಾದುದು) ೪. ರಬ್ ಪಾಲನೆ-ಪೋಷಣೆ ಮಾಡುವವನು (ಎಲ್ಲರನ್ನೂ ರಕ್ಷಿಸುವವನು - ಪೋಷಿಸುವವನು ಅವನೇ) ೫. ರಹಮಾನ್ (ಪರಮ ದಯಾಳು) ೬. ಅಲ್ ಮುಮೀತ್ (ಮೃತ್ಯುವನ್ನು ದಯಪಾಲಿಸುವವನು ಆತನೇ ಲಯಕರ್ತ) ೭. ಅಲ್ ಖ಼ಾದಿರು (ಅವನೇ ಸರ್ವಸಮರ್ಥ) ೮. ಅಲ್ ಅಝ್ಝೀಝು (ಸರ್ವ ಶಕ್ತ) ೯. ಅಲ್ ಖ಼ಾಲಿಖ಼ು (ಅವನೇ ಪ್ರಾಣದಾತ) ೧೦. ಅಲ್ ಬದೀವು (ಅವನೇ ಪ್ರಥಮ ಸೃಷ್ಟಿಕರ್ತ) ೧೧. ಅಲ್ ಹಕೀಮು (ಅವನೇ ಸರ್ವರೋಗ ನಿವಾರಕ ವೈದ್ಯ) ೧೨. ಅಸ್ಸಮೀಉ (ಅವನ ಶ್ರವಣ ಶಕ್ತಿ ಬಹು ಸೂಕ್ಷ್ಮ. ನಮ್ಮ ಅಂತರಂಗದ ಪ್ರಾರ್ಥನೆಯೂ ಕೇಳುತ್ತದೆ.)



೧೩. ಅಲ್ ಬಸೀರು (ಎಲ್ಲವನ್ನೂ ನೋಡುವ ಕಣ್ಣೂ ಅವನೆ) ೧೪. ಅಲ್ ಅಲೀಮು (ಸರ್ವಜ್ಞ) ೧೫. ಅಲ್ ಶಾಫಿವು (ಸರ್ವ ಸಂಕಟ ನಿವಾರಕ) ೧೬. ಅಲ್ ಹಸೀಬ್ (ಪುನರುತ್ಥಾನ ಜಗದಂತ್ಯದ ದಿನದಂದು ಪಾಪ-ಪುಣ್ಯಗಳ ಲೆಕ್ಕ ಪಡೆಯುವವನು.) ೧೭. ಅಲ್ ಜಮೀಉ (ಪುನರುತ್ಥಾನದ ಎಲ್ಲರನ್ನೂ ಒಟ್ಟಾಗಿ ಸೇರಿಸುವವನು) ೧೮. ಅಲ್ ಮುಂತಖೀಮು (ಶತ್ರುಗಳ ಪ್ರತೀಕಾರವನ್ನು ನುಂಗಿ ಹಾಕುವವನು) ೧೯. ಅಸ್ಸಲಾಮು (ಎಲ್ಲಾ ಕಂಟಕಗಳಿಂದಲೂ ರಕ್ಷಣೆ ನೀಡುವವನು) ೨೦. ಅಲ್ ಮುಅಮಿನು (ಶಾಂತಿ ಹಾಗೂ ಸತ್ಯ ಮಾರ್ಗ ದೊರಕಿಸುವವನು) ೨೧. ಅಲ್ ಮುತಕಬ್ಬಿರ್ (ಸರ್ವಶ್ರೇಷ್ಠ ಹಾಗೂ ದೈವನಿಷ್ಠೆಗೆ ಅರ್ಹನಾದವನು) ೨೨. ಅಲ್ ಮುಸವ್ವಿರು (ಚಹರೆಗಳನ್ನು ಸೃಷ್ಟಿಸುವವನು) ೨೩. ಅಲ್ ಗಫ್ಫೂರು (ಪರಮ ಕ್ಷಮಾಶೀಲ) ೨೪ ಅಲ್ ಖಹ್ಹಾರು (ಎಲ್ಲವನ್ನೂ ಮತ್ತು ಎಲ್ಲರನ್ನೂ ತನ್ನ ನಿಯಂತ್ರಣದಲ್ಲಿಡುವವನು) ೨೫. ಅಲ್ ಮುಇಜ್ಜು (ಗೌರವ ಗಳನ್ನು ತಂದುಕೊಡುವವನು) ೨೬. ಅಲ್ ಅದ್ಲು (ಸ್ಪಷ್ಟ ನ್ಯಾಯವನ್ನು ನೀಡುವವನು) ೨೭. ಅಲ್ ವದೂದು (ದಾಸೋಽಹಂ ಎನ್ನುವ ಭಕ್ತ ರಿಗೆ ಒಲಿಯುವವನು.) ೨೮. ಅಲ್ ಮುಖ್ಸಿತು (ಹಕ್ಕುದಾರರಿಗೆ ಅವರ ಹಕ್ಕನ್ನು ದೊರಕಿಸುವವನು.) ೨೯. ಅಲ್ ಹಯ್ಯಿ (ಅವಿನಾಶಿ) ೩೦. ಅಲ್ ಬಾತಿನು (ಭೌತಿಕ ದೃಷ್ಟಿಯಿಂದ ಮರೆಯಾಗಿರುವವನು) ೩೧. ಮಾಲಿಕುಲ್ ಮುಲ್ಕ್ (ಸಮಸ್ತ ಜಗತ್ತಿನ ಯಜಮಾನ)

ಹೀಗೆ ಇನ್ನೂ ೬೮ ಗುಣಗಳ ಸ್ತುತಿ 'ಅಲ್ಲಾಹ್'ನ ಮಾಲೆಯಾಗಿದೆ. ಇಸ್ಲಾಂ ಧರ್ಮದ ಭಕ್ತಿ ಪರಂಪರೆಯಲ್ಲಿ ನಿರಂತರವಾಗಿ ಆಚರಣೆ ಯಲ್ಲಿದೆ. ಇಂದಿಗೂ ಪ್ರಸ್ತುತವಾಗಿದೆ.

ಪರಮ ದಯಾಳುವಾದ ಅಲ್ಲಾಹ್‌ನು ಆತನ ನಾಮಸ್ಮರಣೆ, ಗುಣಗಾನ, ಮಾಡುವ ವಿವೇಕವನ್ನು ಪ್ರಜ್ಞೆಯನ್ನೂ ಎಲ್ಲರಿಗೂ ದಯಪಾಲಿಸಲಿ. ❖

## ಸೂಫೀ ಸಂತನ ಜಪಸಾಧನೆ

ಮಲಿಕ್ ಷಹಾ ಎಂಬ ಸೂಫೀ ಸಂತನೊಬ್ಬನಿದ್ದ. ಒಂದು ತೋಟದಲ್ಲಿ ಆಲದ ಮರವೊಂದಿತ್ತು, ಅದರ ಕೆಳಗೆ ಕುಳಿತು ಷಹಾ ಜಪ, ಪ್ರಾರ್ಥನೆ, ದೇವರ ಧ್ಯಾನ ಮಾಡುತ್ತಿದ್ದ. ಹಗಲೆಲ್ಲ ತೋಟಕ್ಕೆ ನೀರು ಹಾಯಿಸುತ್ತಿದ್ದ ಏತ ಧ್ವನಿ ಮಾಡುತ್ತಿತ್ತು. ಎತ್ತುಗಳು ಏತವನ್ನು ತಿರುಗಿಸುತ್ತಿದ್ದವು. ಷಹಾ ಏತ ತಿರುಗುವುದಕ್ಕೆ ಸರಿಯಾಗಿ ಜಪಮಾಲೆ ತಿರುಗಿಸುತ್ತ ಪ್ರಾರ್ಥನೆ ಮಾಡುತ್ತಿದ್ದ. ಒಂದು ದಿನ ತೋಟದವನು ಸಂಜೆಯಾಗುತ್ತಲೇ ಎತ್ತುಗಳನ್ನು ಏತದಿಂದ ಬಿಚ್ಚಿ, ಮನೆಗೆ ಹೊಡೆದುಕೊಂಡು ಹೋದ. ಮಲಿಕ್ ಷಹಾ ಮಾತ್ರ ಜಪ ಮಾಡುತ್ತಲೇ ಇದ್ದ. ಅವನ ಜಪ, ಪ್ರಾರ್ಥನೆ ಎಷ್ಟು ತೀವ್ರವಾಗಿತ್ತೆಂದರೆ, ಅವನ ಜಪದ ಲಯಕ್ಕೆ ತಕ್ಕಂತೆ ಏತ ತಾನಾಗಿ ತಿರುಗತೊಡಗಿತು! ಇಡೀ ರಾತ್ರಿ ಸಂತನ ಜಪ ಮುಂದುವರಿಯಿತು; ತೋಟವೆಲ್ಲ ಏತದ ನೀರಿನಿಂತ ತುಂಬಿಹೋಯಿತು.

ಮರುದಿನ ತೋಟದವನು ಬಂದು ನೋಡತ್ತಾನೆ, ತೋಟವೆಲ್ಲ ನೀರಿನಿಂದ ತುಂಬಿ ಎಲ್ಲೆಡೆ ಹೊಳೆ ಹರಿದಿದೆ! ಇದು ಮರದ ಕೆಳಗೆ ಕುಳಿತ ಸಾಧುವಿನದೇ ಕೆಲಸವಿರಬೇಕು ಎಂದುಕೊಂಡು ಅವನ ಬಳಿಗೆ ಬಂದ ತೋಟಗಾರ. ''ರಾತ್ರಿಯೆಲ್ಲ ಇಲ್ಲೇ ಕುಳಿತಿದ್ದೆಯಾ?'' ಎಂದು ಷಹಾನನ್ನು ಕೇಳಿದ. ''ಹಾದು, ಸ್ವಾಮಿ'' ಎಂದ ಷಹಾ. ''ತೋಟವೆಲ್ಲ ನೀರಿನಿಂದ ತುಂಬಿದ್ದನ್ನು ಕಾಣುತ್ತಿದ್ದೀಯಾ?'' ಷಹಾ ಹೌದು, ಕಾಣುತ್ತಿದ್ದೇನೆ ಎಂದ. ''ಹಾಗಿದ್ದರೆ ಇದು ನಿನ್ನದೇ ಕೆಲಸ. ರಾತ್ರಿಯೆಲ್ಲ ಏತವನ್ನು ತಿರುಗಿಸಿ ತೋಟವನ್ನೆಲ್ಲ ತೊಯ್ಯಿಸಿದ್ದೀಯಾ. ಇದು ನಿನ್ನದೇ ತೋಟ ಅಂದುಕೊಂಡಿದ್ದೀಯಾ?'' ಎಂದು ಅವನನ್ನು ವಾಚಾಮಗೋಚರ ಬಯ್ಯುತ್ತ, ಒದೆಯುವುದಕ್ಕೂ ಮುಂದಾದ ತೋಟಗಾರ. ''ನಾನು ರಾತ್ರಿಯೆಲ್ಲ ಈ ಮರದ ಕೆಳಗೇ ಕುಳಿತಿದ್ದೆ. ಇಲ್ಲಿಂದ ಎದ್ದು ಹೋಗಲೇ ಇಲ್ಲ'' ಎಂದು ಷಹಾ ಎಷ್ಟು ಬಾರಿ ಹೇಳಿದರೂ ತೋಟಗಾರ ನಂಬಲಿಲ್ಲ. ಅವನು ಕೋಪದಿಂದ ಸಂತನನ್ನು ಗದರಿಸುತ್ತ,''ನೀನು ಉದ್ಧಟತನ ತೋರಿದ್ದಲ್ಲದೆ, ಸುಳ್ಳು ಬೇರೆ ಹೇಳುತ್ತಿದ್ದೀಯಾ. ನಿನ್ನನ್ನು ಜನ ಸಂತ ಎನ್ನುತ್ತಾರೆ. ಆದರೆ ನೀನು ಬರೀ ಧೂರ್ತ! ರಾತ್ರಿಯೆಲ್ಲ ಏತ ತಿರುಗಿಸಿ ನನ್ನ ತೋಟ ಹಾಳು ಮಾಡಿದೆ. ನಡೆ ಇಲ್ಲಿಂದ, ಇನ್ನು ಮೇಲೆ ಇಲ್ಲಿ ಕಾಲಿಟ್ಟರೆ ನಿನ್ನ ಮೂಳೆ ಮುರಿದುಬಿಡುತ್ತೇನೆ'' ಎಂದು ಅವನನ್ನು ಹೊರಗಟ್ಟಿದ. ಸಂತ ಏನೂ ಹೇಳಲಿಲ್ಲ. ತಾನು ಕುಳಿತಲ್ಲಿಂದ ಸುಮ್ಮನೆ ಎದ್ದು ತೋಟದಿಂದ ಹೊರಕ್ಕೆ ಹೊರಟುಹೋದ. ಇನ್ನೂ ಕೋಪದಿಂದ ಭುಸುಗುಡುತ್ತಿದ್ದ ತೋಟಗಾರ ನೋಡಿದ, ಮಲಿಕ್ ಷಹಾ ಹೊರಟುಹೋದ ಕೂಡಲೇ ಅಲ್ಲಿದ್ದ ಆಲದಮರ ಬೇರುಸಮೇತ ಮೇಲಕ್ಕೆ ಕಿತ್ತುಬಂತು, ತಾನಾಗಿಯೇ ಸಂತನನ್ನು ಹಿಂಬಾಲಿಸಿ ಹೋಗುತ್ತಿದೆ! ಎಂಥ ಆಶ್ಚರ್ಯ! ಸಂತನಿಗೆ ನೆರಳು ನೀಡತ್ತಾ ಅದು ಅವನನ್ನು ಹಿಂಬಾಲಿಸತೊಡಗಿತು. ಅದರೊಂದಿಗೆ ಏತವೂ ಸಂತನನ್ನು ಹಿಂಬಾಲಿಸತೊಡಗಿತು. ಅಲ್ಲಿದ್ದ ಹೂಗಳೆಲ್ಲ ಅವನನ್ನೇ ಹಿಂಬಾಲಿಸಿದವು.

ಆ ವ್ಯಕ್ತಿ ಸಾಮಾನ್ಯನಲ್ಲ, ನಿಜವಾಗಿಯೂ ದೊಡ್ಡ ಸಂತನೆಂದು ಈಗ ತೋಟಗಾರನಿಗೆ ಮನವರಿಕೆಯಾಯಿತು. ಅವನು ಓಡಿಹೋಗಿ ಮಲಿಕ್ ಷಹಾನ ಕ್ಷಮೆ ಕೇಳಿ ಕಾಲಿಗೆ ಬಿದ್ದು, ''ಹೀಗೆ ಪ್ರಾರ್ಥಿಸುವ ಯೋಗ್ಯತೆ ನನಗಿಲ್ಲ; ಆದರೂ ನೀವು ನನ್ನ ತೋಟದಲ್ಲೇ ಇದ್ದುಕೊಂಡು ಜಪ, ಧ್ಯಾನ ಮುಂದುವರೆಸಿ. ನಾನು ಇನ್ನೆಂದಿಗೂ ನಿಮಗೆ ತೊಂದರೆ ಕೊಡಲಾರೆ'' ಎಂದ. ಷಹಾ ಅವನನ್ನು ಕ್ಷಮಿಸಿ, ಅದೇ ತೋಟದಲ್ಲಿ ಕುಳಿತು ಜಪ ಮಾಡುವುದನ್ನು ಮುಂದುವರಿಸಿದ. *('Sufi Stories from Around the World' ಗ್ರಂಥದಿಂದ)*

# ಕ್ರೈಸ್ತ ಧರ್ಮ ಮತ್ತು ನಾಮ ಮಹಿಮೆ

ರೆ.ಫಾ.ಎಸ್.ಡಿ. ಜೋಸೆಫ್



ವೈಯಕ್ತಿಕ ಸಾಧನೆ, ಪ್ರಾರ್ಥನೆ, ಭಜನೆಗಳಿಗೆ ಅತ್ಯಂತ ಪ್ರಾಮುಖ್ಯತೆ ನೀಡುವ ಕ್ರೈಸ್ತಧರ್ಮ ನಾಮಜಪವನ್ನು ಭಗವತ್ಕೃಪೆಗೆ ಒಂದು ಸಾಧನವೆಂದು ಪರಿಗಣಿಸುತ್ತದೆ. ಅನೇಕ ಕ್ರೈಸ್ತ ಸಾಧು, ಸಂತರುಗಳು ಭಗವಂತನ ನಾಮದ ಮಹತ್ವವನ್ನು ಕುರಿತು ಕೊಂಡಾಡಿದ್ದಾರೆ. ಕ್ರೈಸ್ತಧರ್ಮದಲ್ಲಿ ನಾಮಮಹಿಮೆಯನ್ನು ಕುರಿತು ಬರೆದಿರುವ ಫಾದರ್ ಅವರು National Distress Call Missionನ ಸ್ಥಾಪಕ ಅಧ್ಯಕ್ಷರಾಗಿದ್ದಾರೆ.

**ಪರಿಶುದ್ಧ ಮಹೋನ್ನತ ದೇವಾ**
**ನಿನ್ನ ಸ್ತುತಿಸುತ್ತಾ ನಾ ಹಾಡುವೆ**
**ಬಾಳಿನ ಒಂದೊಂದು ಕ್ಷಣವನ್ನು ನಿನಗಾಗಿ**
**ಮುಡಿಪಾಗಿಡುವೆ ಇಂದು....ಆಲ್ಲೆಲೂಯ**

ಎಂದು ಎಲ್ಲರೂ ಒಕ್ಕೊರಳಲ್ಲಿ ಹೃದಯ-ಮನಸ್ಸು-ಆತ್ಮ ಸಮಾಗಮದೊಂದಿಗೆ ದೇವರನ್ನು ಕೂಗಿ ಕರೆಯುತ್ತಾ, ನಮ್ಮನ್ನೇ ನಾವು ಅವರ ಪಾದಕಮಲಗಳಿಗೆ ಸಮರ್ಪಿಸುತ್ತಾ, ಕೊಂಡಾಡುತ್ತಾ ಇರುವಾಗ ದೇವರ ಪ್ರಸನ್ನತೆಯ, ಅನುಭವದ ಸಂತೃಪ್ತಭಾವ ನಮ್ಮನ್ನು ಆವರಿಸಿ ಕೊಳ್ಳುತ್ತದೆ.

ಪ್ರೀತಿಯ ಪ್ರತಿರೂಪವೇ ಕ್ರೈಸ್ತಧರ್ಮ. ಯೇಸು ಸ್ವಾಮಿಯೇ ಪ್ರೀತಿ ಸ್ವರೂಪಿ. ದೇವರ ನಾಮಮಹಿಮೆಯನ್ನು ಸದಾಕಾಲ ಸ್ಮರಿಸುವ ಪ್ರತಿಯೊಬ್ಬರಲ್ಲೂ ಆ ಪ್ರೀತಿ ತುಂಬಿ ಹೊರಸೂಸುತ್ತದೆ. ಯಾವಾಗಲೂ ಆ ಪ್ರೀತಿಯು ನೆಲೆಯಾಗಿದ್ದವರ ಹೃದಯ ತುಂಬಿ ಬಂದಾಗ ಮನ ಹಗುರಾಗುತ್ತಾ ಸ್ಫೂರ್ತಿಯು ಮೈದಾಳುತ್ತದೆ. ಕೃತಜ್ಞತೆಯಿಂದ ಹೃದಯ-ಮನಸ್ಸು ದೇವರ ನಾಮಸ್ಮರಣೆಯನ್ನು ಮಾಡುತ್ತದೆ. ನಾಮದ ಮಹಿಮೆಯೇ ದೇವರ ಪ್ರಸನ್ನತೆ.

**ಇಮ್ಮಾನುವೆಲ್ :** ದೇವರು ನಮ್ಮ ಕೂಡ ಇದ್ದಾನೆ *(ಮತ್ತಾಯ ೧:೨೩)* ಎಂಬುದು ಈ ಪವಿತ್ರ ನಾಮದ ಅರ್ಥವಾಗಿದೆ. ಅಂದರೆ ದೇವರನ್ನು ನಾವು ಹುಡುಕಿಕೊಂಡು ಹೋಗಬೇಕಾದ ಪ್ರಮೇಯವೇ ಇಲ್ಲ. ನಮ್ಮ ಹೃದಯದಲ್ಲಿ , ಅಂತರಾಳದಲ್ಲಿ ಅವರು ನೆಲೆಗೊಂಡಿದ್ದಾರೆ. **(We are all belonging to King of kings - Christ.)** ಕ್ರಿಸ್ತರಲ್ಲಿ ಒಂದಾಗಿರುವ ನಾವು ಎಷ್ಟು ಪುಣ್ಯವಂತರು ಎಂಬುದನ್ನು ಅರಿತಿದ್ದರೂ ಸಹ ನಾವು ಅನೇಕ ವೇಳೆ ಅಜ್ಞಾನಿಗಳಾಗಿ ನಮ್ಮ ಶರೀರ-ಮನಸ್ಸನ್ನು ಮಲಿನಗೊಳಿಸಿಕೊಳ್ಳುತ್ತೇವೆ. ನಮ್ಮೊಳಗೇ ದೇವರ ಇರುವಿಕೆಯನ್ನು ಮರೆತು ಅವರಿಗಾಗಿ ಹುಡುಕುತ್ತಾ ಅಲೆಯುತ್ತೇವೆ. ಚಿಂತೆಯ ಸುಳಿಯಲ್ಲಿ ಸಿಕ್ಕಿ ತೊಳಲಾಡುತ್ತೇವೆ. ಶಿಲುಬೆಯಿಂದ ಯೇಸುಸ್ವಾಮಿಯ ಮೂಲಕ ನಮಗೆ ರಕ್ಷಣೆ ದೊರಕಿದೆ ಎಂಬ ಸತ್ಯವನ್ನು ಮರೆಯುತ್ತೇವೆ. ಆದರೆ ಎದೆಗುಂದದೆ, **'Christ is all, Christ in all'** ಅಂದರೆ, 'ಕ್ರಿಸ್ತರೇ ಎಲ್ಲಾ; ಕ್ರಿಸ್ತರು ಎಲ್ಲರಲ್ಲೂ' ಎಂಬುದನ್ನು ಅರ್ಥೈಸಿಕೊಂಡು ನಮ್ಮಲ್ಲೇ ಇರುವ ದೇವರಲ್ಲಿ ವಿಶ್ವಾಸವಿಡೋಣ. ಕ್ರಿಸ್ತರ ಪ್ರಸನ್ನತೆಯಲ್ಲಿ ಲೋಕಕ್ಕೆ ಬೆಳಕಾಗಿ 'ಇಮ್ಮಾನುವೆಲ್' ಎಂಬ ನಾಮಕ್ಕೆ ಸಾಕ್ಷಿಗಳಾಗೋಣ.

ನಾವೆಲ್ಲರೂ ಒಂದಾಗಿದ್ದು ಬಾಳಿನ ರಂಗದಲ್ಲೂ, ಅಂತರಂಗದಲ್ಲೂ, ನಡೆನುಡಿಯಲ್ಲೂ ಸತ್ಯವಂತರಾಗಿ ಅವರ ಆರಾಧನೆ ಯಲ್ಲೂ , ನಾಮಮಹಿಮೆಯಲ್ಲೂ , ಭಕ್ತಿಯಲ್ಲೂ , ಶಕ್ತಿಯಲ್ಲೂ, ವಿಶ್ವಾಸದಲ್ಲೂ , ಪ್ರೀತಿಯಲ್ಲೂ ಅವರು ತೋರಿದ ಹಾದಿಯಲ್ಲಿ ನಡೆಯುತ್ತಾ ಅವರ ಸಮೀಪದಲ್ಲಿ ಇರಬೇಕೆಂಬುದನ್ನೇ ಅವರು ನಮ್ಮಿಂದ ಬಯಸುವುದು.

*ನಮ್ಮಲ್ಲಿ ಆ 'ಸತ್ಯದ ಬೆಳಕು' ನಿರಂತರ ಪ್ರಜ್ವಲಿಸುವಾಗ ನಾವು ಹೆದರಬೇಕಾದ ಪ್ರಮೇಯವಿದೆಯೆ? ಆತ್ಮದ ಶಕ್ತಿ ಸರ್ವಶಕ್ತಿಗಿಂತಲೂ ಶ್ರೇಷ್ಠವಲ್ಲವೆ?*

ದೇವರು ನಮ್ಮ ಕಡೆ ಇದ್ದರೆ ನಮ್ಮನ್ನು ಎದುರಿಸುವವರು ಯಾರು? ಪ್ರಪಂಚದಲ್ಲಿ ಜ್ಞಾನಶಕ್ತಿ, ಅಣುಶಕ್ತಿ, ವೈಜ್ಞಾನಿಕ ಶಕ್ತಿ, ದೇಹ ಶಕ್ತಿ, ಜನರ ಶಕ್ತಿ, ಹಣದ ಶಕ್ತಿ, ಅಧಿಕಾರದ ಶಕ್ತಿ... ಹೀಗೆ ಲೆಕ್ಕವಿಲ್ಲದಷ್ಟು ಅನೇಕ ಶಕ್ತಿಗಳಿವೆ. ಆದರೆ ದೇವರ ಶಕ್ತಿ ಎದುರು ಇವ್ಯಾವುದೂ ನಿಲ್ಲುವುದಿಲ್ಲ. ಒಂದು

ಹುಲ್ಲುಕಡ್ಡಿಯೂ ಕೂಡ ದೇವರ ಶಕ್ತಿಯಿಲ್ಲದೆ ಅಲುಗಾಡುವುದಿಲ್ಲ. ಇದೇ ವಿಶ್ವಾಸ, ಇದೇ ದೇವರ ಮೇಲಿಟ್ಟಿರುವ ಪ್ರೀತಿ.

ಕ್ರಿಸ್ತರು ಪರಲೋಕದಿಂದ ಇಳಿದು ಬಂದ ಸಮಾಧಾನದ ಚೇತನ. ದೇವರ ಕೊಡುಗೆಗಳು ಅಗಾಧವಾಗಿ ನಮ್ಮಲ್ಲಿವೆ. ಜ್ಞಾನಗಳ ಸಮ್ಮಿಲನ ವಿದೆ. ಪ್ರತಿಭೆಗಳ ಆಗರವಿದೆ. ದೇವರೇ ಸೃಷ್ಟಿಸಿದ ಸಮಸ್ತವೂ ನಮ ಗಾಗಿಯೇ ಮೀಸಲಾಗಿದೆ. ಇಷ್ಟೆಲ್ಲವನ್ನು ಹೊಂದಿರುವ ನಾವು ನಮ್ಮ ಜೀವನದಲ್ಲಿ ಉತ್ತಮ ಸಾಧನೆಯನ್ನು ಮಾಡಬೇಕು. ನಮ್ಮಲ್ಲಿರುವ ಪ್ರತಿಭೆಗಳಿಂದ ದೇವರನ್ನು ಮಹಿಮೆಪಡಿಸಬೇಕು. ಆಗ ಯಶಸ್ಸು ನಮ್ಮನ್ನು ಹಿಂಬಾಲಿಸುತ್ತದೆ. ಸಮಾಧಾನದ ಹೂಮಳೆ ನಮ್ಮ ಮೇಲೆ ಸದಾ ಸುರಿಯುತ್ತಿರುತ್ತದೆ. **You take interest in everything. Success depends on your best performance.** ದೇವರ ಚಿತ್ತಕ್ಕೆ ತಲೆಬಾಗಿ ನಡೆಯಬೇಕು. **ದೇವರಿಗೂ ಮನುಷ್ಯರಿಗೂ ಮಧ್ಯಸ್ಥನು ಒಬ್ಬನೇ. ಆತನು ಮನುಷ್ಯನಾಗಿರುವ ಕ್ರಿಸ್ತ ಯೇಸುವೇ.** ಅವರನ್ನು ಸಂಪೂರ್ಣವಾಗಿ ವಿಶ್ವಾಸವಿಡಬೇಕು. ಆಗ ಯೇಸು ಪ್ರಭುವು ಸದಾ ನಮ್ಮೊಂದಿಗೆ ಇದ್ದಾರೆ ಎಂಬ ಅನುಭವ ದೊರಕು ತ್ತದೆ. ಮಹಾಮಹಿಮಾಜ್ಯೋತಿಯಾದ ಯೇಸುಸ್ವಾಮಿಯೊಂದಿಗೆ ನಮ್ಮನ್ನು ನಾವು ಗುರುತಿಸಿಕೊಂಡು, ಬದುಕಿನ ಪರಿ ಪೂರ್ಣತೆಯಲ್ಲಿ ವಿಶ್ವಾಸವಿರಿಸಿ, ಸದಾ ಅವರ ಸಮೀಪವಿರಲು ಪ್ರಯತ್ನಿಸಬೇಕು.

ಕ್ರಿಸ್ತರು ನಮ್ಮಿಂದ ಬಯಸುವುದೇನು ಎಂಬ ಅರಿವು ನಮ್ಮಲ್ಲಿ ಸಂಚಲನ ಮೂಡಿಸಿದಾಗ, ನಮ್ಮ ಜೀವನ ಸಾರ್ಥಕತೆಯತ್ತ ಸಾಗು ತ್ತದೆ. ಬಲ ಬೇಕಾದರೆ, ಒಳಬಲ ಬೇಕು. ಯೇಸುಸ್ವಾಮಿಯೊಂದಿಗೆ ಬಲಗೊಳ್ಳಬೇಕು. ಆದರೆ ಎದೆಯ ಮೇಲೆ ಶಿಲುಬೆಯನ್ನು ಹಾಕಿ ಕೊಂಡರಷ್ಟೆ ಯೇಸುಸ್ವಾಮಿಯ ನೈಜ ಹಿಂಬಾಲಕರಾಗಲು ಖಂಡಿತ ಅಸಾಧ್ಯ.

ಈ ನಮ್ಮ '**ಉಸಿರು ನಿನಗೇ ದೇವಾ. ಅದು ಕೊನೆಯವರೆಗೂ ನೀನೇ ದೇವಾ... ಚಿರಕಾಲ ನೀನೇ ದೇವಾ**' ಎಂದು ಜೀವಿಸಿದಾಗ ಕ್ರಿಸ್ತರ ಪ್ರಸನ್ನತೆ ನಮ್ಮ ಹೃದಯದಲ್ಲಿ ತುಂಬಿತುಳುಕುತ್ತದೆ. ದೇವರ ನಾಮಸ್ಮರಣೆಯಿಂದ ಧನ್ಯತಾಭಾವವನ್ನು ತಾಳುತ್ತದೆ.

**ಜಯಧ್ವನಿ:** ದೇವರಿಗೆ ಇರುವೆಯ ಸಪ್ಪಳವೂ ಸಹ ಕೇಳಿಸ ಬಲ್ಲದು. ದೇವರು ನಮ್ಮ ಮನಸ್ಸಿನ ಒಂದೊಂದು ತುಡಿತಗಳನ್ನು ಬಲ್ಲವ ರಾಗಿದ್ದಾರೆ. ನಮ್ಮ ಜೀವನ ಸ್ವಾರ್ಥ, ಮತ್ಸರ, ಹಗೆತನ, ದುರಾಸೆ, ದುರ್ಗುಣಗಳಿಂದ ಆವೃತವಾಗಿದ್ದರೆ ನಮ್ಮ ಆಧ್ಯಾತ್ಮಿಕ ಚಿಂತನಾ ಸಂಚಲನಕ್ಕೆ ಎಂದಿಗೂ ಅವಕಾಶವೇ ಇರುವುದಿಲ್ಲ. ಸ್ವರ್ಗದ ಏಣಿ ಯನ್ನು ಏರುತ್ತಿರುವಂತೆ ಲೋಕವನ್ನು ಕಳೆದುಕೊಳ್ಳುತ್ತಾ ಹೋಗ ಬೇಕು..! ನದಿಯು ಕಡಲನ್ನು ಹುಡುಕಿ ಹೊರಟಾಗ ತನಗೆ ಅಡ್ಡ ಬರುವ ಎಲ್ಲಾ ಎಡರುತೊಡರುಗಳನ್ನು ಎದುರಿಸುತ್ತಾ ಮುಂದಕ್ಕೆ ಚಲಿಸುತ್ತದೆ, ಅಂತೆಯೇ, ನಾವು ದೇವರ ಸಾಮ್ರಾಜ್ಯದ ಕಡೆಗೆ ಹೆಜ್ಜೆ ಯಿಡುವಾಗ ಬರುವ ಎಲ್ಲಾ ವಿಧವಾದ ಶೋಧನೆಗಳನ್ನು ಜಯಿಸಲು ಪ್ರಯತ್ನಿಸಬೇಕು. ದೇವರಲ್ಲಿಯೇ ನಮ್ಮೆಲ್ಲ ದೃಷ್ಟಿಕೋನ, ಯೋಜನೆ, ಯೋಚನೆಗಳೆಲ್ಲವೂ ಇರುವಾಗ ನಮ್ಮ ಆತ್ಮದ ಸ್ಥಿತಿಗತಿ ಏನೆಂಬುದನ್ನು ಮನಸ್ಸು ಅರ್ಥೈಸಿಕೊಳ್ಳುತ್ತದೆ. ಸೋಲುತ್ತಿದ್ದೇವೆ ಎನ್ನುವಾಗ ದೇವರ ಸಹಾಯ ಹಸ್ತವನ್ನು ಯಾಚಿಸಬೇಕು. ಆಗ ದೇವರು ಅಸಂಖ್ಯಾತ ಅದ್ಭುತಕೃತ್ಯಗಳನ್ನು ಮಾಡುತ್ತಾನೆ'. ಆದರೆ ವಿಶ್ವಾಸವನ್ನು ದೃಢಪಡಿಸಿ ಕೊಳ್ಳಬೇಕು. ಕ್ರಿಸ್ತರು ತೋರಿದ ಹಾದಿಯಲ್ಲಿ ನಡೆಯುತ್ತಾ ಲೋಕದ ಬೆಳಕಾಗಿರಲು ಸದಾ ಪ್ರಯತ್ನಿಸಬೇಕು.

**ನಾವು ಪರಿಶುದ್ಧತೆಯ ಪಾಲುದಾರರಾಗಿದ್ದೇವೆ :** ಪ್ರೀತಿಯ ಪ್ರತೀಕರಾದ ಮಾನವರಾದ ನಾವು ಸತ್ಯ-ಅಸತ್ಯಗಳ ನಡುವಿನ ವ್ಯತ್ಯಾಸವನ್ನು ಕಂಡವರು. ಪ್ರತಿಕ್ಷಣವೂ ಬದುಕಬೇಕಾದವರು. ದೈವ ಸ್ವಭಾವ ನಮಗಿದೆ. ಅನಂತ ಶಕ್ತಿಯ ಆಂತರ್ಯವಿದೆ. ಅಂತ ರಂಗದ ಆತ್ಮೀಯತೆಯ ಕೂಗಿಗೆ ಸ್ಪಂದಿಸುವವರಾಗಿದ್ದೇವೆ. ದೇವರಿಂದ ನೂರಾರು ಕೊಡುಗೆಗಳನ್ನು ಪಡೆದವರು. ಯೇಸುವೇ ಜೀವವುಳ್ಳ ವಾಕ್ಯ. ಆತನನ್ನು ಆಲಿಸಿ, ಅಂಗೀಕರಿಸಿ, ಧ್ಯಾನಿಸಿ, ಜೀವಿಸಬೇಕೆಂಬ ಸತ್ಯದ ಜ್ಞಾನವಿರುವವರು. **So make Life Easier and Happier to All through Jesus Christ.**ಕ್ರಿಸ್ತರ ಮುಖಾಂತರ ಜೀವನವನ್ನು ಸರಳಗೊಳಿಸಿಕೊಂಡು ಎಲ್ಲರಿಗೂ ಸಂತಸದಾಯಕರಾಗೋಣ.

ನಾವು ದೇವರ ವಿಷಯದಲ್ಲಿ ಯಾವುದೇ ಅನುಮಾನವಿಲ್ಲದೆ ಅವರ ಮಹಿಮೆಯನ್ನು ಅನುಭವಿಸಿ ನೋಡಬೇಕು. ಸದಾ ಅವ ರನ್ನು ಸ್ತುತಿಸಬೇಕು. ನಾಮಸ್ಮರಣೆ ಮಾಡಬೇಕು, ಪ್ರಾರ್ಥಿಸಬೇಕು, ಆರಾಧಿಸಬೇಕು. ಪ್ರತಿಕ್ಷಣವೂ ದೇವರ ಕರೆಗೆ ಓಗೊಡಬೇಕು. ಪ್ರಾರ್ಥನೆಗೆ ರಜಾದಿನವಿಲ್ಲ – **There is no holiday for prayer** ದೇವರ ವರದಾನಗಳನ್ನು ಪಡೆದ ನಾವು ಕೃತಜ್ಞತೆಯನ್ನು ಸಲ್ಲಿಸುವವರಾಗಿರಬೇಕು. ಅದಕ್ಕೆ ಇರುವುದು ಒಂದೇ ಒಂದು ದಾರಿ– ಪ್ರಾರ್ಥನೆ.

ಪ್ರಾರ್ಥನೆಯು ನಮ್ಮ ಮತ್ತು ದೇವರ ನಡುವಿನ ಆತ್ಮೀಯತೆ ತುಂಬಿದ ಪ್ರೀತಿಯ ಸಂಭಾಷಣೆ. ತಂದೆ ಮಕ್ಕಳ ನಡುವಿನ ಮಧುರ ಬಾಂಧವ್ಯದ ಮಾತಾಗಿದೆ. ಮಾನವನ ಪ್ರಮುಖವಾದ ಕೆಲಸವೆಂದರೆ ದೇವಸ್ತುತಿ, ದೇವರಿಗೆ ಕೃತಜ್ಞತೆ ಸಲ್ಲಿಸುವುದು, ಪ್ರಾರ್ಥಿಸುವುದು. ದೇವರ ಶಕ್ತಿ ಇಲ್ಲದೆ ತೂರಾಡುವ ನಮಗೆ ಪ್ರಾರ್ಥನೆ ಆರೋಗ್ಯದ ಸ್ಥಿರತೆಯನ್ನು ಬಲಪಡಿಸುತ್ತದೆ. ಕ್ರಿಸ್ತರು ಇಹಲೋಕದ ರಕ್ಷಣಾ ಕಾರ್ಯದಲ್ಲಿ ಇದ್ದಾಗ ಆಗಾಗ್ಗೆ ಏಕಾಂತದಲ್ಲಿ ಪ್ರಾರ್ಥಿಸುತ್ತಿದ್ದರು. ದೇವರೊಂದಿಗೆ ಯೋಜನೆಗಳ ಬಗ್ಗೆ ಚರ್ಚಿಸುತ್ತಿದ್ದರು. ಮಾನವರಾಗಿ ದೇವರ ಬಲಕ್ಕಾಗಿ ಕೋರುತ್ತಿದ್ದರು.

'...ಬೇಸರಗೊಳ್ಳದೆ ಪ್ರಾರ್ಥನೆ ಮಾಡಿರಿ...ನಿನ್ನ ಏಕಾಂತವಾದ ಕೋಣೆಯೊಳಗೆ ಹೋಗಿ ಬಾಗಿಲನ್ನು ಮುಚ್ಚಿ ಕೊಂಡು ಅಂತರಂಗ ದಲ್ಲಿಯೂ ಇರುವ ನಿನ್ನ ತಂದೆಗೆ ಪ್ರಾರ್ಥನೆ ಮಾಡು... ಪ್ರಾರ್ಥನೆ ಮಾಡುವಾಗ ಅಜ್ಞಾನಿಗಳಂತೆ ಸುಮ್ಮಸುಮ್ಮನೆ ಹೇಳಿದ್ದನ್ನೇ ಹೇಳ ಬೇಡ.' ಕಪಟಿಗಳಂತೆ ಪ್ರಾರ್ಥಿಸುವುದು ತರವಲ್ಲ.

'ಪ್ರಾರ್ಥಿಸುವಾಗ ನಿನ್ನ ಬದುಕು ಬದಲಾವಣೆ ಕಾಣುತ್ತದೆ. ನಿನ್ನ ಇತಿಹಾಸ ಬದಲಾಗುತ್ತದೆ.' ನಿನ್ನ ಭವಿಷ್ಯ ಬದಲಾಗುತ್ತದೆ... ಪ್ರಾರ್ಥನೆಯಿಂದ ಎಲ್ಲವೂ ಸಾಧ್ಯ. **Without prayer nothing happens in this world.** ದೇವರು ದೈಹಿಕ, ಮಾನಸಿಕ ಹಾಗೂ ಆಂತರಿಕ ಸ್ವಾಸ್ಥ್ಯವನ್ನು ನೀಡುವ ಘನ ವೈದ್ಯರು. ದೇವರೇ ಆತ್ಮದ ಶರೀರದ ಚೈತನ್ಯದಾಯಕರು.

ಮಹಾಚೇತನ ದೇವರಲ್ಲಿ ಬರಿಮಾತಿನಿಂದ ಪ್ರಾರ್ಥಿಸಬಾರದು. ಬಾಯಿಪಾಠ, ಹೇಳಿದ್ದನ್ನೇ ಹೇಳುವುದು, ಅರ್ಥವಿಲ್ಲದ ದೀರ್ಘ ಹೇಳಿಕೆಗಳು ಪ್ರಾರ್ಥನೆ ಎನಿಸಿಕೊಳ್ಳುವುದಿಲ್ಲ. ದೇವರು, 'ಈ ಜನರು ಮಾತಿನಿಂದ ನನ್ನನ್ನು ಸಮೀಪಿಸಿ ತುಟಿಯಿಂದ ನನ್ನನ್ನು ಸನ್ಮಾನಿಸುತ್ತಾರೆ. ಮನಸ್ಸನ್ನೋ ದೂರಮಾಡಿಕೊಂಡು ಬಾಯಿಪಾಠವಾಗಿ ಕಲಿತಿರುವ ಮನುಷ್ಯರ ಆಜ್ಞೆಗೆ ಸರಿಯಾದ ಭಯಭಕ್ತಿಯನ್ನು ಮಾತ್ರ ನನ್ನಲ್ಲಿಟ್ಟಿದ್ದಾರೆ. ಹೀಗಿರುವಾಗ ನಾನು ಈ ಜನರ ಮಧ್ಯದಲ್ಲಿ ಅಧಿಕಾಶ್ಚರ್ಯವೂ ಅದ್ಭುತವೂ ಆದ ಕಾರ್ಯವನ್ನು ಇನ್ನು ಮಾಡುವೆನು. ನಮ್ಮ ಪ್ರಾರ್ಥನೆಯು ಹೇಗಿರಬೇಕು? ಯಾರನ್ನು ಮೆಚ್ಚಿಸಲು ಪ್ರಾರ್ಥಿಸಬೇಕು? ಪ್ರಾರ್ಥನೆಯು ಎಷ್ಟರ ಮಟ್ಟಿಗೆ ದೇವರಿಗೆ ಮೆಚ್ಚುಗೆಯಾಗಬಲ್ಲದು? ಎಂಬುದನ್ನು ಮನದಟ್ಟು ಮಾಡಿಕೊಳ್ಳಬೇಕು.

ಮನುಷ್ಯರಿಂದ ಯಾರು ಏನನ್ನು ಬೇಕಾದರೂ ಕಿತ್ತುಕೊಳ್ಳಬಹುದು. ಆದರೆ ಪ್ರಾರ್ಥನಾಶಕ್ತಿಯನ್ನು ಕಸಿದುಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. ಯೇಸುಕ್ರಿಸ್ತರು ನಮ್ಮನ್ನು ಸ್ನೇಹಿತ ಎಂದು ಕರೆದರು. ಆ ಗೆಳೆಯನೊಂದಿಗೆ ನಮ್ಮ ಎಲ್ಲಾ ವಿಷಯಗಳನ್ನು ಹಂಚಿಕೊಳ್ಳುವ ಮಹಾಭಾಗ್ಯ ನಮ್ಮದಾಗಿದೆ. ಪ್ರಾರ್ಥನೆಯ ಮೂಲಕ ದೇವರಿಗೆ, ಕ್ರಿಸ್ತರಿಗೆ, ಆತ್ಮರಿಗೆ ಎಲ್ಲವನ್ನೂ ತಿಳಿಸಿರಿ.

ದಿನಕ್ಕೆ ೨೪ ಗಂಟೆಗಳು. ಇದರಲ್ಲಿ ಎಷ್ಟು ಸೆಕೆಂಡ್‌ಗಳನ್ನು ಅಥವಾ ಗಂಟೆಗಳನ್ನು ನಾವು ದೇವರಿಗಾಗಿ ಮೀಸಲಾಗಿಟ್ಟಿದ್ದೇವೆ ಎಂಬುದನ್ನು ನಮ್ಮನ್ನೇ ನಾವು ಪ್ರಶ್ನಿಸಿಕೊಳ್ಳೋಣ. **'God wants my availability, not my ability.'** ಅಂದರೆ ದೇವರು ನಮ್ಮ ಸಾಮರ್ಥ್ಯವನ್ನು ಬಯಸುವುದಿಲ್ಲ, ಬದಲಾಗಿ ನಮ್ಮ ಇರುವಿಕೆಯನ್ನು ಬಯಸುವರು ಇದು ಸತ್ಯ. ನಾವು ದೇವರೊಂದಿಗಿರಲು ಅವಸರದಲ್ಲಿ, ನಿರ್ಧರಿತ ಗಳಿಗೆಯಲ್ಲಿ, ಕಟ್ಟುನಿಟ್ಟಿನ ಪ್ರಮಾಣೀಕರಿಸಿದ ವೇಳೆಗಳಲ್ಲಿ ದೇವರನ್ನು ಪ್ರಾರ್ಥಿಸುತ್ತಿದ್ದೇವೆಯೇ? ಮತ್ತೊಬ್ಬರು ಕೇಳಲಿ ಎಂದು ದೀರ್ಘವಾದ ವಾಕ್ಯಗಳನ್ನು ಹೆಣೆಯುತ್ತಾ ಪ್ರಾರ್ಥಿಸುತ್ತಿದ್ದೇವೆಯೆ? ಅಥವಾ ನಮ್ಮನ್ನೇ ನಾವು ವೈಭವೀಕರಿಸಿ ಕೊಳ್ಳಲು ಪ್ರಪಂಚದ ಗಳಿಕೆಯಲ್ಲೇ, ಶ್ರಮದಲ್ಲೇ, ಸುಖದಲ್ಲೇ ಮುಳುಗಿ ಬಿಟ್ಟಿದ್ದೇವೆಯೆ? ದೇವರು ನಮಗೆ ನೀಡಿರುವ ಅಪಾರವಾದ ಕೊಡುಗೆಗಳಿಗಾಗಿ ಕೊನೆಯಪಕ್ಷ ದಿನದ ಹತ್ತನೇ ಒಂದು ಭಾಗದ ಸಮಯವನ್ನಾದರೂ ಅವರಿಗಾಗಿ ಮೀಸಲಿಟ್ಟಿದ್ದೇವೆಯೆ? ಚಿಂತಿಸೋಣ.

**ಪ್ರಾರ್ಥನೆಯ ಬಲ:** ಶಾಂತಿದಾಯಕ ಪ್ರಭು ಕ್ರಿಸ್ತರು ಮಾನವರಾದ ನಮ್ಮನ್ನು ಪಾಪದ ಬಂಧನದಿಂದ ಬಿಡಿಸಿ, ನಮಗೆ ರಕ್ಷಣೆಯನ್ನು ತಂದುಕೊಟ್ಟಿದ್ದಾರೆ. ಈಗಲೂ ಅವರು ನಮ್ಮ ಹೃದಯಗಳಲ್ಲಿ ನೆಲೆಸಿದ್ದಾರೆ. ನಮ್ಮ ನಡುವೆಯೇ ಜೀವಿಸುವ ದೇವರಾಗಿದ್ದಾರೆ. ದಿವ್ಯ ಸಂಸ್ಕಾರದಲ್ಲಿರುವ ರೊಟ್ಟಿರಸಗಳ ರೂಪದಲ್ಲಿ ಪ್ರಸನ್ನರಾಗಿದ್ದಾರೆ. ನಾವು ನಮ್ಮ ಹೃದಯಾಂತರಾಳದ ಮಾತುಗಳನ್ನು ಆಲಿಸುವವರಾಗಬೇಕು. ಆತ್ಮೀಯತೆಯ ಸ್ಪರ್ಶ ರೋಮಾಂಚನವನ್ನು ತರಬೇಕು.

ಜೆಫೆ ಪೌಲೇರವರ ಪ್ರಕಾರ, **'ತುಟಿಯಲ್ಲಿ ಸತ್ಯ, ಕಣ್ಣಿನಲ್ಲಿ ದಯೆಯ ಸಿಂಚನ, ಧ್ವನಿಯಲ್ಲಿ ಪ್ರಾರ್ಥನೆ, ಮೆದುಳಿನಲ್ಲಿ ನಿಶ್ಚಲತೆ, ಕರಗಳಲ್ಲಿ ಸೇವೆ, ರೂಪದಲ್ಲಿ ಆದರ್ಶ, ಹೃದಯದಲ್ಲಿ ಪ್ರೀತಿ, ನಡತೆಯಲ್ಲಿ ದೃಢತೆ, ಇವುಗಳೇ ನೈಜ ಬದುಕಿನ ರಹಸ್ಯವಾಗಿದೆ.'**

ದೇವರನ್ನು ಬಿಟ್ಟು ದೂರದೂರಕ್ಕೆ ಸರಿಯುತ್ತಿರುವ ನಾವು ಹಿಂತಿರುಗಿ ಬರಲು ಯಾವುದೇ ಸಂಕೋಚಪಡುವ ಆವಶ್ಯಕತೆಯಿಲ್ಲ. ಏಕೆಂದರೆ ದೇವರು ಕರುಣಾಮಯಿ ತಂದೆಯಾಗಿದ್ದಾರೆ. ಆತ ತಮ್ಮ ಮಕ್ಕಳಲ್ಲಿ ಯಾರನ್ನೂ ಕಳೆದುಕೊಳ್ಳಲು ಬಿಡಲಾರರು. ತಾಯಿಯು ತನ್ನ ಹೆತ್ತ ಮಗುವನ್ನು ಮರೆತಾಳು, ಆದರೆ ದೇವರು ಮರೆಯಲಾರರು. ದೇವರ ಅನುಗ್ರಹ, ಕೃಪೆಗಳು ಹೇರಳವಾಗಿ ನಮಗೆಲ್ಲರಿಗೂ ಕೊಡಲ್ಪಟ್ಟಿದೆ. ಅವುಗಳನ್ನು ಯಾವುದ ರಿಂದಲೂ ಅಳೆಯಲಾಗದು. ದೇವರಲ್ಲಿ ಅನನ್ಯವಾದ ಅಂತ್ಯ ವಿಲ್ಲದ ಬದುಕಿದೆ. ನಿನ್ನೊಂದಿಗೆ ನಾನಿರಬೇಕು ಎಂಬ ಮಹಾಕಾಂಕ್ಷೆ ನಮ ಗಿಂತಲೂ ದೇವರಲ್ಲಿ ಅಧಿಕವಾಗಿದೆ. ಆದ್ದರಿಂದ ನಮ್ಮ ಬಾಳಿನ ಪ್ರಪ್ರಥಮ ಕರ್ತವ್ಯವೆಂದರೆ ದೇವರು. ಉಳಿದದ್ದೆಲ್ಲವೂ ನಂತರವೇ. ನಾವು ದೇವರ ಕರೆಗೆ ಓಗೊಟ್ಟು ಆಧ್ಯಾತ್ಮಿಕ ಬದುಕಿಗೆ ಹಿಂದಿರುಗಿ ಬರಬೇಕು.

ಇದರಿಂದ ಕ್ರಿಸ್ತರ ಮಾತುಗಳು ನಮ್ಮನ್ನು ಸದಾ ಕಾಡಿಸುವಂತೆ ಮಾಡುತ್ತದೆ. ನಿರಂತರವಾದ ಹುಸಿಯಿಲ್ಲದ ಪ್ರಾರ್ಥನೆಯಲ್ಲಿ ತೊಡಗಿರುವವರು ಆಶ್ಚರ್ಯಕರ ರೀತಿಯ ಯಶಸ್ಸನ್ನು ಕಾಣುವರು. ಪ್ರಾರ್ಥನೆ ಮಾಡುವ ನಾವು ಕೇಳಿದ್ದನ್ನು ಹೊಂದಬಹುದು. ಅನಿರೀಕ್ಷಿತ ಭಾಗ್ಯವನ್ನು ಪಡೆಯಬಹುದು. ಜಾಗೃತರಾಗಿ ಚುರುಕುತನ, ಜ್ಞಾನ ಮತ್ತು ವಿಶ್ವಾಸದಿಂದ ಪ್ರಾರ್ಥಿಸುವಾಗ ನಮ್ಮ ವದನಗಳಲ್ಲಿ ತೇಜಸ್ಸು ಮೂಡುತ್ತದೆ. ನಮ್ಮಲ್ಲಿರುವ ದುರಾಲೋಚನೆ, ಸಣ್ಣತನ, ದ್ವೇಷ, ಮೋಸಗಳಂತಹ ಗುಳ್ಳೆಗಳು ತಾವೇತಾವಾಗಿ ಒಡೆದು ಹೋಗುತ್ತವೆ. ನ್ಯಾಯದ ಗುರಿಯಲ್ಲಿ ಸರ್ವರೂ ಸುಖವಾಗಿರಬೇಕು ಎಂಬ ಭಾವನೆ ಮೂಡುತ್ತದೆ. ಏಕಾಗ್ರತೆಯ ಪ್ರಾರ್ಥನೆಯಿಂದ ಚಿಂತೆ, ಅವಿಶ್ವಾಸ ಮಾಯವಾಗಿ ಪರಿಶುದ್ಧತಾ ದೃಷ್ಟಿಕೋನವು ಮೂಡುತ್ತದೆ. ಪರಿಶುದ್ಧತೆ ಎಂಬುದು ವಿಜ್ಞಾನದ ವಿಜ್ಞಾನ, ಕಲೆಯ ಕಲೆ, ಸಮಾಧಾನದ ಸಮಾಧಾನ. ಪರಿಶುದ್ಧತೆಯಿಂದ ಮನವು ತಿಳಿಗೊಳವಾಗುತ್ತದೆ. ನಮ್ಮ ದೇವರ ನಡುವಿನ ಸಂಬಂಧ ಬಲವಾಗುತ್ತಾ ಹೋಗುತ್ತದೆ. ನಾವು ಏನಾಗಿದ್ದೇವೆ, ಏನಾಗಬೇಕು ಎಂಬ ಸ್ಪಷ್ಟವಾದ ಗುರಿಯು ಕೇಂದ್ರೀಕೃತವಾಗುತ್ತದೆ. ಇವುಗಳಿಗೆಲ್ಲ ಮೂಲ ಪ್ರಾರ್ಥನೆ. ದೇವರು ನಮ್ಮನ್ನು ಎಂದಿಗೂ ಕೈ ಬಿಡುವುದಿಲ್ಲ. ದೇವರ ಮಕ್ಕಳಾದ ನಾವು ಸದಾ ಅವರನ್ನು ಧ್ಯಾನಿಸಬೇಕು. ದೇವರಲ್ಲಿ ನಮ್ಮಲ್ಲಿರುವ ಎಲ್ಲ ಯೋಚನೆಗಳನ್ನು, ಚಿಂತೆ-ಚಿಂತನೆಗಳನ್ನು ಪ್ರಾರ್ಥನೆಯ ಮೂಲಕ ತೆರೆದಿಟ್ಟಾಗ ಅವರು ನಮ್ಮ ಮನದಾಸೆಗಳನ್ನು ಪೂರೈಸುತ್ತಾರೆ.

ನಮ್ಮ ಪ್ರಾರ್ಥನೆಗಳು ಕೇವಲ ಕೋರಿಕೆ, ಕಷ್ಟಗಳ ಅರಿಕೆ, ವೇದನೆಗಳ ಸರಮಾಲೆಗಳಾಗಿರಬಾರದು. ನಮ್ಮ ಪ್ರಾರ್ಥನೆ ಕೃತಜ್ಞತೆ, ಧನ್ಯವಾದಗಳ ಪ್ರಾರ್ಥನೆಯಾಗಿರಬೇಕು. ದೇವರ ಮಾತುಗಳನ್ನು ಕೇಳುವ ಪ್ರಾರ್ಥನೆ ಆಗಿರಬೇಕು. ನಮ್ಮ ಪ್ರಾರ್ಥನೆ ದೇವರ ಸಾಮ್ರಾಜ್ಯವನ್ನು ಎದುರು ನೋಡುವಂತಹ ಪ್ರಾರ್ಥನೆಯಾಗಿರಬೇಕು. ದಿನದ ಆರಂಭ ಹಾಗೂ ಮುಕ್ತಾಯ ಪ್ರಾರ್ಥನೆಯಿಂದಲೇ ಆಗಬೇಕು. ದೇವರಿಗೆ ಕೃತಜ್ಞತೆ ಸಮರ್ಪಿಸದೇ ವಿರಮಿಸಬಾರದು ಎಂಬ ನಿರ್ಧಾರವನ್ನು ಕೈಗೊಳ್ಳಬೇಕು. ಸ್ವಾಭಾವಿಕತೆಯತ್ತ ಕೊಂಡೊಯ್ಯುವ ಸಾಧನ ಪ್ರಾರ್ಥನೆಯಾಗಿದೆ. ಆಂತರಿಕ ಸ್ವಚ್ಛತೆ, ಮಾನಸಿಕ ನ್ಯೂನತೆಗಳ ಸ್ವಚ್ಛತೆಗಾಗಿ ಪ್ರಾರ್ಥಿಸಬೇಕು. ನಮ್ಮೆಲ್ಲರ ಪ್ರಾರ್ಥನೆಗೆ ಪರಿ

ಪೂರ್ಣತೆಯು ಲಭಿಸುತ್ತದೆ. ಪ್ರಾರ್ಥನಾ ನಿರತ ವ್ಯಕ್ತಿಯು ಸದಾ ಆನಂದದಲ್ಲಿ ಇರಬಲ್ಲನು. ಆತನು ಲೌಕಿಕ ಸೆಳೆತಕ್ಕೆ ಒಳಗಾಗದೇ ದೇವನ ಚಿತ್ತದಲ್ಲಿ ಬಾಳುವವನಾಗುತ್ತಾನೆ. ಏಕೆಂದರೆ ಪ್ರಾರ್ಥನೆ ದೇವರಲ್ಲಿ ನಮ್ಮ ಶರಣಾಗತಿಯ ಗುರುತು.

**ದೂರು ಲೆಕ್ಕಚಾರದಿಂದ ಕೂಡಿದ್ದು ಪ್ರಾರ್ಥನೆಯಲ್ಲ:** 'ಸದಾ ಹರ್ಷಚಿತ್ತರಾಗಿ ಎಡೆಬಿಡದೆ ಪ್ರಾರ್ಥಿಸಿರಿ' ಎಂಬುದಾಗಿ ಥೆಸಲೋನಿಕದವರಿಗೆ ಪೌಲನು ಹೇಳುವಂತೆ ನಮಗೂ ಸೂಚನೆ ನೀಡುತ್ತಿದ್ದಾರೆ. 'ದೇವರು ನಮ್ಮೊಡನೆ ಇದ್ದಾರೆ' ಎಂದು ಧ್ಯಾನಿಸುವಾಗ ಯಾವುದೇ ಪ್ರಾರ್ಥನೆ ನಿರರ್ಥಕವಾಗದು. ಗೌರವ, ಮೃದುತ್ವ, ದೈನ್ಯತೆ, ಧನ್ಯತೆ ಹಾಗೂ ಆರಾಧನೆಗಳು ಪ್ರಾರ್ಥನೆಯ ಭಾಗಗಳಾಗಿರಬೇಕು. ಸಮಯ, ದಿನಗಳನ್ನು ಪ್ರಾರ್ಥನೆಗಾಗಿ ಗುರುತಿಸಿಕೊಂಡು ಅದಕ್ಕಾಗಿ ಕಾದಿರದೆ ಸದಾ ಪ್ರಾರ್ಥನೆಗೆ ಸಿದ್ಧವಾಗಿರಬೇಕು. ತೆಂಗಿನ ಕಾಯಿಯನ್ನು ಒಡೆದು ಒಳಗಿರುವ ನೀರನ್ನು ಚೆಲ್ಲುವಂತೆ, ನಮ್ಮನ್ನು ನಾವು ಹೊಡೆದು ಒಳಗಿರುವ ಅಹಂಕಾರವನ್ನು ಹೊರಹಾಕಬೇಕು. ದೀನತೆ, ತ್ಯಾಗ, ಸಹಿಷ್ಣುತೆಯಿಂದ ದೇವರನ್ನು ಕಾಣಲು ಹಾತೊರೆಯಬೇಕು. ಕ್ರಿಸ್ತರು ಪ್ರಾರ್ಥಿಸಲು ಕಲಿಸಿಕೊಟ್ಟಿದ್ದಾರೆ ಅದರಂತೆ ಪ್ರಾರ್ಥಿಸಬೇಕು. ದೇವರೇ, ಎಲ್ಲಾ ಸನ್ನಿವೇಶಗಳಲ್ಲೂ ನಿಮ್ಮ ಚಿತ್ತವನ್ನು ಈಡೇರಿಸುವಂತೆ ಕೃಪೆ ನೀಡಿರಿ ಎಂದು ಪ್ರಾರ್ಥಿಸಬೇಕು.

ಸೃಷ್ಟಿಯಲ್ಲಿನ ಸಕಲ ಜೀವಸಂಕುಲಗಳು ದೇವರಿಗೆ ವಿಧೇಯರಾಗಿ ತನ್ನದೇ ಆದ ಸ್ವರದಲ್ಲಿ ದೇವರನ್ನು ಕ್ಷಣಕ್ಷಣಕ್ಕೂ ಕೊಂಡಾಡುತ್ತದೆ. ಆದರೆ ಮನುಷ್ಯ ದೇವರ ಕಡೆಗೆ ತಲೆಯೆತ್ತದೆ ತನ್ನದೇ ಆಲೋಚನೆಗಳಲ್ಲಿ ಹಾಗೂ ಚಿಂತೆಯಲ್ಲಿ ಮುಳುಗಿರುತ್ತಾನೆ.

**ಪ್ರಾರ್ಥನೆಯಲ್ಲಿ ವಿಶ್ವಾಸ:** ಕ್ರಿಸ್ತರು ನಮಗೆ ತಿಳಿಸಿದ ಪ್ರಕಾರ, 'ಬೇಡಿಕೊಳ್ಳಿರಿ, ನಿಮಗೆ ದೊರೆಯುವುದು. ಹುಡುಕಿರಿ ನಿಮಗೆ ಸಿಗುವುದು. ತಟ್ಟಿರಿ ನಿಮಗೆ ತೆರೆಯಲಾಗುವುದು. ಏಕೆಂದರೆ ಬೇಡಿಕೊಳ್ಳುವ ಪ್ರತಿಯೊಬ್ಬನು ಹೊಂದುವನು. ಹುಡುಕುವವನಿಗೆ ಸಿಕ್ಕುವುದು. ತಟ್ಟಿದವನಿಗೆ ತರೆಯುವುದು.' ಕೇಳಬೇಕಾದದ್ದು, ಹುಡುಕಬೇಕಾದದ್ದು, ತಟ್ಟಬೇಕಾದ್ದು ಏನು ಎಂಬುದು ಆಂತರೀಕ ವಿವೇಚನೆಗೆ ಸೂಕ್ತವಾಗಿರಬೇಕು. ...ಅಂತರಂಗದಲ್ಲಿ ನಡೆಯುವುದನ್ನು ನೋಡುವ ನಿನ್ನ ತಂದೆಯು ನಿನಗೆ ಫಲ ಕೊಡುವನು.

ದೇವರು ತಡಮಾಡುವವರಲ್ಲ, ನಾವು ಕೇಳುವ ಮುಂಚೆಯೇ ಅವರು ಉತ್ತರಿಸುವವರು. ಅನುಮಾನವನ್ನು ತ್ಯಜಿಸಿದಾಗ ವಿಶ್ವಾಸದ ಮೂಲಕ ಮುಕ್ತಿ ಹೊಂದುತ್ತೇವೆ. ಪ್ರಾರ್ಥನೆಯ ಮಾತುಕತೆ ಪ್ರೇಮಿಗಳ ಅಂತ್ಯವಿಲ್ಲದ ಮಾತಿನಂತೆ ಪ್ರೀತಿಯಿಂದ ಇರುತ್ತದೆ. ದೇವರ ಇರುವಿಕೆಯನ್ನು ಅನುಭವಿಸುವವರಾಗುತ್ತೇವೆ. ಸದಾ ಹರ್ಷಚಿತ್ತ ರಾಗಿ ಪ್ರಾರ್ಥಿಸುವ ಮನಸ್ಸು-ಹೃದಯ-ಅಂತರಂಗ ನಮ್ಮದಾಗುತ್ತದೆ.

ಪ್ರಾರ್ಥನೆ, ಸ್ತುತಿ, ಸ್ತೋತ್ರ, ದೇವ ನಾಮ ಮಹಿಮೆಯಿಂದ ಅತಿಶಯ ವೈಭವದ ಪ್ರಸನ್ನತೆಯನ್ನು ಸದಾ ನಾವು ಅನುಭವಿಸುವವರಾದಾಗ ದೇವರಲ್ಲಿ ಸದಾ ಆನಂದಪಡುವ ಮಹಾ ಸೌಭಾಗ್ಯವನ್ನು ಹೊಂದುತ್ತೇವೆ. ಆದ್ದರಿಂದ ದೃಢನಿರ್ಧಾರದಿಂದ ದೇವರ ಇಚ್ಛೆಗೆ ಸಂಪೂರ್ಣ ಶರಣಾಗೋಣ. ಅವರ ನಾಮಮಹಿಮೆಯನ್ನು ಸದಾ ಮಾಡುವವರಾಗೋಣ. ಬದುಕನ್ನು ದೇವರ ಸಾಮ್ರಾಜ್ಯದ ಕಡೆಗೆ ಚಲಿಸುವಂತೆ ಮಾರ್ಪಡಿಸಿಕೊಳ್ಳೋಣ. ಪ್ರಾರ್ಥನೆಯ ಮುನ್ನ ಪವಿತ್ರಾತ್ಮಭರಿತರಾಗುವ ನಾವು ನಿಜ ದೇವರ ನಿಜ ಮಕ್ಕಳಾಗಿ ಬಾಳುವ ಅವಕಾಶವನ್ನು ಹೊಂದುವವರಾಗೋಣ.

***'ಯಾರಾರು ದೇವರ ಆತ್ಮನಿಂದ ನಡೆಸಿಕೊಳ್ಳುತ್ತಾರೋ ಅವರು ದೇವರ ಮಕ್ಕಳು'*** : ಯೇಸುವಿನ ಶಿಷ್ಯರ ಮೇಲೆ ಪವಿತ್ರಾತ್ಮರು ಕೆನ್ನಾಲಿಗೆ ರೂಪದಲ್ಲಿ ಇಳಿದು ಬಂದಾಗ ಎಲ್ಲರೂ ಯೇಸುವಿನ ಸಾಕ್ಷಿಯಾಗಲು ಸಿದ್ಧರಾದರು. ಭಯದಿಂದ ಅವಿತು ಕುಳಿತ ಅವರಲ್ಲಿ ಪವಿತ್ರಾತ್ಮರು ಧೈರ್ಯವನ್ನು ತುಂಬಿದರು. ದೇವರ ಚಿತ್ತವನ್ನು ಪಾಲಿಸುವಾಗ ಬಂದೊದಗಿದ ಎಲ್ಲಾ ಕಷ್ಟಸಂಕಷ್ಟಗಳನ್ನು ಪವಿತ್ರಾತ್ಮ ಶಕ್ತಿಯಿಂದ ಎದುರಿಸಿದರು. ಅಂತೆಯೇ ಪ್ರಾರ್ಥಿಸುವಾಗ ನಮಗೆ ಅನೇಕ ಶೋಧನೆಗಳು ಎದುರಾಗುತ್ತವೆ. ಅವುಗಳಿಂದ ಬಿಡುಗಡೆ ಹೊಂದಲು ಪವಿತ್ರಾತ್ಮರ ಶಕ್ತಿಯು ನಮಗೆ ಅತ್ಯಗತ್ಯವಾಗಿದೆ. ಪವಿತ್ರಾತ್ಮರ ಸಹಕಾರವನ್ನು, ವರದಾನಗಳನ್ನು ಯಾಚಿಸಿದಾಗ ಅವರು ಅನುಗ್ರಹಿಸುವರು. ವರಗಳ ಧಾರೆಯನ್ನೇ ನಮ್ಮ ಮೇಲೆ ಹರಿಸುವವರು ಪವಿತ್ರಾತ್ಮರು. ತೇಜದ ಪ್ರಭೆಯನ್ನು ಬೀರುತ್ತಾ ಆಂತರಿಕ ಶಕ್ತಿದಾಯಕರಾಗುವವರು. ಸಪ್ತವರದಾತರು ಪವಿತ್ರಾತ್ಮರು. ಆದ್ದರಿಂದ ಪವಿತ್ರಾತ್ಮಭರಿತರಾಗುತ್ತಾ ಪ್ರಾರ್ಥಿಸುವಾಗ ಯಾವುದೇ ಅಡೆತಡೆಗಳು, ಶೋಧನೆಗಳು ನಮಗೆ ಎದುರಾಗುವುದಿಲ್ಲ. ಪ್ರತಿಯೊಬ್ಬ ಕ್ರೈಸ್ತನೂ ಪವಿತ್ರ ಜ್ಞಾನಸ್ನಾನದ ಮೂಲಕ ಪವಿತ್ರಾತ್ಮಭರಿತನಾಗಿರುತ್ತಾನೆ. ದೇವರ ನಾಮವನ್ನು ಉಚ್ಚರಿಸುತ್ತಾ ಪವಿತ್ರಾತ್ಮರ ಸಹಕಾರವನ್ನು ಕೋರುವಾಗ ಪವಿತ್ರಾತ್ಮರ ಜ್ವಾಲೆಯು ನಮ್ಮನ್ನು ಆವರಿಸಿಕೊಳ್ಳುತ್ತದೆ. ಹಾಗೆಯೇ ಪವಿತ್ರಾತ್ಮಭರಿತರಾಗಿ ವಿಶ್ವಾಸ ನಂಬಿಕೆಯಿಂದ ದೇವರನ್ನು ಸ್ತುತಿಸಿ, ನಾಮಮಹಿಮೆಯನ್ನು ಮಾಡುವವರು ಪರಿಪೂರ್ಣತೆಯಿಂದ ರೂಪುಗೊಳ್ಳುತ್ತಾರೆ. ದೇವರ ಮಕ್ಕಳೆನಿಸಿಕೊಳ್ಳುವ ಎಲ್ಲಾ ಅರ್ಹತೆಗಳನ್ನು ಹೊಂದುತ್ತಾರೆ.

ದೇವರು ನಮಗೆ ಅನುಭವಿಸಲೆಂದೇ ಪ್ರಪಂಚದ ಸಮಸ್ತವನ್ನು ನೀಡಿರುವಾಗ ಅವುಗಳನ್ನು ಸ್ವಾರ್ಥತೆಯಲ್ಲಿ ಉಪಯೋಗಿಸುವುದು ಸರಿಯಲ್ಲ. ಪ್ರತಿಯೊಬ್ಬ ವ್ಯಕ್ತಿಗೂ ಸಹ ಅದರಲ್ಲಿ ಪಾಲಿದೆ. ಆದ್ದರಿಂದ ಮಾನವರಾದ ನಾವು ಪ್ರೀತಿಯಿಂದ ಎಲ್ಲವನ್ನೂ ಹಂಚಿಕೊಂಡು ಬಾಳಬೇಕು. ಭೂಲೋಕದ ಆಸ್ತಿಯನ್ನು ಶೇಖರಿಸಿಟ್ಟುಕೊಳ್ಳುವುದರಿಂದ ಯಾರಿಗೇನು ಲಾಭ? ಅವು ಯಾರಿಗೂ ಉಪಯೋಗವಿಲ್ಲದ ಹಾಗೆ ಒಂದು ದಿನ ಮರೆಯಾಗಿಬಿಡುತ್ತದೆ. ಏಕೆಂದರೆ ಈ ನಮ್ಮ ಶರೀರ ಮಣ್ಣಿಗೆ ಸೇರಲೇಬೇಕು. ಆದರೂ ಸಹ ನಾವು ಪರರನ್ನು ಪ್ರೀತಿಸುವುದರಲ್ಲಿ ಸೋತಿದ್ದೇವೆ. ಸ್ವಾರ್ಥದ ಪ್ರಪಂಚದಲ್ಲಿಯೇ ಮುಳುಗಿದ್ದೇವೆ. ಕೊನೆಗೆ ಅಳಿದು ಹೋಗುತ್ತೇವೆ. ಇನ್ನಾದರೂ ನಾವು ಎಚ್ಚೆತ್ತುಕೊಂಡು ದೇವರ ಮಾತಿಗೆ ಕಿವಿಗೊಡಬೇಕು.

ಶತ್ರುಗಳನ್ನು ಪ್ರೀತಿಸುವುದೇ ಒಂದು ದೊಡ್ಡ **'challenge'**. ನಾವು ಎಲ್ಲರನ್ನೂ ಪ್ರೀತಿಸಬೇಕು. ಯೇಸುಸ್ವಾಮಿಯು ಶಿಲುಬೆಯ ಮೇಲಿಂದ ವೈರಿಗಳನ್ನು ಕ್ಷಮಿಸಿದರು. ಅಂತಹ ಕ್ಷಮೆಯನ್ನು ನಾವು ಸಹ ಇತರರಿಗೆ ನೀಡಲು ಸಿದ್ಧರಾಗಿರಬೇಕು. ಪರಲೋಕ ಪ್ರಾರ್ಥನೆಯಲ್ಲಿ , ಪರರ ತಪ್ಪುಗಳನ್ನು ನಾವು ಕ್ಷಮಿಸುವಂತೆ ಎನ್ನುವ ಮಾತು

ಮನದಾಳದಿಂದ ಹೊರಟ ಪ್ರಾಮಾಣಿಕ ಪದಗಳಾಗಿರಬೇಕು.

**'ನಿಮ್ಮ ಮುಪ್ಪಿನ ತನಕ ನಾನೇ ಆಧಾರ. ನರೆ ಬಂದಾಗಲೂ ನಿಮ್ಮನ್ನು ಹೊತ್ತು ಸಹಿಸುವೆನು; ನಾನೇ ಉಂಟು ಮಾಡಿದೆನು, ನಾನೇ ಹೊರುವೆನು'** ಎಂಬ ತಂದೆ ದೇವರ ಮಾತುಗಳು ನಮ್ಮ ಮೇಲೆ ಅವರಿಟ್ಟಿರುವ ಅಗಾಧ ಪ್ರೀತಿಯನ್ನು ಸೂಚಿಸುತ್ತದೆ. ಇಂತಹ ದೇವರ ಮಕ್ಕಳಾದ ನಾವು ಎಷ್ಟರಮಟ್ಟಿಗೆ ಇತರರೊಂದಿಗೆ ಅಂತಹ ಪ್ರೀತಿಯನ್ನು ಹಂಚಿಕೊಳ್ಳಬೇಕು.

ಹೆತ್ತವರ ಪ್ರೀತಿಯನ್ನೇ ಕಾಣದೆ ಬೆಳೆದ ಅನಾಥ ಮಕ್ಕಳು, ಕೊನೆಗಾಲದಲ್ಲಿ ತಮ್ಮ ಮಕ್ಕಳ ಪ್ರೀತಿಯನ್ನು ಕಳೆದುಕೊಂಡ ಹೆತ್ತವರು, ಪ್ರೀತಿಯ ಸಾಂತ್ವನವಿಲ್ಲದೆ ಹಲುಬುತ್ತಿರುವ ನತದೃಷ್ಟರು, ಒಂಟಿತನದಿಂದ ಪ್ರೀತಿಗಾಗಿ ಹಂಬಲಿಸುತ್ತಿರುವ ಬಡಪಾಯಿ ರೋಗಿಗಳು, ಪ್ರೀತಿಗಾಗಿ ಕಾಯುತ್ತಿರುವ ಮಾಡದ ತಪ್ಪಿಗಾಗಿ ಶಿಕ್ಷೆಯನ್ನು ಅನುಭವಿಸುತ್ತಿರುವವರು, ಈ ಪ್ರಪಂಚದಲ್ಲಿ ಜೀವಿಸುತ್ತಿದ್ದಾರೆ. ಅವರನ್ನು ಕಂಡೂಕಾಣದಂತೆ ನಾವಿಂದು ಜೀವಿಸುತ್ತಿಲ್ಲವೆ? ಅದು ಅವರು ಮಾಡಿದ ಪಾಪದ, ಕರ್ಮದ ಫಲವೆಂದು ಅಸಡ್ಡೆ ತೋರಿಸುತ್ತಿಲ್ಲವೆ? ನನಗವನು ದ್ರೋಹ ಬಗೆದ ಅವನ ಮೇಲೆ ಹಗೆ ಸಾಧಿಸು ತ್ತೇನೆಂದು ಸಮಯ ಕಾಯುತ್ತಿಲ್ಲವೆ? ಹಾಗಾದರೆ ನಾವು ದೇವರ ಮಕ್ಕಳಾಗಲು ಹೇಗೆ ಸಾಧ್ಯ?

– ಪ್ರಪಂಚದಲ್ಲಿರುವ ಪ್ರತಿಯೊಬ್ಬರೂ ಪಾಪಿಗಳು; ಆದರೂ ದೇವರು ತಮ್ಮ ಸೌಭಾಗ್ಯವನ್ನು ನಮಗೆ ಅನುಗ್ರಹಿಸಿದ್ದಾರೆ. **The Grace is more powerful than disgrace.**

- ನಮ್ಮ ಪಾಪಕ್ಕಿಂತಲೂ ದೇವರ ಕೃಪೆ ಅಪಾರ.
- ನಾವು ನಮ್ಮನ್ನು ಹೆಚ್ಚಾಗಿ ತಿಳಿದುಕೊಳ್ಳಲು ದೇವರು ಅವಕಾಶ ನೀಡಿದ್ದಾರೆ. ಅಂತೆಯೇ ನಮ್ಮನ್ನು ನಾವು ತಿಳಿದುಕೊಂಡಾಗ ಇತರರನ್ನು ನಾವು ತಿಳಿದುಕೊಳ್ಳಬಹುದು. ಪ್ರೀತಿಸ್ವರೂಪರಾದ ದೇವರ ಪ್ರೀತಿಯನ್ನು ಇತರರೊಂದಿಗೆ ಹಂಚಿಕೊಳ್ಳಬಹುದು.

ದೇವರು ಸದಾ ನಮ್ಮೊಂದಿಗಿದ್ದಾರೆ ಎಂಬ ಭಾವನೆಯು ನಮ್ಮಲ್ಲಿ ದೃಢವಾಗಿರುವಾಗ ದೇವರ ಮಹಿಮೆಯ ಪರಿಪೂರ್ಣ ಸ್ಪರ್ಶದ ಅನುಭವ ನಮಗೆ ಆಗುತ್ತದೆ. ಇತರರನ್ನು ದೇವರ ಕಡೆಗೆ ಬರ ಮಾಡಲು ಸದಾ ಶ್ರಮಿಸುತ್ತಾ, ಕ್ರಿಸ್ತರು ತೋರಿದ ಹಾದಿಯಲ್ಲಿ ನಡೆದಾಗ ಲೋಕದಲ್ಲಿ ಸತ್ಯಕ್ಕೆ ಸಾಕ್ಷಿಗಳಾಗುತ್ತೇವೆ. **[We have to learn to live with all sections of society. All are equal and beautiful in God's eyes.]** ದೇವರ ಚಿತ್ತವನ್ನು ಪಾಲಿಸುತ್ತಾ ಕ್ರಿಸ್ತರ ನೈಜ ಶಿಷ್ಯರಾಗಲು ಯೋಗ್ಯರಾಗುತ್ತೇವೆ.

ತಾಳ್ಮೆ, ಸಹನೆ, ಕ್ಷಮೆ, ದೀನತೆ, ಸೇವೆ, ಪ್ರೀತಿಗಳನ್ನು ಯೇಸುಕ್ರಿಸ್ತರಿಂದ ನಾವು ಕಂಡುಕೊಂಡಿದ್ದೇವೆ. ಸತ್ಯ ಪ್ರೀತಿಯ ಹಾದಿ ಸುಲಭವಾದ ಹೂವಿನ ಹಾಸಲ್ಲ. ಬದಲಾಗಿ ಕಲ್ಲುಮುಳ್ಳಿನ ಹಾದಿಯೆಂಬುದನ್ನು ಕ್ರಿಸ್ತರಿಂದ ತಿಳಿದಿದ್ದೇವೆ. ಪ್ರೀತಿಯ ಆದರ್ಶವನ್ನು ಎತ್ತಿ ಹಿಡಿಯುವವರಾಗಿ ಕ್ರಿಸ್ತರಲ್ಲಿ ಬಾಳೋಣ. ನಿಜವಾದ ದೇವರ ಮಕ್ಕಳು ಪ್ರೀತಿಯ ಪ್ರತೀಕ ಎಂಬುದಕ್ಕೆ ನಾವು ಮಾದರಿಯಾಗಿರೋಣ.

**ನಮ್ಮ ಹೃದಯದಲ್ಲಿರುವ ಕ್ರಿಸ್ತ :**

**'ಮಹೋನ್ನತದಲ್ಲಿ ದೇವರಿಗೆ ಮಹಿಮೆ**
**ಭೂಲೋಕದಲ್ಲಿ ಸುಮನಸ್ಕರಿಗೆ ಶಾಂತಿ...'**

ಎಂಬ ಜಯಘೋಷವನ್ನು ಹೇಳುವುದರ ಮೂಲಕ ದೇವರ ಏಕಮಾತ್ರ ಪುತ್ರ ಯೇಸುಕ್ರಿಸ್ತರ ಜನನದ ದಿನದಂದು ದೂತರ ಗಣಗಳು ರಕ್ಷಣೆಯ ಕಾರ್ಯವನ್ನು ನೆನೆದು ದೇವರು ಕೊಂಡಾಡಿದರು.

**'ಇಮ್ಮಾನುವೆಲ್' –** ದೇವರು ನಮ್ಮೊಡನೆ ಇದ್ದಾರೆ ಎಂಬ ನೈಜ ಅನುಭವದ ಆಚರಣೆಯೇ ಕ್ರಿಸ್ತ ಜಯಂತಿ. ಕ್ರಿಸ್ತರು ತಂದಂತಹ ದೈವಾನುಭವದ ಪರಿಣಾಮ ನಾವು ದೇವರ ಪ್ರೀತಿಯ ಮಕ್ಕಳಾಗಿದ್ದೇವೆ. ದೇವರ ಇರುವಿಕೆಯು ನಮ್ಮ ಬಾಳಿನ ಮೂಲಕ ಲೋಕಕ್ಕೆ ಗೋಚರವಾಗಲು ಯೇಸುಸ್ವಾಮಿಯೇ ಕಾರಣ.

ಸಮಾಧಾನದ ಪ್ರಭು ಈ ಭೂಲೋಕಕ್ಕೆ ಆಗಮಿಸುವಾಗ **'ಸತ್ಯದ ಬೆಳಕು'** ನಮ್ಮೊಳಗೆ ಬೆಳಗಿತು. ಲೋಕ ರಕ್ಷಣೆಗಾಗಿ ಹುಟ್ಟಿದ ಕ್ರಿಸ್ತರು ಎಲ್ಲರ ಹೃದಯದಲ್ಲೂ ಶಾಂತಿಯ ರೋಮಾಂಚನದ ಅನುಭವವನ್ನು ನೀಡಿದರು. ನವಿರಾದ ದೈವಿಕ ಸ್ಪರ್ಶದ ಪುಳಕವು ಎಲ್ಲರಲ್ಲೂ ಹೊಸ ಲೋಕವನ್ನು ತೆರೆದಿಟ್ಟಿತ್ತು.

- ಪ್ರೀತಿಯ ಅಮೂಲ್ಯ ನಿಧಿ ನಮ್ಮ ಅಂತರಾಳದಲ್ಲಿದೆ ಎಂದು ತೋರಿಸಿಕೊಟ್ಟವರು ಯೇಸು ಪ್ರಭು.
- ಅಹಿಂಸೆಯ ಮಾರ್ಗದಲ್ಲಿ, ದೀನತೆಯ ಹಾದಿಯಲ್ಲಿ, ತ್ಯಾಗ ಮನೋಭಾವದಲ್ಲಿ , ಆಂತರಿಕ ಶಕ್ತಿಯಲ್ಲಿ , ಕ್ಷಮೆ ನಿಷ್ಠೆಯಲ್ಲಿ , ದೇವರ ವಾಕ್ಯದಲ್ಲಿ , ಸನ್ನಡತೆಯಲ್ಲಿ ಯಶಸ್ಸಿದೆ ಎನ್ನುವುದನ್ನು ಮನದಟ್ಟು ಮಾಡಿದವರು ಯೇಸುಪ್ರಭು.
- ಚಿಂತಕ್ರಾಂತರಾಗಿ ಅಜ್ಞಾನದಿಂದ ಬಾಳುತ್ತಿದ್ದಾಗ ತಿಳಿವನ್ನು ಹರಿಸಿದವರು ಯೇಸುಪ್ರಭು.
- ಸ್ವಾರ್ಥ, ಅಹಂಕಾರ, ಮೋಹ, ಮತ್ಸರ, ಅಸಮಾನತೆ, ಭೇದ ಭಾವ, ಹೊಟ್ಟೆಕಿಚ್ಚು, ದ್ವೇಷಗಳನ್ನು ತೊರೆದು ಒಂದೇ ಪ್ರಪಂಚದ ಸೂರಿನಡಿ ಒಬ್ಬರೇ ದೇವರ ಮಕ್ಕಳಂತೆ ಬಾಳುವುದನ್ನು ಕಲಿಸಿಕೊಟ್ಟು ಅದರಂತೆ ಬದುಕಿ ತೋರಿಸಿದವರು ಯೇಸುಪ್ರಭು.
- ಪರಲೋಕ ರಾಜ್ಯ ಎಷ್ಟೊಂದು ಬೆಲೆಯುಳ್ಳದ್ದು?, ಮಾನವರ ಜೀವನ ಹಾದಿ ಎಷ್ಟರಮಟ್ಟಿಗೆ ಸರಿ?, ಪ್ರೀತಿಯ ಬೆಲೆ ಎಂತಹದ್ದು?, ಬಾಳಿನ ಗುರಿ ಏನು? ಎಂಬ ಶ್ರೇಷ್ಠ ಸತ್ಯಗಳನ್ನು ಲೋಕಕ್ಕೆ ಸಾರಿದವರು ಯೇಸುಪ್ರಭು.
- ಬಾಳಿನ ಧ್ಯೇಯವನ್ನು, ಪ್ರತಿಯೊಂದು ಹೆಜ್ಜೆಗೆ ದೃಢತೆಯನ್ನು, ಪರರಲ್ಲಿ ನಮ್ಮನ್ನೇ ಕಾಣುವ ಗುಣವನ್ನು, ಆತ್ಮದ ಅರಿವನ್ನು ನೀಡಿ ಮಾನವರನ್ನು ಪಾಪದಿಂದ ರಕ್ಷಿಸಿದವರು ಯೇಸುಪ್ರಭು.
- ಎಲ್ಲಾ ಕಾಲದೊಳು, ಎಲ್ಲಾ ವೇಳೆಯಲ್ಲೂ, ಎಲ್ಲರ ಮನಗಳಲ್ಲೂ ಜೀವಿಸುವ ದೇವರಾಗಿರುವವರು ಯೇಸುಪ್ರಭು.
- ಮಾನವರ ಪಾಪಗಳನ್ನೆಲ್ಲಾ ತಾ ಹೊತ್ತು ಮುಕ್ತಿಯ ಪಥವನ್ನು ತೋರಿದವರು ಯೇಸುಪ್ರಭು.

ಇಂದು ನಮ್ಮನ್ನು ನಾವು ಪ್ರಶ್ನಿಸಿಕೊಳ್ಳೋಣ. ದೇವರ ಪ್ರೀತಿಗೆ ನಾವು ನಿಜವಾಗಲೂ ಬಾಧ್ಯಸ್ಥರಾಗಿದ್ದೇವೆಯೆ? ಆಂತರ್ಯದಲ್ಲಿ ಕ್ರಿಸ್ತರನ್ನು ಕಾಣಲು ತವಕಿಸಿದ್ದೇವೆಯೆ? ನಾಶವಾಗುವ ಸಂಪತ್ತನ್ನು ಶೇಖರಿಸುವುದರಲ್ಲೇ ಜೀವನ ಸಾಗಿಸುತ್ತಿದ್ದೇವೆಯೆ? ಲೋಕವನ್ನು ದೂಷಿಸುತ್ತಾ, ದ್ವೇಷಿಸುತ್ತಾ, ನಿರ್ಲಕ್ಷಿಸುತ್ತಾ ಸತ್ಯವನ್ನು ತೊರೆದರೆ ಅದರಿಂದೇನಾದರೂ ಪ್ರಯೋಜನವಿದೆಯೆ? ಅಂದ ಮೇಲೆ ನಾವು ಏನು ಮಾಡಬೇಕು?

**'ಸತ್ಯವೇ ಶಕ್ತಿ; ಸತ್ಯವೇ ಭಾಗ್ಯ'** ಎನ್ನುತ್ತಾ ಬಾಳಬೇಕು. ಬಡವರನ್ನು ಪ್ರೀತಿಸುತ್ತಾ, ನೊಂದವರನ್ನು, ದೀನದಲಿತರನ್ನು, ಅನಾಥರನ್ನು ನಾವು ಸಮಾನ ದೃಷ್ಟಿಯಿಂದ ನೋಡಿ ಅವರಿಗೆ ಸಾಧ್ಯವಾದಷ್ಟು ಮಟ್ಟಿಗೆ ಸಹಾಯ ಮಾಡಲು ಪ್ರಯತ್ನಿಸೋಣ. **ನನ್ನ ಬಳಿಗೆ ಬನ್ನಿರಿ** ಎಂಬ ದೇವರ ಮಾತಿಗೆ ಓಗೊಟ್ಟು ಸತ್ಯದ ಕಡೆಗೆ ಮನಸ್ಸನ್ನು ತಿರುಗಿಸಿಕೊಳ್ಳೋಣ. ದೇವರ ಯೋಜನೆಗಳನ್ನು ಪೂರ್ಣ ಮನಸ್ಸಿನಿಂದ ಸ್ವೀಕರಿಸೋಣ. ಕ್ಷಮೆಯಲ್ಲಿ ಆನಂದಿಸೋಣ. ನ್ಯಾಯದಲ್ಲಿ ನಡೆಯೋಣ. ಸಮಾನತೆ, ನಿಸ್ವಾರ್ಥತೆ, ಅಹಿಂಸೆ, ಸದ್ಗುಣ, ಸತ್ಯ, ಪ್ರೀತಿ, ಕ್ಷಮೆ, ಆತ್ಮವಿಶ್ವಾಸ, ಹೊಂದಾಣಿಕೆ... ನಮ್ಮೆಲ್ಲರ ಆಚರಣೆಯಾಗಿರಲಿ. ಪರಪ್ರೀತಿಯೇ ನಮ್ಮ ದಿನನಿತ್ಯದ ಬಾಳಿನ ಪ್ರಾರ್ಥನೆಯಾಗಿರಲಿ. ಕ್ರಿಸ್ತರು ತೋರಿದ ನೈಜತೆಯೇ ನಮ್ಮ ಪಾಲನೆಯಾಗಿರಲಿ. **ನ್ಯಾಯದಲ್ಲಿ ನೀತಿಯಿರಲಿ.** ಈ ಲೋಕದ ಸಿರಿಯನ್ನು ಬಯಸದೇ, ಅಂತ್ಯವಿಲ್ಲದ ಚಿರಕಾಲ ಜೀವಿತಕ್ಕಾಗಿ ಇಂದೇ ಪರಿಶುದ್ಧತೆಯನ್ನು ಮಾಡಿಕೊಳ್ಳಲು ಸಿದ್ಧರಾಗೋಣ. **ದೇವರು ನಮ್ಮಲ್ಲೇ ಇದ್ದಾರೆ** ಎಂಬ ಪೂರ್ಣ ವಿಶ್ವಾಸದಿಂದ ಕೂಡಿ, ಅಮಿತಾನಂದವನ್ನು ಎಲ್ಲೆಲ್ಲೂ ಹುಡುಕದೇ ನಮ್ಮನ್ನು ನಾವು ಕಂಡುಕೊಳ್ಳೋಣ.

ತಂದೆದೇವರ ಮಹಿಮೆಯನ್ನು ಮಾಡುತ್ತಾ, ಕ್ರಿಸ್ತರ ರಕ್ಷಣೆಯನ್ನು ಧ್ಯಾನಿಸುತ್ತಾ, ಪವಿತ್ರಾತ್ಮರ ವರದಾನಗಳಿಗೆ ಬಾಧ್ಯಸ್ಥರಾಗುತ್ತಾ ಆತ್ಮಿಕ ಸೌಭಾಗ್ಯದಲ್ಲಿ ಸರ್ವರೂ ಒಂದಾಗಿ ಜೀವಿಸೋಣ. ಎಲ್ಲರೂ ಒಬ್ಬರೇ ದೇವರ ಮಕ್ಕಳೆಂದು ವಿಶ್ವಾಸಿಸಿ ಬಾಳೋಣ.

*'ದೇವರೇ, ನೀವು ನಿರಂತರ ಸ್ತುತಿಸ್ತೋತ್ರಗಳಿಗೆ ಪಾತ್ರರಾಗಿರುವಿರಿ. ಶಕ್ತಿ, ಮಹಿಮೆ, ಘನತೆ, ಗೌರವ, ಜಯ ಸರ್ವವೂ ನಿಮ್ಮಲ್ಲಿಯೇ ಇವೆ. ಎಲ್ಲವೂ ನಿಮ್ಮದಾಗಿದೆ. ಎಲ್ಲವೂ ನಿಮಗಾಗಿಯೇ. ಎಲ್ಲವೂ ನಿಮ್ಮ ಚಿತ್ತದಂತೆಯೇ. ನಿಮ್ಮ ಮಹಾದಯೆಗಾಗಿ ಪ್ರಾರ್ಥಿಸುತ್ತಾ ನಿಮ್ಮ ನಾಮ ಮಹಿಮೆಯನ್ನು ಮಾಡುತ್ತೇವೆ. ಸ್ತುತಿಸುತ್ತಾ, ಆರಾಧಿಸುತ್ತಾ ಕೊಂಡಾಡುತ್ತೇವೆ. ಭಜಿಸುತ್ತಾ ನಿಮ್ಮನ್ನೇ ಧ್ಯಾನಿಸುತ್ತೇವೆ. ನಿರಂತರವೂ ಪ್ರಾರ್ಥನೆಯಲ್ಲಿ ನಿಮ್ಮೊಡನೆ ಮಾತನಾಡುವ ಭಾಗ್ಯವನ್ನು ನಮಗೆ ಕರುಣಿಸಿದ್ದಕ್ಕಾಗಿ ನಿಮಗೆ ಸದಾ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ನಿಮ್ಮ ನಾಮಸ್ಮರಣೆಯೇ ನಮ್ಮ ಬಾಳಿನಲ್ಲಿ ಪ್ರಮುಖವಾದ ಕರ್ತವ್ಯವೆಂಬುದನ್ನು ಅರಿತುಕೊಂಡು, ಎಲ್ಲರೊಂದಿಗೆ ನಿಮ್ಮ ಪ್ರೀತಿಯನ್ನು ಹಂಚಿಕೊಂಡು ಬಾಳಲು ನಮಗೆ ನಿಮ್ಮ ಹೇರಳವಾದ ಕೃಪೆಯನ್ನು, ಅನುಗ್ರಹವನ್ನು, ಬಲವನ್ನು, ಆಶೀರ್ವಾದಗಳನ್ನು ನಿಮ್ಮ ಮಕ್ಕಳಾಗಿರುವ ನಮ್ಮೆಲ್ಲರ ಮೇಲೆಯೂ ಹರಿಸಿರಿ.'*

*ಆಮೇನ್.*



## ನಿರಂತರ ಪ್ರಾರ್ಥನೆಯ ಆನಂದ

ನಿರಂತರ ಪ್ರಾರ್ಥಿಸುವುದು ಹೇಗೆ ಎಂಬ ನನ್ನ ಪ್ರಶ್ನೆಗೆ ಯಾರೂ ಸರಿಯಾದ ಉತ್ತರ ಕೊಡದೆ ಹೋದಾಗ, ಒಬ್ಬರು ಮಾರ್ಗದರ್ಶಕರು ನನಗೆ ಸಿಕ್ಕಿದರು. ಅವರ ಬಳಿ ನನ್ನ ಸಂದೇಹವನ್ನು ಹೇಳಿದಾಗ ಅವರು ಜಪಮಾಲೆಯನ್ನು ನನಗಿತ್ತು, ''ಈ ಇದನ್ನು ತೆಗೆದುಕೋ. ಇದರ ಸಹಾಯದಿಂದ ಎಣಿಕೆ ಹಾಕುತ್ತ, 'ಓ ದೇವರೇ, ನನ್ನ ಮೇಲೆ ಕೃಪೆದೋರು' ಎಂಬುದಾಗಿ ಪ್ರಾರ್ಥಿಸು. ಶಾಂತವಾಗಿ, ಅವಸರವಿಲ್ಲದೆ ಪ್ರಾರ್ಥಿಸು. ಪ್ರತಿದಿನ ಮೂರು ಸಾವಿರಕ್ಕಿಂತ ಹೆಚ್ಚೂ ಅಲ್ಲದೆ, ಕಡಿಮೆಯೂ ಅಲ್ಲದೆ ಪ್ರಾರ್ಥಿಸಬೇಕು. ದೇವರು ನಿನಗೆ ಸಹಾಯ ಮಾಡುವನು. ಅದರಿಂದ ನಿನಗೆ ನಿರಂತರ ಪ್ರಾರ್ಥನೆ ಸಾಧ್ಯವಾಗುವುದು'' ಎಂದರು.

ಅವರ ನಿರ್ದೇಶನದಂತೆ ದಿನಕ್ಕೆ ಮೂರು ಸಾವಿರ ಬಾರಿ ಪ್ರಾರ್ಥನೆ ಮಾಡತೊಡಗಿದೆ. ಮೊದಲ ಎರಡು ದಿನ ಬಹಳ ಕಷ್ಟವೆನಿಸಿತು. ಆದರೆ ಕ್ರಮೇಣ ಅದು ಸುಲಭವೆನಿಸಿತು. ಮತ್ತೆ ಮಾರ್ಗದರ್ಶಕರನ್ನು ಕಂಡೆ. ಈಗ ಅವರು ಪ್ರಾರ್ಥನೆಯ ಸಂಖ್ಯೆಯನ್ನು ಹೆಚ್ಚಿಸಿ, ಆರು ಸಾವಿರ ಬಾರಿ ಮಾಡುವಂತೆ ಹೇಳಿದರು. ಹೀಗೆ ಒಂದೊಂದು ವಾರ ಪ್ರಾರ್ಥನೆಯ ಸಂಖ್ಯೆ ಹೆಚ್ಚಿಸುತ್ತ ಹನ್ನೆರಡು ಸಾವಿರ ಬಾರಿ ಪ್ರಾರ್ಥಿಸತೊಡಗಿದೆ. ಮೊದಮೊದಲು ಪ್ರಾರ್ಥನೆ ಮಾಡುವಾಗ ಆನಂದವಾಗುತ್ತಿತ್ತು, ಬರಬರುತ್ತ ಶ್ರಮದಿಂದ ನನ್ನ ನಾಲಗೆ ಕೆಲಸ ಮಾಡದಾಯಿತು, ಜಪಮಾಲೆ ತಿರುಗಿಸುತ್ತ ಎಡಗೈ ನೋಯತೊಡಗಿತು. ಕಂಠದ ಮೂಲದಲ್ಲಿ ಬಹಳ ಆಯಾಸವೆನಿಸತೊಡಗಿತು. ಇದರಿಂದ ನಾನು ವೇಗವಾಗಿ ಪ್ರಾರ್ಥನೆ ಮಾಡತೊಡಗಿದೆ. ಹೀಗೆ ಐದು ದಿನ ಕಳೆಯಿತು. ಒಂದು ದಿನ ಬೆಳಿಗ್ಗೆ ಪ್ರಾರ್ಥನೆಯೇ ನನ್ನನ್ನು ಎಬ್ಬಿಸಿತು. ಪ್ರಾರ್ಥನೆ ಮಾಡಹೊರಟರೆ ನಾಲಗೆಯೇ ಮುಂದುವರಿಯುತ್ತಿಲ್ಲ. ಆದರೆ ಹೇಗೋ ಮುಂದು ವರಿಯುತ್ತಿದ್ದಂತೆ ಪ್ರಾರ್ಥನೆಯ ಆನಂದ, ಸುಖ ನನ್ನನ್ನು ಆವರಿಸಿತು. ಅನಾಯಾಸವಾಗಿ ನನ್ನ ನಾಲಗೆ ಪ್ರಾರ್ಥನೆ ಮಾಡುತ್ತ ಹೋಯಿತು. ಇಡೀ ದಿನ ನಾನು ಇದೇ ಆನಂದದ ಗುಂಗಿನಲ್ಲಿದ್ದೆ. ಹನ್ನೆರಡು ಸಾವಿರ ಬಾರಿ ಪ್ರಾರ್ಥಿಸಿದ ಬಳಿಕವೂ ನನಗೆ ಪ್ರಾರ್ಥನೆ ಮಾಡುವ ಆಸೆಯಾಯಿತು. ಆದರೆ ನನ್ನ ಮಾರ್ಗದರ್ಶಕರು ಹೇಳಿದ ಸಂಖ್ಯೆಯನ್ನು ಮೀರಬಾರದೆಂದು ಹಾಗೆ ಮಾಡಲಿಲ್ಲ. ಅವರ ಬಳಿಗೆ ಹೋಗಿ ನನ್ನ ಅನುಭವವನ್ನು ಹೇಳಿದಾಗ ಅವರೆಂದರು, ''ದೇವರ ಕೃಪೆಯಿಂದಲೇ ನಿನಗೆ ಈ ಅವಸ್ಥೆ ಬಂದೊದಗಿದೆ. ಪ್ರಾರ್ಥನೆಯಲ್ಲೇ ಆನಂದವನ್ನು ಕಾಣುವುದು, ಕೊನೆಯಿಲ್ಲದೆ ಪ್ರಾರ್ಥಿಸುವ ಆಸೆ ಮೂಡುವುದು – ಓ, ಅದು ಎಂಥ ಅದ್ಭುತ! ಇನ್ನು ಮೇಲೆ ನೀನು ಎಣಿಕೆ ಹಾಕದೆ ನಿರಂತರ ಪ್ರಾರ್ಥನೆ ಮಾಡುತ್ತ ಹೋಗು. ಎಚ್ಚರವಿದ್ದಾಗಲೆಲ್ಲ ಕ್ರಿಸ್ತನ ಪ್ರಾರ್ಥನೆ ಮಾಡುತ್ತ ಹೋಗು. ಅವನ ಕೃಪೆಗಾಗಿ, ಸಹಾಯಕ್ಕಾಗಿ ಪ್ರಾರ್ಥಿಸು. ನಿಜಕ್ಕೂ ನಿನ್ನ ಮೇಲೆ ಅವನ ಕೃಪೆಯಾಗುವುದು.'' ಬಳಿಕ ನಾನು ಪ್ರಾರ್ಥನೆ ಮಾಡುತ್ತಲೇ ಇಡೀ ಬೇಸಿಗೆಯನ್ನು ಕಳೆದೆ. ಕೇವಲ ಪ್ರಾರ್ಥನೆಯೊಂದೇ ನನಗೆ ಸಂತಸ ನೀಡುವ ಕೆಲಸವಾಯಿತು. ನನ್ನ ಕುಟೀರವೊಂದೇ ನನಗೆ ಇಷ್ಟವಾದ ತಾಣವಾಯಿತು. *– 'The Way of Pilgrim' ನ ಸಂತ*

ಫ್ಯಾಕ್ಸ್ 00-91-08372-289500

ಎಸ್.ಟಿ.ಡಿ. ಕೋಡ್ ನಂ. 08372

ಗ್ರಾಮ್ಸ್ : ಕೋ-ಆಪಟೆಕ್ಸ್, ಹುಲಕೋಟಿ

ಫೋನ್ : 289042, 289700, 289701

# ಗದಗ ಸಹಕಾರಿ ನೂಲಿನ ಗಿರಣಿ ನಿ., ಹುಲಕೋಟಿ - 582205

ಜಿಲ್ಲಾ : ಗದಗ

ಕರ್ನಾಟಕ ರಾಜ್ಯ



ಸಹಕಾರಿ ರಂಗದಲ್ಲಿ ಅತ್ಯಾಧುನಿಕ ನೂತನ
ಯಂತ್ರೋಪಕರಣಗಳಿಂದ ತಯಾರಿಸಲ್ಪಡುವ
10, 14, 18, 20, 24, 40, 60 ಮತ್ತು 80ರ ಕೌಂಟುಗಳ ಹತ್ತಿಯ
ನೂಲು ಹ್ಯಾಂಕ್ ಹಾಗೂ ಕೋನದಲ್ಲಿ

ನಾಲ್ಕು ದಶಕಗಳಿಂದ ಯಶಸ್ವಿಯಾಗಿ
ಸೇವೆ ಸಲ್ಲಿಸುತ್ತಿರುವ ರೈತರಿಂದ
ರೈತರದೇ ಆದ ಸಹಕಾರಿ ಕ್ಷೇತ್ರದ
ಹೆಮ್ಮೆಯ ನೂಲಿನ ಗಿರಣಿ

ಶ್ರೀ ಆರ್. ವೆಂಕಟಾಚಲಪತಿ
ಕಾರ್ಯನಿರ್ವಾಹಕ ಸಂಚಾಲಕರು

ಶ್ರೀ ಡಿ.ಆರ್. ಪಾಟೀಲ
ಅಧ್ಯಕ್ಷರು

# ಸಿಖ್ಖ್ ಧರ್ಮದಲ್ಲಿ ನಾಮ, ಜಪ, ಧ್ಯಾನದ ಮಹತ್ವ

**ಡಾ. ಹೆಚ್. ಪಾಂಡುರಂಗ ವಿಠಲ**



**ಸಿಖ್ ಧರ್ಮದಲ್ಲಿ ಗುರುಪರಂಪರೆಗೆ ಅತ್ಯಂತ ಹೆಚ್ಚಿನ ಮಹತ್ವವಿದೆ. ಅಂತೆಯೇ ನಾಮಜಪ ಅವರ ಪ್ರಧಾನವಾದ ಆಧ್ಯಾತ್ಮಿಕ ಆಚರಣೆಯಾಗಿದೆ. ವಿಚಾರ, ಭಕ್ತಿ ಎರಡನ್ನೂ ಮೇಳೈಸಿರುವ ಅವರ ತತ್ತ್ವ ಮತ್ತು ಆಚರಣೆಗಳು ಅನೇಕ ಮಂದಿ ಸಾಧಕರ ಅನುಭಾವದಿಂದ ಪುಷ್ಟಿಗೊಂಡಿವೆ. ಲೇಖಕರು ಕನ್ನಡ ಪ್ರಾಧ್ಯಾಪಕರು ಹಾಗೂ ರಾಮಕೃಷ್ಣ ಆಶ್ರಮದ ಭಕ್ತರು.**

**ಸಿ**ಖ್ ಧರ್ಮ ಲೌಕಿಕ ದೃಷ್ಟಿ ಉಳ್ಳದ್ದು. ಲೋಕವು ದೇವರ ನಿವಾಸವಾದ 'ಧರ್ಮಸಾಲ್'. ಎಲ್ಲ ಜಾತಿಯ, ಧರ್ಮದ, ಬಣ್ಣದ ಮತ್ತು ಲಿಂಗದ ಮಾನವರೂ ಒಬ್ಬನೇ ದೇವರ ಸೃಷ್ಟಿ. ವಿಶ್ವಪ್ರೇಮ ಮತ್ತು ದೈವೀ ಸತ್ಯ ಇಲ್ಲಿನ ತತ್ತ್ವ. 'ಇಲ್ಲಿ ಯಾರೂ ಹಿಂದೂ ಅಲ್ಲ, ಮುಸ್ಲಿಮನೂ ಅಲ್ಲ' ಎನ್ನುವುದು ಗುರುನಾನಕರ ಪ್ರಸಿದ್ಧ ಸೂಕ್ತಿ. ಎಲ್ಲ ಮಾನವರೂ ಸಮಾನರು ಮತ್ತು ಒಂದು. ಮಾನವರು ತಮ್ಮ ಕಟ್ಟುಪಾಡುಗಳನ್ನು ತೊರೆದು ಎಲ್ಲವನ್ನೂ ಮೀರಿದ ದೇವರ ವಾಸ್ತವವನ್ನು ಹುಡುಕಬೇಕೆಂಬುದು ಅವರ ಕರೆ. ಇದು ಗುರು ಮತ (ಗುರುವಿನ ಉದ್ದೇಶ) – ಸಿಖ್ ಎಂದರೆ ಶಿಷ್ಯ, ಸೀಖೀ ಎಂದರೆ ಸಿಖ್ ಸಂಪ್ರದಾಯ. ಬಸವಣ್ಣನವರ ಕಾಯಕ ತತ್ತ್ವಕ್ಕೆ ಸಮಾನವಾದ ಕಿರಾತ್ ಕರ್‌ನಾ (ಕೆಲಸ ಮಾಡುವುದು), ಗುರುದ್ವಾರಗಳಲ್ಲಿನ ಲಂಗಾರ್‌ಗಳಲ್ಲಿನ ವಂದ್ ಛಾಕ್‌ನಾ ( ಹಂಚಿ ತಿನ್ನುವುದು), ದಶ್ ವಂಧ್ (ಆದಾಯದಲ್ಲಿ ಹತ್ತನೇ ಒಂದು ಭಾಗ ದಾನ ಮಾಡುವುದು) – ಈ ಸಂಪ್ರದಾಯ ಸಿಖ್ ಧರ್ಮವನ್ನು ಸಮಾಜಮುಖಿಯನ್ನಾಗಿಸಿದೆ. ಸೇವಾ (ಗುರುದ್ವಾರಗಳಲ್ಲಿ ಸ್ವಯಂಸೇವಕರಾಗುವುದು), ಹುಕುಂ (ಗುರುವಿನ ದೈನಂದಿನ ಆಜ್ಞೆಯನ್ನು ಪಾಲಿಸುವುದು), ಆವಾಗೌಣ್ (ಕರ್ಮ ತತ್ತ್ವ ಆಧಾರಿತ ಜನನ ಮರಣಗಳ ಚಕ್ರ ಇದರಿಂದ ಮುಕ್ತನಾಗಲು ಮನ್‌ಮುಖ್‌ನಿಂದ ಗುರ್‌ಮುಖ್ ಮಾನವನಾಗಬೇಕು.) ಇವು ಇತರ ಸಂಪ್ರದಾಯಗಳು. ಕೆಳಜಾತಿಯಲ್ಲಿ ಹುಟ್ಟುವುದು ಹಿಂದಿನ ಕರ್ಮದ ಫಲ ಎಂಬ ನಂಬಿಕೆಯನ್ನು ಈ ಧರ್ಮ ಮಾನ್ಯ ಮಾಡುವುದಿಲ್ಲ. ಮಾನವ ಜನ್ಮ ಎಲ್ಲಕ್ಕಿಂತ ಶ್ರೇಷ್ಠ, ದೇವರ ಕೃಪೆ ಆಗಿದ್ದು, ಮುಕ್ತಿಗಾಗಿ ಸರಿಯಾದ ಕರ್ಮದಲ್ಲಿ ತೊಡಗುವ ಅಥವಾ ತೊಡಗದೇ ಇರುವ ಆಯ್ಕೆ ಎಲ್ಲ ಮಾನವರಿಗೆ ಇದೆ. ಗುರುವಿನ ಉಪದೇಶವನ್ನು ಸತ್ಯವಾಗಿ ಪಾಲಿಸಿದವ ಜೀವನ್ಮುಕ್ತನಾಗಿದ್ದು ಅವನ ಸಾವು ಪರಮಾತ್ಮನ ಜತೆ ಐಕ್ಯವಾಗುವಿಕೆ ಎಂಬ ನಂಬಿಕೆ ಇದೆ. ಪೂಜೆ ಎಂದರೆ ಇಲ್ಲಿ ನಾಮಸ್ಮರಣೆ. ಇದರಲ್ಲಿ ಎರಡು ವಿಧ – ವೈಯಕ್ತಿಕ ಮತ್ತು ಸಾಂಘಿಕ. ವೈಯಕ್ತಿಕ ಪೂಜೆಗೆ ಪಥ್ ಕರ್‌ನಾ, ನಾಮ್‌ಜಪ, ನಾಮ್‌ಸಿಮ್‌ರನ್ ಎನ್ನುವರು. ಹೆಂಗಸರು ಮೌನವಾಗಿ ಅಡುಗೆ ಮಾಡುತ್ತ ಪಥ್‌ಕರ್‌ನಾ ಮಾಡುವರು. ಗುರುನಾನಕರ ಜಪ್‌ಜೀ ಯ ಐದು ಚರಣಗಳನ್ನು ಪ್ರತಿ ಸಿಖ್ಖ್ ಬಾಯಿಪಾಠ ಮಾಡಿದ್ದು, ವೈಯಕ್ತಿಕ ನಾಮಸ್ಮರಣೆಯಲ್ಲಿ ಬಳಸುವರು. ಹೆಚ್ಚಿನವರು ವಾಹೆ ಗುರು (ಅಚ್ಚರಿಯ ಒಡೆಯ ಅಂದರೆ ದೇವರು) ಎಂಬುದನ್ನು ಮಂತ್ರದಂತೆ ಬಳಸುವರು. ಮನೆಗಳಲ್ಲಿ ಗುಟ್‌ಕಾ (ದೈನಂದಿನ ಪೂಜೆಯಲ್ಲಿ ಬಳಸುವ ಸ್ತೋತ್ರಗಳು)ವನ್ನು ಶುದ್ಧ ವಸ್ತ್ರದಲ್ಲಿ ಸುತ್ತಿ ಪೂಜಾಸ್ಥಾನ (ಇದು ಬಾಬಾಜೀ ದಾ ಕಮ್‌ರಾ) ದಲ್ಲಿ ಇರಿಸಿರುವರು. ಈ ಸಂಪ್ರದಾಯಗಳನ್ನೆಲ್ಲ ೧೯೪೫ರಲ್ಲಿ ಶಿರೋಮಣಿ ಗುರುದ್ವಾರಾ ಪ್ರಬಂಧಕ್ ಕಮಿಟಿಯವರು ರಾಹಿತ್ ಮರ್ಯಾದಾ (ಸಿಖ್ಖ್ ಶಿಸ್ತು ಸಂಹಿತೆ)ದಲ್ಲಿ ದೃಢೀಕರಿಸಿರುವರು. ಟಿವಿ, ರೇಡಿಯೊ ಕೇಂದ್ರಗಳಲ್ಲಿ ಬೆಳಗಿನ ಕೀರ್ತನೆಗಳನ್ನು ಪ್ರಸಾರ ಮಾಡುವುದಲ್ಲದೆ, ಮನೆಯಲ್ಲಿ ಸಿ.ಡಿ., ಕ್ಯಾಸೆಟ್ ಹಾಕಿ ಕೀರ್ತನ್ ಕೇಳುತ್ತಾರೆ.

ಸಾಂಘಿಕ ಪೂಜೆ ಗುರುದ್ವಾರಗಳಲ್ಲಿ ನಡೆಯುವುದು. ಇದು ಸಾಮಾಜಿಕ ಆಧ್ಯಾತ್ಮಿಕ ಹಾಗೂ ನೈತಿಕ ಕೇಂದ್ರವಾಗಿದ್ದು, ಸೇವಾ ಕೇಂದ್ರವೂ ಆಗಿದೆ. ಗುರುದ್ವಾರಗಳಲ್ಲಿ ಎರಡು ವಿಧ: ಚಾರಿತ್ರಿಕ ಹಾಗೂ ವಿವಿಧ ಪಂಥಗಳದ್ದು. ಆದಿಗ್ರಂಥದ ಪೂಜೆ ಹಾಗೂ ನಿಶಾನ್ ಸಾಹಿಬ್ (ಸಿಖ್ಖ್ ಧ್ವಜ) ಗುರುದ್ವಾರದ ಚಿಹ್ನೆ. ಚಾರಿತ್ರಿಕ ಗುರುದ್ವಾರಗಳಲ್ಲಿ ಪ್ರಮುಖವಾದವು ಗುರು ತೇಜ್ ಬಹದೂರರನ್ನು ಸಾರ್ವಜನಿಕವಾಗಿ ಶಿರಚ್ಛೇದ ಮಾಡಿದ ದಿಲ್ಲಿಯ ಸೀಸ್‌ಗಂಜ್ ಹಾಗೂ ಗುರು ಗೋವಿಂದ ಸಿಂಗರು ಖಾಲ್ಸಾ ಪಂಥ ಸ್ಥಾಪಿಸಿದ ಆನಂದ ಪುರ್‌ನ ಗುರುದ್ವಾರಾ ಕೇಸ್‌ಘರ್. ಸಮುದಾಯದ ಗುರುದ್ವಾರಗಳ ಒಡೆತನ ಸಮುದಾಯದ್ದಾಗಿದ್ದು, ಆಡಳಿತ ಅವರೇ ಚುನಾಯಿಸಿದ ಸಮಿತಿಯದ್ದು. ಈ ಸಮಿತಿ ಸಂಗತ್‌ಗೆ ಉತ್ತರದಾಯಿಯೇ ವಿನಾ, ಹೊರಗಿನವರಿಗಲ್ಲ. ಹೀಗೆ ಸಂಪೂರ್ಣ ಸ್ವಯಮಾಡಳಿತದ ಸಾಮಾಜಿಕ ಸಂಸ್ಥೆಗಳು ಇವು. ಗುರುದ್ವಾರದಲ್ಲಿನ ಪೂಜೆಗೆ ಇಂತಹ ದಿನ,

ಕಾಲ ಎಂದೇನೂ ಇಲ್ಲ. ಬೆಳಗ್ಗೆ ಅಸಾ ದಿ ವಾರ್ ಸ್ತೋತ್ರ ಪಠನದಿಂದ ಪ್ರಾರಂಭವಾಗಿ, ಗ್ರಂಥಿಯು ಸಿಖ್ಖ್ ಪ್ರಾರ್ಥನೆ ಅರ್ದಾಸ್‌ಅನ್ನು ಸಂಗತ್ ಮುಂದೆ ಹೇಳಿ, ಕರಾಹ್ ಪರ್‌ಸಾದ್(ನೈವೇದ್ಯ) ಹಂಚಿದ ಅನಂತರ ಮುಕ್ತಾಯವಾಗುತ್ತದೆ.

ಸಿಖ್ಖರಲ್ಲಿ ಸ್ನಾನಕ್ಕೆ ಮಹತ್ವವಿದೆ. ಗುರು ಅರ್ಜುನ್ 'ಸ್ನಾನಾನಂತರ ನಿಮ್ಮ ಮನಸ್ಸಿನಲ್ಲಿ ದೇವರನ್ನು ಧ್ಯಾನಿಸಿದಲ್ಲಿ ನಿಮ್ಮ ದೇಹ ಶುದ್ಧವಾಗುವುದು(ಆದಿ ೧೧೧)' ಎಂದಿದ್ದಾರೆ. ಗುರುದ್ವಾರಕ್ಕೆ ಹೋಗುವ ಮುನ್ನ ಸ್ನಾನ ಮಾಡಲಾಗದಿದ್ದಲ್ಲಿ, ಅಲ್ಲಿ ಪ್ರವೇಶಿಸುವ ಮುನ್ನ ಮುಖ ಕೈ ಕಾಲುಗಳನ್ನು ತೊಳೆದುಕೊಳ್ಳಬೇಕು (ಇದು ಪಂಜಸ್ನಾನ). ಆದಿ ಗ್ರಂಥವನ್ನು ಗುರು ಅರ್ಜುನ್ ಸಂಗ್ರಹಿಸಿದರೂ, ಗುರು ತೇಜ ಬಹದೂರರ ೧೧೬ ಸ್ತೋತ್ರಗಳೂ ಇಲ್ಲಿವೆ. ಗುರು ಗೋವಿಂದ ಸಿಂಗರು ತಮ್ಮ ಗುರುವಿನ ಬಾಣಿಯನ್ನೂ ಸೇರಿಸಿ ದಶಮಗ್ರಂಥಿ ರಚಿಸಿದ್ದು, ಇದಕ್ಕೂ ಮಾನ್ಯತೆ ಇದೆ. ಆದಿಗ್ರಂಥದಲ್ಲಿ ಇರುವ ಗುರು ನಾನಕರು ರಚಿಸಿದ ಪ್ರಸಿದ್ಧ ಸ್ತೋತ್ರ ಜಪ್‌ಜೀಯಲ್ಲಿ ದೇವರನ್ನು ಆದಿ ಸತ್ಯ ಎಂದು ಬಣ್ಣಿಸಿದೆ (ಆದಿ ೧). ಅಕಾಲ್ ಕಾಲಾತೀತ ಎಂದೂ ದೇವರನ್ನು ಹೇಳುತ್ತಾರೆ. ಅನಾದಿಯಾದ ಶಬ್ದವನ್ನು ನಾನಕರು ತಮ್ಮ ಮೊದಲ ಸ್ತೋತ್ರವಾದ ಇದರಲ್ಲಿ ಸಂಗ್ರಹಿಸಿದ್ದಾರೆ. ಇದನ್ನು ಮೂಲ ಮಂತ್ರ ಎಂದೂ ಹೇಳುವರು. ಏಕ್ ಓಂಕಾರ್ ಎಂದು ಆರಂಭವಾಗುವ ಇದರ ಅನುವಾದ ಹೀಗೆ:

'ಇರುವಿಕೆ ಒಂದೇ; ಅದು ಆದಿ ಸತ್ಯ; ಎಲ್ಲದರಲ್ಲೂ ಅಂತಸ್ಥ; ಎಲ್ಲವನ್ನೂ ಧರಿಸಿರುವುದು; ಸೃಷ್ಟಿಸಿ, ಅಂತಸ್ಥವಾಗಿರುವುದು.

ನಿರ್ಭಯ ಮತ್ತು ಅದ್ವೇಷಿ. ಅಕಾಲ. ಅಜಾತ, ಅಮೃತ. ಸ್ವತಸ್ಸಿದ್ಧ. ಗುರುಕೃಪೆಯಿಂದ ಜ್ಞಾತ.'

ಸಿಖ್ ತತ್ತ್ವಜ್ಞಾನದ ತಿರುಳು ಇದು ಎಂದು ಈ ಸ್ತೋತ್ರವನ್ನು ಪರಿಗಣಿಸಲಾಗಿದೆ.

ಗುರುದ್ವಾರಗಳೆಲ್ಲದರ ವ್ಯವಸ್ಥಾಪನೆ ಮಾಡುವ ಶಿರೋಮಣಿ ಗುರುದ್ವಾರ ಪ್ರಬಂಧಕ್ ಕಮಿಟಿ ದೃಢೀಕರಿಸಿದ ಪಂಜಾಬ್ ಗುರುದ್ವಾರ ಆಕ್ಟ್ ೧೯೨೫ ವಿಧಿಸುವಂತೆ ಸಿಖ್ ವ್ಯಕ್ತಿಯ ಲಕ್ಷಣ ನಿರೂಪಣೆ ಹೀಗಿದೆ:

೧. 'ನಿಜ ಗುರುವಿನ ಸಿಖ್ ತಾನೆಂದು ಹೇಳಿಕೊಳ್ಳುವವನು ಸಾಕಷ್ಟು ಮುಂಚೆ ಎದ್ದು ದೇವರ ನಾಮಸ್ಮರಣೆ ಮಾಡಬೇಕು... ಅನಂತರ ಸೂರ್ಯೋದಯ ಆದಮೇಲೆ ಗುರುವಿನ ಬಾಣಿಯನ್ನು ಹಾಡಬೇಕು; ಪ್ರತಿ ಉಸಿರಿನ ಜತೆ ನಾಮಸ್ಮರಣೆ ಮಾಡಬೇಕು... ದೇವರ ನಾಮಜಪ ಮಾಡುವುದಲ್ಲದೆ, ಇತರರೂ ನಾಮವನ್ನು ಪುನರಾವರ್ತಿಸುವಂತೆ ಮಾಡುವ ಗುರ್‌ಸಿಖ್‌ನ ಪಾದ ಧೂಳಿಯನ್ನು ನಾನು ಬೇಡಿಕೊಳ್ಳುತ್ತೇನೆ.' (ಆದಿ. ೩೦೫-೬)

೨. 'ಒಬ್ಬನೇ ದೇವರಲ್ಲಿ, ಹತ್ತು ಗುರುಗಳಲ್ಲಿ ಹಾಗೂ ಅವರ ಉಪದೇಶಗಳಲ್ಲಿ, ಮತ್ತು ಆದಿಗ್ರಂಥದಲ್ಲಿ ಶ್ರದ್ಧೆ ಇರುವವನೇ ಸಿಖ್. ಇದರ ಜತೆ ಆತ ಅಮೃತ್(ದೀಕ್ಷೆ)ನ ಆವಶ್ಯಕತೆ ಮತ್ತು ಪ್ರಾಮುಖ್ಯದ ಬಗ್ಗೆಯೂ ಶ್ರದ್ಧೆ ಹೊಂದಿದ್ದು, ಯಾವುದೇ ಇತರ ಧರ್ಮದ ಅಂಟಿಗೆ ಒಳಗಾಗಬಾರದು.' (ರಾಹಿತ್ ಮರ್ಯಾದಾ.)

ಎರಡನೇ ನಿರೂಪಣೆ ಜೀವಂತ ಗುರುವನ್ನು ನಂಬುವ ನಾಮಧಾರಿ ಸಿಖ್‌ರನ್ನು ಹೊರತುಪಡಿಸಿ, ಬಹುಸಂಖ್ಯಾತರಾದ ಕೇಶಧಾರಿ, ಅಮೃತ್ ಧಾರಿ, ಸಹಜ್ ಧಾರಿ ಸಿಖ್ ಎಲ್ಲರಿಗೂ ಅನ್ವಯಿಸುತ್ತದೆ.

ಗುರುನಾನಕ್(೧೪೬೯-೧೫೩೯) ಅವರು ತಮ್ಮ ಕಾಲದ ಜಾತಿ ಪದ್ಧತಿಯನ್ನು ಟೀಕಿಸಿದರು. ದೇವರೊಬ್ಬನೇ ಎಂದು ನಂಬಿದ್ದ ಅವರು ತಮ್ಮ ಯಾತ್ರೆಗಳಲ್ಲಿ ರಚಿಸುತ್ತಿದ್ದ ದೇವರಿಂದ ಸ್ಫೂರ್ತವಾದ ಶಬ್ದ ಅಥವಾ ಬಾಣಿ(ಗೀತೆ)ಗಳಿಗೆ ತಮ್ಮ ಸಹಚರಿಯನ್ನಾಗಿ ಆರಿಸಿದ್ದ ಮುಸ್ಲಿಂ ಚಾರಣ ಕವಿ ಮರ್ದಾನ ಸಂಗೀತ ನೀಡಿದ. ತಮ್ಮ ಬಾಣಿಗಳು ಹಾಗೂ ತಾವು ಸಂಗ್ರಹಿಸಿದ್ದ ತಮ್ಮ ಹಿಂದೆ ಸುಮಾರು ೬೦೦ ವರ್ಷಗಳ ವ್ಯಾಪ್ತಿಯಲ್ಲಿ ಇದ್ದ ಇತರ ಹಿಂದೂ ಮತ್ತು ಮುಸ್ಲಿಂ ಸಂತರ ಬರಹಗಳ ಸಂಗ್ರಹ – ಪೋಥಿಯನ್ನು (ಕರ್ತಾರ್‌ಪುರ್ ವಾಲಿ ಬೀರ್) ಅಂಗದ್ ದೇವ್‌ಗೆ ಕೊಡುವುದರ ಮೂಲಕ ಆತನನ್ನು ಮುಂದಿನ ಗುರುವನ್ನಾಗಿ ಘೋಷಿಸಿದ್ದು ಈ ಬಾಣಿಗಳಿಗೆ ಇರುವ ಸ್ಥಾನವನ್ನು ಸೂಚಿಸುತ್ತದೆ. 'ಗುರ್‌ಬಾಣಿ ದೇವರೇ ಆಗಿದ್ದು, ಅದರ ಮೂಲಕ ಮಾನವ ದೇವರೊಂದಿಗೆ ಒಂದಾಗುವನು' ಎನ್ನುತ್ತಾರೆ ಗುರು ಅಮರ್‌ದಾಸ್. ನಾಲ್ಕನೆ ಗುರು ರಾಮ್‌ದಾಸ್ 'ಗುರ್‌ಬಾಣಿ ದೇವರ ನಾಮವಾಗಿದ್ದು, ಈ ನಾಮವನ್ನು ನನ್ನ ಮನದಲ್ಲಿ ಪ್ರತಿಷ್ಠಾಪಿಸುತ್ತೇನೆ' ಎನ್ನುತ್ತಾರೆ. ಗುರು ಗೋವಿಂದ ಸಿಂಗರ ಕಾಲದ ಅನಂತರ ಮಣಿಸಿಂಗ್ ಸಂಕಲಿಸಿದ ಅವರ ಸ್ತೋತ್ರಗಳು, ಔರಂಗಜೇಬನಿಗೆ ಬರೆದ ಪತ್ರ, ಆತ್ಮಚರಿತ್ರೆ ಬಚೀತರ್ ನಾಟಕ್‌ಗಳ ಸಂಕಲನವೇ ದಶಮ ಗ್ರಂಥ್. ಇದಕ್ಕೂ ಪೂಜೆ, ಮಾನ್ಯತೆ ಇದೆ. ಗುರುಮುಖೀ ಲಿಪಿಯಲ್ಲಿದ್ದರೂ ಇದರ ಭಾಷೆ ಬ್ರಜ. ಹಿಂದೆ ಎರಡೂ ಗ್ರಂಥಗಳನ್ನು ಗುರುದ್ವಾರದ ಪೀಠದ ಮೇಲೆ ಇಡುತ್ತಿದ್ದರು. ಈಗ ಆದಿಗ್ರಂಥ ಮಾತ್ರ ಇಡುತ್ತಿದ್ದರೂ, ದೀಕ್ಷೆಯ ಪವಿತ್ರ ಜಲ ಅಮೃತ್ ತಯಾರಿಸುವಾಗ ದಶಮಗ್ರಂಥದ ಸ್ತೋತ್ರಗಳನ್ನು ಹಾಡುತ್ತಾರೆ.

ಆದಿಗ್ರಂಥದ (ಮೂಲ ಮಂತ್ರದ ಆದಿ ಸಚ್ ಪದದಿಂದ ಇದನ್ನು ಆದಿಗ್ರಂಥ ಎನ್ನುವರು.) ಸಂಕಲನಕಾರ ಗುರು ಅರ್ಜುನ್ 'ಈ ಪವಿತ್ರ ಗ್ರಂಥವು ದೇವರ ನೆಲೆ' ಎನ್ನುತ್ತಾರೆ. ಗುರ್‌ಬಾಣಿ ವಿಧಿಬದ್ಧ ಪ್ರಮಾಣ; ಮಾನವ ಗುರುವಿನ ಸ್ಥಾನ ಪಡೆದಿದ್ದು, ಗುರು ಗ್ರಂಥ ಸಾಹಿಬ್ ಎಂದು ಸಂಬೋಧಿಸುತ್ತಾರೆ. ಪೂಜೆಯ ಕೊನೆಯಲ್ಲಿ ಗ್ರಂಥಿಯು ರುಮಾಲಸ್‌ನಲ್ಲಿ ಸುತ್ತಿದ್ದು, ಚೌರಿಯಿಂದ ಗಾಳಿ ಹಾಕುತ್ತಿದ್ದ ಪವಿತ್ರ ಆದಿಗ್ರಂಥದ ಯಾವುದೋ ಒಂದು ಹಾಳೆಯನ್ನು ತೆರೆದು, ಎಡಗಡೆ ಪುಟದ ಮೊದಲ ಸ್ತೋತ್ರವನ್ನು ಓದುತ್ತಾನೆ. ಇದು ಆ ದಿನದ ಗುರುವಿನ ಆಜ್ಞೆಯಾಗಿದ್ದು, ಹುಕುಂನಾಮಾ ಎನ್ನುತ್ತಾರೆ. ಇದಲ್ಲದೆ, ಅಮೃತಸರದ ಸ್ವರ್ಣದೇವಾಲಯದಲ್ಲಿ ರಾಗಿಗಳು ನಿರಂತರವಾಗಿ ಶಬದ್-ಕೀರ್ತನ್ ಮಾಡುತ್ತಿರುತ್ತಾರೆ. ಎಲ್ಲ ಸ್ತೋತ್ರಗಳಿಗೂ ಯಾವ ರಾಗದಲ್ಲಿ ಹೇಗೆ ಹಾಡಬೇಕೆಂಬ ಸಂಪ್ರದಾಯ ಇದೆ. ಇದಲ್ಲದೆ, ಗುರು ಅರ್ಜುನ್ ದೇವ್ ಅವರ ಅಪ್ಪಣೆ ಪ್ರಕಾರ ಆದಿಗ್ರಂಥವನ್ನು ಗುರುಮುಖೀ ಲಿಪಿಯಲ್ಲಿ ಬರೆದ ಭಾಯಿ ಗುರ್‌ದಾಸ್ ಅವರ ವರಣ್(ಭಾವಗೀತೆ)ಗಳನ್ನೂ ಗುರುದ್ವಾರಗಳಲ್ಲಿ ಹಾಡುತ್ತಾರೆ. ಆದಿ ಗ್ರಂಥವನ್ನು ಅರ್ಥಮಾಡಿಕೊಳ್ಳಲು ಇದು ಕೈಪಿಡಿ ಎನ್ನುತ್ತಾರೆ.

ಆದಿಗ್ರಂಥದ ಕೊನೆಯ ಸ್ತೋತ್ರ, ಗುರು ಅರ್ಜುನ್‌ದೇವ್ ಅವರ ಮಂದವಾಣಿ (ಮುದ್ರೆ) ಈ ಗ್ರಂಥದ ಹಿರಿಮೆಯನ್ನು ಸಾರುತ್ತದೆ:

'ಈ ಹರಿವಾಣದಲ್ಲಿ ಮೂರು ವಸ್ತುಗಳಿವೆ: ಸತ್ಯ, ಸಂತೃಪ್ತಿ ಮತ್ತು ಧ್ಯಾನ. ಎಲ್ಲಕ್ಕೂ ಆಧಾರವಾದ ದೇವರ ಅಮೃತ ನಾಮ ಇಲ್ಲಿದೆ. ಯಾರು ಇದನ್ನು ಸೇವಿಸುತ್ತಾನೆಯೊ, ಸವಿಯುತ್ತಾನೆಯೊ ಅವನು ಮುಕ್ತನಾಗುವನು.' (ಆದಿ:೧೪೨೯) 'ಬೋಲೇ ಸೋ ನಿಹಾಲ್ ಸತ್ ಶ್ರೀ ಅಕಾಲ್' ಎಂಬ ಘೋಷಣೆ (ನಾಮ ಉಚ್ಚರಿಸುವವನು ಚಿರಂಜೀವಿ ಮತ್ತು ಸಂತೋಷಿ) ಅನೇಕ ಕ್ರಿಯಾಕರ್ಮಗಳಲ್ಲಿ ಬಳಕೆಯಾಗುತ್ತದೆ.

**ದೇವರು:** ಸಿಖ್ಖ್ ಧರ್ಮದಲ್ಲಿ ದೇವರು ಎಲ್ಲರಿಗೂ ಒಬ್ಬನೇ. ರೂಪ, ಆಕಾರಗಳಿಲ್ಲದ ನಿರಂಕಾರ. ಪ್ರಾರ್ಥನೆಯು ಮುಸ್ಲಿಮರಲ್ಲಿ ನಮಾಜ್, ಹಿಂದೂಗಳಲ್ಲಿ ಪೂಜೆ, ಇಲ್ಲಿ ಅರ್ದಾಸ್ ಅಥವಾ ಪಥ್ -ಕರ್ನಾ. ಗುರು ಗೋಬಿಂದ ಸಿಂಗ್ ಹೇಳುವಂತೆ 'ಮಾನವ ಜನಾಂಗವನ್ನು ಹಿಂದೂ ಅಥವಾ ಮುಸ್ಲಿಂ ಎಂದು ಗುರುತಿಸದೆ ಒಂದೇ ಎಂದು ತಿಳಿ.' ದೇವರ ನಾಮಗಳು ಅಥವಾ ದೇವರ ಗುಣಲಕ್ಷಣಗಳ ಮೇಲೆಯೆ ತನ್ನ ಗಮನವನ್ನು ಕೇಂದ್ರೀಕರಿಸುವುದನ್ನು ನಾಮ್ ಜಪ್‌ನ ಎನ್ನುತ್ತಾರೆ.

**ಸಿಖ್ಖ್ ಧರ್ಮದಲ್ಲಿ ಧ್ಯಾನ:** ಸಾಧನೆಯಲ್ಲಿ ಸಿಮ್ರಾನ್(ಧ್ಯಾನ) ಸತ್ಕಾರ್ಯಗಳೆರಡೂ ಅಗತ್ಯ. ಆದರೆ ಸತ್ಕಾರ್ಯವಿಲ್ಲದ ಸಿಮ್ರಾನ್ ನಿರರ್ಥಕ. ಗುರುನಾನಕ್ ಹೇಳುವಂತೆ, ''ದೇವಸ್ಥಾನಕ್ಕೆ ಹೋಗುವುದು, ಪಶ್ಚಾತ್ತಾಪ, ಅನುಕಂಪ ಮತ್ತು ದಾನಗಳಿಂದ ಒಂದು ಎಳ್ಳಿನ ಕಾಳಿನಷ್ಟು ಗಣ್ಯತೆಯನ್ನು ಸಂಪಾದಿಸಬಹುದು ಅಷ್ಟೆ. ಪವಿತ್ರ ದೇವಾಲಯದಲ್ಲಿ ಮಿಂದು, ದೇವರ ನಾಮವನ್ನು ಕೇಳುತ್ತ, ಅವನನ್ನು ಗಾಢ ವಿಶ್ವಾಸದಿಂದ ಒಪ್ಪಿಕೊಳ್ಳುತ್ತ, ಅಚಲ ಪ್ರೇಮದೊಡನೆ ನಾಮಸ್ಮರಣೆ ಮತ್ತು ನಿರಂತರ ಚಿಂತನೆ ಮಾಡುವ ಮೂಲಕ ಜೀವಾತ್ಮನು ಮುಕ್ತಿಯನ್ನು ಹೊಂದುತ್ತಾನೆ. ಆದರೆ ಸತ್ಕಾರ್ಯಗಳನ್ನು ಮಾಡದೆ ಅಥವಾ 'ಓ ಪರಮಾತ್ಮನೇ ಎಲ್ಲವೂ ನಿನ್ನ ಪವಿತ್ರತೆಯಿಂದಲೆ, ನನ್ನದೆನ್ನುವುದು ಏನೂ ಇಲ್ಲ' ಎನ್ನುವ ಆತ್ಮಸಮರ್ಪಣಾ ಭಾವ ಇರದೆ ಧ್ಯಾನಿ ಆಗಲಾರ. (ಜಪ್‌ಜಿ )

ಸಿಮ್ರಾನ್ ಮತ್ತು ನಾಮ್‌ಜಪ್‌ಗಳ ಅಭ್ಯಾಸ ಒಬ್ಬನು ಶಾಂತನಾಗಿ ಅಂತರಂಗದಲಿ ಧ್ಯಾನಿಸುವುದನ್ನು ಪ್ರೋತ್ಸಾಹಿಸುತ್ತದೆಯಾದರೂ ಸತ್ಸಂಗ(ಸಂಗತ್)ದಲ್ಲಿ ಇದ್ದು ಬಾಯಿಂದ ಹೇಳಲೂ ಬಹುದು. ಸಿಖ್ಖರು ಶರೀರದಲ್ಲಿ ನವದ್ವಾರಗಳ ಜತೆಗೆ ಚೈತನ್ಯ ಮಟ್ಟದ ದಶಮ್‌ದ್ವಾರ ಇದ್ದು, ಇದು ಧ್ಯಾನಸಿದ್ಧರಲ್ಲಿ ತೆರೆಯುತ್ತ ದೆಂದು ನಂಬುತ್ತಾರೆ. ಇದು ಉಚ್ಚಮಟ್ಟದ ಮನಸ್ಥಿತಿ ಆಗಿದ್ದು ಪ್ರತ್ಯೇಕವಾದ ರುಚಿ ಅಥವಾ ಸ್ವಾದವನ್ನು ನೀಡುತ್ತದೆ. ನಡತೆಯಿಂದ ಅಭಿವ್ಯಕ್ತಿಸುವ ಧನಾತ್ಮಕ ಮನೋಭಾವದಿಂದ ದೇವರನ್ನೇ ಕುರಿತು ಧ್ಯಾನಿಸುವುದು ಸಾಧ್ಯವಾಗಿ, ಇಲ್ಲಿ ಸಾಧಕನು ದೇಹದ ಒಳಗೂ ಹೊರಗೂ ನಿರಂತರ ಶಾಂತಿ, ಸ್ಥೈರ್ಯಗಳನ್ನು ಹೊಂದುತ್ತಾನೆ. ಗುರುನಾನಕ್ ಮಾನವ ಸಮಾನತೆ ಮತ್ತು ಧ್ಯಾನಿಗಳು ಅರಣ್ಯಗಳಲ್ಲಿ ಅಲೆಯುತ್ತ ಬದುಕುವ ಬದಲಿಗೆ ಗೃಹಸ್ಥರ ಜೀವನ ಮಾರ್ಗದಲ್ಲಿ ಬದುಕುವುದರ ಮಹತ್ವವನ್ನು ಬೋಧಿಸಿದನು. ಯಾವುದೇ ಧರ್ಮಕ್ಕೆ ಸೇರಿದ್ದರೂ, ಪ್ರತಿಯೊಬ್ಬನೂ ಎಲ್ಲ ಮಾನವರಲ್ಲಿ ಪ್ರೀತಿ ಹರಡುವ ಮೂಲಕ ಸಂಪೂರ್ಣ ಸಾಮಾನ್ಯ ಪ್ರಕಾರದ ಬದುಕಿನ ಜೀವನ ಮತ್ತು ಮೃತ್ಯುಗಳಿಂದ ವಿಮೋಚನೆ ಪಡೆಯಬಹುದು ಎಂದನು. ಸಿಖ್ಖ್ ಧರ್ಮದಲ್ಲಿ ದೇವರ ಸ್ತುತಿ 'ಕೀರ್ತನ್'ಗಳನ್ನು ಹಾಡುವುದು ಧ್ಯಾನಕ್ಕೆ ಪೂರಕವಾಗುವ ಮಾರ್ಗಗಳಲ್ಲಿ ಅತ್ಯಂತ ಪ್ರಯೋಜನಕಾರಿ ಎಂದು ಪರಿಗಣಿಸಲಾಗುತ್ತದೆ.

**ಆಧುನಿಕ ಸಿಖ್ಖ್ ಪಂಥಗಳು:** ಮಾನವ ಗುರುಗಳನ್ನು ನಂಬುವ ನಾಮಧಾರಿ, ನಿರಂಕಾರಿ ಹಾಗೂ ಇತ್ತೀಚೆಗೆ ೧೯೭೧ರಲ್ಲಿ ಹರ್‌ಭಜನ್ ಸಿಂಗ್ ಪುರಿ ಅಮೆರಿಕಾದಲ್ಲಿ ಸ್ಥಾಪಿಸಿದ ಪಂಥವಾದ 3HO( Healthy, Happy, Holy Organisation) ಸಿಖ್ಖರು ಸ್ತ್ರೀಯರೂ ಮಾಡಬಹುದಾದ ಶಬ್‌ದ್ ಕೀರ್ತನ್ ಮತ್ತು ನಾಮ್‌ಸಿಮ್ರನ್‌ಗಳಿಗೆ ಒತ್ತು ನೀಡುತ್ತಾರೆ. ಯೋಗ ಮತ್ತು ಗುಂಪು ಧ್ಯಾನ ಇಲ್ಲಿ ಮಹತ್ವ ಪಡೆದಿದೆ. ಅಮೆರಿಕಾದಲ್ಲಿ 3HO ೨,೫೦,೦೦೦ ಬಿಳಿಯರನ್ನು ಅನುಯಾಯಿಗಳನ್ನಾಗಿ ಹೊಂದಿದೆ!

**ನಾಮ್ನಾಮಕಾರಿ ಬಹುಧಾ ನಿಜಸರ್ವಶಕ್ತಿ-**
**ಸ್ತತ್ರಾರ್ಪಿತಾ ನಿಯಮಿತಃ ಸ್ಮರಣೇ ನ ಕಾಲಃ ।**
**ಏತಾದೃಶೀ ತವ ಕೃಪಾ ಭಗವನ್ ಮಮಾಪಿ**
**ದುರ್ದೈವಮೀದೃಶಮಿಹಾಜನಿ ನಾನುರಾಗಃ ॥**

ನಿನ್ನ ನಾಮಗಳು ಹಲವು ಬಗೆಯಿಂದ ವ್ಯಕ್ತವಾಗಿವೆ. ಅವುಗಳಲ್ಲಿ ನಿನ್ನ ಸರ್ವಶಕ್ತಿಯನ್ನೂ ತುಂಬಿರುವೆ. ನಿನ್ನ ನಾಮಸ್ಮರಣೆ ಮಾಡಬೇಕಾದರೆ ಇಂತಹ ಕಾಲದಲ್ಲೇ ಅದನ್ನು ಮಾಡಬೇಕೆಂಬ ವಿಧಿಯಿಲ್ಲ; ನಿನ್ನ ಕೃಪೆ ಹೀಗಿದ್ದರೂ, ಹೇ ಭಗವಂತ, ದುರ್ದೈವ ವಶದಿಂದ ನನಗೆ ಈ ಜನ್ಮದಲ್ಲೂ ನಿನ್ನ ಮೇಲೆ ಅನುರಾಗ ಹುಟ್ಟಲಿಲ್ಲ.

**ಚೇತೋದರ್ಪಣಮಾರ್ಜನಂ ಭವಮಹಾದಾವಾಗ್ನಿನಿರ್ವಾಪಣಂ**
**ಶ್ರೇಯಃಕೈರವಚಂದ್ರಿಕಾವಿತರಣಂ ವಿದ್ಯಾವಧೂಜೀವನಮ್ ।**
**ಆನಂದಾಂಬುಧಿವರ್ಧನಂ ಪ್ರತಿಪದಂ ಪೂರ್ಣಾಮೃತಾಸ್ವಾದನಂ**
**ಸರ್ವಾತ್ಮ ಸ್ನಪನಂ ಪರಂ ವಿಜಯತೇ ಶ್ರೀಕೃಷ್ಣಸಂಕೀರ್ತನಮ್ ॥**

ಮನಸ್ಸೆಂಬ ಕನ್ನಡಿಯನ್ನು ಶುದ್ಧಗೊಳಿಸುವ, ಸಂಸಾರವೆಂಬ ದೊಡ್ಡ ಕಾಡ್ಗಿಚ್ಚನ್ನು ನಂದಿಸುವ, ಶ್ರೇಯಸ್ಸೆಂಬ ನೈದಿಲೆಯ ಮೇಲೆ ಚಂದ್ರಿಕೆಯನ್ನು ಸುರಿಸುವ, ಪರಾವಿದ್ಯೆಯೆಂಬ ವಧುವಿಗೆ ಜೀವನಸ್ವರೂಪವಾದ, ಆನಂದ ಸಾಗರವನ್ನು ವರ್ಧಿಸುವ, ಪ್ರತಿಕ್ಷಣವೂ ಪೂರ್ಣಾಮೃತದಂತೆ ರುಚಿಯನ್ನುಂಟುಮಾಡುವ, ಎಲ್ಲಾ ಆತ್ಮರಿಗೆ ಸ್ನಾನವನ್ನು ಮಾಡಿಸುವ ಶ್ರೀಕೃಷ್ಣಸಂಕೀರ್ತನವು ಸರ್ವೋತ್ಕೃಷ್ಟವಾಗಿದೆ.

*-ಶ್ರೀ ಚೈತನ್ಯ ಮಹಾಪ್ರಭು*

# ಶ್ರೀರಾಮಕೃಷ್ಣ ವಚನವೇದದಲ್ಲಿ ನಾಮಮಹಿಮೆ

**ಸ್ವಾಮಿ ತ್ರಿಲೋಕಾತ್ಮಾನಂದ**



**ಕೊ**ಲ್ಕತ್ತದ ದಕ್ಷಿಣೇಶ್ವರದ ಕಾಳಿ ದೇವಾಲಯದಲ್ಲಿ ರಾಮಕೃಷ್ಣ ಪರಮಹಂಸರು ಅನೇಕ ಸಾಧನೆಗಳನ್ನು ಮಾಡಿ, ನಿರ್ವಿಕಲ್ಪ ಸಮಾಧಿಯನ್ನು ಪಡೆದುಕೊಂಡ ಮೇಲೆಯೂ, ಭಗವತಿಗೆ ಪ್ರಣಾಮ ಮಾಡಿ ಕೈತಾಳ ಹಾಕುತ್ತಾ ಭಗವನ್ನಾಮೋಚ್ಚಾರಣೆ ಮಾಡುತ್ತಿದ್ದರು. ಅವರ ಕೊಠಡಿಯಲ್ಲಿರುವ ಪಟಗಳಿಗೆಲ್ಲಾ ಪ್ರಣಾಮ ಮಾಡಿ, ಅದರದರ ನಾಮ ಜಪ ಮಾಡುತ್ತಿದ್ದರು.

ಭಗವಂತನನ್ನು ವಶಮಾಡಿಕೊಳ್ಳುವುದು ಹೇಗೆ? ಭಗವಂತ ಐಶ್ವರ್ಯಕ್ಕೆ ವಶನೆ? ಆತ ಭಕ್ತಿಗೆ ವಶನಾಗುತ್ತಾನೆ, ಆತನಿಗೆ ಭಕ್ತರ ಭಾವ, ಪ್ರೇಮ, ಭಕ್ತಿ, ವಿವೇಕ, ವೈರಾಗ್ಯ, ನಾಮದ ಮಹಿಮೆ ಚಿಂತನೆ ಇವೇ ಮೊದಲಾದವು ಬೇಕು. ಭಗವಂತನ ನಾಮವೆಂಬ ಬೇಲಿಯನ್ನು ಕಟ್ಟಿ ಸಾಧಕನು ತನ್ನ ಆಧ್ಯಾತ್ಮಿಕ ಸಂಪತ್ತನ್ನು ಕಾಯ್ದುಕೊಳ್ಳಬೇಕು. ನಾಮಕ್ಕಿಂತ ಬಲವಾದ ಕಾವಲು ಈ ಜಗತ್ತಿನಲ್ಲಿ ಇನ್ನೊಂದಿಲ್ಲ. ಮೃತ್ಯುವೂ ಬರಲು ಹೆದರುವನು.

'ಯಮನ ದೂತರು ಬಂದು ಅಜಾಮಿಳನೆಳೆಯುವಾಗ, ನಾರಾಯಣ ಎಂಬ ನಾಮವೇ ಕಾಯ್ತು. ಪ್ರಹ್ಲಾದನ ಪಿತ ಬಾಧಿಸುತ್ತಿರುವಾಗ, ನಾರಸಿಂಹ ಎಂಬ ನಾಮವೇ ಕಾಯ್ತು. ಬಾಲೆಯ ಸಭೆಯಲಿ ಸೀರೆಯ ಸೆಳೆವಾಗ, ಕೃಷ್ಣ, ಕೃಷ್ಣ ಎಂಬೋ ನಾಮವೇ ಕಾಯ್ತು. ನೀನ್ಯಾಕೋ ನಿನ್ನ ಹಂಗ್ಯಾಕೊ, ನಿನ್ನ ನಾಮದ ಬಲವೊಂದಿದ್ದರೆ ಸಾಕೋ' ಎಂದು ಪುರಂದರದಾಸರು ನಾಮದ ಮಹಿಮೆ ಬಗ್ಗೆ ಹೇಳಿದ್ದಾರೆ.

**ಶ್ರೀರಾಮಕೃಷ್ಣರು ಆಧುನಿಕ ಜಗತ್ತಿನ ಅಗತ್ಯಕ್ಕೆ ಅನುಗಣವಾಗುವಂತೆ ಸಾಂಪ್ರದಾಯಿಕ ಆಧ್ಯಾತ್ಮಿಕ ವಿಧಿವಿಧಾನಗಳನ್ನು ಸರಳಗೊಳಿಸಿದರು. ಹೀಗೆ ಮಾಡುವಾಗ, ಅಧಿಕ ಮಂದಿ ಸಾಧಕರಿಗೆ ಅನುಕೂಲವಾಗುವಂತೆ ಅವರು ಉಪದೇಶಿಸಿದ ಮಾರ್ಗವೇ ಜಪಸಾಧನೆ. ಅವರ ಅಪ್ರತಿಮ ಉಪದೇಶಗಳ ಸಂಕಲನವಾದ 'ಶ್ರೀರಾಮಕೃಷ್ಣ ವಚನವೇದ' ದಲ್ಲಿ ಬರುವ ನಾಮಜಪ, ನಾಮಮಹಿಮೆಯ ವಿಚಾರಗಳನ್ನು ಸಂಗ್ರಹಿಸಿ ವಿವರಿಸಿರುವ ಲೇಖಕರು ತಮಿಳುನಾಡಿನ ಮಲ್ಲ್ಯಂಕರಣೆಯಲ್ಲಿರುವ ರಾಮಕೃಷ್ಣ ಮಿಷನ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

ವಚನವೇದದಲ್ಲಿ ಶ್ರೀರಾಮಕೃಷ್ಣ ಪರಮಹಂಸರು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಅನೇಕ ಮಾರ್ಗಗಳಿದ್ದರೂ, ನಾಮಗುಣಕೀರ್ತನೆಯ ಮೂಲಕ ಸುಲಭವಾಗಿ ಭಗವಂತನನ್ನು ಪಡೆಯಬಹುದು ಎಂದು ಹೇಳಿದ್ದಾರೆ. ಮನಸ್ಸು ಹಗಲಿರುಳೂ ಸಂಸಾರದಲ್ಲೇ, ಪ್ರಾಪಂಚಿಕ ಕೆಲಸ ಕಾರ್ಯಗಳಲ್ಲೇ ನಿರತವಾಗಿ ಬಿಟ್ಟಿದ್ದರೆ ಅದು ಭಗವನ್ಮುಖವಾಗಲಾರದು. ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಭಗವನ್ನಾಮದಲ್ಲಿ ತೊಡಗುವುದು ಅತ್ಯಂತ ಆವಶ್ಯಕ. ಸಂಸಾರದ ಎಲ್ಲಾ ಕೆಲಸಕಾರ್ಯಗಳನ್ನು ಮಾಡಬೇಕು, ಆದರೆ ಮನಸ್ಸನ್ನು ಮಾತ್ರ ಭಗವನ್ನಾಮದಲ್ಲಿ ತೊಡಗಿಸಲು ಪ್ರಯತ್ನಿಸಬೇಕು. ಈ ರೀತಿ ಪರಮಹಂಸರು ಭಕ್ತರಿಗೆ ಮಾರ್ಗದರ್ಶನ ಮಾಡುತ್ತಾ, ತಮ್ಮ ಪವಿತ್ರ ಜೀವನ ಮತ್ತು ಸಾಧನೆಯ ಬಲದಿಂದ ಆಧ್ಯಾತ್ಮಿಕ ಜೀವನದಲ್ಲಿ ಸಫಲರಾದರು.

ಎಲ್ಲಾ ಸಂಪ್ರದಾಯಗಳ, ಮತ ಪಂಗಡಗಳ ಪಾರಮಾರ್ಥಿಕ ಅನುಭವಗಳನ್ನು ತಮ್ಮದಾಗಿಸಿಕೊಂಡರು. ತಮ್ಮ ಸರಳ ಸಹಜ ಸ್ವಭಾವದಿಂದ ಉನ್ನತ್ತರಂತೆ ಭಗವದನ್ವೇಷಣೆಯಲ್ಲಿ ತೊಡಗಿದರು. ಆಧ್ಯಾತ್ಮಿಕ ಜೀವನದ ಪರಾಕಾಷ್ಠೆಯನ್ನು ತಲುಪಿದರು. ಅಂದಿನ ವಿಚಾರವಂತರು, ಪಂಡಿತರು, ಸನ್ಯಾಸಿಗಳು, ಸಾಮಾನ್ಯರು ಹಾಗೂ ಸಾಧಕರೆಲ್ಲಾ ಅವರ ಜೀವನ ಮತ್ತು ಸಂದೇಶದ ಸವಿಯನ್ನು ಆಸ್ವಾದಿಸಿ, ಪುನೀತರಾಗಿದ್ದಾರೆ. ಜನಸಾಮಾನ್ಯರಲ್ಲಿ ಆತ್ಮಶ್ರದ್ಧೆ, ಭಗವದ್ಭಕ್ತಿ ಮತ್ತು ಧಾರ್ಮಿಕ ಪ್ರಜ್ಞೆಯನ್ನು ಜಾಗೃತಗೊಳಿಸಿದ್ದಾರೆ. ನಿತ್ಯಜೀವನದ ಸಾಮಾನ್ಯ ಘಟನೆಗಳನ್ನು ಬಳಸಿಕೊಂಡು, ಪುರಾಣಗಳಿಂದ, ಇತರ ಶಾಸ್ತ್ರಗಳಿಂದ ಜಟಿಲವಾದ ತತ್ತ್ವ ವಿಚಾರಗಳನ್ನು, ನಿದರ್ಶನಗಳನ್ನು ಕೇಳುಗರ ಮನಮುಟ್ಟುವಂತೆ ವಚನವೇದದಲ್ಲಿ

ವಿವರಿಸುತ್ತ, 'ನಾಮಮಹಿಮೆ' ವಿಷಯದ ಬಗ್ಗೆ ಕೂಡ ತುಂಬ ವಿಚಾರಗಳನ್ನು ಹೇಳಿದ್ದಾರೆ:

**ಕರ್ಮತ್ಯಾಗದ ಅಧಿಕಾರ:** ''ಯಾವಾಗ ಹರಿನಾಮವನ್ನೋ, ರಾಮ ನಾಮವನ್ನೋ ಒಮ್ಮೆ ಉಚ್ಚರಿಸಿದ ಮಾತ್ರದಿಂದಲೇ ರೋಮಾಂಚನ ವಾಗುವುದೋ, ಪ್ರೇಮಾಶ್ರು ಸುರಿಯುವುದೋ, ಆಗ ನಿಜವಾಗಿ ತಿಳಿದುಕೊಳ್ಳಿ, ಇನ್ನು ಸಂಧ್ಯಾದಿಕರ್ಮಗಳನ್ನು ಮಾಡಬೇಕಾಗಿಲ್ಲ ಎಂದು. ಆಗ ಮಾತ್ರವೇ ನಿಮಗೆ ಕರ್ಮತ್ಯಾಗದ ಅಧಿಕಾರ ಕರ್ಮ ತನಗೆ ತಾನೇ ನಿಮ್ಮನ್ನು ಬಿಟ್ಟು ತೊಲಗಿ ಹೋಗುತ್ತದೆ. ಆಗ ಕೇವಲ ರಾಮನಾಮವನ್ನೊ, ಹರಿನಾಮವನ್ನೊ ಅಥವಾ ಬರೀ ಓಂಕಾರವನ್ನೊ ಜಪಿಸಿದರೆ ಸಾಕು. ಸಂಧ್ಯೆಗಾಯತ್ರಿಯಲ್ಲಿ ಲಯ ಹೊಂದುತ್ತದೆ, ಗಾಯತ್ರಿ ಓಂಕಾರದಲ್ಲಿ ಲಯ ಹೊಂದುತ್ತದೆ.'' ಸಾಧಕನು ಒಂದು ಹಂತವನ್ನು ತಲುಪವವರೆಗೆ ಭಗವನ್ನಾಮವನ್ನು ಹೇಳಬೇಕೆಂದು ಪರಮಹಂಸರು ಹೇಳಿದ್ದಾರೆ.

**ಮಹಾವೀರನ ನಾಮಜಪದ ಮಹಿಮೆ:** ಒಮ್ಮೆ ಒಬ್ಬ ಹನುಮಾನ್ ಸಿಂಗ್ ಮತ್ತೊಬ್ಬ ಪಂಜಾಬಿನ ಮುಸಲ್ಮಾನ ಪೈಲ್ವಾನ್ ಕುಸ್ತಿ ಯಾಡುತ್ತಿದ್ದರು. ಮುಸಲ್ಮಾನ ಪೈಲ್ವಾನ್ ಗಟ್ಟಿಮುಟ್ಟಾಗಿದ್ದ. ಅವನು ಹದಿನೈದು ದಿನಗಳಿಂದ ಬೆಣ್ಣೆ ಮತ್ತು ಮಾಂಸವನ್ನು ಚೆನ್ನಾಗಿ ತಿನ್ನುತ್ತಿದ್ದ. ಕುಸ್ತಿಯ ಪಂದ್ಯದ ದಿನ ಕೂಡ ಚೆನ್ನಾಗಿ ಉಂಡಿದ್ದ. ಎಲ್ಲರೂ ಇವನೇ ಗೆಲ್ಲುವನು ಎಂದು ಭಾವಿಸಿದ್ದರು. ಹನುಮಾನ್ ಸಿಂಗ್‌ನಾದರೋ ಹರಿದ ಬಟ್ಟೆಯನ್ನು ಹಾಕಿಕೊಂಡಿದ್ದನು. ಕುಸ್ತಿಯ ಪಂದ್ಯದ ದಿನದ ಮುಂಚೆ ಅವನು ಸ್ವಲ್ಪವೇ ಆಹಾರವನ್ನು ಸ್ವೀಕರಿಸಿ ವ್ರತ ಮಾಡಿದ. ಯಾವಾಗಲೂ ಮಹಾವೀರನ ನಾಮ ಜಪ ಮಾಡುತ್ತಿದ್ದ. ಇವನು ನಿಜವಾಗಿ ಸೋಲುವನು ಎಂದು ಎಲ್ಲರೂ ಭಾವಿಸಿದರು. ಆದರೆ ನಿಜವಾಗಿ ಗೆದ್ದವನು ಹನುಮಾನ್ ಸಿಂಗ್. ಹದಿನೈದು ದಿನಗಳಿಂದ ಪುಷ್ಕಳವಾಗಿ ಊಟ ಮಾಡುತ್ತಿದ್ದವನೇ ಸೋತುಹೋದ. ಮಹಾವೀರನ ನಾಮಜಪದ ಮಹಿಮೆಯಿಂದಲೇ ಹನುಮಾನ್ ಸಿಂಗ್ ಗೆದ್ದವನು.

'ಮುಕುಂದ ಮಾಲಾ' ಅನುಬಂಧದ ಶ್ಲೋಕದಲ್ಲಿ ಈ ರೀತಿ ಇದೆ.

**ಅಯಾಚ್ಯಮಕ್ರೇಯಮಯಾತಯಾಮಮ್**
**ಅಪಾಚ್ಯಮಕ್ಷಯ್ಯಮದುರ್ಭರಂ ಮೇ।**
**ಅಸ್ಯೈವ ಪಾಥೇಯಮಿತಃ ಪ್ರಯಾಣೇ**
**ಶ್ರೀಕೃಷ್ಣ ನಾಮಾಮೃತ ಭಾಗಧೇಯಮ್ ॥೧೦॥**

'ನಾನು ಈ ಲೋಕದಿಂದ ಪರಲೋಕಕ್ಕೆ ಪ್ರಯಾಣ ಮಾಡುವಾಗ (ನನ್ನೊಡನೆ) ಶ್ರೀಕೃಷ್ಣನ ನಾಮವೆಂಬ ಅದೃಷ್ಟರೂಪ ಬುತ್ತಿಯಿರುತ್ತದೆ. ಅದು ಇತರರನ್ನೂ ಬೇಡಿ ಪಡೆಯುವಂಥದಲ್ಲ; ಕೊಂಡುಕೊಳ್ಳುವಂಥದಲ್ಲ ; ರಾತ್ರಿಯೆಲ್ಲ ಇಟ್ಟು ಹಳಸುವಂಥದಲ್ಲ ; ಬೇಯಿಸಿ ಮಾಡುವಂಥದಲ್ಲ; ನಷ್ಟವಾಗುವಂಥದ್ದಲ್ಲ; ಹೊರಲು ಕಷ್ಟವಾದಂಥದಲ್ಲ!' ಭಗವಂತನ ನಾಮಕ್ಕೆ ಅಷ್ಟೊಂದು ಮಹತ್ವ ಇದೆ. ಮತ್ತೊಂದು ಶ್ಲೋಕ ಈ ರೀತಿ ಇದೆ:

**ಶ್ರೀಮನ್ನಾಮ ಪ್ರೋಚ್ಯ ನಾರಾಯಣಾಖ್ಯಂ**
**ಕೇ ನ ಪ್ರಾಪುರ್ವಾಂಛಿತಂ ಪಾಪಿನೋಽಪಿ।**
**ಹಾ ನಃ ಪೂರ್ವಂ ವಾಕ್ಪ್ರವೃತ್ತಾ ನ ತಸ್ಮಿನ್**
**ತೇನ ಪ್ರಾಪ್ತಂ ಗರ್ಭವಾಸಾದಿ ದುಃಖಮ್॥೨೬॥**

'ಶ್ರೀಮನ್ನಾರಾಯಣ ಎಂಬ ನಾಮವನ್ನು ಉಚ್ಚಾರ ಮಾಡಿ ಪಾಪಿಗಳಾದವರೂ ಕೂಡ ತಮ್ಮ ಇಷ್ಟಾರ್ಥವನ್ನು ಪಡೆಯಲಿಲ್ಲವೆ? ಅಯ್ಯೋ, ಹಿಂದೆ ಅದರಲ್ಲಿ ನಮ್ಮ ಮಾತು ತೊಡಗಲಿಲ್ಲ ; ಅದರಿಂದಲೇ ಗರ್ಭವಾಸ ಮುಂತಾದ ದುಃಖಗಳು ಉಂಟಾದವು.'

ಈ ರೀತಿ ಯಾರು ಆಲಸ್ಯವನ್ನು ಬಿಟ್ಟು ಭಕ್ತಿಯ ದ್ವಾರಾ ಭಗವನ್ನಾಮದ ಮಹಿಮೆಯನ್ನು ಅರಿತು, ಭಗವಂತನ ಶ್ರೀಚರಣಕಮಲಗಳನ್ನು ಸ್ಮರಣೆ ಮಾಡುತ್ತಾರೋ, ಅವರ ದುಃಖ ಮತ್ತು ವ್ಯಸನಗಳನ್ನೆಲ್ಲಾ ಭಗವಂತನು ನಿವಾರಿಸುವನು. ಶ್ರದ್ಧೆಯಿಂದ, ಮನದ ಅಂತರಾಳದಿಂದ ಒಮ್ಮೆ ಭಗವಂತನ ನಾಮ ಹೇಳಿದರೂ ಭಕ್ತನ ಕುಲ ಕೋಟಿ ಉದ್ಧಾರವಾಗುವುದು. ಪರಮಹಂಸರು ಒಂದು ನಿದರ್ಶನವನ್ನು ಕೊಟ್ಟು ಇದನ್ನು ವಿವರಿಸುತ್ತಾರೆ.

**ಕೋಟಿ ಜನ್ಮಪಾಪನಾಶ:** ಒಮ್ಮೆ ರಾಜನೊಬ್ಬ ಬ್ರಾಹ್ಮಣನ ಹತ್ಯೆಯ ಘೋರ ಪಾಪಕ್ಕೆ ಕಾರಣನಾದ. ಪಾಪಭೀತಿಯಿಂದ ವ್ಯಾಕುಲನಾಗಿ ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ತಿಳಿಯಲು ಋಷಿಗಳ ಆಶ್ರಮಕ್ಕೆ ಬಂದ. ಋಷಿಗಳು ಮನೆಯಲ್ಲಿರಲಿಲ್ಲ. ಅವರ ಮಗ ಆಶ್ರಮದಲ್ಲಿದ್ದ. ಅವನು ದೂರದಿಂದ ನಡೆದ ವಿಷಯವನ್ನು ಕೇಳಿ, ''ಭಗವಂತನ ಹೆಸರನ್ನು ಮೂರು ಬಾರಿ ಉಚ್ಚರಿಸು, ನೀನು ಆಗ ಪಾಪದಿಂದ ಪಾರಾಗುವೆ'' ಎಂದ. ಋಷಿಗಳು ಹಿಂತಿರುಗಿ ಬಂದ ಮೇಲೆ ಮಗನು ಸೂಚಿಸಿದ ಪ್ರಾಯಶ್ಚಿತ್ತದ ವಿಷಯವನ್ನು ಕೇಳಿ ಮಗನಿಗೆ ಕೋಪದಿಂದ, ''ಒಮ್ಮೆ ಭಗವಂತನ ನಾಮವನ್ನು ಉಚ್ಚರಿಸಿದರೆ ಸಾಕು, ಅನೇಕ ಕೋಟಿಜನ್ಮಗಳಿಂದ ಮಾಡಿದ ಪಾಪವೆಲ್ಲ ಅಳಿಸಿ ಹೋಗುವುದು, ದಡ್ಡ, ದೇವರ ನಾಮಮಹಿಮೆಯ ಮೇಲೆ ಇರುವ ಶ್ರದ್ಧೆ ನಿನಗೆ ಇಷ್ಟೇ ಏನು? ಮೂರು ಬಾರಿ ಅವನ ನಾಮವನ್ನು ಉಚ್ಚಾರ ಮಾಡುವುದಕ್ಕೆ ಹೇಳಿದೆಯಲ್ಲ! ನಿನ್ನಲ್ಲಿರುವ ಶ್ರದ್ಧೆ ದುರ್ಬಲವಾಗಿರುವುದರಿಂದ ನೀನೊಬ್ಬ ಚಂಡಾಲನಾಗು'' ಎಂದು ಶಪಿಸಿದರು. ಅವನೇ ರಾಮಾಯಣದಲ್ಲಿ ಗುಹನಾಗಿ ಜನ್ಮ ತಾಳಿದ.

ಎಲ್ಲಾ ಮನಸ್ಸಿನ ಮೇಲೆ ನಿಂತಿದೆ. ಮನಸ್ಸೇ ಬಂಧನಕ್ಕೆ ಕಾರಣ, ಮನಸ್ಸೇ ಮುಕ್ತಿಗೆ ಕಾರಣ. ಮನಸ್ಸಿಗೆ ಯಾವ ಬಣ್ಣ ಕೊಟ್ಟರೆ ಅದು ಆ ಬಣ್ಣ ಧರಿಸುತ್ತದೆ. ಸಂಸಾರದಲ್ಲಿ ಇರುವುದು ತಪ್ಪೇನಲ್ಲ , ಆದರೆ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಿ ಇಡಬೇಕು. ಇಲ್ಲದಿದ್ದರೆ ಜೀವನದಲ್ಲಿ ಜಯಶಾಲಿಗಳಾಗುವುದಿಲ್ಲ. ಒಂದು ಕೈಯಿಂದ ಕೆಲಸ ಮಾಡಿ, ಇನ್ನೊಂದು ಕೈಯಿಂದ ಭಗವಂತನ ನಾಮಮಹಿಮೆಯನ್ನು ಕೊಂಡಾಡಿ, ಆಗ ಮಾತ್ರ ಜೀವನದಲ್ಲಿ ಯಶಸ್ಸನ್ನು ಕಾಣಬಹುದು. ನಾಮದಲ್ಲಿ ವಿಶ್ವಾಸ, ಪ್ರೀತಿ, ಶ್ರದ್ಧೆ ಇಲ್ಲದಿದ್ದರೆ, ಯಾವ ಗತಿ ದೊರಕುವುದು ಎಂಬುದಕ್ಕೆ ಪರಮಹಂಸರು ನಿದರ್ಶನವನ್ನು ಕೊಡುತ್ತಾರೆ.

**ರಾಮನಾಮ ಮಹಿಮೆಯಲ್ಲಿ ವಿಶ್ವಾಸ:** ''ಒಂದು ಸಲ ಒಬ್ಬ ಸಮುದ್ರವನ್ನು ದಾಟುವುದರಲ್ಲಿದ್ದ. ವಿಭೀಷಣ ರಾಮನ ಹೆಸರನ್ನು ಒಂದು ಎಲೆಯ ಮೇಲೆ ಬರೆದು ಅವನ ಬಟ್ಟೆಯಲ್ಲಿ ಕಟ್ಟಿದ. 'ನೀನು ಯಾವುದಕ್ಕೂ ಅಂಜಬೇಕಾಗಿಲ್ಲ, ನಿರ್ವಿಘ್ನವಾಗಿ ಸಮುದ್ರ ದಾಟಿಬಿಡುತ್ತೀಯೆ. ನೀರಿನ ಮೇಲೆ ನಡೆದು ಹೋಗಲು ಸಾಧ್ಯವಾಗುತ್ತದೆ.

ಆದರೆ ಅದನ್ನು ಮಾತ್ರ ಬಿಚ್ಚಿ ನೋಡಬೇಡ; ನೋಡಿದೆಯೋ ಮುಳುಗಿ ಹೋಗುತ್ತೀಯೆ.' ಶ್ರದ್ಧೆಯ ಬಲ ಅಂಥಾದ್ದು, ಆ ಮನುಷ್ಯ ಸುಲಭವಾಗಿ ಸಮುದ್ರದ ಮೇಲೆ ನಡೆದು ಹೋಗುತ್ತಿದ್ದ. ಸ್ವಲ್ಪ ದೂರ ಹಾಗೇ ನಡೆದು ಹೋದ ಮೇಲೆ ಆತನಿಗೆ ಯೋಚನೆ ಬಂತು; 'ವಿಭೀಷಣ ನನ್ನ ಬಟ್ಟೆಯಲ್ಲಿ ಎಂಥ ಅದ್ಭುತ ವಸ್ತುವನ್ನು ಕಟ್ಟಿರಬೇಕು, ನಾನು ಇಷ್ಟು ಸುಲಭವಾಗಿ ನೀರಿನ ಮೇಲೆ ನಡೆದು ಕೊಂಡು ಹೋಗಬೇಕಾದರೆ?' ಹೀಗೆಂದು ಯೋಚಿಸಿ ಗಂಟುಬಿಚ್ಚಿ ನೋಡುತ್ತಾನೆ, ಕೇವಲ ರಾಮನಾಮ ಬರೆದಿರುವ ಒಂದು ಎಲೆ ಮಾತ್ರ ಅದರಲ್ಲಿದೆ! 'ಓ, ಇದೇನೆ ಇದರೊಳಗಿರುವುದು!' ಎಂಬ ಭಾವನೆ ಬಂದೊಡನೆ ಆತ ಮುಳುಗಿ ಹೋದ.

''ಜನ ಹೇಳುತ್ತಾರೆ, ಹನುಮಂತನಿಗೆ ರಾಮನಾಮ ಮಹಿಮೆ ಯಲ್ಲಿ ಅಂಥ ವಿಶ್ವಾಸ, ಅದರ ಬಲದಿಂದ ಆತ ಸಮುದ್ರವನ್ನೇ ಲಂಘನೆ ಮಾಡಿಬಿಟ್ಟ! ಆದರೆ ಸ್ವಯಂ ರಾಮ ಸೇತುವೆ ಕಟ್ಟಬೇಕಾ ಯಿತು. ನಾಮಮಹಿಮೆಯಲ್ಲಿ ವಿಶ್ವಾಸ ಬಂದರೆ, ಮನುಷ್ಯ ಪಾಪ ಕಾರ್ಯಗಳನ್ನು ಮಾಡಿರಲಿ ಅಥವಾ ಮಹಾಪಾತಕ ಕಾರ್ಯಗಳನ್ನು ಮಾಡಿರಲಿ, ಆತ ಯಾವುದಕ್ಕೂ ಹೆದರಬೇಕಾಗಿಲ್ಲ'' ಎಂದು ಹೇಳುತ್ತಾ ಪರಮಹಂಸರು ಮಧುರವಾದ ಕಂಠದಿಂದ ಹಾಡುತ್ತಾರೆ:

**ನಾ ಪಾಪಿಯಾದರೂ ನನ್ನ ಕಡೆಗಾಲದಲ್ಲಿ**
**ನಿನ್ನ ಶ್ರೀನಾಮವನು ಜಪಿಸುತಿರಲು**
**ಮುಕ್ತಿಗೊಯ್ಯದೆ ನೀನು ಬಿಡುವಳೇನು?**
**ಸ್ತ್ರೀಹತ್ಯ ಪಶುಹತ್ಯ ಭ್ರೂಣ ಬ್ರಾಹ್ಮಣಹತ್ಯ**
**ಇನಿತೆಲ್ಲಾ ಪಾಪಗಳ ಮಾಡಿದ್ದರೂ**
**ನಿನ್ನ ಶ್ರೀಶುಭನಾಮ ನನ್ನ ದುರಿತವನೀಗಿ**
**ಬ್ರಹ್ಮ ಪದವಿಯ ಕಡೆಗೆ ಎತ್ತದೇನು?**

''ಯಾವ ವ್ಯಕ್ತಿ 'ನಾನು ಬದ್ಧ' ಎಂಬುದಾಗಿ ಪದೇ ಪದೇ ಹೇಳುತ್ತಾನೋ ಆ ನೀಚ ಬದ್ಧನೇ ಆಗಿಬಿಡುತ್ತಾನೆ. ಯಾರು ಹಗಲೂ ಇರುಳೂ 'ನಾನು ಪಾಪಿ, ನಾನು ಪಾಪಿ' ಎಂಬುದಾಗಿ ಹೇಳುತ್ತಲೇ ಇರುತ್ತಾನೊ ಆತ ಪಾಪಿಯೇ ಆಗಿ ಬಿಡುತ್ತಾನೆ.

''ಭಗವಂತನ ನಾಮಮಹಿಮೆಯಲ್ಲಿ ಮನುಷ್ಯನಿಗೆ ಅಂಥ ಶ್ರದ್ಧೆಯುಂಟಾಗಿಬಿಡಬೇಕು, ಆತ ಹೇಳುವಂತಾಗಬೇಕು: 'ಏನು? ನಾನು ಭಗವಂತನ ನಾಮ ಜಪಿಸುತ್ತಾ ಇದ್ದೇನೆ, ನನ್ನಲ್ಲಿ ಇನ್ನೂ ಪಾಪ? ನನಗಿನ್ನಾವುದರ ಪಾಪ? ನನಗಿನ್ನೆಂಥದರ ಬಂಧನ?'

''ಭಗವಂತನ ನಾಮ ಜಪಿಸಿದರೆ ಮನುಷ್ಯನ ದೇಹ ಮತ್ತು ಮನಸ್ಸು ಎಲ್ಲವೂ ಶುದ್ಧವಾಗಿಬಿಡುತ್ತದೆ. ಕೇವಲ ಪಾಪ, ನರಕ ಈ ಮಾತುಗಳಲ್ಲೇ ಏಕೆ ತೊಡಗಬೇಕು? ಭಗವಂತನಿಗೆ ಒಮ್ಮೆ ಹೇಳಿಬಿಡು, 'ಹೇ ಭಗವಂತ, ಇದುವರೆಗೆ ಅನ್ಯಾಯ ಕರ್ಮಗಳನ್ನು ಮಾಡಿದ್ದೇನೆ, ಇನ್ನು ಮುಂದೆ ಮಾಡುವುದಿಲ್ಲ.' ಆತನ ಹೆಸರಿನಲ್ಲಿ ಶ್ರದ್ಧೆ ಇಡು.

''ಕೃಷ್ಣ ಕಿಶೋರನದು ಎಂಥ ವಿಶ್ವಾಸ! ಹೇಳುತ್ತಿದ್ದ: 'ನಾನು ಭಗವಂತನ ಹೆಸರನ್ನು ಒಮ್ಮೆ ಪಠಿಸಿದ್ದೇನೆ. ನನ್ನಲ್ಲಿ ಇನ್ನು ಪಾಪ ಅಂದ ರೇನು? ನಾನು ಶುದ್ಧ ನಿರ್ಮಲ ವ್ಯಕ್ತಿಯಾಗಿ ಬಿಟ್ಟಿದ್ದೇನೆ.' ಅಜಾ ಮಿಳನೂ ಭಗವಂತನನ್ನು ತುಷ್ಟಿಗೊಳಿಸಲು ತಪಸ್ಸು ಮಾಡಿ ಕೊನೆ ಕಾಲದಲ್ಲಿ 'ನಾರಾಯಣ' ಅಂತ ನಾಮವನ್ನು ಹೇಳಿ ಮೋಕ್ಷ ಹೊಂದಿದನು.

''ಯಾರು ರಾಮನಾಮ ಮತ್ತು ಕೃಷ್ಣನಾಮ ಜಪಿಸುತ್ತಾನೋ, ಆತನ ಭೌತದೇಹ ಚಿನ್ಮಯದೇಹ ಆಗಿ ಬಿಡುತ್ತದೆ. ಎಲ್ಲವೂ ಆತನ ಕಣ್ಣಿಗೆ ಚಿನ್ಮಯವಾಗಿ ಕಂಡುಬರುತ್ತದೆ. ಚಿನ್ಮಯ ಶ್ಯಾಮ, ಚಿನ್ಮಯ ಧಾಮ. ರಾಮನಾಮವನ್ನೇ ಆಗಲಿ, ಕೃಷ್ಣನಾಮವನ್ನೇ ಆಗಲಿ, ಒಮ್ಮೆ ಜಪಿಸಿದರೂ ನೂರು ಸಂಧ್ಯಾವಂದನೆಗಳ ಫಲ ದೊರೆತು ಬಿಡುತ್ತದೆ. ಭಗವಂತನ ನಾಮ ಮಹಿಮೆಯಿಂದ ಅಸಾಧ್ಯವೂ ಸಾಧ್ಯವಾಗು ವುದು.'' ಪರಮಹಂಸರು ಇನ್ನೊಂದು ನಿದರ್ಶನವನ್ನು ಕೊಡುತ್ತಾರೆ:

**ನಾಮ ಮಹಿಮೆಯಲ್ಲಿ ಸರಳ ಶ್ರದ್ಧೆ:** ''ನದಿಯ ಆಚೆ ಕಡೆ ಇರುವ ಬ್ರಾಹ್ಮಣ ಪೂಜಾರಿಗೆ ಹಾಲಿನವಳೊಬ್ಬಳು ಹಾಲನ್ನು ಕೊಡುತ್ತಿದ್ದಳು. ದೋಣಿ ಸಕಾಲದಲ್ಲಿ ಬರದೆ, ಕಾಲಕ್ಕೆ ಸರಿಯಾಗಿ ಹಾಲನ್ನೊದಗಿಸಲು ಅವಳಿಗೆ ಆಗುತ್ತಿರಲಿಲ್ಲ. ಒಂದು ದಿನ ಬಹಳ ಹೊತ್ತಾದ ಮೇಲೆ ಹಾಲನ್ನು ತಂದಳು. ಬ್ರಾಹ್ಮಣನು ಅವಳನ್ನು ಗದರಿಸಿದನು. ಹಾಲು ಮಾರುವವಳು, ''ನಾನೇನು ಮಾಡಲಿ, ಕಾಲಕ್ಕೆ ಸರಿಯಾಗಿ ನಾನು ಮನೆಯಿಂದ ಹೊರಡುತ್ತೇನೆ. ಆದರೆ ದೋಣಿಗಾಗಿ ನಾನು ಕಾಯ ಬೇಕಾಗುತ್ತದೆ'' ಎಂದಳು. ಬ್ರಾಹ್ಮಣನು, ''ಎಲೈ ಹೆಂಗಸೆ, ಭಗ ವಂತನ ನಾಮವನ್ನು ಉಚ್ಚರಿಸಿ ಜನ ಭವಸಾಗರವನ್ನು ದಾಟುತ್ತಾರೆ. ಈ ಒಂದು ಸಣ್ಣ ನದಿಯನ್ನು ನೀನು ದಾಟಲಾರೆಯಾ?'' ಎಂದನು. ಸರಳ ಭಕ್ತಿಯುಳ್ಳ ಹೆಂಗಸಿಗೆ ನದಿಯನ್ನು ದಾಟುವ ಉಪಾಯವನ್ನು ಕೇಳಿ ಸಂತೋಷವಾಯಿತು. ಮಾರನೆ ದಿನದಿಂದ ಕಾಲಕ್ಕೆ ಸರಿಯಾಗಿ ಹಾಲನ್ನು ತರುತ್ತಿದ್ದಳು. ಒಂದು ದಿನ ಪೂಜಾರಿಯು, ''ಇತ್ತೀಚಿಗೆ ನೀನು ಸಮಯಕ್ಕೆ ಸರಿಯಾಗಿ ಹಾಲನ್ನು ತರುತ್ತಿರುವೆಯಲ್ಲಾ?'' ಎಂದು ಕೇಳಿದನು. ಅದಕ್ಕೆ ಹಾಲು ಮಾರುವವಳು, ''ನೀವೇ ಹೇಳಿ ದಂತೆ ನಾನು ಭಗವಂತನ ಹೆಸರನ್ನು ಹೇಳುತ್ತ ನದಿಯ ಮೇಲೆ ನಡೆದುಕೊಂಡು ಬಂದೆ. ನನಗೆ ಈಗ ದೋಣಿಯ ಆವಶ್ಯಕತೆ ಇಲ್ಲ'' ಎಂದಳು. ಪೂಜಾರಿಗೆ ಇದನ್ನು ನಂಬಲು ಆಗಲಿಲ್ಲ. ''ನೀನು ನದಿ ಯನ್ನು ಹೇಗೆ ದಾಟುತ್ತಿರುವೆ ಎಂಬುದನ್ನು ತೋರಿಸುತ್ತೀಯಾ?'' ಎಂದು ಕೇಳಿದ. ಹಾಲಿನ ಹೆಂಗಸು ಪೂಜಾರಿಯನ್ನು ತನ್ನೊಡನೆ ಕರೆದುಕೊಂಡು ಹೋದಳು. ಆಕೆ ನದಿಯ ಮೇಲೆ ನಡೆಯಲಾ ರಂಭಿಸಿದಳು. ಹಿಂತಿರುಗಿ ನೋಡಿದಾಗ ಪೂಜಾರಿಗಳು ಬಹಳ ದುರವಸ್ಥೆಯಲ್ಲಿದ್ದುದನ್ನು ನೋಡಿದಳು. ''ಸ್ವಾಮಿಗಳೆ, ನೀವು ದೇವರ ಹೆಸರನ್ನು ಬಾಯಲ್ಲಿ ಹೇಳುತ್ತಿರುವಿರಿ. ಅದೇ ವೇಳೆಗೆ ಒದ್ದೆ ಯಾಗದಿರಲಿ ಎಂದು ಪಂಚೆಯನ್ನು ಮೇಲಕ್ಕೆತ್ತುತ್ತಿರುವಿರಿ. ನೀವು ನಿಜವಾಗಿಯೂ ಭಗವಂತನ ಮೇಲೆ ಭಾರ ಹಾಕಿಲ್ಲ'' ಎಂದಳು. ಯಾವ ಒಂದು ಅದ್ಭುತವನ್ನು ಸಾಧಿಸಬೇಕಾದರೂ ಭಗವಂತನ ನಾಮದಲ್ಲಿ ಸಂಪೂರ್ಣ ಶ್ರದ್ಧೆ ಮತ್ತು ಶರಣಾಗತಿ ಇರಬೇಕು.''

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ।।೩೦।।**

'ಅತ್ಯಂತ ದುರಾಚಾರಿಯಾಗಿದ್ದರೂ ಅನನ್ಯ ಭಕ್ತಿಯಿಂದ ನನ್ನನ್ನು ಭಜಿಸಿದರೆ ಅವನು ಸಾಧುವೆಂದೇ ತಿಳಿಯತಕ್ಕದ್ದು; ಏಕೆಂದರೆ ಅವನು ನಿಶ್ಚಯ ಬುದ್ಧಿಯುಳ್ಳವನಾಗಿರುತ್ತಾನೆ.'

‘‘ಭಗವಂತನ ನಾಮವನ್ನು ಯಾರು ತಿಳಿದೋ, ತಿಳಿಯದೆಯೋ ಹೇಳಿದರೂ ಕೂಡ ಅದರ ಫಲ ಸಿಕ್ಕೇ ಸಿಗುತ್ತದೆ. ಬೆಂಕಿಯನ್ನು ಗೊತ್ತಿದ್ದು ಮುಟ್ಟಿದರೂ ಸುಡುವುದು, ಮತ್ತು ಗೊತ್ತಿಲ್ಲದೆ ಮುಟ್ಟಿದರೂ ಸುಡುವುದು. ಕಲಿಯುಗದಲ್ಲಿ ಅನ್ನಗತಪ್ರಾಣ, ದೇಹಬುದ್ಧಿ ಸುಲಭವಾಗಿ ಹೋಗದು. ಭಗವನ್ನಾಮದ ಮಹಿಮೆಯನ್ನು ಚಿಂತನೆ ಮಾಡಬೇಕು. ಕೇವಲ ಪಾಂಡಿತ್ಯ ಯಾವುದಕ್ಕೂ ಬಾರದು. ಒಬ್ಬ ಸಾಧುವಿನ ಹತ್ತಿರ ಒಂದು ಪುಸ್ತಕ ಇತ್ತಂತೆ. ಅದರಲ್ಲಿ ಪ್ರತಿ ಹಾಳೆಯಲ್ಲೂ ‘ಓಂ ರಾಮಃ ಓಂ ರಾಮಃ’ ಎಂದು ಬರೆದಿತ್ತಂತೆ, ಇನ್ನು ಏನೂ ಬರೆದಿರಲಿಲ್ಲ.

‘‘ಭಗವಂತ ಅಂತರ್ಯಾಮಿ. ಹೃತ್ಪೂರ್ವಕವಾದ ಕರೆಗೆ ಆತ ಕಿವಿಗೊಟ್ಟೇಗೊಡುತ್ತಾನೆ. ವ್ಯಾಕುಲನಾಗಿ, ಶರಣಾಗತ ಭಾವದಿಂದ ಅವನ ನಾಮಹಿಡಿದು ಕರೆದರೆ, ಖಂಡಿತವಾಗಿಯೂ ಅವನ ದರ್ಶನ ಸಿಗುತ್ತದೆ.’’ ಎನುತ್ತ ಬೆಕ್ಕಿನ ಮರಿಯ ಉಪಮಾನವನ್ನು ಪರಮಹಂಸರು ಕೊಡುತ್ತಾರೆ:

‘‘ಬೆಕ್ಕಿನ ಮರಿಗೆ ಕೇವಲ, ‘ಮಿಯಾವ್ ಮಿಯಾವ್’ ಅಂತ ತನ್ನ ತಾಯನ್ನು ಕರೆಯವುದೊಂದೇ ಗೊತ್ತಿರುವುದು. ತಾಯಿ ಅದನ್ನು ಎಲ್ಲಿ ಇಡುವುದೋ ಅಲ್ಲೇ ಬಿದ್ದಿರುತ್ತದೆ. ಕೆಲವು ವೇಳೆ ಹಾಸಿಗೆಯ ಮೇಲೆ ಇಡುತ್ತದೆ. ಅದಕ್ಕೇನಾದರೂ ತೊಂದರೆ ಬಂದರೆ ಅದು ಕೇವಲ ‘ಮಿಯಾವ್ ಮಿಯಾವ್’ ಅಂತ ಕೂಗುತ್ತದೆ. ಅದಕ್ಕೆ ಇನ್ನು ಬೇರೆ ಏನೂ ಗೊತ್ತಿಲ್ಲ. ತಾಯಿ ಬೆಕ್ಕು ಎಲ್ಲಿದ್ದರೆ ತಾನೆ ಏನು, ಈ ‘ಮಿಯಾವ್ ಮಿಯಾವ್!’ ಎಂಬ ಶಬ್ದವನ್ನು ಕೇಳಿದೊಡನೆಯೇ ಮರಿಯ ಹತ್ತಿರಕ್ಕೆ ಬಂದು ಬಿಡುತ್ತದೆ.’’

ಭಗವಂತನ ನಾಮ ಮಹಿಮೆ, ರೂಪಗಳು ಬೇರೆ ಬೇರೆ ಇದ್ದರೂ, ಭಗವಂತನು ಮಾತ್ರ ಒಬ್ಬನೇ. ಯಾವ ಭಾಷೆ, ಜಾತಿ ಭೇದವಿಲ್ಲದೆ ಅವನನ್ನು ಕರೆಯಬಹುದು ಎನ್ನುವುದಕ್ಕೆ ಪರಮಹಂಸರು ನೀರಿನ ದೃಷ್ಟಾಂತವನ್ನು ಕೊಡುತ್ತಾರೆ:

**ದೇವನೊಬ್ಬ ನಾಮ ಹಲವು:** ‘‘ಇದು ನೀರೆಂಬ ಒಂದೇ ವಸ್ತುವನ್ನು ವಿವಿಧ ಭಾಷೆಗಳಲ್ಲಿ ವಿವಿಧ ಹೆಸರಿನಿಂದ ಕರೆದಹಾಗೆ. ಒಂದು ಕೊಳಕ್ಕೆ ಮೂರು ನಾಲ್ಕು ಘಟ್ಟಗಳಿವೆ ಅಂತ ಇಟ್ಟುಕೊಳ್ಳಿ. ಒಂದು ಘಟ್ಟದಲ್ಲಿ ಹಿಂದೂಗಳು ನೀರು ಕುಡಿಯುತ್ತಾರೆ. ಅವರು ಅದಕ್ಕೆ ‘ಜಲ’ ಅಂತ ಕರೆಯುತ್ತಾರೆ. ಇನ್ನೊಂದರಲ್ಲಿ ಮುಸಲ್ಮಾನರು ನೀರು ಕುಡಿಯುತ್ತಾರೆ. ಅವರು ಅದಕ್ಕೆ ಹೇಳುತ್ತಾರೆ ‘ಪಾನಿ’ ಎಂಬುದಾಗಿ, ಮತ್ತೊಂದರಲ್ಲಿ ಆಂಗ್ಲೇಯರು ನೀರು ಕುಡಿಯುತ್ತಾರೆ. ಅವರು ಅದಕ್ಕೆ ಹೇಳುತ್ತಾರೆ ‘ವಾಟರ್’ ಎಂಬುದಾಗಿ. ಈ ಮೂವರು ಕುಡಿಯುವುದೂ ನೀರೇ, ಆದರೆ ಹೆಸರಿನಲ್ಲಿ ಮಾತ್ರ ಪ್ರಭೇದ. ಹಾಗೆಯೇ ಕೆಲವರು ಭಗವಂತನನ್ನು ‘ಅಲ್ಲಾ’ ಇನ್ನು ಕೆಲವರು ‘ಗಾಡ್’ ಮತ್ತೆ ಕೆಲವರು ‘ಬ್ರಹ್ಮ’ ಮತ್ತು ಕೆಲವರು ‘ಕಾಳಿ’ ಇನ್ನೂ ಬೇರೆ ಬೇರೆಯವರು ‘ರಾಮ’, ‘ಹರಿ’, ‘ಯೇಸು’, ‘ದುರ್ಗಾ’ ಎಂಬಿವೇ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ.

‘‘ಕಲಿಯುಗಕ್ಕೆ ಸರ್ವದಾ ಭಗವಂತನ ನಾಮಗುಣ ಕೀರ್ತನೆ ಮಾಡೋದು. ಯಾರಿಗೆ ಸಮಯವೇ ಇಲ್ಲವೋ ಅವರು ಪ್ರಾತಃ ಕಾಲ ಸಾಯಂಕಾಲ ಕೈತಾಳ ಹಾಕುತ್ತಾ ನಾಮ ಜಪದ ಮಹಿಮೆಯನ್ನು ಕೊಂಡಾಡಲಿ.

‘‘ವಾಲ್ಮೀಕಿ ಮಹರ್ಷಿಗಳಿಗೆ ರಾಮ ಮಂತ್ರ ಜಪಮಾಡಲು ಉಪದೇಶ ದೊರೆಯಿತು. ಆದರೆ ಆತನಿಗೆ ಗುರುವಾಜ್ಞೆಯಾಯಿತು, ‘ಮರಾ’, ‘ಮರಾ’ ಅಂತ ಜಪಮಾಡಬೇಕು ಎಂದು. ‘ಮ’ ಎಂದರೆ ಭಗವಂತ ‘ರಾ’ ಎಂದರೆ ಜಗತ್ತು ಎಂದು. ಮೊದಲು ಭಗವಂತ ಬಳಿಕ ಜಗತ್ತು. ಆತನೊಬ್ಬನನ್ನು ಅರಿತರೆ ಎಲ್ಲವನ್ನೂ ಅರಿಯಬಹುದು. ಒಂದರ ಪಕ್ಕದಲ್ಲಿ ಒಂದೈವತ್ತು ಸೊನ್ನೆಗಳನ್ನು ಹಾಕಿದರೆ ಅದು ಒಂದು ದೊಡ್ಡ ಸಂಖ್ಯೆಯೇ ಆಗಿ ಬಿಡುತ್ತದೆ; ಆದರೆ ಆ ಒಂದನ್ನು ಅಳಿಸಿ ಹಾಕಿಬಿಟ್ಟರೆ ಏನೂ ಇರದು. ಮೊದಲು ಭಗವಂತನ ನಾಮ, ಬಳಿಕ ಜಗತ್ತು.

‘‘ಭಗವಂತನ ನಾಮ ಜಪ ಮಾಡುತ್ತಾ ಇದ್ದರೆ, ಹೃದಯಲ್ಲಿ ಸತ್ವಗುಣ ಬೆಳೆದು, ವ್ಯಕ್ತಿಯ ಹೃದಯದಲ್ಲಿ ವಿಷಯ ಬುದ್ಧಿ ಲೇಶ ಮಾತ್ರವೂ ಇರದೆ, ವ್ಯಕ್ತಿಯ ಜೀವನದಲ್ಲಿ ನಾಮದ ಮಹಿಮೆಯಿಂದ ಅದ್ಭುತ ಪರಿವರ್ತನೆಯನ್ನು ಕಾಣಬಹುದು.’’

ಮಹೇಂದ್ರನಾಥ ಗುಪ್ತ ಎಂಬುವವರು ಶ್ರೀರಾಮಕೃಷ್ಣ ಪರಮಹಂಸರ ಶ್ರೇಷ್ಠ ಭಕ್ತರಲ್ಲೊಬ್ಬರು. ಅವರು ಪರಮಹಂಸರ ಜೀವನದ ಕೊನೆಯ ಸುಮಾರು ನಾಲ್ಕು ವರ್ಷಗಳು ಅವರ ನಿಕಟ ಸಂಪರ್ಕವನ್ನು ಹೊಂದಿದ್ದು, ತಾವು ಪರಮಹಂಸರ ಸಂಬಂಧವಾಗಿ ಕಂಡು ಕೇಳಿದ ವಿಷಯಗಳನ್ನು ವಚನವೇದದಲ್ಲಿ ಬರೆದಿದ್ದಾರೆ. ಅವುಗಳಲ್ಲಿ ಕೆಲವು ನಿದರ್ಶನಗಳನ್ನು ಈ ಲೇಖನದಲ್ಲಿ ಕೊಡಲಾಗಿದೆ. ❖

**ಆಬ್ರಹ್ಮಸ್ತಂಬಪರ್ಯಂತಂ**
**ಸರ್ವಂ ಮಾಯಾಮಯಂ ಜಗತ್ ।**
**ಪಾವನಂ ಪಾವನೇಭ್ಯೋಽಪಿ**
**ಹರೇರ್ನಾಮೈವ ಕೇವಲಮ್ ॥**

ಬ್ರಹ್ಮನಿಂದ ತೊಡಗಿ ಹುಲ್ಲೆಸಳಿನವರೆಗೆ ಸರ್ವ ಜಗತ್ತೂ ಮಾಯಾಮಯವಾದುದು. ಹರಿಯ ನಾಮವೊಂದೇ ಸತ್ಯವು, ಸತ್ಯವು, ಶಾಶ್ವತ ಸತ್ಯವು.

**ತೃಣೀಕೃತ್ಯ ಜಗತ್ಸರ್ವಂ**
**ರಾಜತೇ ಸಕಲೋಪರಿ ।**
**ಚಿದಾನಂದಮಯಂ ಶುದ್ಧಂ**
**ಹರೇರ್ನಾಮೈವ ಕೇವಲಮ್ ॥**

ಸಮಸ್ತ ಪ್ರಪಂಚವನ್ನೂ ತೃಣೀಕರಿಸಿ ಎಲ್ಲಕ್ಕೂ ಮೇಲಾಗಿ ರಾಜಿಸುವುದೂ ಚಿದಾನಂದಮಯವೂ ಶುದ್ಧವೂ ಆದುದು ಹರಿಯ ನಾಮವೊಂದೇ.

**ನಿಃಶ್ವಾಸೇ ನ ಹಿ ವಿಶ್ವಾಸಃ**
**ಕದಾರುದ್ಧೋ ಭವಿಷ್ಯತಿ ।**
**ಕೀರ್ತನೀಯಮತೋ ಬಾಲ್ಯಾತ್**
**ಹರೇರ್ನಾಮೈವ ಕೇವಲಮ್ ॥**

ನೀನು ಬಿಡುವ ಶ್ವಾಸವನ್ನು ನಂಬಲು ಸಾಧ್ಯವಿಲ್ಲ. ಯಾವ ವೇಳೆಯಲ್ಲೋ ನಿಂತುಹೋದೀತು. ಆದ್ದರಿಂದ ಬಾಲ್ಯದಿಂದಲೇ ಕೇವಲ ಹರಿನಾಮವನ್ನೇ ಕೀರ್ತಿಸು.

*‘ಕೈವಲ್ಯಾಷ್ಟಕ’ ದಿಂದ*

# ಶ್ರೀರಾಮಕೃಷ್ಣಸ್ತೋತ್ರಮ್

ಸ್ವಾಮಿ ಮಂಗಳನಾಥಾನಂದ



ಹುಟ್ಟಿದ ಪ್ರತಿಯೊಬ್ಬ ಮಾನವನಿಗೆ ತನ್ನ ಬುದ್ಧಿ ಬೆಳೆದಂತೆ ತನ್ನ ಸುತ್ತಲಿನ ಪರಿಸರ, ಜಗತ್ತಿನ ವ್ಯಾಪ್ತಿ, ಅದರ ರಚನೆ ಮತ್ತು ಪಾಲನೆ ಇತ್ಯಾದಿಗಳು ಒಂದು ಸೋಜಿಗವೆನಿಸುತ್ತದೆ. ಈ ಜಗತ್ತು ಅಂದರೆ ಏನು? ಇದರಲ್ಲಿ ಒಂದು ಅವಿಭಾಜ್ಯ ಅಂಗವಾದ 'ನಾನು' ಅಂದರೆ ಯಾರು? ಸೃಷ್ಟಿಯಿದ್ದ ಮೇಲೆ ಅದಕ್ಕೊಬ್ಬ ಕರ್ತನಿರಬೇಕಲ್ಲವೆ? ಎಂಬ ಪ್ರಶ್ನೆಯೂ ಇದರೊಂದಿಗೆ ಉದಯಿಸುತ್ತದೆ. ಹಾಗಾದರೆ ಸೃಷ್ಟಿಕರ್ತನಾರು? ಈ ಎಲ್ಲ ಅಥವಾ ಮೂಲ ಭೂತವಾದ ಜಗತು-ಜೀವ-ಪರಮಾತ್ಮನ ವಿಚಾರ ಮತ್ತು ಸಂಬಂಧವನ್ನು ತಿಳಿಸಲೆಂದೇ ಷಡ್‌ದರ್ಶನಗಳು ಪ್ರಯತ್ನಪಟ್ಟಿವೆ ಹಾಗೂ ಉತ್ತರವನ್ನು ನೀಡಿವೆ. ಈ ಪರಮಾತ್ಮನನ್ನು ಅರಿಯುವುದೇ ಎಲ್ಲ ದರ್ಶನಗಳ ಸಾರ ಅಥವಾ ಇನ್ನೊಂದು ಬಗೆಯಾಗಿ ಹೇಳುವುದಾದರೆ ಮೋಕ್ಷವೇ ಎಲ್ಲ ದರ್ಶನಗಳ (ಶಾಸ್ತ್ರಗಳ) ಗುರಿ. ಭಗವಂತನೇ ಜೀವ ಜಗತ್ತುಗಳ ಆಧಾರ.

ಮಾಸ್ಟರ್ ಮಹಾಶಯ ಶ್ರೀರಾಮಕೃಷ್ಣರನ್ನು ಎರಡನೆಯ ಬಾರಿ ಭೇಟಿ ಮಾಡಿದಾಗ ಪರಮಹಂಸರು ಆತನನ್ನು, ''ನಿನ್ನ ಹೆಂಡತಿಯು ವಿದ್ಯಾಶಕ್ತಿಯೋ ಅವಿದ್ಯಾಶಕ್ತಿಯೊ?'' ಎಂದು ಪ್ರಶ್ನಿಸುತ್ತಾರೆ. ಇದರ ಇಂಗಿತಾರ್ಥವನ್ನು ಅರಿಯದೆ ಮಾಸ್ಟರ್, ''ಒಳ್ಳೆಯವಳೇ, ಆದರೆ ಅಜ್ಞೆ'' ಎಂದು ಉತ್ತರಿಸಿದ. ಆದರೆ ಆತನಿಗೆ ಮುಂದೆ ಪರಮಹಂಸರ ಮಾತಿನ ಮನವರಿಕೆಯಾಯಿತು. ಆದ್ದರಿಂದ ಆತ ಬರೆಯುತ್ತಾನೆ. ''ಜ್ಞಾನವಾ ವುದು, ಅಜ್ಞಾನವಾವುದು ಎಂಬುದನ್ನು ಮಾಸ್ಟರ್ ಇನ್ನೂ ಅರಿತುಕೊಳ್ಳಬೇಕಾಗಿತ್ತು. ಓದು ಬರಹ ಕಲಿತುಕೊಂಡರೆ, ಪುಸ್ತಕ ಓದುವುದಕ್ಕೆ ಬಂದರೆ ಜ್ಞಾನ ದೊರಕುತ್ತದೆ ಎಂಬುದು ಆತನ ಭಾವನೆ ಯಾಗಿತ್ತು...ಭಗವಂತನ ಅರಿಯುವಿಕೆಯೇ ಜ್ಞಾನ, ಅರಿಯದಿರುವಿಕೆಯೇ ಅಜ್ಞಾನ ಎಂಬುದನ್ನು ಅರಿತುಕೊಂಡ.'' *('ಶ್ರೀರಾಮಕೃಷ್ಣ ವಚನವೇದ', ಸಂ.೧, ಪು.೫)* ಆದರೆ ಭಗವಂತನನ್ನು ಅರಿಯುವುದು ಎಲ್ಲರಿಗೂ ಸುಲಭ ಸಾಧ್ಯವಿಲ್ಲ ಏಕೆ ಎಂಬ ಪ್ರಶ್ನೆ ಏಳುತ್ತದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳುತ್ತಾನೆ:

> ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।
> ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ *(ಗೀತೆ, ೭:೨೭)*

'ಎಲೈ ಅರ್ಜುನ, ಇಚ್ಛಾದ್ವೇಷಗಳಿಂದ ಹುಟ್ಟಿದ ಶೀತೋಷ್ಣಸುಖ ದುಃಖಾದಿ ದ್ವಂದ್ವಗಳ ಮೋಹ ದಿಂದ ಸರ್ವಪ್ರಾಣಿಗಳು ಹುಟ್ಟುವ ಕಾಲದಲ್ಲೇ ಭ್ರಾಂತಿಯನ್ನು ಹೊಂದುತ್ತವೆ.'

ಹುಟ್ಟಿನಿಂದಲೇ ಮಾನವ ಭ್ರಾಂತಿಯಿಂದ ಬದ್ಧನಾಗಿದ್ದಾನೆ. ಆದ್ದರಿಂದ ಈ ಭ್ರಾಂತಿಯಿಂದ ಮುಕ್ತನಾಗಲು ಮಾರ್ಗವೇನು ಎಂಬುದೇ ಅತಿ ಮುಖ್ಯವಾದ ಪ್ರಶ್ನೆ. ಶ್ರೀಕೃಷ್ಣನೇ ಮುಂದಿನ ಶ್ಲೋಕ ದಲ್ಲಿ ಹೀಗೆ ವರ್ಣಿಸುತ್ತಾನೆ:

> ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ ।
> ತೇ ದ್ವಂದ್ವ ಮೋಹ ನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ॥ *(೭:೨೮)*

'ಆದರೆ ಪುಣ್ಯಕರ್ಮಗಳನ್ನು ಮಾಡುವ ಯಾವ ಜನರ ಪಾಪವು ಕ್ಷೀಣವಾಗಿರುವುದೋ, ಅವರು ಸುಖದುಃಖಾದಿ ದ್ವಂದ್ವಗಳ ಮೋಹದಿಂದ ಬಿಡುಗಡೆಯನ್ನು ಹೊಂದಿ ದೃಢವ್ರತರಾಗಿ ನನ್ನನ್ನು ಭಜಿಸುತ್ತಾರೆ.'

ಇಂತಹ ಭ್ರಾಂತಿಗೆ ಪರಮೌಷಧವಾಗಿ 'ಪುಣ್ಯಕರ್ಮ'ದ ಆವಶ್ಯಕತೆಯನ್ನು ಶ್ರೀಕೃಷ್ಣನು ಎತ್ತಿ ಹಿಡಿಯುತ್ತಿದ್ದಾನೆ. ಕೇವಲ ಯಾಂತ್ರಿಕವಾದ ಭಜನೆ ಅಲ್ಲ, ಆದರೆ ''ದೃಢವ್ರತರಾಗಿ'' ಭಗವಂತ

**ಶ್ರೀರಾಮಕೃಷ್ಣರನ್ನು ಕುರಿತು ರಚಿತವಾಗಿರುವ ಅನೇಕ ಸ್ತೋತ್ರಗಳಲ್ಲಿ ಅತಿಶ್ರೇಷ್ಠವೆನಿಸುವ 'ಓಂ ಹ್ರೀಂ ಋತಂ..' ಸ್ತೋತ್ರದ ಒಂದೊಂದು ಸಾಲೂ ಮಂತ್ರಶಕ್ತಿಯಿಂದ ಕೂಡಿದೆ ಎನ್ನುತ್ತಾರೆ. ಗಾಢವಾದ ಭಾವದೊಂದಿಗೆ ಸುಂದರ ಕಾವ್ಯಶೈಲಿಯಲ್ಲಿರುವ ಈ ಸ್ತೋತ್ರದ ವೈಶಿಷ್ಟ್ಯವನ್ನು ವಿವರಿಸಿರುವ ಸ್ವಾಮೀಜಿಯವರು ಉತ್ತಮ ವಾಗ್ಮಿಗಳೂ, ಭಜನೆ-ಕೀರ್ತನೆಗಳಲ್ಲಿ ನುರಿತವರೂ ಆಗಿದ್ದು, ಪ್ರಸ್ತುತ ಬೆಂಗಳೂರು ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

ನನ್ನು ಭಜಿಸುವುದು. ಈ ಜಗತ್ತಿನಲ್ಲಿ ಶುದ್ಧವೂ, ಪವಿತ್ರವೂ, ಪರಿಪೂರ್ಣವೂ ಆದ ಪರಮಾತ್ಮನ ನಾಮಗುಣ ಕೀರ್ತನೆಯನ್ನು ಬಿಟ್ಟು ಇನ್ನು ಶ್ರೇಷ್ಠವಾದ ಪುಣ್ಯಕರ್ಮವಿರಲು ಸಾಧ್ಯವೆ? ಆದ್ದರಿಂದಲೇ ಶ್ರೀರಾಮಕೃಷ್ಣರು ಕಲಿಯುಗದಲ್ಲಿ ಮೋಕ್ಷಕ್ಕೆ 'ನಾರದೀಯ ಭಕ್ತಿ'ಯೇ ಸುಲಭೋಪಾಯವೆಂದು ತಿಳಿಸಿ ಕೊಟ್ಟಿದ್ದಾರೆ. 'ವಚನವೇದ'ದಲ್ಲಿ ಅವರೇ ಹೇಳುವಂತೆ, ''ಕಲಿಯುಗದಲ್ಲಿ ಸೂಕ್ತವಾದ್ದು ಭಕ್ತಿಯೋಗ – ಭಗವಂತನ ನಾಮಗುಣ ಕೀರ್ತನೆ ಮತ್ತು ಪ್ರಾರ್ಥನೆ, ಭಕ್ತಿಯೋಗವೇ ಯುಗಧರ್ಮ.'' *(ವಚನವೇದ, ೧, ಪು.೧೪)*

'ವಿಷ್ಣುಪುರಾಣ'ದಲ್ಲಿ ಒಂದು ಮಾತಿದೆ. ''ಯಾವುದನ್ನು ಧ್ಯಾನದ ಮೂಲಕ ಸತ್ಯಯುಗದಲ್ಲಿ ಪಡೆಯಬಹುದಾಗಿತ್ತೋ, ಯಜ್ಞಯಾಗಾದಿ ಮೂಲಕ ತ್ರೇತಾಯುಗದಲ್ಲಿ ಪಡೆಯಬಹುದಾಗಿತ್ತೋ, ಪೂಜೆಯಿಂದ ದ್ವಾಪರಯುಗದಲ್ಲಿ ಪಡೆಯಬಹುದಾಗಿತ್ತೋ, ಅದನ್ನು ಕಲಿಯುಗದಲ್ಲಿ ಭಗವಂತನ ನಾಮಗುಣ ಕೀರ್ತನೆಯ ಮೂಲಕ ಪಡೆಯಬಹುದು'' ಎಂದು.

ಭಗವಂತನ ನಾಮಗುಣಕೀರ್ತನೆಯಲ್ಲಿ ಜಪ ಮತ್ತು ಹಲವು ನಾಮಗಳ ಮೂಲಕ ಆತನ ಸ್ತುತಿ, ಎರಡೂ ವಿಶೇಷ ಸ್ಥಾನವನ್ನು ಅಲಂಕರಿಸಿದೆ. ಈ ಸ್ತುತಿಯ ಮೂಲಕ ಪರಮಾತ್ಮನ ರೂಪದ ವರ್ಣನೆ, ಲೀಲಾವರ್ಣನೆ, ಅನಂತಕಲ್ಯಾಣಗುಣಗಳ ವರ್ಣನೆ, ಭಕ್ತನ ಪ್ರಾರ್ಥನೆ, ಹೀಗೆ ಹಲವು ಬಗೆಯ ಸ್ತುತಿಗಳು ಅಥವಾ ಸ್ತೋತ್ರಗಳು ಹೇರಳವಾಗಿ ಲಭ್ಯವಿವೆ. ವಿಷ್ಣುಸಹಸ್ರನಾಮ, ಲಲಿತಾ ಸಹಸ್ರನಾಮ, ದುರ್ಗಾಸಪ್ತಶತೀ, ಶ್ರೀಶಾರದಾದೇವಿ ಸ್ತೋತ್ರಮ್ ಇತ್ಯಾದಿ ಗಳು ಇವಕ್ಕೆ ಪ್ರಸಿದ್ಧ ಉದಾಹರಣೆಗಳು.

ಪ್ರಸ್ತುತ ಸ್ವಾಮಿ ವಿವೇಕಾನಂದರಿಂದ ರಚಿಸಲ್ಪಟ್ಟ '**ಓಂ ಹ್ರೀಂ ಋತಮ್**' ಅಥವಾ '**ಶ್ರೀರಾಮಕೃಷ್ಣ ಸ್ತೋತ್ರಂ**' ಶ್ರೀರಾಮಕೃಷ್ಣರ ನಾಮಗುಣ ಮಹಿಮೆಯನ್ನು ವರ್ಣಿಸುವಂಥದ್ದು. ಒಮ್ಮೆ ಗಿರೀಶ್ಚಂದ್ರ ಘೋಶ್, ಶ್ರೀರಾಮಕೃಷ್ಣರ ಜೀವನಚರಿತ್ರೆಯನ್ನು ಬರೆಯಲು ಸ್ವಾಮಿ ವಿವೇಕಾನಂದರನ್ನು ಕೇಳಿಕೊಂಡಾಗ, ಸ್ವಾಮೀಜಿ ಹೇಳಿದರಂತೆ, 'ನನಗೆ ಬೇಕಾದರೆ ಸಮುದ್ರವನ್ನು ಕುಡಿಯಲು ಹೇಳು, ಕುಡಿಯುತ್ತೇನೆ. ಬೆಟ್ಟಗಳನ್ನು ಪುಡಿಪುಡಿ ಮಾಡಲು ಹೇಳು, ಪುಡಿ ಮಾಡುತ್ತೇನೆ. ದಯವಿಟ್ಟು ಶ್ರೀರಾಮಕೃಷ್ಣರ ಜೀವನವನ್ನು ಮಾತ್ರ ಬರೆಯಲು ಕೇಳಬೇಡ' ಎಂದು.

ಸ್ವಾಮಿ ವಿವೇಕಾನಂದರು ಹೀಗೆ ನುಡಿದಿದ್ದರೂ ಈ ಯುಗದ ಅವತಾರನಾದ ಶ್ರೀರಾಮಕೃಷ್ಣ ಪರಮಹಂಸರ ಶಿಷ್ಯ ಶ್ರೇಷ್ಠನಾಗಿ ಇವರಿಂದ ಜಗತ್ತು ವಿಶೇಷವಾಗಿ ಗುರುಮಹಿಮೆಯ ವರ್ಣನೆಯನ್ನು ಅಪೇಕ್ಷಿಸುತ್ತಿತ್ತು. ಶ್ರೀರಾಮಕೃಷ್ಣರ ಬಗ್ಗೆ ಪಾಶ್ಚಾತ್ಯ ದೇಶದಲ್ಲಿ (New york, London) ಎರಡು ಉಪನ್ಯಾಸಗಳನ್ನು ('My Master') ಬಿಟ್ಟರೆ, ತಮ್ಮ ಗುರುವಿನ ಬಗ್ಗೆ ಹೆಚ್ಚಿಗೆ ಬೇರೆಲ್ಲೂ ಮಾತನಾಡಿಲ್ಲ. ಸ್ವಾಮೀಜಿಯವರ ಬಗ್ಗೆ ಒಂದು ಅಪವಾದವೂ ಇತ್ತು. ಶ್ರೀರಾಮಕೃಷ್ಣರ ಶಿಷ್ಯನಾಗಿ ಪಾಶ್ಚಾತ್ಯ ದೇಶದಲ್ಲಿ ಕೇವಲ ವೇದಾಂತದ ಪ್ರಚಾರ ಮಾಡಿದರು. ಆದರೆ ತನ್ನ ಗುರುವಿನ ಬಗ್ಗೆ ಹೆಚ್ಚಿಗೆ ಮಾತನಾಡಲೇ ಇಲ್ಲ ಎಂದು. ಈ ಎಲ್ಲ ಹಿನ್ನೆಲೆಯಲ್ಲಿ ಮತ್ತು ಈ ಎಲ್ಲ ಆವಶ್ಯಕತೆ ಗಳನ್ನು ಮನಗಂಡು ಸ್ವಾಮೀಜಿಯವರು ಶ್ರೀರಾಮಕೃಷ್ಣರ ಮೇಲೆ ಸಂಸ್ಕೃತದಲ್ಲಿ 'ಶ್ರೀರಾಮಕೃಷ್ಣ ಸ್ತೋತ್ರಮ್' ಅಥವಾ 'ಓಂ ಹ್ರೀಂ ಋತಮ್' ಸ್ತೋತ್ರವನ್ನು ಮತ್ತು ಬಂಗಾಳಿಯಲ್ಲಿ **ಖಂಡನ-ಭವ-ಬಂಧನ** ಸ್ತೋತ್ರವನ್ನು ರಚನೆ ಮಾಡಿದರು, ಶ್ರೀರಾಮಕೃಷ್ಣರ ವಲಯದಲ್ಲಿ ಪ್ರತಿನಿತ್ಯ ಸಂಧ್ಯಾರತಿಯಲ್ಲಿ ಈ ಸ್ತೋತ್ರಗಳನ್ನು ಹಾಡಲಾಗುತ್ತದೆ.

ಶ್ರೀರಾಮಕೃಷ್ಣರ ಈ ಸ್ತೋತ್ರದಲ್ಲಿ ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣರ ಮಹಿಮೆಯನ್ನು ಹೇಗೆ ವರ್ಣಿಸಿದ್ದಾರೆ ಎಂದು ಸಂಕ್ಷಿಪ್ತವಾಗಿ ನೋಡೋಣ. ಸ್ವಾಮೀಜಿ ೧೮೯೮ನೇ ನವೆಂಬರ್ ತಿಂಗಳಲ್ಲಿ ನೀಲಾಂಬರ ಮುಖರ್ಜಿಯವರ ತೋಟದ ಮನೆಯಲ್ಲಿ ಈ ಸ್ತೋತ್ರವನ್ನು ರಚನೆ ಮಾಡಿ, ನಂತರ ಅವರ ಶಿಷ್ಯ ಶರಚ್ಚಂದ್ರನಿಗೆ ಕೊಟ್ಟು,'ವ್ಯಾಕರಣ ದೋಷವಿದ್ದಲ್ಲಿ ತಿದ್ದಿಕೊಡು' ಎಂದು ತಿಳಿಸಿದರು. (C.W. Vol. 7, p.132)

ಹಲವರಿಗೆ ತಿಳಿದಂತೆ ಈ ಸ್ತೋತ್ರದಲ್ಲಿ ಪ್ರತಿಸಾಲಿನ ಮೊದಲನೇ ಅಕ್ಷರವನ್ನು ಪ್ರತ್ಯೇಕಿಸಿ ಜೋಡಿಸಿದರೆ **ಓಂ ನಮೋ ಭಗವತೇ ರಾಮಕೃಷ್ಣಾಯ** ಎಂದಾಗುತ್ತದೆ. ***ದುರ್ಗಾಸಪ್ತಶತಿ***ಯಲ್ಲಿ ಪ್ರತಿಯೊಂದು ಶ್ಲೋಕವೂ ಒಂದೊಂದು ಮಂತ್ರವಿದ್ದಂತೆ. ಆದ್ದರಿಂದ ***ದುರ್ಗಾಸಪ್ತಶತಿ***ಯು ಏಳುನೂರು ಮಂತ್ರಗಳನ್ನು ಒಳಗೊಂಡ ಸ್ತೋತ್ರ. ಹಾಗೆಯೇ ಇಲ್ಲಿಯೂ ಕೂಡ ಈ ಸ್ತೋತ್ರದ ಪಠಣದಲ್ಲಿ ಮಂತ್ರ ಜಪ, ಗುಣ-ಕೀರ್ತನೆ ಮತ್ತು ಪ್ರಾರ್ಥನೆಯೂ ಒಳಗೊಂಡಿದೆ.

ಇಲ್ಲಿ ಸ್ವಾಮೀಜಿ ಸ್ತುತಿಯನ್ನು ಪ್ರಾರಂಭಿಸಿರುವುದೇ ಓಂಕಾರದ ಮೂಲಕ. ಉಪನಿಷತ್ತು ಮತ್ತು ಭಗವದ್ಗೀತೆಯಲ್ಲಿ ಓಂಕಾರವು ಪರಬ್ರಹ್ಮನ ಸಂಕೇತ ಎಂದು ತಿಳಿಸಲಾಗಿದೆ. ಓಂಕಾರ ಸಮುದ್ರವಿದ್ದಂತೆ, ಬೇರೆ ಬೇರೆ ಬೀಜಾಕ್ಷರಗಳು ನದಿಗಳಿದ್ದಂತೆ, ಬೀಜಾಕ್ಷರಗಳು ಆಯಾಯಾ ದೇವತೆಗಳಿಗೆ ಸಂಬಂಧಿಸಿದ್ದಾದರೂ ಎಲ್ಲವೂ ಐಕ್ಯಗೊಳ್ಳುವುದು ಓಂಕಾರದಲ್ಲಿ (ನದಿ ಸಮುದ್ರವನ್ನು ಸೇರುವಂತೆ).

ಸಾಮವೇದದ ಭಾಗವಾದ ***ಛಾಂದೋಗ್ಯ ಉಪನಿಷತ್ತಿ***ನಲ್ಲಿ ಮೊದಲನೇ ಅಧ್ಯಾಯವು ಓಂಕಾರ ಉಪಾಸನೆಯ ವಿಚಾರವಾಗಿಯೇ ಪ್ರಾರಂಭವಾಗುತ್ತದೆ:

**ಓಮಿತ್ಯೇತದಕ್ಷರಮುದ್ಗೀಥಮುಪಾಸೀತ ।**
**ಓಮಿತಿ ಹ್ಯುದ್ಗಾಯತಿ ತಸ್ಯೋಪವ್ಯಾಖ್ಯಾನಮ್ ॥** *(೧.೧)*

'ಉದ್ಗೀಥ – ಶಬ್ದ ವಾಚ್ಯವಾದ **ಓಂ** ಎಂಬ ಈ ಅಕ್ಷರವನ್ನು ಉಪಾಸಿಸಬೇಕು. ಏಕೆಂದರೆ ಉದ್ಗಾತೃವು ಓಂಕಾರದಿಂದ ಪ್ರಾರಂಭಿಸಿಯೇ ಹಾಡುತ್ತಾನೆ. ಓಂಕಾರದ ಉಪವ್ಯಾಖ್ಯಾನವು ಪ್ರಾರಂಭಿಸಲ್ಪಡುತ್ತದೆ.'

ಶಾಸ್ತ್ರವು ತಿಳಿಸುವಂತೆ ಒಂದು ಆವಲಂಬನೆಯನ್ನು ಆಧರಿಸಿಕೊಂಡು ಏಕವೃತ್ತಿಯನ್ನು ಉಂಟುಮಾಡುವುದೇ ಉಪಾಸನೆ. ಉಪಾಸನೆಯ ಮೂಲಕ ಚಿತ್ತಶುದ್ಧಿ ಉಂಟಾಗುತ್ತದೆ. ಉಪನಿಷತ್ತು ಹೇಳುವಂತೆ ಓಂಕಾರವೇ ಉತ್ಕೃಷ್ಟವಾದ ಅವಲಂಬನೆ. ಏಕೆಂದರೆ ಓಂಕಾರವು ಪರಮಾತ್ಮನ ಪ್ರತೀಕ ಹಾಗೂ ಪರಮಾತ್ಮನ ಸ್ಥಾನಕ್ಕೆ

ಅಂಕುರವಾದದ್ದು. ಇದರ ಉಪಾಸನೆಯ ಮೂಲಕ ಎಲ್ಲ ಉತ್ಕೃಷ್ಟ ಫಲಗಳನ್ನು ಪಡೆಯಬಹುದು ಎಂದು ಸೂಚಿಸುತ್ತದೆ. ಓಂಕಾರವು ಋಕ್ಕು ಮತ್ತು ಸಾಮವೇದಗಳಿಗೂ ಶ್ರೇಷ್ಠವಾದದ್ದು, ಋಕ್ಕು ಮತ್ತು ಸಾಮಗಳ ಉಚ್ಚಾರಣೆಯ ಮೂಲಕ ಯಾವ ಯಾವ ಫಲಗಳನ್ನು ಪಡೆಯಬಹುದೊ ಅವೆಲ್ಲವನ್ನೂ ಕೇವಲ ಓಂಕಾರ ಉಪಾಸನೆಯ ಮೂಲಕವೇ ಪಡೆಯಬಹುದು. ಶ್ರೀರಾಮಕೃಷ್ಣರನ್ನು ಸ್ವಾಮೀಜಿ ಓಂಕಾರ ಸ್ವರೂಪಿ ಎಂದು ಸೂಚಿಸಿದ್ದಾರೆ. ಅಂದರೆ ಆತನು ಪರಬ್ರಹ್ಮ ಸ್ವರೂಪಿ, ಜೊತೆಗೆ ಅವನ ಉಪಾಸನೆಯ ಮೂಲಕ ಉತ್ಕೃಷ್ಟ ಫಲಗಳನ್ನು ಪಡೆಯಬಹುದು. (ಉತ್ಕೃಷ್ಟ ಫಲವು ಮೋಕ್ಷವೇ ಅಲ್ಲವೆ?)

ಓಂಕಾರದ ನಂತರ **ಹ್ರೀಂ** ಬೀಜಾಕ್ಷರವನ್ನು ಸೂಚಿಸಿದ್ದಾರೆ. ಹ್ರೀಂ ಬೀಜಾಕ್ಷರವು ಮಹಾಮಾಯೆ ಅಥವಾ ಭುವನೇಶ್ವರಿಯ ಬೀಜ. ತಂತ್ರದ ಓಂಕಾರ ಈ ಹ್ರೀಂ ಬೀಜಾಕ್ಷರ. ಇದು ಶಕ್ತಿಯ ಪ್ರತೀಕ.

***ಶಾರದಾತಿಲಕ***ದಲ್ಲಿ ಪರಾಶಕ್ತಿಯನ್ನು ಹೀಗೆ ವರ್ಣಿಸಲಾಗಿದೆ.

**ಪರಾಶಕ್ತಿಮಯಃ ಸಾಕ್ಷಾತ್ ತ್ರಿಧಾಸೌ ಭಿದ್ಯತೇ ಪುನಃ ।**
**ಬಿಂದುರ್ನಾದೋ ಬೀಜಮಿತಿ ತಸ್ಯ ಭೇದಾಃ ಸಮೀರಿತಾಃ ॥** *(೧,೮)*

ಆ ಪರಾಶಕ್ತಿಯೇ ಮೂರಾಗಿ ಭೇದಿಸಲ್ಪಟ್ಟಿದೆ. ಬಿಂದು, ನಾದ ಮತ್ತು ಬೀಜ. ಬಿಂದು ಶಿವನ ಪ್ರತೀಕ. ಬೀಜ ಶಕ್ತಿಯ ಪ್ರತೀಕ ಮತ್ತು ನಾದ ಇವೆರಡರ ಅನ್ಯೋನ್ಯ ಸಂಬಂಧವನ್ನು ಸೂಚಿಸುವಂಥದ್ದು. ಹ ಕಾರ, ರ ಕಾರ, ಇ ಕಾರ, ಬಿಂದು ಮತ್ತು ನಾದ ಸೇರಿ ಹ್ರೀಂ ಆಗಿರುವಂಥದ್ದು, ಆದ್ದರಿಂದ ಇವೆಲ್ಲವನ್ನೂ ಹೀಗೆ ಅರ್ಥೈಸು ತ್ತಾರೆ:

| | | |
|---|---|---|
| ಹ | – | ಶಿವ |
| ರ | – | ಪ್ರಕೃತಿ |
| ಇ | – | ಮಹಾಮಾಯಾ |
| ಬಿಂದು | – | ದುಃಖನಾಶಕ |
| ನಾದ | – | ಸೃಷ್ಟಿಯ ಮಾತೆ |

ಶ್ರೀರಾಮಕೃಷ್ಣರು ಶಕ್ತಿ ಸ್ವರೂಪಿ, ಅದರ ಸೂಚಕವು ಹ್ರೀಂ ಬೀಜಾಕ್ಷರವು. ಒಮ್ಮೆ ಸೋದರಿ ನಿವೇದಿತಾ ಸ್ವಾಮೀಜಿಯನ್ನು ಕೇಳುತ್ತಾಳೆ, 'ಮುಂದೆ ಹಲವರು ಶ್ರೀರಾಮಕೃಷ್ಣರನ್ನು ಕಾಳಿಯ ಅವತಾರವೆಂದು ಪರಿಗಣಿಸುವರೆ?' ಸ್ವಾಮೀಜಿ ಹೇಳುತ್ತಾರೆ, 'ಹೌದು, ನನಗನಿಸುತ್ತದೆ, ಅವಳು ತನ್ನ ಕಾರ್ಯಕ್ಕಾಗಿ ಶ್ರೀರಾಮಕೃಷ್ಣ ಎಂಬ ಶರೀರವನ್ನು ಉಪಯೋಗಿಸಿಕೊಂಡಿದ್ದಾಳೆ ಎಂದು. ಇದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ.' (How to Live with God, p.25).

ಈ ಇಡೀ ಸೃಷ್ಟಿಯು ನಡೆಯುತ್ತಿರುವುದೇ (ಸೃಷ್ಟಿ-ಸ್ಥಿತಿ-ಲಯ) ಶಕ್ತಿಯ ಸಹಾಯದಿಂದ. ಆದ್ದರಿಂದ ಶಕ್ತಿ ಆರಾಧನೆಯ ಮೂಲಕ ಮೋಕ್ಷ ಸಾಧ್ಯ. ಆದ್ದರಿಂದಲೇ ಶ್ರೀರಾಮಕೃಷ್ಣರು ಕೇಶವನಿಗೆ ಹೇಳುತ್ತಾರೆ, 'ಬಂಧನ ಮತ್ತು ಮುಕ್ತಿ – ಇವೆರಡರ ಕರ್ತಳೂ ಅವಳೇ. ಆಕೆಯ ಮಾಯೆಯ ದೆಸೆಯಿಂದ ಸಾಂಸಾರಿಕ ಜೀವರು ಕಾಮಕಾಂಚನಗಳಿಂದ ಬದ್ಧರಾಗಿರುತ್ತಾರೆ. ಮತ್ತೆ ಆಕೆಯ ಕೃಪೆಯಿಂದಲೇ ಮುಕ್ತರಾಗುತ್ತಾರೆ. ಆಕೆ ನಮ್ಮ ಭವಬಂಧನವನ್ನು ಹರಿದು ಕಾಪಾಡತಕ್ಕವಳು'ಎಂದು. *(ವಚನವೇದ ಸಂ.೧, ಪು. ೭೫)*

ಆದರೆ ಇಲ್ಲಿ ಒಂದು ಅಂಶವನ್ನು ನೆನಪಿಟ್ಟುಕೊಳ್ಳಬೇಕು. ಬ್ರಹ್ಮ ಬೇರೆ ಅಲ್ಲ , ಶಕ್ತಿ ಬೇರೆ ಅಲ್ಲ , ಪರಮಹಂಸರೇ ನುಡಿಯುವಂತೆ ''ಸಾಮಾನ್ಯರಿಗೆ ಬ್ರಹ್ಮಕ್ಕೂ ಶಕ್ತಿಗೂ, ಶಕ್ತಿಗೂ ಶಕ್ತಿಮಾನನಿಗೂ ಅಭೇದ ಎಂಬುದನ್ನು ಯಾವ ವಿಧದಿಂದಲೂ ತುಂಬಲು ಸಾಧ್ಯವಿಲ್ಲ. ನಿಷ್ಕ್ರಿಯನಾದವನಿಗೆ ಬ್ರಹ್ಮ ಎಂದು ಕರೆಯುತ್ತೇವೆ. ಸೃಷ್ಟಿ, ಸ್ಥಿತಿ, ಪ್ರಳಯಗಳನ್ನು ಮಾಡುವಾಗ ಶಕ್ತಿ ಎಂದು ಕರೆಯುತ್ತೇವೆ. ಆದರೆ ವಸ್ತು ಮಾತ್ರ ಒಂದೇ, ಅಭೇದ ಸ್ವರೂಪ. ಅಗ್ನಿ ಎಂದೊಡನೆ ಅದರ ಸುಡುವ ಶಕ್ತಿಯೂ, ಸುಡುವ ಶಕ್ತಿ ಎಂದೊಡನೆ ಅಗ್ನಿಯೂ ತಾನಾಗಿ ಮನಸ್ಸಿಗೆ ಹೊಳೆಯುತ್ತದೆ. ಒಂದನ್ನು ಬಿಟ್ಟು ಇನ್ನೊಂದನ್ನು ಚಿಂತಿಸುವ ಹಾಗೆಯೇ ಇಲ್ಲ.'' *(ವಚನವೇದ ೨, ಪು. ೧೪)*

ಸ್ತೋತ್ರದ ಮುಂದಿನ ಪದ **ಋತಮ್** ಎಂದರೆ ವಿಶ್ವನಿಯಮ. ಸತ್ಯ ಮತ್ತು ಧರ್ಮಗಳು ಇದರ ಎರಡು ಮುಖಗಳು. ಈ ಯುಗದ ಧರ್ಮವನ್ನು ಕಾಪಾಡಲೆಂದೇ ಶ್ರೀರಾಮಕೃಷ್ಣರು ಅವತಾರವೆತ್ತಿದ್ದು. ಶ್ರೀರಾಮಕೃಷ್ಣರೇ ಹೇಳುವಂತೆ ಕಲಿಯುಗಕ್ಕೆ ಸತ್ಯವೇ ತಪಸ್ಸು. ಸತ್ಯವನ್ನು ಪರಿಪಾಲಿಸಿ ಧರ್ಮವನ್ನು ಎತ್ತಿ ಹಿಡಿದಿದ್ದಾರೆ. ಇದರಿಂದ ಆತ ವಿಶ್ವನಿಯಾಮಕನಾಗುತ್ತಾನೆ.

ಪರಮಹಂಸರು ಕಾಳಿಮಾತೆಗೆ, 'ಇಗೋ ತೆಗೆದುಕೊ ನಿನ್ನ ಧರ್ಮವನ್ನು; ಇಗೋ ತೆಗೆದುಕೊ ನಿನ್ನ ಅಧರ್ಮವನ್ನು; ಆದರೆ ನನಗೆ ಶುದ್ಧ ಭಕ್ತಿಯನ್ನು ಮಾತ್ರ ಕರುಣಿಸು.' ಎಂದು ಪ್ರಾರ್ಥಿಸಿ, ಜಗತ್ತಿನ ಎಲ್ಲ ದ್ವಂದ್ವಗಳನ್ನು ಅರ್ಪಣೆ ಮಾಡಿದಾಗ, 'ಇಗೋ ತೆಗೆದುಕೋ ನಿನ್ನ ಸತ್ಯವನ್ನು; ಇಗೋ ತೆಗೆದುಕೋ ನಿನ್ನ ಅಸತ್ಯವನ್ನು' ಎಂದು ಮಾತ್ರ ಹೇಳಲು ಸಾಧ್ಯವಾಗಲಿಲ್ಲ. ಏಕೆಂದರೆ ಸತ್ಯವೇ ಎಲ್ಲಕ್ಕೂ ಆಧಾರ. ಮತ್ತೆ ಈ ಸ್ತೋತ್ರದ ಮೂರನೇ ಚರಣದಲ್ಲಿ ಪರಮಹಂಸರನ್ನು **ಋತಪಥೇ** (ಸತ್ಯಮಾರ್ಗ) ಎಂದೂ ಕರೆದಿದ್ದಾರೆ. ಬಹುಶಃ ಇದನ್ನು ಈ ರೀತಿಯಾಗಿ ಅರ್ಥಮಾಡಿಕೊಳ್ಳಬಹುದು. ಸ್ವಾಮಿ ವಿವೇಕಾನಂದರೇ ಹೇಳುವಂತೆ ಶ್ರೀರಾಮಕೃಷ್ಣರ ಆಗಮನದಿಂದ ಸತ್ಯಯುಗ ಪ್ರಾರಂಭವಾಗಿದೆ. ಆದ್ದರಿಂದ ಈ ಸತ್ಯಯುಗಕ್ಕೆ ಆತನೇ ವಿಶ್ವನಿಯಮ **(ಋತಮ್)** ಮತ್ತು ಅದನ್ನು ಹೊಂದಲು ಬೇಕಾದ ಮಾರ್ಗವೂ **(ಋತಪಥೇ)** ಆತನೇ ಆಗಿದ್ದಾನೆ. ಮುಂಡಕೋಪನಿಷತ್ತು ಹೇಳುವಂತೆ,

**ಸತ್ಯೇನ ಪಂಥಾ ವಿತತೋ ದೇವಯಾನಃ ।** *(೩:೧:೬)*

'ಆ ದೇವಯಾನಕ್ಕೆ ಮಾರ್ಗವು ಸತ್ಯದಿಂದ ಹರಡಲ್ಪಟ್ಟಿದೆ.'

ಪರಮಹಂಸರ ಜೀವನವನ್ನು ನೋಡಿದಾಗ ಅವರು ಆದರ್ಶ ಗೃಹಸ್ಥರೂ ಮತ್ತು ಆದರ್ಶ ಸಂನ್ಯಾಸಿಯೂ ಆಗಿದ್ದರು ಎಂದು ತಿಳಿದು ಬರುತ್ತದೆ. ಆದರ್ಶ ಗೃಹಸ್ಥರಾಗಿ ತನ್ನ ಪತ್ನಿಯನ್ನೇ ಕಾಳಿಯ ಪೀಠದಲ್ಲಿ ಕುಳ್ಳಿರಿಸಿ ದೇವಿಯಂತೆ ಷೋಡಶೀಪೂಜೆಯನ್ನು ಮಾಡಿದರು. ಆದರ್ಶ ಸಂನ್ಯಾಸಿಯಾಗಿ ಹದಿನಾರು ಜನ ಅದ್ಭುತ ಸಂನ್ಯಾಸೀ ಶಿಷ್ಯರನ್ನು ನಿರ್ಮಾಣ ಮಾಡಿದರು. ಇದರ ಮೂಲಕ ಈ ಯುಗಕ್ಕೆ ಹೊಸ ಪಥವನ್ನೇ ತೆರೆದಿದ್ದಾರೆ. ಆದ್ದರಿಂದ **ಋತಮ್** ಮತ್ತು **ಋತಪಥೇ** ಸ್ವಯಂ ಶ್ರೀರಾಮಕೃಷ್ಣರೇ. ಬ್ರಹ್ಮವು ಸರ್ವವ್ಯಾಪಿ. ಎಲ್ಲೆಲ್ಲೂ ಅದೇ ಇದ್ದ ಮೇಲೆ ಚಲನಕ್ರಿಯೆ ಎಂಬುದು ಸಂಭವವೇ ಇಲ್ಲ. ಶ್ರೀರಾಮಕೃಷ್ಣರು ಬ್ರಹ್ಮಸ್ವರೂಪಿ ಎಂದ ಮೇಲೆ

ಅಚಲನು. ಜೊತೆಗೆ ಆತನು ಗುಣಗಳಿಗೆ (ತ್ರಿಗುಣ) ಅತೀತನು **(ಗುಣಜಿದ್)**. ಶಕ್ತಿಸ್ವರೂಪಿ ಎಂದು ಸ್ವೀಕರಿಸಿದಾಗ ಆತ ಅನಂತ ಕಲ್ಯಾಣಗುಣಗಳಿಗಾಗಿ ಸ್ತುತಿಸಲ್ಪಡುವವನು **(ಗುಣೇಡ್ಯಃ)**.

ಸ್ತೋತ್ರದ ಮೊದಲನೇ ಸಾಲಿನಲ್ಲಿ ಶ್ರೀರಾಮಕೃಷ್ಣನಾಮದ ತಾತ್ತ್ವಿಕ ನೆಲೆಯನ್ನು ವರ್ಣಿಸಿದ್ದಾರೆ. ಮುಂದಿನ ಸಾಲುಗಳಲ್ಲಿ ನಾಮದ ಮಹಿಮೆಯನ್ನು ಮತ್ತು ಪ್ರಾಪ್ತವಾಗುವ ಫಲವನ್ನು ವರ್ಣಿಸಿದ್ದಾರೆ. ಪ್ರತಿ ಚರಣದ ಕೊನೆಯಲ್ಲಿ ಆದ್ದರಿಂದ ದೀನರ ಬಂಧುವಾದ ನಿನ್ನಲ್ಲೇ ಶರಣು ('ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ' ಎಂಬಂತೆ) ಎಂದು ಸುಂದರವಾಗಿ ಪ್ರಾರ್ಥಿಸ ಲಾಗಿದೆ. ದೀನರ ಉದ್ಧಾರಕ್ಕಾಗಿಯೇ ಬಂದ ಅವತರಣವಿದು. ಇದು ಶರಣಾಗತಿಯನ್ನು ಅಥವಾ ಪ್ರಪತ್ತಿಯೋಗವನ್ನು ಸೂಚಿಸು ತ್ತದೆ. ಆತನಲ್ಲಿ ಶರಣು ಹೊಂದದೆ ಯಾವ ಯೋಗವೂ ಪ್ರಾರಂಭ ವಾಗುವುದಿಲ್ಲ. ಭಗವದ್ಗೀತೆಯಲ್ಲಿ ಅರ್ಜುನನು **'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್'** ('ನಿನ್ನನ್ನೇ ಶರಣು ಹೊಂದಿದ ನನಗೆ ಬೋಧಿಸು') *(೨.೭)* ಎಂದು ಶರಣಾಗತನಾದ ಮೇಲೆ ಶ್ರೀಕೃಷ್ಣನು ಬೋಧನೆಯನ್ನು ಪ್ರಾರಂಭಮಾಡುವುದು, ಏಕೆಂದರೆ 'ನಾನು' ಎಂಬ ಅಹಂಕಾರವು ನಾಶವಾಗದ ಹೊರತು ನೀನು ಎಂಬ ಬೋಧೆ ಉಂಟಾಗುವುದಿಲ್ಲ.

ಶ್ರೀರಾಮಕೃಷ್ಣರು ಹೇಳುವಂತೆ ಕಾಮ-ಕಾಂಚನವೇ ಮಾಯೆ. ಕಾಮ-ಕಾಂಚನದ ಪ್ರಭಾವದಿಂದ ಮಾನವ ಬುದ್ಧಿಯನ್ನು ಕಳೆದು ಕೊಂಡು ಸತ್ಯ-ಅಸತ್ಯಗಳ ವಿವೇಕವಿಲ್ಲದೆ ದುಷ್ಕರ್ಮಗಳನ್ನು ಎಸಗು ತ್ತಾನೆ. ಈ ಕರ್ಮಗಳ ಸಂಸ್ಕಾರಗಳು ಮತ್ತಷ್ಟು ಬಲವಾಗಿ, ಇನ್ನೂ ಹಲವು ಕರ್ಮಗಳಿಗೆ ಕಾರಣವಾಗಿ ಮಾಯಾಪಾಶಕ್ಕೆ ಸಿಲುಕುತ್ತಾನೆ. ಒಬ್ಬ ಮನುಷ್ಯನನ್ನು ಕೊಲ್ಲುವುದು ಹೆಚ್ಚು ಕಷ್ಟವೇನಲ್ಲ. ಆದರೆ, ಆತನ ಸಂಸ್ಕಾರಗಳನ್ನು ಸಂಸ್ಕರಣಗೊಳಿಸಬೇಕಾದರೆ ಯಮಸಾಧ್ಯ. ಇಂತಹ ಮಾಯಾಪಾಶವನ್ನೂ ಕತ್ತರಿಸುವುದು ಶ್ರೀರಾಮಕೃಷ್ಣರ ನಾಮವು **(ಕುಹಕಾಂತಕಾರಿ)**. ಶ್ರೀರಾಮಕೃಷ್ಣರ - ನಾಮದ ಕೇವಲ **'ಷ್ಣ'** ಕಾರವು ಶುಭವೂ, ಪವಿತ್ರವೂ ಆದ್ದರಿಂದ ಅಜ್ಞಾನದ ತೆರೆ ಹರಿಯುವುದು **(ಮೋಹಂಕಷಮ್)**, ಇದರಿಂದ ಸಹಜವಾಗಿಯೇ ಪಾಪಕರ್ಮಗಳೆಲ್ಲವೂಪುಣ್ಯಕರ್ಮಗಳಾಗಿಪರಿವರ್ತಿತವಾಗುವುದು **(ಕೃತ್ಯಂ ಕರೋತಿ ಕಲುಷಂ)** ಅಂತಹ ವ್ಯಕ್ತಿಗೆ ಮೋಹವೆಲ್ಲಿಯದು? **ಖಂಡನ-ಭವ-ಬಂಧನ** ಎಂಬ ಹಾಡಿನಲ್ಲೂ ಇದೇ ಭಾವವನ್ನು ಸ್ವಾಮೀಜಿ ವ್ಯಕ್ತಪಡಿಸಿದ್ದಾರೆ. ಜ್ಞಾನಾಂಜನದಿಂದ ಕೂಡಿದ ಆತನ ಕಣ್ಣುಗಳ ನೋಟಮಾತ್ರದಿಂದ ಮೋಹವು ನಾಶವಾಗುವುದು ಎಂದು **('ವೀಕ್ಷಣೆ ಮೋಹ ಜಾಯ್')**. ಆದ್ದರಿಂದಲೇ ಆತನ ಪಾದಪದ್ಮಗಳಲ್ಲಿ ಯಾರಿಗೆ ಭಕ್ತಿವುಂಟಾಗುವುದೊ ಅವರು ಮೃತ್ಯು ವನ್ನು ದಾಟಿ ಅಮರರಾಗುತ್ತಾರೆ. **(ಮರಣೋರ್ಮಿನಾಶಂ)**. ಬ್ರಹ್ಮ ಮತ್ತು ಶಕ್ತಿ ಆತನೇ ಆಗಿರುವುದರಿಂದ ಸೃಷ್ಟಿಯ ಅಧಿಷ್ಠಾನವು ಅವನೇ ಆಗಿದ್ದಾನೆ. ಆದ್ದರಿಂದ ಗುರಿಯೂ ಅವನೇ ಆಗಿರುತ್ತಾನೆ. **(ಜಗದೇಕಗಮ್ಯ)**.

ಮಾಯೆಯನ್ನು ದೂರಮಾಡಿ, ಮೋಹವನ್ನು ನಾಶ ಮಾಡಿ ಅಮರತ್ವವನ್ನು ಕರುಣಿಸುವ ಅದ್ಭುತರಾದ ಪರಮಾತ್ಮನ (ಶ್ರೀರಾಮ ಕೃಷ್ಣರ) ನಾಮದ ಮಹಿಮೆಯನ್ನು ತಿಳಿದಿದ್ದರೂ, ನಮ್ಮಲ್ಲಿ ಭಕ್ತಿ ಜಾಗೃತವಾಗದೆ, ಪ್ರಾರ್ಥನೆ ಎಂಬುದು ಕೇವಲ ಗಿಳಿಯ ಪಾಠದಂತೆ ನುಡಿಯುತ್ತಿದೆ.**(ವಕ್ತ್ರೋಽದ್ಧ್ಯತೋಪಿ ಹೃದಯೇ)** ಆದ್ದರಿಂದ 'ಹೇ ಪ್ರಭು, ಜ್ಞಾನ ಭಕ್ತಿಯನ್ನು ಕರುಣಿಸು' ಎಂದು ಪ್ರಾರ್ಥಿಸಲಾಗಿದೆ.

ಮನುಷ್ಯನಿಗೆ ಎಷ್ಟೋ ಬಾರಿ ಭಗವಂತನನ್ನು ಪ್ರಾರ್ಥಿಸಿದರೆ ಆತ ನಮ್ಮ ಕರೆಯನ್ನು ಕೇಳುವನೇ ಎಂಬ ಪ್ರಶ್ನೆ ಏಳುತ್ತಿರುತ್ತದೆ. ಒಮ್ಮೆ ಒಬ್ಬ ಭಕ್ತ ಕೂಡ ಶ್ರೀರಾಮಕೃಷ್ಣರನ್ನು 'ಭಕ್ತಿಗಾಗಿ ಪ್ರಾರ್ಥನೆ ಮಾಡಿದರೆ ಭಗವಂತ ಕೇಳುತ್ತಾನೇನು?' ಎಂದು ಪ್ರಶ್ನೆ ಮಾಡಿದನು. ಅವನಿಗೆ ಶ್ರೀರಾಮಕೃಷ್ಣರು ನೀಡಿದ ಆಶ್ವಾಸನೆ ಹೀಗಿದೆ:

'ನಿಜವಾಗಿಯೂ ಆ ವಿಷಯವಾಗಿ ನಿನಗೆ ಒಂದು ಸಾವಿರ ಸಲ ಆಶ್ವಾಸನೆ ಕೊಡಬಲ್ಲೆ. ಆದರೆ ಪ್ರಾರ್ಥನೆ ಹೃತ್ಪೂರ್ವಕವಾಗಿರಬೇಕು, ವ್ಯಾಕುಲತೆಯಿಂದ ಕೂಡಿರಬೇಕು. ಪ್ರಾಪಂಚಿಕರು ಹೆಂಡತಿ ಮಕ್ಕಳಿಗಾಗಿ ಅಳುವಂತೆ ಅವರು ಭಗವಂತನಿಗಾಗಿ ಅಳಬಲ್ಲರೇ? *(ವಚನವೇದ ಸಂ.೧, ಪು.೬೦೨).*

ಈ ಸ್ತೋತ್ರದಲ್ಲಿ ಬಹಳ ಅದ್ಭುತವಾದ ಒಂದು ಅಂಶವೇನೆಂದರೆ ಸ್ವಯಂ ಸ್ವಾಮಿ ವಿವೇಕಾನಂದರೇ ದೀನರ ಅವಸ್ಥೆಯ ಸ್ಥಾನವನ್ನು ಆರೋಪಿಸಿಕೊಂಡು ಶ್ರೀರಾಮಕೃಷ್ಣರನ್ನು ಹೇಗೆ ಪ್ರಾರ್ಥಿಸಬೇಕು ಎಂದು ತೋರಿಸಿಕೊಟ್ಟಿದ್ದಾರೆ. ಶ್ರೀರಾಮಕೃಷ್ಣ ನಾಮ ಮಹಿಮೆಯ ವರ್ಣನೆಯೊಂದಿಗೆ ಪ್ರಾರ್ಥಿಸುವ ರೀತಿಯನ್ನೂ ತೋರಿಸಿಕೊಟ್ಟಿ ದ್ದಾರೆ. ಕೊನೆಯದಾಗಿ,

**ಓಂ ಸ್ಥಾಪಕಾಯ ಚ ಧರ್ಮಸ್ಯ ಸರ್ವಧರ್ಮಸ್ವರೂಪಿಣೇ ।**
**ಅವತಾರ ವರಿಷ್ಠಾಯ ರಾಮಕೃಷ್ಣಾಯ ತೇ ನಮಃ ॥**

'ಧರ್ಮಸ್ಥಾಪಕನೂ, ಸರ್ವಧರ್ಮಸ್ವರೂಪಿಯೂ, ಅವತಾರ ಶ್ರೇಷ್ಠನೂ, ಆದ ರಾಮಕೃಷ್ಣ ನಿನಗೆ ನಮಸ್ಕಾರ' ಎಂಬ ಶ್ಲೋಕ ಅಡ ಗಿದೆ. ೧೮೯೮ರಲ್ಲಿ ಮಾಘಪೂರ್ಣಿಮೆಯಂದು ನವಗೋಪಾಲ ಘೋಷ್ ಎಂಬ ಭಕ್ತನ ಮನೆಯಲ್ಲಿ ಶ್ರೀರಾಮಕೃಷ್ಣರ ಮೂರ್ತಿ ಯನ್ನು ಪ್ರತಿಷ್ಠಾಪಿಸಿದ ಸಮಯದಲ್ಲಿ ಧ್ಯಾನಕ್ಕೆ ಕುಳಿತಾಗ ಸ್ವಾಮಿ ವಿವೇಕಾನಂದರಿಗೆ ಸ್ವಯಂಪ್ರೇರಣೆಯಿಂದ ಮೂಡಿಬಂದ ಮಂತ್ರವಿದು.

ಭ್ರಾಂತಿಯಿಂದ ಮುಕ್ತನಾಗಲು, ಮೋಕ್ಷವನ್ನು ಪಡೆಯಲು ಈ ಸ್ತೋತ್ರವು ಒಂದು ಸಾಧನ. ಆದ್ದರಿಂದ,

**''ತಸ್ಮಾತ್ ತ್ವಮೇವ ಶರಣಂ ಮಮ ದೀನಬಂಧೋ ।''**

**ಗ್ರಂಥಋಣ**


೧. ***ಶ್ರೀರಾಮಕೃಷ್ಣ ವಚನವೇದ*** *(ಸಂಪುಟಗಳು ೧, ೨)*
೨. ***ರಾಮಕೃಷ್ಣ ಮಠದ ಆರಾತ್ರಿಕ ಗಾನಗಳು*** *- ಸ್ವಾಮಿ ಹರ್ಷಾನಂದ*
೩. ***ಜಪಯೋಗ*** *- ಸ್ವಾಮಿ ಶಿವಾನಂದ*
೪. ***ಛಾಂದೋಗ್ಯ ಉಪನಿಷತ್*** *- ಸ್ವಾಮಿ ಆದಿದೇವಾನಂದ*
೫. ***ಭಗವದ್ಗೀತೆ*** *- ಸ್ವಾಮಿ ಆದಿದೇವಾನಂದ*
೬. ***How to live with God*** *– Swami Chetanananda*
೭. ***The Garland of Letters*** *– Sir John Woodroffe*


* ('ಓಂ ಸ್ಥಾಪಕಾಯ' ಎಂಬ ಮಂತ್ರವನ್ನು ಕುರಿತು ೨೦೦೧ರ 'ವಿವೇಕಪ್ರಭ' ಫೆ.,ಮಾ. ಸಂಚಿಕೆಗಳಲ್ಲಿ ಒಂದು ದೀರ್ಘಲೇಖನ ಪ್ರಕಟವಾಗಿದೆ.). ❖

# ಶ್ರೀ ರಾಮಕೃಷ್ಣರ ದೃಷ್ಟಾಂತ ಕಥೆಗಳಲ್ಲಿ ನಾಮಮಹಿಮೆ

**ಕೆ.ಬಿ.ಪ್ರಭುಪ್ರಸಾದ್**



ಗಹನವಾದ ತತ್ತ್ವಗಳನ್ನು ಸರಳವಾದ ಕಥೆಗಳ ಮೂಲಕ ಸುಂದರವಾಗಿ ಮನಮುಟ್ಟುವಂತೆ ವಿವರಿಸಿ ಹೇಳುವ ಕಲೆ ಶ್ರೀರಾಮಕೃಷ್ಣರಿಗೆ ಕರಗತವಾಗಿತ್ತು. ಇಂಥ ಕಥೆಗಳಲ್ಲಿ ಕಂಡುಬರುವಂತೆ 'ನಾಮಮಹತ್ವ'ವನ್ನು ಶ್ರೀರಾಮಕೃಷ್ಣರು ಹೇಗೆ ನಿರೂಪಿಸಿದ್ದಾರೆ ಎಂದು ಈ ಲೇಖನದಲ್ಲಿ ವಿವರಿಸಿರುವ ಮಾನ್ಯ ಲೇಖಕರು ಕನ್ನಡದ ಹಿರಿಯ ಲೇಖಕರು. ನಿವೃತ್ತ ಕಾಲೇಜು ಪ್ರಾಚಾರ್ಯರಾದ ಇವರು ಶ್ರೀರಾಮಕೃಷ್ಣ ಆಶ್ರಮದ ಆತ್ಮೀಯ ಭಕ್ತರು.

ಭಗವಂತನನ್ನು ಸಾಕ್ಷಾತ್ತಾಗಿ ನೋಡಿರದಿದ್ದರೂ ಸಾಧಕರು, ಭಕ್ತರೂ ಅವನ ನಾಮಸ್ಮರಣೆ ಮಾತ್ರದಿಂದ ಪುನೀತರಾಗಿದ್ದಾರೆ. ಆನಂದ ತುಂದಿಲರಾಗಿದ್ದಾರೆ. ದುಃಖಮಯವಾದ ಭವಸಾಗರವನ್ನು ಮೋದದಿಂದ ದಾಟಿದ್ದಾರೆ. ನಾಮಸ್ಮರಣೆಯಲ್ಲಿ ಅಂತಹ ಅಗಾಧ ವಾದ ಶಕ್ತಿಯಿದೆ.

**ಕಲಿಯುಗದಲಿ ಹರಿನಾಮವ ನೆನೆದರೆ**
**ಕುಲಕೋಟಿಗಳು ಉದ್ಧರಿಸುವುವೊ . . .**

–ಹರಿದಾಸರ ದೃಢವಾದ ನಂಬಿಕೆ ಇದು.

**ನೀನ್ಯಾಕೊ ನಿನ್ನ ಹಂಗ್ಯಾಕೊ ರಂಗಾ**
**ನಿನ್ನ ನಾಮದ ಬಲವೊಂದಿದ್ದರೆ ಸಾಕೊ . . .**

–ಎಂದೂ ಹಾಡಿದ್ದಾರೆ. ಶಿವ, ಶಿವಾ ಎಂದು ಒಮ್ಮೆ ಉಚ್ಚರಿಸಿದರೂ ಸಕಲ ಪಾಪಕರ್ಮಗಳು ಭಸ್ಮವಾಗಿ ಹೋಗುವುವು. ಎಂಥಾ ದೊಡ್ಡ ಬೆಟ್ಟವಾದರೇನು, ಹತ್ತಿಯ ಬೆಟ್ಟ, ನಾಮದ ಕಿಡಿ ತಾಕಿದರೂ ಸಾಕು ಉರಿದು ಬೂದಿಯಾಗುವುದು. ಬೇರಾವ ಸಾಧನೆಯ ಅಗತ್ಯವೂ ಇಲ್ಲ. ಇದು ಶಿವಶರಣರ ಅಭಯ ನುಡಿ. ಸಾಧನಾ ಮಾರ್ಗಗಳಲ್ಲಿ ಅತ್ಯಂತ ಸುಲಭವಾದುದು ಭಕ್ತಿಮಾರ್ಗ. ಅದರಲ್ಲಿ ಅತ್ಯಂತ ಪರಿಣಾಮಕಾರಿಯಾದುದೂ ಸುಲಭವಾದುದೂ ನಾಮಸ್ಮರಣೆ. ನಾಮಜಪವನ್ನು ಎಲ್ಲಿ ಬೇಕಾದರೂ ಯಾವಾಗ ಬೇಕಾದರೂ ಮಾಡಬಹುದು. ಇದಕ್ಕೆ ಆ ಸ್ಥಳ ಈ ಸ್ಥಳ ಎಂಬ ಭೇದವಿಲ್ಲ. ಮಡಿ–ಮೈಲಿಗೆ ಎಂಬ ಕಟ್ಟುಪಾಡಿಲ್ಲ. ದಿನದಲ್ಲಿ ನಿಯಮಿತವಾಗಿ, ತ್ರಿಸಂಧ್ಯಾ ಕಾಲಗಳಲ್ಲಿ, ಇಲ್ಲವೆ ಒಂದು ನಿಗದಿ ಮಾಡಿಕೊಂಡ ಕಾಲದಲ್ಲಿ ಮತ್ತು ಅನುಕೂಲಕ್ಕಾಗಿ ನಾವೇ ಮಾಡಿಕೊಂಡ ಹೊತ್ತಿನಲ್ಲಿ ಇದನ್ನು ಮಾಡಬೇಕು.ಬದಲಾಗದ ಅದೇ ಕಾಲ ಮತ್ತು ಅದೇ ಏಕಾಂತ ಸ್ಥಳ ಇಟ್ಟುಕೊಳ್ಳುವುದು ಉತ್ತಮ. ಮನಸ್ಸು ಜಪದಲ್ಲಿ ಬೇಗ ಮಗ್ನವಾಗುವುದು. ನಾಮಜಪ ಯಾಂತ್ರಿಕವಾಗಿ ಬಿಟ್ಟರೂ ಫಲ ಉಂಟು.

ಎಲ್ಲೆಲ್ಲಿ ಭಕ್ತರೂ ಒಟ್ಟಾಗಿ ನನ್ನ ನಾಮ ಸಂಕೀರ್ತನೆ ಮಾಡುವರೊ ಅಲ್ಲೆಲ್ಲಾ ನಾನೇ ಇರುತ್ತೇನೆ ಎಂದಿದ್ದಾನೆ ದೇವರು ನಾರದ ಮುನಿಗಳಿಗೆ.

ಶ್ರೀರಾಮಕೃಷ್ಣ ಪರಮಹಂಸರ ಅನೇಕ ಉಪದೇಶಗಳು, ದೃಷ್ಟಾಂತ ಕಥೆಗಳು ನಾಮದ ಮಹಿಮೆ–ಮಹತ್ವಗಳನ್ನು ಬಹು ಮನೋಜ್ಞವಾಗಿ ತಿಳಿಸುತ್ತವೆ. ನಾಮಸ್ಮರಣೆಯಿಂದ ಸಾಧಕರ ದೇಹಶುದ್ಧಿ–ಮನಶುದ್ಧಿ ಸುಲಭಸಾಧ್ಯವಾಗುವುವು. ಅದೂ ತಕ್ಷಣವೆ ಎಂಬುದಕ್ಕೆ ಶ್ರೀರಾಮಕೃಷ್ಣರು ಹೇಳುತ್ತಿದ್ದ ಒಂದು ದೃಷ್ಟಾಂತ ಕಥೆಯಿದೆ :

ಕೃಷ್ಣಕಿಶೋರನು ಅರಿಯಾದಹ ಎಂಬ ಊರಿನ ಒಬ್ಬ ಉತ್ತಮ ಕುಲದ ವ್ಯಕ್ತಿ. ಒಮ್ಮೆ ಆತ ಬೃಂದಾವನ ಯಾತ್ರೆ ಮಾಡುತ್ತಿರುವಾಗ ದಾರಿಯಲ್ಲಿ ಅತೀವ ಬಾಯಾರಿಕೆಯಾಯಿತು. ಹತ್ತಿರದಲ್ಲಿ ಎಲ್ಲಿಯಾದರೂ ನೀರು ಸಿಕ್ಕೀತೆ ಎಂದು ಹುಡುಕುತ್ತ ಒಂದು ಹಳ್ಳಿಗೆ ಬಂದ. ಅಲ್ಲಿ ಒಂದು ಗುಡಿಸಿಲಿನ ಹೊರಗೆ ನಿಂತಿದ್ದವನನ್ನು, 'ಅಯ್ಯಾ ತುಂಬಾ ಬಾಯಾರಿಕೆಯಾಗಿದೆ, ಸ್ವಲ್ಪ ನೀರು ಕೊಡುವೆಯಾ?' ಎಂದು ಕೇಳಿದ. ಆತ, 'ಸ್ವಾಮಿ ನಾನು ನೀಚ ಕುಲದವನು. ನನ್ನ ಕೈಯಿಂದ ನೀರು ಕುಡಿದರೆ ನಿಮಗೆ ಮೈಲಿಗೆಯಾಗಿ ಆ ಪಾಪ ನನಗೆ ತಟ್ಟುವುದಿಲ್ಲವೆ?' ಎನ್ನುತ್ತ ಹಿಂಜರಿದ.

ಆಗ ಕೃಷ್ಣಕಿಶೋರ, 'ಹಾಗಾದರೆ ಒಂದು ಉಪಾಯವಿದೆ. ಹಾಗೆ ಮಾಡು. ಶಿವನ ನಾಮವನ್ನು ಒಮ್ಮೆ ಉಚ್ಚರಿಸು. ನೀನು ಪರಿಶುದ್ಧನಾಗುವೆ. ಆಗ ನಿನ್ನ ಕೈಯಿಂದ ನೀರು ಕುಡಿದರೂ ಮೈಲಿಗೆಯಾಗುವುದಿಲ್ಲ, ದೋಷ ತಟ್ಟುವುದಿಲ್ಲ' ಎಂದ. ಆತ ಹಾಗೆಯೆ ಮಾಡಿ ನೀರು ಕೊಟ್ಟ. ಕೃಷ್ಣಕಿಶೋರ ನೀರನ್ನು ಕುಡಿದು ಬಾಯಾರಿಕೆಯನ್ನು ನೀಗಿಕೊಂಡ. ಕೃಷ್ಣಕಿಶೋರನಿಗೆ ದೇವರ ನಾಮಸ್ಮರಣೆಯಲ್ಲಿ ಅದೆಂಥಾ ನಂಬಿಕೆ! ಎಂಥಾ ಶ್ರದ್ಧೆ !! ಆ ನೀಚಕುಲದ ವ್ಯಕ್ತಿ ಸಹ ಪೂರ್ಣವಿಶ್ವಾಸದಿಂದ ನಂಬಿ ಶಿವನ ನಾಮವನ್ನು ಉಚ್ಚರಿಸಿದ ! ಮನಸ್ಸು ಪರಿಶುದ್ಧವಾದ ಹಾಗೆ ಅನಿಸಿತು. ನಿರಾಳವಾಯಿತು. ನಾಮಸ್ಮರಣೆಗೆ ಅಂಥಾ ಶಕ್ತಿಯಿದೆ. ಶ್ರೀರಾಮಕೃಷ್ಣರು ಹೇಳುತ್ತಿದ್ದ ಇನ್ನೊಂದು ಪ್ರಸಂಗ ಹೀಗಿದೆ :

ಒಮ್ಮೆ ರಾಮಲಕ್ಷ್ಮಣರು ಪಂಪಾಸರೋವರದಲ್ಲಿ ನಡೆದ ಒಂದು ವಿಚಿತ್ರ ಸಂಗತಿಯನ್ನು ನೋಡಿದರು. ಒಂದು ಕಾಗೆ ಬಾಯಾರಿ ನೀರಿಗಾಗಿ ಸರೋವರದ ಅಂಚಿನವರೆಗೆ ಹೋಗಿ ನೀರು ಕುಡಿಯದೆ ಹಿಂದಕ್ಕೆ ಬರುತ್ತಿತ್ತು. ಹೀಗೆ ಎರಡು ಮೂರು ಬಾರಿ ಅದು ನೀರ ಬಳಿ ಹೋಗಿ ವಾಪಸು ಬರುತ್ತಿದ್ದುದನ್ನು ನೋಡಿ ಲಕ್ಷ್ಮಣ, 'ಏಕೆ ಹೀಗೆ?' ಎಂದು ಅಣ್ಣನನ್ನು ಕೇಳಿದ. ಆಗ ರಾಮ ದೈವೀಪ್ರಜ್ಞೆಯಲ್ಲಿ ಹೇಳಿದ, 'ಈ ಕಾಗೆ ಜನ್ಮಾಂತರ ಗಳಿಂದ ದೇವರ ನಾಮಜಪ ಮಾಡುತ್ತಾ ಇದೆ. ಬಾಯಾರಿ ನೀರನ್ನು ಕುಡಿಯಬೇಕೆಂದೆನಿಸಿದರೂ ನೀರು ಕುಡಿಯುವಾಗ ನಾಮಜಪ ನಿಂತು ಹೋಗುವುದಲ್ಲಾ ಎಂದು ಹಿಂಜರಿಯುತ್ತಿದೆ' ಎಂದು ತಿಳಿಸಿದ. ಆಗ ಲಕ್ಷ್ಮಣನಿಗೆ ನಾಮಜಪದ ಮಹತ್ವ ತಿಳಿಯುವಂತಾಯಿತು.

ಹಲವು ಪ್ರಾಪಂಚಿಕರು ನಾಮಜಪವನ್ನು ಲಾಭದ ಆಸೆ ಯಿಂದ, ವ್ಯವಹಾರದಲ್ಲಿ ಹೆಚ್ಚು ಯಶಸ್ಸು ಬರಲಿ ಎಂಬುದಕ್ಕಾಗಿ ಮಾಡುತ್ತಾರೆ. ಒಳ್ಳೆಯ ಕೆಲಸಗಳನ್ನೂ ಮಾಡುತ್ತಾರೆ. ಆದರೆ ಗ್ರಹಚಾರ ಕೆಟ್ಟಾಗ, ದುಃಖ ದಾರಿದ್ರ್ಯ, ಆಪ್ತರ ಸಾವು ಬಂದಾಗ ನಾಮಸ್ಮರಣೆಯನ್ನು ಮರೆತುಬಿಡುತ್ತಾರೆ. ದೈವನಿಂದೆ ಮಾಡು ತ್ತಾರೆ. ಹಸಿದಾಗ ಊಟ ದೊರೆಯಲಿ ಎಂದು ದೇವರ ಹೆಸರು ಹೇಳುತ್ತಾರೆ. ಊಟವಾದ ಕೂಡಲೆ ಮಾಡುವುದು ಒಂದೇ ಕೆಲಸ, ಅದು ನಿದ್ರೆ.

ಇನ್ನೂ ಒಂದು ಮಾತು ನಿಜ. ಲಾಭದ ಉದ್ದೇಶದಿಂದ ಮಾಡಿದರೂ, ತಿಳಿಯದೆಯೆ ದೇವರ ಹೆಸರನ್ನು ಹೇಳಿದರೂ ಅದಕ್ಕೆ ತಕ್ಕಫಲ ತನಗೆ ತಾನೆ ದೊರೆಯುತ್ತದೆ. ಇದಕ್ಕೆ ನಮ್ಮ ಪರಂಪರಾಗತವಾದ ಅಜಾಮಿಳನ ಕಥೆಯೇ ಇದೆ. ಆಪತ್ತಿನಲ್ಲಿ ಮೊರೆಯಿಟ್ಟ ಗಜೇಂದ್ರನನ್ನು ಮೊಸಳೆಯ ಬಾಯ ಹಿಡಿತದಿಂದ ಪಾರು ಮಾಡಿದುದು ಮಹಾವಿಷ್ಣುವಿನ ಕೃಪಾಚಕ್ರವೆ.

ತಿಳಿಯದೆ ನಾಮವನ್ನುಚ್ಚರಿಸಿದರೂ ಅದರ ಮಹಿಮೆ ಅಗಾಧ ಎಂಬ ನಂಬಿಕೆ, ಸಾಧಕರ ಸ್ವಾನುಭವ, ಒಂದು ಕಡೆ ಇರಲಿ. ನಾಮ ಸ್ಮರಣೆಯನ್ನು ಶ್ರದ್ಧಾ-ಭಕ್ತಿಗಳಿಂದ ಮನಸಾರೆ ಒಂದೇ ಒಂದು ಸಲ, ಮಾಡಿದರೂ ದೇವರು ಸುಪ್ರೀತನಾಗಿ ಅನುಗ್ರಹಿಸುತ್ತಾನೆ ಎಂಬುದಕ್ಕೆ ಗುರುಮಹಾರಾಜರು ನಾರದರ ದೃಷ್ಟಾಂತ ಕಥೆಯನ್ನು ಹೇಳುತ್ತಿದ್ದರು. ಅದು ಬಹಳ ಅರ್ಥ ಪೂರ್ಣವಾಗಿದೆ.

### ನಾಮಮಹಿಮೆ

ಸದಾ 'ನಾರಾಯಣ', 'ನಾರಾಯಣ' ಎಂದು ಜಪಿಸುತ್ತ ಉಸಿರಿನೊಂದಿಗೆ ನಾಮಸ್ಮರಣೆಯನ್ನು ಜೋಡಿಸಿಕೊಂಡು ಮೂರು ಲೋಕಗಳಲ್ಲೂ ಸಂಚಾರ ಮಾಡುತ್ತಿದ್ದ ನಾರದ ಮಹರ್ಷಿಗಳಲ್ಲಿಯೂ ಮನದಲ್ಲಿ ತನ್ನಂತಹ ಹರಿಭಕ್ತರು ಇನ್ನಿಲ್ಲ ವೆಂಬ ಸೂಕ್ಷ್ಮ ಅಹಂಕಾರ ಮೊಳೆಯಿತು. ಹೃದಯಾಂತರ್ಯಾಮಿ ಯಾದ ಭಗವಂತನಿಗೆ ಇದು ತಿಳಿಯಿತು. ನಾರದ ಪರಮಭಕ್ತ. ತನ್ನ ಅತ್ಯಂತ ಪ್ರೀತಿಯ ಭಕ್ತ. ಹಾಗೆಂದೇ ಅವನಲ್ಲಿ ಮೊಳೆಯು ತ್ತಿರುವ ಅಹಂಕಾರವನ್ನು ಎಳಸಿನಲ್ಲೆ ಚಿವುಟಿ ಹಾಕಬೇಕೆಂದು ಶ್ರೀಹರಿಗೆ ಅನಿಸಿತು. ಆಗ ಬಳಿಗೆ ಬಂದ ನಾರದನಿಗೆ, ''ಇಂಥಾ ಹಳ್ಳಿಗೆ ಹೋಗು. ಅಲ್ಲಿ ನನ್ನ ಪರಮಶ್ರೇಷ್ಠನಾದ ಭಕ್ತನೊಬ್ಬ ನಿದ್ದಾನೆ. ಆತನ ಪರಿಚಯ ಮಾಡಿಕೊ'' ಎಂದು ಹೇಳಿದ. ಅದರಂತೆ ನಾರದಮುನಿ ಅಲ್ಲಿಗೆ ಹೋಗಿ ನೋಡುತ್ತಾನೆ, ಆತ ನೊಬ್ಬ ರೈತ. ಅವನನ್ನು ಮಾತಾಡಿಸಿದ. ''ಸದಾ ಹರಿಸ್ಮರಣೆ ಮಾಡುವ ನಿನ್ನನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ'' ಎಂದು ಹೇಳಿದ. ಆಗ ಆ ರೈತ, ''ಇಲ್ಲ ಸ್ವಾಮಿ, ನಾನೆಲ್ಲಿ ಸದಾ ಹರಿಸ್ಮರಣೆ ಮಾಡುತ್ತೇನೆ? ಆ ದೇವದೇವನನ್ನು ಸ್ಮರಣೆ ಮಾಡು ವುದಕ್ಕೆ ದಿನದಲ್ಲಿ ಎರಡು ಬಾರಿ ಮಾತ್ರ ನನಗೆ ಸಾಧ್ಯವಾಗುತ್ತದೆ. ಬೆಳಿಗ್ಗೆ ಎದ್ದಾಗೊಮ್ಮೆ ಹರಿಯ ಹೆಸರು ಹೇಳಿ ನಮಸ್ಕಾರ ಮಾಡು ತ್ತೇನೆ. ನಂತರ ಮನೆಯ ಕೆಲಸ, ಹೊಲದ ಕೆಲಸಗಳಲ್ಲಿ ಇಡೀ ದಿನ ಕಳೆದುಹೋಗುತ್ತದೆ. ರಾತ್ರಿ ಮಲಗುವ ಮೊದಲು ಮತ್ತೊಂದು ಬಾರಿ 'ಸ್ವಾಮಿ ಶ್ರೀ ಹರಿ ನಿನ್ನ ಕೃಪೆ ಹೀಗೇ ಇರಲಿ' ಎಂದು ಹೇಳಿ ನಮಸ್ಕಾರ ಮಾಡುತ್ತೇನೆ, ಅಷ್ಟೇ'' ಎಂದು ಇದ್ದ ವಿಷಯ ಹೇಳಿದ. ನಾರದ ಮನದಲ್ಲೆ, 'ಅದು ಹೇಗೆ ಶ್ರೀಹರಿಯ ದೃಷ್ಟಿ ಯಲ್ಲಿ ಈ ಹಳ್ಳಿಯವ ದೊಡ್ಡಭಕ್ತನಾದ?' ಎಂದು ಆಲೋಚಿಸ ತೊಡಗಿದ. ಆಮೇಲೆ ಶ್ರೀಮನ್ನಾರಾಯಣನ ಬಳಿಗೆ ಹೋಗಿ ಈ ಬಗ್ಗೆ ಕೇಳಿದ. ಅದಕ್ಕೆ ಭಗವಂತ ಕೂಡಲೆ ಉತ್ತರ ಹೇಳದೆ, ''ನಾರದ, ನಿನಗಿದು ಅರ್ಥವಾಗಬೇಕಾದರೆ ನಾನು ಹೇಳುವಂತೆ ಒಂದು ಕೆಲಸ ಮಾಡು'' ಎಂದು ಹೇಳಿ ಅವನ ಕೈಲಿ ಪೂರ್ತಿ ತುಂಬಿದ ಒಂದು ಎಣ್ಣೆ ಬಟ್ಟಲನ್ನು ಕೊಟ್ಟು, ''ನೋಡು ಇದನ್ನು ಹಿಡಿದು ಕೊಂಡು ಊರ ಸುತ್ತ ಒಂದು ಸುತ್ತು ಹಾಕಿ ಬಾ. ಆದರೆ ಎಚ್ಚರ, ಬಟ್ಟಲಿನಿಂದ ಒಂದು ತೊಟ್ಟು ಎಣ್ಣೆಯೂ ಹೊರಗೆ ಚೆಲ್ಲಬಾರದು.'' ನಾರದ ಅದರಂತೆ ಏಕಾಗ್ರ ಚಿತ್ತದಿಂದ ಗಮನ ವಿತ್ತು ಎಣ್ಣೆ ಸ್ವಲ್ಪವೂ ತುಳುಕಿ ಬೀಳದಂತೆ ಎಚ್ಚರ ವಹಿಸಿ ಊರನ್ನು ನಿಧಾನಗತಿಯಲ್ಲಿ ಸುತ್ತಿ ಬಂದ, ಒಂದು ಹನಿ ಎಣ್ಣೆಯೂ ಚೆಲ್ಲ ಲಿಲ್ಲ. ಹೆಮ್ಮೆಯಿಂದ ನಾರಾಯಣನಲ್ಲಿ ಇದನ್ನು ನಿವೇದಿಸಿ ಕೊಂಡ. ಆಗ ಶ್ರೀಹರಿ, ''ಭಾಪುರೆ, ಎಲ್ಲ ಸರಿ, ಆಗ ನೀನು

ನನ್ನನ್ನೆಷ್ಟು ಸಲ ಸ್ಮರಿಸಿದೆ?'' ಎಂದು ಕೇಳಿದ. ನಾರದ, ''ಪ್ರಭುವೆ, ನನ್ನ ಗಮನವೆಲ್ಲ ಎಣ್ಣೆಯ ಬಟ್ಟಲ ಕಡೆಯೆ ನಿಮಗ್ನವಾಗಿರುವಾಗ ಇನ್ನು ನಾಮ ಸ್ಮರಣೆ ಹೇಗೆ ತಾನೆ ಸಾಧ್ಯ?'' ಎಂದು ಉತ್ತರಿಸಿದ ಆಗ ಭಗವಂತ, ''ನೋಡು ಒಂದು ತೊಟ್ಟು ಎಣ್ಣೆ ನಿನ್ನ ಮನಸ್ಸನ್ನು ಪೂರ್ತಿ ತನ್ನ ಕಡೆಗೇ ತಿರುಗಿಸಿತು. ದೇವರನ್ನೆ ಮರೆತು ಬಿಟ್ಟೆ. ರೈತನಾದರೂ ಸಂಸಾರದ ಹೊಣೆ ಹೊತ್ತು ಇಡೀ ದಿನ ಬಿಡುವಿಲ್ಲದೆ ದುಡಿಯುತ್ತಿದ್ದರೂ ದಿನದಲ್ಲಿ ಎರಡು ಬಾರಿಯಾದರೂ ನನ್ನ ಸ್ಮರಣೆ ಮಾಡುತ್ತಾನೆ. ಅದಕ್ಕೇನೆ ಅವನು ಶ್ರೇಷ್ಠ ಭಕ್ತ ಎಂದು ನಾನು ಹೇಳಿದ್ದು'' ಎಂದು ಉತ್ತರಿಸಿದ. ನಾಮಸ್ಮರಣೆಯನ್ನು ಎಷ್ಟು ಸಲ ಮಾಡಬೇಕೆಂಬುದು ಮುಖ್ಯವಲ್ಲ. ಭಕ್ತಿ-ಶ್ರದ್ಧೆಗಳಿಂದ ಮನಃಪೂರ್ವಕವಾಗಿ ಒಂದು ಸಲ ಮಾಡಿದರೂ ಅದು ಅತ್ಯುತ್ತಮ. ಲೌಕಿಕ ಕರ್ತವ್ಯಗಳನ್ನೂ ಜವಾಬ್ದಾರಿಗಳನ್ನೂ ಅಲಕ್ಷಿಸದೆ ಜೊತೆಗೆ ದೇವರ ನಾಮಸ್ಮರಣೆಯನ್ನೂ ಮರೆಯದಿರುವುದು, ಸಂಪೂರ್ಣ ಶರಣಾಗತಿ ಮುಖ್ಯ ಎಂಬುದು ನಾರದನಿಗೆ ಅರಿವಾಯಿತು.

ಶ್ರೀರಾಮಕೃಷ್ಣರು ನಾಮಜಪ ಮಾಡಿ ಎಂದು ತಮ್ಮ ಆಪ್ತ ವಲಯದ ಕಿರಿಯ ಪ್ರಾಯದ ಶಿಷ್ಯರಿಗೆ ಯಾವಾಗಲೂ ಹೇಳುತ್ತಿದ್ದರು. ತಾವೂ ಹೀಗೆ ಸತತವಾಗಿ ನಾಮಜಪ ಮಾಡುತ್ತಿದ್ದಾಗ ಒಬ್ಬ ತ್ರಿಶೂಲಧಾರಿಯಾದ ಭೈರವ ಕಾಣಿಸುತ್ತಿದ್ದನಂತೆ. ಒಂದು ಕ್ಷಣ ನಾಮಜಪ ನಿಲ್ಲಿಸಿದರೂ ತ್ರಿಶೂಲದಿಂದ ತಿವಿದು ಎಚ್ಚರಿಸುತ್ತಿದ್ದನಂತೆ.

ಪವಿತ್ರನಾಮವನ್ನು ತಿಳಿದೊ ತಿಳಿಯದೆಯೊ ಮಾಡಿದರೂ ಮನಸ್ಸು ಶುದ್ಧವಾಗುವುದು. ಸ್ನಾನವನ್ನು ಇಷ್ಟು ಪಟ್ಟು ಮಾಡಲಿ ಇಷ್ಟವಿಲ್ಲದೆ ಮಾಡಲಿ ಅದರಿಂದ ದೇಹ ಶುಚಿಯಾಗುತ್ತದೆ. ಮನಸ್ಸಿಗೆ ಹಿತವೆನಿಸುತ್ತದೆ. ಸಾಕ್ಷಾತ್ಕಾರಕ್ಕೂ ನಾಮೋಚ್ಚಾರಣೆಯ ಸಾಧನೆಯೊಂದೇ ಸಾಕು. ನಾಮಸ್ಮರಣೆಯ ರಸಾನುಭವ ಸುಲಭವಲ್ಲ. ಆದರೆ ಒಮ್ಮೆ ಅದರ ರುಚಿ ಕಂಡರೆ ಪ್ರಾಪಂಚಿಕ ಆಸೆಗಳು ಕಾಡುವುದಿಲ್ಲ.

ಒಮ್ಮೆ ಕಿರಿಯ ಪ್ರಾಯದ ಒಬ್ಬ ಶಿಷ್ಯ ರಾಮಕೃಷ್ಣರ ಬಳಿ, ''ನಾನಿನ್ನೂ ದೇವರನ್ನು ಪ್ರೀತಿಸಲು ಕಲಿತಿಲ್ಲ'' ಎಂದ. ಗುರು ಮಹಾರಾಜರು, ''ನಾಮಜಪಮಾಡು, ಪ್ರೀತಿ ತಾನಾಗೇ ಬರುತ್ತೆ'' ಎಂದರು. ''ಅವನ ಹೆಸರಿನಲ್ಲಿ ನನಗೆ ಏನೂ ಆನಂದ ತೋರುವುದಿಲ್ಲ'' ಎಂದ ಆತ. ''ಹಾಗದರೆ ದೇವರನ್ನೇ ವ್ಯಾಕುಲತೆಯಿಂದ ಪ್ರಾರ್ಥಿಸು. ನಾಮದ ರುಚಿ ಕೊಡು ಎಂದು. ಆಗ ದಯಾಮಯನಾದ ಅವನು ಕರುಣಿಸುವನು'' ಎಂದರು ಗುರುಮಹಾರಾಜರು.

ಶ್ರೀರಾಮ, ಶ್ರೀಕೃಷ್ಣ, ದುರ್ಗಾ, ಶಿವ, ಮಾರುತಿ, ಹೀಗೆ ಯಾವ ಹೆಸರನ್ನಾದರೂ ಜಪಿಸಬಹುದು. ಕೃಷ್ಣತುಲಾಭಾರದಲ್ಲಿ ಸತ್ಯಭಾಮೆ ಇಟ್ಟ ಎಲ್ಲ ಒಡವೆಗಳೂ ಸೇರಿದರೂ ಕೃಷ್ಣನ ಭಾರಕ್ಕೆ ಸರಿದೂಗಲಿಲ್ಲ. ಕಡೆಯಲ್ಲಿ ರುಕ್ಮಿಣಿ ಶ್ರೀಹರಿ ಎಂದು ಸ್ಮರಿಸುತ್ತ ಒಂದೇ ಒಂದು ತುಳಸೀ ದಳವನ್ನಿಟ್ಟಾಗ ಅದು ಕೃಷ್ಣನ ಭಾರಕ್ಕೆ ಸರಿದೂಗಿತು.

ನಾಮದಲ್ಲಿ ಅಚಲವಾದ ವಿಶ್ವಾಸವಿರಬೇಕು. ನಿಜಕ್ಕೂ ಅದು ಶಕ್ತಿಯುತವಾದುದು. ''ನಾಮವೆಂಬ ಬೀಜ ಮನಸ್ಸಿನ ನೆಲದ ಮೇಲೆ ಬಿದ್ದರೆ ಸಾಕು, ಮೊಳೆತು, ಸಸಿಯಾಗಿ, ಮರವಾಗಿ ಫಲ ಕೊಡುವುದು'' ಎಂದು ಚೈತನ್ಯರು ಹೇಳುತ್ತಾರೆ. ಹೇಳುವುದೇನು, ನಾಮಜಪ ಮಾಡಿ ಮನಶ್ಶಾಂತಿ, ಆನಂದ, ಮುಂತಾದ ಫಲಗಳನ್ನು ಪಡೆಯುವುದು ಅನೇಕರ ಸ್ವಾನುಭವ. ಇಡೀ ಮನುಕುಲದ ಎಲ್ಲ ಧರ್ಮಗಳವರ, ಎಲ್ಲಾ ಕಾಲದ ಅನುಭವ. ನಾಮಸ್ಮರಣೆ, ನಾಮ ಜಪ, ಭಗವಂತನೆ ಮನುಕುಲಕ್ಕಿತ್ತ ಶ್ರೇಷ್ಠ ವರ. ಜಗತ್ತಿನ ಎಲ್ಲ ಧರ್ಮ ಗಳಲ್ಲೂ ಇದಕ್ಕೆ ಪ್ರಾಶಸ್ತ್ಯವಿರುವುದೇ ಹಿರಿಯ ಪ್ರಮಾಣ. ❖

## ದಿವ್ಯನಾಮದ ಬಯಕೆ

**ನ ಮೋಕ್ಷಸ್ಯಾಕಾಂಕ್ಷಾ ನ ಚ ವಿಭವವಾಂಛಾಪಿ ಚ ನ ಮೇ**
**ನ ವಿಜ್ಞಾನಾಪೇಕ್ಷಾ ಶಶಿಮುಖಿ ಸುಖೇಚ್ಛಾಪಿ ನ ಪುನಃ ।**
**ಅತಸ್ತ್ವಾಂ ಸಂಯಾಚೇ ಜನನಿ ಜನನಂ ಯಾತು ಮಮ ವೈ**
**ಮೃಡಾನೀ ರುದ್ರಾಣೀ ಶಿವ ಶಿವ ಭವಾನೀತಿ ಜಪತಃ ॥**

ಹೇ ಚಂದ್ರಮುಖಿ, ನನಗೆ ಮೋಕ್ಷದ ಆಸೆಯಿಲ್ಲ; ಧನ ಸಂಪತ್ತುಗಳ ಇಚ್ಛೆಯಿಲ್ಲ; ಜ್ಞಾನದ ಅಪೇಕ್ಷೆಯಿಲ್ಲ; ಸುಖದ ಇಚ್ಛೆಯೂ ಇಲ್ಲ; ಹೇ ತಾಯಿ, ನಿನ್ನ ಮುಂದೆ ಇಷ್ಟು ಮಾತ್ರ ಯಾಚಿಸುತ್ತೇನೆ - ಮೃಡಾನಿ, ರುದ್ರಾಣಿ, ಶಿವ, ಶಿವ, ಭವಾನಿ ಎಂದು ಜಪಿಸುತ್ತ ನನ್ನ ಜನ್ಮವೆಲ್ಲವೂ ಕಳೆದುಹೋಗಲಿ!

*-ಶ್ರೀ ಶಂಕರಾಚಾರ್ಯ (ದೇವ್ಯಪರಾಧಕ್ಷಮಾಪಣಸ್ತೋತ್ರ)*

**ತತ್ತ್ವಂ ಬ್ರುವಾಣಾನಿ ಪರಂ ಪರಸ್ಮಾತ್**
**ಮಧುಕ್ಷರಂತೀವ ಸತಾಂ ಫಲಾನಿ**
**ಪ್ರಾವರ್ತಯ ಪ್ರಾಂಜಲಿರಸ್ಮಿ ಜಿಹ್ವೇ**
**ನಾಮಾನಿ ನಾರಾಯಣಗೋಚರಾಣಿ**

ಎಲೈ ನಾಲಗೆ, ಕೈಜೋಡಿಸಿ ನಿನ್ನನ್ನು ಬೇಡುತ್ತೇನೆ: ಪರಾತ್ಪರ ತತ್ತ್ವವನ್ನು ಬೋಧಿಸುತ್ತಿರುವ, ಸಾಧುಗಳ ಸತ್ಕರ್ಮಫಲರೂಪವಾದ ಆನಂದವನ್ನು ಸೂಸುತ್ತಿರುವ ಶ್ರೀಮನ್ನಾರಾಯಣನ ದಿವ್ಯನಾಮ ಗಳನ್ನು ಉಚ್ಚರಿಸು.

*-ಕುಲಶೇಖರ ಆಳ್ವಾರ್ (ಮುಕುಂದಮಾಲಾಸ್ತೋತ್ರ)*

# ಓಂ ಸಂಧ್ಯಾ ಗಾಯತ್ರೀ – ಶ್ರೀರಾಮಕೃಷ್ಣರು ಕಂಡಂತೆ

ಡಾ. ಪ್ರಸನ್ನಾಕ್ಷೀ ಕೆ.ಎಲ್.

**ಶ್ರೀರಾಮಕೃಷ್ಣರ ಒಂದೊಂದು ಉಪದೇಶಗಳ ಆಳದಲ್ಲಿ ರತ್ನಭಂಡಾರವೇ ಅಡಗಿದೆ; ಅವುಗಳ ಬಗ್ಗೆ ಗಂಟೆಗಟ್ಟಲೆ ಉಪನ್ಯಾಸ ನೀಡಬಹುದು, ಪುಟಗಟ್ಟಲೆ ಬರೆಯಬಹುದು. ಸಾಧನೆಯ ಸಾರವೆಲ್ಲ ಅಡಕವಾಗಿರುವ ಅಂಥ ಉಪದೇಶವೊಂದನ್ನು ವಿವರಿಸಿರುವ ಲೇಖಕಿ ಸಂಸ್ಕೃತ ವಿದ್ವಾಂಸರು. ನಿವೃತ್ತ ಕಾಲೇಜು ಪ್ರಾಂಶುಪಾಲರಾಗಿರುವ ಇವರು ಹಲವು ಸಂಸ್ಕೃತ ಕೃತಿಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಈ ಪತ್ರಿಕೆಯಲ್ಲಿ ಇವರ ಹಲವಾರು ಲೇಖನಗಳು ಪ್ರಕಟವಾಗಿವೆ.**



**ಪೀಠಿಕೆ :** **'ಮನು ಅವಬೋಧನೇ'** ಎಂಬ ಧಾತುವಿನಿಂದ ಹುಟ್ಟಿದ **'ಮಾನವ'** ಶಬ್ದಕ್ಕೆ ತಿಳಿವಳಿಕೆ ಉಳ್ಳವನು ಎಂದರ್ಥ. ಪದಾರ್ಥ– ಇಂದ್ರಿಯದ ಸಂಪರ್ಕ, ಇಂದ್ರಿಯ ಮನಸ್ಸಿನ ಸಂಪರ್ಕ, ಮನಸ್ಸು ಆತ್ಮದ ಸಂಪರ್ಕ ಹೊಂದಿದಾಗ ಮಾತ್ರ ತಿಳಿವಳಿಕೆ ಉಂಟಾಗುತ್ತದೆ ಎಂದು ಎಲ್ಲಾ ಶಾಸ್ತ್ರಗಳೂ ಜ್ಞಾನಬೋಧೆಯ ಕ್ರಮ ವನ್ನು ಅಂಗೀಕರಿಸುತ್ತವೆ. ಅದಕ್ಕೆ ಈ ನಾಲ್ಕು (ಪದಾರ್ಥ, ಇಂದ್ರಿಯ, ಮನಸ್ಸು, ಆತ್ಮ) ಒಂದೇ ನೇರದಲ್ಲಿರಬೇಕು, ಇವುಗಳ ನಡುವೆ ಎಲ್ಲೂ ಯಾವ ರೀತಿಯ ಅಡಚಣೆಯೂ ಉಂಟಾಗ ಬಾರದು. ಅದು ತಿಳಿ ಆಗಿದ್ದಾಗ ತಾನೆ ಸಾಧ್ಯ?! ಇಂತಹ ತಿಳಿವಳಿಕೆ 'ಮೂಲ'ವನ್ನು ಹೊಂದುವಂತೆ ಆದಾಗ ಆತ ಮಾನವ ಶರೀರ ಪಡೆದುದು ಸಾರ್ಥಕ ವಾಗುತ್ತದೆ. ಉತ್ತಮ ಕುಲ, ಶ್ರೇಷ್ಠ ಜನ್ಮ, ತರ್ಕ ಮೀಮಾಂಸಾ ವ್ಯಾಕರಣ ಮೊದಲಾದ ನಾನಾ ಶಾಸ್ತ್ರಗಳಲ್ಲಿ ತಲಸ್ಪರ್ಶಿ ಪಾಂಡಿತ್ಯ, ವೇದಾಂಗ ಜ್ಞಾನದೊಡಗೂಡಿದ ವೇದ ಜ್ಞಾನ, ಶ್ರೇಷ್ಠವಾದ ವ್ರತಗಳ ಆಚರಣೆ, ಉತ್ತಮ ಕ್ರಿಯಾ ಸಾಮರ್ಥ್ಯ ಈ ಎಲ್ಲವೂ ಭಗವಂತನ ಸಂಪರ್ಕವುಳ್ಳ ದ್ದಾದಲ್ಲಿ ಮಾತ್ರ ಸಾರ್ಥಕ. ಹಾಗಿಲ್ಲದೆ, ಭಗವ ದ್ವಿಮುಖವಾಗಿದ್ದಲ್ಲಿ ಈ ಎಲ್ಲವೂ ಇದ್ದು ಏನೂ ಪ್ರಯೋಜನವಿಲ್ಲ ಎನ್ನುತ್ತದೆ ಭಾಗವತ.

**ಧಿಗ್ಜನ್ಮ ನಸ್ತ್ರಿವೃದ್ವಿದ್ಯಾಂ ಧಿಗ್ವ್ರತೋ ಧಿಗ್ಬಹುಜ್ಞತಾಮ್ ।**
**ಧಿಕ್ಕುಲಂ ಕ್ರಿಯಾದಾಕ್ಷ್ಯಂ ವಿಮುಖಾ ಯೇ ತ್ವಧೋಕ್ಷಜೇ ॥**
**ಧಿಕ್ತಪೋ ಧಿಗಾತ್ಮ ಮೀಮಾಂಸಾಂ ಧಿಕ್‌ಶೌಚಂ ಧಿಕ್ಕ್ರಿಯಾಃ ಶುಭಾಃ ।**

*(ಶ್ರೀಮದ್ಭಾಗವತ, ಭಾಗ ೧೦, ೨೩. ೩೯–೪೨)*

ಆದುದರಿಂದ ದುರ್ಲಭವಾದ ಮಾನವ ಜನ್ಮ ದೊರೆತಾಗ ಪರಮ ವಸ್ತುವನ್ನು (ಭಗವಂತನನ್ನು) ಸಾಧಿಸಿಕೊಳ್ಳಬೇಕಾದದ್ದೇ ಅದರ ಪರಮ ಗುರಿ, ಕರ್ತವ್ಯ ಕೂಡ. ಶ್ರೀರಾಮಕೃಷ್ಣರು, ''ಸಚ್ಚಿದಾ ನಂದನ ಸಾಕ್ಷಾತ್ಕಾರ ಪಡೆದುಕೊಳ್ಳದೆ ಇತ್ತು ಎಂದರೆ ಜೀವನ ಬರಿದೆ ವ್ಯರ್ಥ, ವಿವೇಕ–ವೈರಾಗ್ಯಗಳಿಗಿಂತ 'ವಸ್ತು' ಇನ್ನು ಬೇರೆ ಯಾವುದೂ ಇಲ್ಲ, ಭಗವಂತ ಎಂದು ನಮ್ಮನ್ನು ಸೃಷ್ಟಿಸಿದನೋ ಅಂದೇ ನಾವು ಆತನ ಸ್ವತ್ತಿಗೆ ಹಕ್ಕುದಾರರಾಗಿ ಬಿಟ್ಟಿದ್ದೀವಿ, ಆತ ನಮ್ಮ ತಾಯಿ ತಂದೆ ಬಂಧು ಬಳಗ ಎಲ್ಲಾ. ಆತನನ್ನು ಬಲಾತ್ಕರಿಸಿ ಕೇಳಬಹುದು – 'ಕೊಡು ನಿನ್ನ ದರ್ಶನವನ್ನು' ಎಂದು. ಆತನ ಸಾಕ್ಷಾತ್ಕಾರ ಪಡೆದು ಕೊಳ್ಳದೆ ಹೋದರೆ, ದರ್ಶನ ಮಾಡಿಕೊಳ್ಳದೇ ಹೋದರೆ ಜೀವನ ಬರಿದೆ ವ್ಯರ್ಥ'' ಎನ್ನುತ್ತಾರೆ. *(ಶ್ರೀರಾಮಕೃಷ್ಣ ವಚನವೇದ, ಸಂಪುಟ ೧, ಪು. ೩೯೭)*

**ಭಕ್ತಿ ಮಾರ್ಗ :** ಭಗವಂತನ ಸಾಕ್ಷಾತ್ಕಾರಕ್ಕೆ ಅನಂತ ಮಾರ್ಗಗಳಿವೆ. ಅವುಗಳಲ್ಲಿ ಜ್ಞಾನ, ಭಕ್ತಿ, ಕರ್ಮ ಮಾರ್ಗಗಳು ವಿಶೇಷ ಸ್ಥಾನ ಪಡೆದುಕೊಂಡಿವೆ. ಯಾವ ಮಾರ್ಗ ಅನುಸರಿಸಿದರೂ, ನಿಜವಾದ ಆಕಾಂಕ್ಷೆ ಇದ್ದರೆ, ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ. *(ವಚನವೇದ ಸಂ.೧, ಪು.೫೦೫)* ಸದ್'ವಸ್ತು' ಒಂದೇ. ಅದು 'ಪರತತ್ತ್ವ.' ಇದು ಆ ಸದ್ವಸ್ತು ಅಲ್ಲ, ಇದಲ್ಲ, ಇದಲ್ಲ ಅಂತ ವಿಚಾರ ಮಾಡುತ್ತಾ ಮಾಡುತ್ತಾ ಅಸದ್ವಸ್ತು ಗಳನ್ನೆಲ್ಲಾ ಹಿಂದೆ ಹಿಂದೆ ಹಾಕಿ, ಮುಂದೆ ಮುಂದೆ ಸಾಗುತ್ತಾ ವಿಚಾರದ ಕೊನೆ ಮುಟ್ಟಿದಾಗ ಉಳಿಯುವುದೇ ಸದ್ವಸ್ತು ಜ್ಞಾನ. ಅದೇ ಬ್ರಹ್ಮಜ್ಞಾನ. ಇದು **ಜ್ಞಾನಮಾರ್ಗ.** ಈ ಕ್ರಮದಲ್ಲಿ 'ವಸ್ತು' ಅರಿವು, ಭಗವತ್ಸಾಕ್ಷಾತ್ಕಾರ ಪಡೆದುಕೊಳ್ಳುವುದು ಸುಲಭ ಸಾಧ್ಯವಲ್ಲ.

ನಾವು ಕೆಲಸ ಮಾಡದೆ ಚಟುವಟಿಕೆಯಿಲ್ಲದೆ ಒಂದರೆ ಘಳಿ ಗೆಯೂ ಇರಲಾರೆವು. **'ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್'** *(ಗೀತೆ, ೩.೫).* ಹಾಗೆ ನಾವು ಮಾಡುವ ಎಲ್ಲಾ ಚಟು ವಟಿಕೆಗಳನ್ನೂ ಭಗವಂತನಿಗಾಗಿ ಮಾಡುವುದು, ಭಗವಂತನಲ್ಲಿ ಮನಸ್ಸನ್ನಿಟ್ಟು ಹೊರ ಎಲ್ಲಾ ಚಟುವಟಿಕೆಗಳನ್ನೂ ಅವನ ಯಂತ್ರದಂತೆ ಮಾಡುವುದು, ಮಾಡಿದ ಎಲ್ಲಾ ಕೆಲಸಗಳಿಗೆ ದೊರಕುವ ಎಲ್ಲಾ ರೀತಿಯ ಫಲಗಳನ್ನೂ ಭಗವಂತನಿಗೇ ಅರ್ಪಿಸುವುದು, ಕರ್ಮ ಮಾರ್ಗ. ಇದರ ಮೂಲಕವೂ ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಆದರೆ ಈ ರೀತಿ ನಿರಪೇಕ್ಷೆಯಿಂದ ಕರ್ಮ ಮಾಡುವುದು, ಯಂತ್ರ ದಂತಿರುವುದು ಅತಿ ಕಠಿಣ.

ಭಗವಂತನ ನಾಮ ಗುಣ ಸಂಕೀರ್ತನೆ ಮಾಡುತ್ತಾ ಮಾಡುತ್ತಾ ಭಗವಂತನಲ್ಲಿ ಮನಸ್ಸನ್ನಿಡುವುದು **ಭಕ್ತಿಮಾರ್ಗ.** ಯಾವ ಮಾರ್ಗ ದಿಂದ ಸಾಧನೆ ಮಾಡಿದರೂ ಮುಟ್ಟುವ ಗುರಿ ಒಂದೇ. ಆದರೆ

ದೇಹಾತ್ಮ ಬುದ್ಧಿಯನ್ನು (ದೇಹವೇ 'ನಾನು' ಎಂಬ ಅರಿವನ್ನು) ಏನು ಮಾಡಿದರೂ ಸಂಪೂರ್ಣ ಹೋಗಿಸಿಕೊಳ್ಳಲಾಗುವುದಿಲ್ಲ. ಅದು ಅಶ್ವತ್ಥ ಮರದಂತೆ. ಇಂದು ಬುಡದವರೆಗೆ ಅದನ್ನು ಕತ್ತರಿಸಿದ್ದರೂ, ನಾಳೆ ಬೆಳಗಾಗುವಲ್ಲಿ ಅದರಲ್ಲಿ ಚಿಗುರು ಕಾಣುತ್ತದೆ. ಈ ಕಾರಣದಿಂದ ಜ್ಞಾನಮಾರ್ಗ, ಕರ್ಮಮಾರ್ಗಗಳೆರೆಡೂ ಕಷ್ಟ. ಭಕ್ತಿ ಸುಲಭ, ಇದು ಕಲಿಯುಗದ ಧರ್ಮ, ಎನ್ನುತ್ತಾರೆ ಶ್ರೀ ರಾಮಕೃಷ್ಣರು.

''ಕಲಿಯುಗದಲ್ಲಿ ಅನ್ನಗತ ಪ್ರಾಣ, 'ಬ್ರಹ್ಮಸತ್ಯಂ ಜಗನ್ಮಿಥ್ಯಾ' ಎಂಬ ಬೋಧೆ ಎಲ್ಲಿ ಸಾಧ್ಯವಾದೀತು? ಅದು ದೇಹಬುದ್ಧಿ ಹೋದ ಹೊರತು ಉಂಟಾಗದು. ನಾನು ದೇಹವಲ್ಲ, ಮಹತ್ ಅಹಂಕಾರ ಪಂಚ ಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯ ಮನಸ್ಸು ಪಂಚಭೂತ ಪಂಚತನ್ಮಾತ್ರ ರೂಪ ೨೪ ತತ್ತ್ವಗಳೂ ನಾನಲ್ಲ. ನಾನು ಸುಖ-ದುಃಖ ಗಳನ್ನು ಮೀರಿದವನು. ನನಗೆ ರೋಗ-ರುಜಿನ, ಶೋಕ, ಮುಪ್ಪು, ಸಾವು ಇದು ಯಾವುದೂ ಇಲ್ಲ. ನನಗೆ ಪಾಪ-ಪುಣ್ಯಗಳಿಲ್ಲ ಎಂಬ ಬೋಧೆ ಕಲಿಯುಗದಲ್ಲಿ ಉಂಟಾಗುವುದು ಬಹು ಕಠಿಣ. ವಿಚಾರ ಎಷ್ಟು ಮಾಡಿದರೂ ದೇಹಾತ್ಮ ಬುದ್ಧಿ ಎಲ್ಲಿಂದಲೋ ನುಗ್ಗಿ ನುಸುಳಿ ಬಂದುಬಿಡುತ್ತದೆ. ಆದುದರಿಂದ ಈ ಯುಗಕ್ಕೆ ಭಕ್ತಿಮಾರ್ಗವೇ ಒಳ್ಳೆಯದು ಎಂಬುದು ಶ್ರೀರಾಮಕೃಷ್ಣರ ಅಭಿಪ್ರಾಯ.

*(ವಚನವೇದ ಸಂ.೧, ಪು. ೧೨೨)*

''ಕಾಯಾ ವಾಚಾ ಮನಸಾ ಭಗವಂತನನ್ನು ಪೂಜಿಸುವುದಕ್ಕೆ ಭಕ್ತಿ ಎಂದು ಹೆಸರು. ಕೈಗಳಿಂದ ಭಗ ವಂತನನ್ನು ಪೂಜಿಸುವುದು, ಅವನ ಸೇವೆ ಮಾಡುವುದು, ಪಾದ ಗಳಿಂದ ಭಗವದ್ಧರ್ಮ-ಶಕ್ತಿಗಳು ವಿಶೇಷವಾಗಿ ಅಭಿವ್ಯಕ್ತವಾಗಿರುವ ತೀರ್ಥಕ್ಷೇತ್ರಗಳ ಯಾತ್ರೆ ಮಾಡುವುದು, ಭಗವಂತನ ಮೂರ್ತಿ ಯನ್ನು ಕಣ್ಣಿಳಿಂದ ನೋಡುವುದು, ಆತನ ಚರಿತ್ರೆ ಲೀಲೆಗಳನ್ನು, ನಾಮಗುಣ ಸಂಕೀರ್ತನೆಗಳನ್ನು ಕೇಳುವುದು ಇದೇ ಮೊದಲಾದವು ಕಾಯಿಕ ಪೂಜೆ. ಭಗವಂತನ ಸ್ತೋತ್ರಗಳನ್ನು ಪಠಿಸುವುದು ನಾಮ ಗುಣ ಕೀರ್ತನೆ ಮಾಡುವುದು ಇವೇ ಮೊದಲಾದವು ವಾಚಿಕಪೂಜೆ. ಮನಸ್ಸಿನಿಂದ ಸದಾ ಆತನ ಧ್ಯಾನ ಮಾಡುವುದು, ಆತನ ಲೀಲೆಗಳ ಸ್ಮರಣೆ ಮಾಡುತ್ತಿರುವುದು ಮಾನಸಿಕಪೂಜೆ. ಇವುಗಳನ್ನು ಮಾಡುತ್ತಾ ಮಾಡುತ್ತಾ ಇದ್ದರೆ ಕ್ರಮೇಣ ಭಕ್ತಿ ಉಂಟಾಗುತ್ತದೆ *(ವಚನವೇದ ಸಂ.೨, ಪು. ೧೮೫)* ಭಗವಂತನ ನಾಮ ಜಪಿಸಲು ಲಜ್ಜೆ ಭಯ ದ್ವೇಷ ಇರಬಾರದು. ಅವನ ನಾಮ ಜಪಿಸುತ್ತಾ ಇದ್ದರೆ ದೇಹ ಮನ ಎಲ್ಲಾ ಶುದ್ಧವಾಗಿ ಬಿಡುತ್ತದೆ. ಆದುದರಿಂದ ಇಂತಹ ಭಗವಂತನ ನಾಮ ಗುಣ ಕೀರ್ತನೆ ಪ್ರಾರ್ಥನೆಗಳಿಂದ ಕೂಡಿದ ಭಕ್ತಿಮಾರ್ಗವೇ ಕಲಿಯುಗಕ್ಕೆ ಸೂಕ್ತವಾದುದು. *(ವಚನವೇದ ಸಂ.೧, ಪು. ೮೪)*

**ಜಪ :** ''ಭಗವನ್ನಾಮ ಜಪಕ್ಕೆ ಬಹಳ ಶಕ್ತಿ ಇದೆ, ಮಹಿಮೆ ಇದೆ. ಅದು ಅವಿದ್ಯೆಯನ್ನು 'ನಾನು' 'ನಾನು' ಎಂಬ ಭಾವವನ್ನು ನಾಶ ಮಾಡಿಬಿಡುತ್ತದೆ. ನಿರ್ಜನ ಪ್ರದೇಶದಲ್ಲಿ ಬೇರೆ ಯಾವ ಶಬ್ದವನ್ನೂ ಮಾಡದೆ ಭಗವನ್ನಾಮೋಚ್ಚಾರಣೆ ಮಾಡುವುದಕ್ಕೆ **'ಜಪ'** ಎಂದು ಹೆಸರು. *(ವಚನವೇದ ಸಂ.೨, ಪು. ೪೮೩)* ದೇಹವೆಂಬ ಮರದಲ್ಲಿ ಪಾಪವೆಂಬ ಹಕ್ಕಿಗಳು ಕುಳಿತುಕೊಳ್ಳುತ್ತವೆ. ಭಗವಂತನ ನಾಮಗುಣ ಕೀರ್ತನೆ ಮಾಡುವುದು ಕೈಚಪ್ಪಾಳೆ ಹಾಕಿದ ಹಾಗೆ. ಚಪ್ಪಾಳೆ ಹಾಕಿದೊಡನೆ ಮರದಿಂದ ಎಲ್ಲಾ ಹಕ್ಕಿಗಳೂ ಹಾರಿ ಹೋಗು ವಂತೆ, ಭಗವಂತನ ನಾಮಗುಣ ಕೀರ್ತನೆ ಮಾಡಿದೊಡನೆ ದೇಹಕ್ಕೆ ಸಂಬಂಧ ಪಟ್ಟ ಪಾಪಗಳೆಲ್ಲಾ ಕಾಲಿಗೆ ಬುದ್ಧಿ ಹೇಳುತ್ತವೆ. *(ವಚನ ವೇದ, ಸಂ.೧, ಪು. ೧೩೪)* ಆದುದರಿಂದ ಭಗವಂತನ ನಾಮಕ್ಕೆ ಬಹಳ ಮಾಹಾತ್ಮ್ಯ ಇದೆ. ಒಡನೆಯೇ ಫಲ ದೊರಕದೇ ಹೋಗ ಬಹುದು. ಆದರೆ ಒಂದಲ್ಲ ಒಂದು ದಿನ ಫಲ ದೊರತೇ ದೊರೆಯು ತ್ತದೆ. *(ವಚನವೇದ ಸಂ.೧, ಪು.೮೭)* ಭಗವಂತನ ನಾಮ ಉಚ್ಚರಿ ಸುತ್ತಾ ಕಾಮ ಕಾಂಚನದಲ್ಲಿ ಮನ ಇದ್ದರೆ ಸಾಕ್ಷಾತ್ಕಾರ ದೊರೆಯುವು ದಿಲ್ಲ. ಭಗವಂತನಲ್ಲಿ ಅನುರಾಗ ಹೊಂದಬೇಕು, ಅವನಿಗಾಗಿ ವ್ಯಾಕುಲಗೊಳ್ಳಬೇಕು, ಪ್ರಾಣ ಬಿಡಬೇಕು, ಆಗ ಅದರ ಮಹತ್ತಿ ನಿಂದ ದೇಹ, ಮನ, ನಾಲಿಗೆ, ಇಂದ್ರಿಯಗಳೆಲ್ಲ ಪವಿತ್ರಗೊಳ್ಳುವುವು. ಏಕಾಗ್ರ ಚಿತ್ತದಿಂದ ಆತನ ನಾಮ ಉಚ್ಚಾರಣೆ ಮಾಡುತ್ತಾ ಮಾಡುತ್ತಾ ಎಂದರೆ ಜಪ ಮಾಡುತ್ತಾ ಮಾಡುತ್ತಾ ಮುಂದುವರೆದರೆ ಆತನ ದರ್ಶನವಾಗುತ್ತದೆ. *(ವಚನವೇದ ಸಂ.೨, ಪು.೪೮೩)*

**ಸಂಧ್ಯಾ :** ಭಗವನ್ನಾಮ-ಗುಣ-ಕೀರ್ತನಾ-ಸ್ವರೂಪವಾದ ಜಪದಲ್ಲಿ ಸಂಧ್ಯಾವಂದನೆಯೂ ಸೇರುತ್ತದೆ. ರಾತ್ರಿ-ಹಗಲು, ಹಗಲು-ಮಧ್ಯಾಹ್ನ, ಮಧ್ಯಾಹ್ನ-ರಾತ್ರಿ, ಸಂಧಿಸುವ ಕಾಲದಲ್ಲಿ ಮಾಡುವ ಜಪದೊಡಗೂಡಿದ ನಮಸ್ಕಾರವೇ 'ಸಂಧ್ಯಾವಂದನೆ'. ಲೋಕದ ಎಲ್ಲಾ ಚಟುವಟಿಕೆಗಳಿಗೆ ಮೂಲಪ್ರೇರಕ ಶಕ್ತಿ, ಚಾಲಕ ಶಕ್ತಿ, ಅಹಿತ ದುಷ್ಟ ಭಾವ ಚಿಂತನೆ ವಿಚಾರಗಳನ್ನೆಲ್ಲಾ ಭಂಜಿಸುವ ಶಕ್ತಿ ರೂಪನಾದ ಸೂರ್ಯ (ಸವಿತೃ) ದೇವನನ್ನು ಆವಾಹನೆ ಮಾಡು ವುದು, ನಮ್ಮ ಆಹ್ವಾನವನ್ನು ಮನ್ನಿಸಿ ಬಂದ ಆ ದೇವನಿಗೆ ಅರ್ಘ್ಯ ಪಾದ್ಯ ಆಚಮನೀಯ ಮೊದಲಾದ ೧೬ ವಿಧ ಸೇವೆ, ಉಪಚಾರ ವನ್ನು ಸಲ್ಲಿಸಿ ಆ ದೇವನಿಗೆ ಸಂಬಂಧಿಸಿದ 'ಗಾಯತ್ರೀ' ಮಂತ್ರವನ್ನು ಯಥಾಶಕ್ತಿ ಜಪಿಸುವುದು - ಸಂಧ್ಯಾವಂದನೆಯ ಅಂಗಗಳು. ಸಂಧ್ಯಾವಂದನೆಯ ಸಮಯದಲ್ಲಿ ಎಲ್ಲಾ ಕೆಲಸಗಳನ್ನೂ ಬಿಟ್ಟು ಆತನನ್ನು ಕರೆಯಬೇಕು ಎನ್ನುತ್ತಾರೆ ಶ್ರೀರಾಮಕೃಷ್ಣರು *(ವಚನವೇದ ಸಂ.೨,ಪು.೪೬)*. ಭಗವಂತನ ಪಾದ ಪದ್ಮಗಳಲ್ಲಿ ಭಕ್ತಿಯುಂಟಾಗುವ ವರೆಗೆ ಜಪ ಮಾಡುತ್ತಿರಬೇಕು. ಜಪಿಸುತ್ತಾ ಜಪಿಸುತ್ತಾ ಕಣ್ಣಿನಿಂದ ಪ್ರೇಮಾಶ್ರು ಸುರಿಯುವಲ್ಲಿಯವರೆಗೆ, ಶರೀರದಲ್ಲಿ ರೋಮಾಂಚನ ಉಂಟಾಗುವವರೆಗೆ ಸಂಧ್ಯಾವಂದನೆಯ ಅಗತ್ಯ ಇದೆ ಎಂದು ಹೇಳಿ ಶ್ರೀರಾಮಕೃಷ್ಣರು ನರ್ಮದಾ ನದಿಯ ದಡದ ಒಬ್ಬ ಸಾಧುವನ್ನು ಉದಾಹರಿಸುತ್ತಾರೆ. *(ವಚನವೇದ ಸಂ.೧, ಪು.೩೯೬)* ಆ ಸಾಧು ಮನಸ್ಸಿನೊಳಗೇ ಸದಾ ಗಾಯತ್ರೀ ಜಪ ಮಾಡುತ್ತಿದ್ದ. ಆತನ ಶರೀರ ಪುಲಕಗೊಳ್ಳುತ್ತಿತ್ತು. ಆತ ಪ್ರಣವ ಗಾಯತ್ರಿಯನ್ನು ಗಟ್ಟಿಯಾಗಿ ಉಚ್ಚರಿಸಿದಾಗ ಆತನ ಹತ್ತಿರ ಕುಳಿತಿದ್ದವರಿಗೂ ರೋಮಾಂಚನ ಪುಲಕಗಳಾಗಿ ಬಿಡುತ್ತಿತ್ತು.

**ಗಾಯತ್ರೀ :** ಸಂಧ್ಯಾವಂದನೆಯ ಪ್ರಧಾನ ಭಾಗ ಗಾಯತ್ರೀ ಮಂತ್ರ ಜಪ. **'ಓಂ ಭೂರ್ಭುವಃ ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್'** ಎಂಬುದು ಗಾಯತ್ರೀ ಮಂತ್ರ. ನಾದ ಬಿಂದುಗಳೊಡಗೂಡಿದ **ಓಂ** (ಪ್ರಣವ), ಆ ಮೂಲದಿಂದ ವಿಕಾಸಗೊಂಡ ಲೀಲಾಕ್ಷೇತ್ರಗಳಾದ **ಭೂಃ, ಭುವಃ, ಸ್ವಃ** ಎಂಬ ಮೂರು ಲೋಕಗಳು, ಈ ಮೂರೂ ಲೋಕಗಳನ್ನೂ ಒಳ



ಹೊರಗೆ ತುಂಬಿ ನಿಂತಿರುವ ನಿತ್ಯ ನಿರಂಜನ ನಿರ್ವಿಕಲ್ಪ ಪರಮ ಶ್ರೇಷ್ಠ ಪರಂಜ್ಯೋತಿ, ಸಕಲರ ಅಜ್ಞಾನ ಅಂಧಕಾರವನ್ನು ಭೇದಿಸುವ ಜ್ಞಾನ ಸ್ವರೂಪವನ್ನು ಧ್ಯಾನಿಸೋಣ ಎಂಬ ಅರ್ಥವುಳ್ಳ ಈ ಮಂತ್ರದ ಜಪ ಪರಂಜ್ಯೋತಿ ಸ್ವರೂಪನಾದ ಭಗವಂತನ ಧ್ಯಾನದಲ್ಲಿ ಪರ್ಯವಸಾನ ವಾಗುತ್ತದೆ. ಆದುದರಿಂದಲೇ ಶ್ರೀರಾಮಕೃಷ್ಣರು, ''ಯಾರಿಗೆ ಭಗ ವಂತನ ಸಾಕ್ಷಾತ್ಕಾರ ದೊರೆತಿದೆಯೋ ಅವರಿಗೆ ಸಂಧ್ಯಾವಂದನೆ ಕರ್ಮ ಗಳು ಇರುವುದಿಲ್ಲ. ಆತನ ವಿಷಯದಲ್ಲಿ ಸಂಧ್ಯಾವಂದನೆ ಗಾಯಿತ್ರಿ ಯಲ್ಲಿ ಲೀನವಾಗುತ್ತದೆ. ಅದು ಹಾಗಾದಾಗ ಆತ ಸಂಧ್ಯಾವಂದನೆಯ ಪೂರ್ವ ಉತ್ತರ ಅಂಗಗಳನ್ನೆಲ್ಲಾ ಬಿಟ್ಟು ಕೇವಲ ಗಾಯಿತ್ರೀ ಮಂತ್ರ ವನ್ನು ಮಾತ್ರ ಜಪಿಸಿದರೇ ಬೇಕಾದಷ್ಟು. ಹೀಗೆ ಮುಂದುವರೆಯುತ್ತಾ ಸಾಗಿದಾಗ ಗಾಯತ್ರೀ ಓಂಕಾರದಲ್ಲಿ ಲಯವಾಗುತ್ತದೆ. ಅದಾದ ನಂತರ ಗಾಯತ್ರಿಯನ್ನು ಜಪಿಸಬೇಕಾದ ಅವಶ್ಯಕತೆಯೇ ಇರುವು ದಿಲ್ಲ. ಆಗ ಕೇವಲ ಪ್ರಣವ ಮಂತ್ರ, ಓಂಕಾರ, ಜಪಿಸುತ್ತಿದ್ದರೆ ಸಾಕು'' ಎನ್ನುತ್ತಾರೆ. *(ವಚನವೇದ ಸಂ.೧, ಪು.೩೩೩)*

**ಓಂಕಾರ :** ''ಓಂಕಾರವೇ ಶಬ್ದಬ್ರಹ್ಮ. ಋಷಿ ಮುನಿಗಳು ಈ ಶಬ್ದಬ್ರಹ್ಮದ ಸಾಕ್ಷಾತ್ಕಾರಕ್ಕಾಗಿ ತಪಸ್ಸು ಮಾಡುತ್ತಿದ್ದರು. ಸಿದ್ಧಿ ದೊರೆ ತಾಗ ಆ ಓಂಕಾರ ನಾದ ನಾಭಿಯಿಂದ ತಾನಾಗೇ ಮೇಲೇಳುವುದು. ಈ ಅನಾಹತ ಧ್ವನಿಯನ್ನು ಹಿಡಿದು ಮುಂದೆ ಮುಂದೆ ಸಾಗಿದರೆ ಅದರ ಪ್ರತಿಪಾದ್ಯನಾದ ಬ್ರಹ್ಮನನ್ನು ಮುಟ್ಟಬಹುದು. ಇದಕ್ಕೆ 'ಪರಮಪದ' ಎಂದು ಹೆಸರು. ಈ ಅನಾಹತ ನಾದ ಯೋಗಿಗಳಲ್ಲಿ ತಾನಾಗೇ ಸರ್ವದಾ ಆಗುತ್ತಿರುತ್ತದೆ.'' *(ವಚನವೇದ ಸಂ.೧, ಪು.೪೯೮)* ಇದೇ ಅ ಉ ಮ ಗಳ ಸಂಯೋಗದಿಂದಾದ **ಓಂಕಾರ** (ಪ್ರಣವ). ಇದು ಸೃಷ್ಟಿ ಸ್ಥಿತಿ ಲಯಗಳನ್ನು ಪ್ರತಿನಿಧಿಸುತ್ತದೆ. ಇದನ್ನು ಶ್ರೀರಾಮಕೃಷ್ಣರು ಘಂಟಾನಾದದ 'ಟಂ' ಶಬ್ದಕ್ಕೆ ಹೋಲಿಸು ತ್ತಾರೆ. ಅದು ಟ ಅ ಅಂ ಎಂದು ಶಬ್ದ ಮಾಡುತ್ತದೆ. ಇದು ಲೀಲೆ (ಭಗವಂತನ ಕ್ರೀಡಾ ಕ್ಷೇತ್ರಗಳಾದ ನಾನಾ ಲೋಕಗಳು, ನಾನಾ ಜೀವಗಳು) ಯಿಂದ ನಿತ್ಯದಲ್ಲಿ ಲಯವಾಗುತ್ತದೆ. ಸ್ಥೂಲ ಸೂಕ್ಷ್ಮ ಕಾರಣಗಳಿಂದ ಮಹಾಕಾರಣದಲ್ಲಿ ಲಯವಾಗುತ್ತದೆ. ಜಾಗ್ರತ್ ಸ್ವಪ್ನ ಸುಷುಪ್ತಿ ಸ್ಥಿತಿಗಳಿಂದ ತುರೀಯದಲ್ಲಿ ಲಯವಾಗುವುದನ್ನು ಸೂಚಿಸುತ್ತದೆ. ಮತ್ತೆ ಘಂಟೆ ಶಬ್ದ ಆಯಿತು ಅಂದರೆ ಅದು ಮಹಾ ಸಮುದ್ರಕ್ಕೆ ಭಾರವಾದ ಒಂದು ವಸ್ತುವನ್ನು ಎತ್ತಿ ಹಾಕಿದಂತೆ. ಅಲೆಗಳಲ್ಲಿ ಏರಿಳಿತಗಳು ಆರಂಭವಾಗುತ್ತವೆ. ನಿತ್ಯದಿಂದ ಲೀಲೆಯ ಆರಂಭ, ಮಹಾಕಾರಣದಿಂದ ಸ್ಥೂಲ ಸೂಕ್ಷ್ಮ ಕಾರಣಗಳ ಆರಂಭ, ತುರೀಯದಿಂದ ಜಾಗ್ರತ್ ಸ್ವಪ್ನ ಸುಷುಪ್ತಿ ಮೊದಲಾದ ಅವಸ್ಥೆಗಳ ಆರಂಭ. ಮಹಾಸಮುದ್ರದ ಅಲೆಗಳು ಮಹಾಸಮುದ್ರದಲ್ಲೇ ಲಯವಾಗುತ್ತವೆ. ಹೀಗೆ ನಿತ್ಯದಿಂದ ಲೀಲೆ, ಲೀಲೆಯಿಂದ ನಿತ್ಯ ವಿಕಾಸ ಲಯಗಳು ನಿರಂತರ ನಡೆಯುತ್ತಿರುತ್ತವೆ. ಈ ಕಾರಣದಿಂದಲೇ ಶ್ರೀರಾಮಕೃಷ್ಣರು ಇದನ್ನು ಘಂಟೆಯ ನಾದಕ್ಕೆ ಹೋಲಿಸಿದ್ದಾರೆ. ಘಂಟೆ ನಾದ ಮಾಡಿ ನಿಲ್ಲಿಸಿದ ಎಷ್ಟೋ ಹೊತ್ತಿನವರೆಗೂ ಓಂಕಾರ ನಾದ ತರಂಗಗಳು ಸಾಗುತ್ತಲೇ ಇರುವುದು ಅನುಭವಕ್ಕೆ ಬರುತ್ತದೆ. *(ವಚನವೇದ ಸಂ.೨, ಪು.೧೫೪)*.

ಈ ಓಂಕಾರದಲ್ಲಿ ಗಾಯತ್ರಿ ಲಯವಾದಾಗ ಓಂ ಮಾತ್ರ ಜಪಿಸುತ್ತಿದ್ದರೆ ಸಾಕು, ಓಂಕಾರವನ್ನೂ ಒಮ್ಮೆ ಜಪಿಸಿದ ಮಾತ್ರದಿಂದ ಸಮಾಧಿ ಉಂಟಾದರೆ ಅದು ಪೂರ್ಣಾಹಣ್ಣು. *(ವಚನವೇದ ಸಂ.೨, ಪು.೪೩)*. ಅಲ್ಲಿಗೆ ಜೀವನ ಸಾರ್ಥಕ. ಆಗ,

**ಊರ್ಧ್ವಪೂರ್ಣಮಧಃಪೂರ್ಣಂ ಮಧ್ಯಪೂರ್ಣಂ ಯದಾತ್ಮಕಮ್।**
**ಸರ್ವಂ ಪೂರ್ಣಂ ಸ ಆತ್ಮೇತಿ ಸಮಾಧಿಸ್ಥಸ್ಯ ಲಕ್ಷಣಮ್ ॥**

ಮೇಲೆ ಕೆಳಗೆ ಅಲ್ಲಿ ಇಲ್ಲಿ ಮಧ್ಯದಲ್ಲಿ ಎಲ್ಲೆಲ್ಲೂ ಪರಿಪೂರ್ಣತಾ ತತ್ತ್ವದ ಅರಿವೇ ತುಂಬಿರುತ್ತದೆ. ಎಲ್ಲವೂ ಮನುಷ್ಯ ಜಡ ಜೀವನ ಜಗತ್ತು ಚಿನ್ಮಯ. ಆಗ ಎಲ್ಲಾ ಕರ್ಮ ತ್ಯಾಗವಾಗಿ ಬಿಡುತ್ತದೆ. ವೇದ ವೇದಾಂತ ಪುರಾಣ ತಂತ್ರಗಳೆಲ್ಲಾ ಕೆಳಗೆ ಇದ್ದುಕೊಂಡಿರುತ್ತವೆ. ಓಂಕಾರವನ್ನೂ ಉಚ್ಚರಿಸಲು ಆಗುವುದಿಲ್ಲ *(ವಚನವೇದ ಸಂ.೧, ಪು.೬೦೫)*. ಸಮಾಧಿಯಲ್ಲಿ ಆತನೊಡನೆ ಐಕ್ಯವಾದ ನಂತರ, ಸಹ ಸ್ರಾರ ಸೇರಿದ ಕುಂಡಲಿನಿ ಸಚ್ಚಿದಾನಂದ ಶಿವನಲ್ಲಿ ಲೀನವಾದ ನಂತರ, ಜ್ಞಾನ ವಿಚಾರ ಎಲ್ಲಾ ನಿಂತು ಹೋಗಿ ಬಿಡುತ್ತದೆ. ಮನಸ್ಸು ಈ ಸಪ್ತಮ ಭೂಮಿಕೆ ಮುಟ್ಟಿದ ಮೇಲೆ ಏನಾಗುತ್ತದೆ ಎಂಬುದನ್ನು ಬಾಯಿಂದ ವರ್ಣಿಸಲಾಗುವುದಿಲ್ಲ ***(ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ***-*ಮಾತು ಮನ ಮುಟ್ಟದೇ ಹಿಂತಿರುಗಿ ಬರುವುವು)* ಆಗ ಎಲ್ಲಾ ಶಾಂತ. ವ್ಯಕ್ತಿ ಮೌನವಾಗಿ ಬಿಡುತ್ತಾನೆ. ಜೀವ ಜಗತ್ತು ನಾನು ನೀನು ಈ ರೀತಿಯ ನಾನಾ ಜ್ಞಾನ ಇರುವವರೆಗೆ ಮಾತ್ರ ವಿಚಾರ; ಸಮಾಧಿಯಲ್ಲಿ ಪರವಸ್ತುವಿನೊಡನೆ ನಿತ್ಯದೊಡನೆ, ಲೀನವಾದ ಮೇಲೆ ಯಾವ ವಿಚಾರವೂ ಇಲ್ಲ. ಎಲ್ಲಾ ಜ್ಞಾನ, ಜಪ, ಪೂಜೆ, ತಪ ಮೊದಲಾದ ಪ್ರಾಪಂಚಿಕ ಎಲ್ಲಾ ಕರ್ಮಗಳೂ ಆತನನ್ನು ಬಿಟ್ಟುಹೋಗುವುವು. ಕೊನೆಗೆ ಭಗವಂತನ ನಾಮಗುಣ ಕೀರ್ತನೆಯೂ ಸಾಧ್ಯವಿಲ್ಲವಾಗಿ ಹೋಗುತ್ತದೆ. *(ವಚನವೇದ ಸಂ.೧, ಪು.೯೪)*.

**ಉಪಸಂಹಾರ :** ಹಗಲು-ರಾತ್ರಿ, ಚೈತ್ರ-ಫಾಲ್ಗುಣ, ಮೀನ-ಮೇಷ, ವಸಂತ- ಶಿಶಿರ ಹೀಗೇ ಗಮನಿಸುತ್ತಾ ಸಾಗಿದರೆ ಎಲ್ಲವೂ ನಿರಂತರ ವೃತ್ತಮಯ ವಾಗಿ ಚಲಿಸುತ್ತಿರುವುದು ಪ್ರತಿಯೊಬ್ಬ ಜೀವಿಯ ಅನುಭವದ ವಿಷಯ. ಆರಂಭವಾದ ನೆಲೆಯನ್ನು ಗೆರೆ ಸೇರಿದಾಗ ಮತ್ತು ಕೇಂದ್ರದ ಸಂಪರ್ಕದೊಳಗೆ ಇದ್ದಾಗ ತಾನೇ ವೃತ್ತವಾಗುವುದು. ಅಂತೆಯೇ ಅನಂತವಾಗಿ ವಿಸ್ತಾರಗೊಂಡಿರುವ ಅನೇಕ ಕೋಟಿ ಜಡ- ಚೇತನಗಳೊಡಗೂಡಿದ ಬ್ರಹ್ಮಾಂಡ ವಿಶ್ವಾಂಡಗಳೂ ತಮ್ಮ ಮೂಲ ದಲ್ಲಿ ಪರತತ್ತ್ವದಲ್ಲಿ ಲಯವಾಗುವುದು ಆ ಪರತತ್ತ್ವದ ಸಂಪರ್ಕ ವನ್ನು ನಿರಂತರ ಹೊಂದಿರುವುದು ವಿಶ್ವದ ಸಹಜ ಗತಿ. ಆದುದರಿಂದಲೇ ವಿಶ್ವದಲ್ಲಿರುವ ಪತಿ ಪತ್ನಿ ಪುತ್ರ ಧನ ಕನಕ ವಸ್ತು ವಾಹನಾದಿಗಳೆಲ್ಲವೂ ಆ ಮೂಲ (ಆತ್ಮಕಾಮ) ಪ್ರಿಯಕರವಾದಾಗ ಮಾತ್ರವೇ ಪ್ರಿಯ ಮತ್ತು ಪೂರ್ಣವಾಗುತ್ತವೆ. *(ಬೃಹದಾರಣ್ಯಕ ಉಪನಿಷತ್ತು, ೨.೪.೫)* ಈ ರೀತಿಯ ವಿಸ್ತಾರದಿಂದ (ಲೀಲೆಯಿಂದ) ಮೂಲ, ಮೂಲದಿಂದ ಲೀಲೆಯ ಗತಿಯ ಅನು ಭವ ಸಂಧ್ಯಾ-ಗಾಯತ್ರೀ ಓಂಕಾರಗಳ ಅನುಷ್ಠಾನದಿಂದ ಹೇಗೆ ವ್ಯಕ್ತಿ ಪಡೆಯುತ್ತಾನೆ? ಹಾಗೆ ಆ ಅನುಭವ ಪಡೆದವನ ನಡೆ ಶಾಂತ ಮೌನವಾಗಿದ್ದು ಅವನಿರುವ ವಾತಾವರಣವನ್ನೂ ಅದು ಹೇಗೆ ಪಾವನಗೊಳಿಸುತ್ತದೆ ಪುಲಕಗೊಳಿಸುತ್ತದೆ ಎಂದು ಶ್ರೀರಾಮಕೃಷ್ಣರು ತಮ್ಮ ಅನುಭವಗಳ ಮೂಲಕ ಇಲ್ಲಿ ತೆರೆದಿಟ್ಟಿದ್ದಾರೆ. ಈ ಅನು ಭವವನ್ನು ಪಡೆದು ಜೀವಿ ತಾನು ಪಡೆದಿರುವ ಈ ಶರೀರದ, ಮಾನವ ಜನ್ಮದ, ಸಾರ್ಥಕತೆಯನ್ನು ಹೊಂದಬೇಕೆಂದು ಬೋಧಿಸಿದ್ದಾರೆ. ❖

# ಶ್ರೀರಾಮಕೃಷ್ಣರ ಜೀವನಲೀಲೆಯಲ್ಲಿ 'ನಾಮ-ನಾಮಿ' ತತ್ತ್ವವಿಚಾರ

ಪ್ರೊ .ಬಿ.ಕೃಷ್ಣ



ಶ್ರೀರಾಮಕೃಷ್ಣರು ತಮ್ಮ ಉಪದೇಶಗಳಲ್ಲಿ ಪದೇ ಪದೇ ಹೇಳುತ್ತಿದ್ದ ಮಾತು 'ನಾಮ-ನಾಮಿ ಅಭೇದ' ಎಂಬುದು, ಆಧ್ಯಾತ್ಮಿಕ ಸಾಧನೆಯಲ್ಲಿ ನಾಮಜಪಕ್ಕೆ ಅವರು ನೀಡುತ್ತಿದ್ದ ಮಹತ್ವವನ್ನು ಸೂಚಿಸುತ್ತದೆ. ಅವರ ಜೀವನ, ತತ್ತ್ವಗಳ ಬೆಳಕಿನಲ್ಲಿ ಅವರ ಮಾತನ್ನು ವಿಶ್ಲೇಷಿಸಿರುವ ಲೇಖಕರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ರಾಮಕೃಷ್ಣ ಆಶ್ರಮದೊಂದಿಗೆ ನಿಕಟ ಸಂಪರ್ಕ ಹೊಂದಿರುವ ಅವರು ಅನೇಕ ಕೃತಿಗಳನ್ನೂ ರಚಿಸಿದ್ದಾರೆ.

**ಅ**ನಾದಿ-ಅನಂತ ಪರಬ್ರಹ್ಮತತ್ತ್ವವು ಅವ್ಯಕ್ತ - ಸರ್ವಜ್ಞ - ಸರ್ವಶಕ್ತ -ಸರ್ವಾಂತರ್ಯಾಮಿ. ಈ ಅವ್ಯಕ್ತ ಪರಮಸತ್ಯದಿಂದ ಪಂಚ ಭೂತಗಳಾದ ಮಣ್ಣು-ನೀರು-ಗಾಳಿ-ಬೆಳಕು-ಆಕಾಶಗಳು ವ್ಯಕ್ತ. ಈ ಐದು ಮೂಲಭೂತ ವಸ್ತುಗಳ ಮಿಶ್ರಣದಿಂದ ಜೀವ- ಜಡ ರೂಪಗಳು ವ್ಯಕ್ತ. ಮೇಲ್ನೋಟಕ್ಕೆ ಜೀವ-ಜಡಗಳು ಬೇರೆ ಬೇರೆಯಾಗಿ ಕಂಡರೂ, ಮೂಲತಃ ಇವೆರಡೂ ಪಂಚಭೂತಗಳಿಂದಲೇ ಆಗಿವೆ. ಜೀವರೂಪಗಳು ಅನೇಕ. ಇವುಗಳಲ್ಲಿ ಗಂಡು-ಹೆಣ್ಣುಗಳೆಂಬ ಲಿಂಗಭೇದ ಹಾಗೂ ಒಳ್ಳೆಯದು-ಕೆಟ್ಟದು ಎಂಬ ಗುಣಭೇದ. ಜೀವಿಗಳಲ್ಲಿ ಮಾನವಜೀವಿ ಗಮನಾರ್ಹ. ಮಾನವಜೀವಿ ಇರುವುದರಿಂದಾಗಿ - ಉಳಿದ ಎಲ್ಲಾ ಜೀವ-ಜಡಗಳಿಗೆ ಅರ್ಥ ಮತ್ತು ಮಹತ್ವ. ವೇದಗಳು 'ಜೀವ-ಜಗತ್ತು- ದೇವರು' ಈ ಮೂರನ್ನು ವಿವಿಧವಾಗಿ ವಿವರಿಸುತ್ತವೆ. ಮಾವನ ಜೀವಿ ಇಲ್ಲವಾದರೆ ಜಗತ್ತು ಮತ್ತು ದೇವರು ಇಲ್ಲ, ಜಗತ್ತು ಇಲ್ಲವಾದರೆ, ಜೀವ ಮತ್ತು ದೇವರು ಇಲ್ಲ. ದೇವರು ಇಲ್ಲವಾದರೆ, ಜೀವ ಮತ್ತು ಜಗತ್ತು ಇಲ್ಲ. ಹೀಗಾಗಿ, 'ಜೀವ-ಜಗತ್ತು-ದೇವರು'ಗಳಿಂದ ಆವೃತವಾಗಿರುವ ಇಡೀ ಬ್ರಹ್ಮಾಂಡದ ಪರಿಚಯವು ಮಾವನಜೀವಿಯ ಇರುವಿಕೆಯಿಂದ ಆಗುತ್ತಿದೆ.

ರೂಪವುಳ್ಳ ಎಲ್ಲ ಜೀವ-ಜಡಗಳೂ 'ನಾಮ' ಎನಿಸಿಕೊಳ್ಳುತ್ತವೆ. ಈ ನಾಮಗಳ ಇರುವಿಕೆಗೆ ಆಧಾರವಾಗಿರುವ ಸತ್ಯವು 'ನಾಮಿ' ಎನಿಸಿಕೊಳ್ಳುತ್ತದೆ. ಉದಾಹರಣೆಗೆ : ವಿವಿಧ ಆಕಾರದ ಆಭರಣಗಳು 'ನಾಮ'ವಾದರೆ, ಇವುಗಳಿಗೆ ಆಧಾರವಾದ ಚಿನ್ನವು ನಾಮಿ. ವಿವಿಧ ಆಕಾರದ ಮಡಕೆ-ಕುಡಿಕೆಗಳು ನಾಮ ವಾದರೆ, ಇವುಗಳಿಗೆ ಆಧಾರ ವಾದ ಮಣ್ಣು 'ನಾಮಿ'.

ವೈವಿಧ್ಯಮಯವಾದ ಮಾನವ ರೂಪಗಳು 'ನಾಮ'. ಇವುಗಳಿಗೆ ಆಧಾರವಾಗಿ ಇವುಗಳ ಒಳಗೇ ಅಂತಸ್ತವಾಗಿ ಇರುವ ಅಂತರಾತ್ಮ ಸತ್ಯವು 'ನಾಮಿ'. ಈ ಹಿನ್ನೆಲೆಯಲ್ಲಿ , 'ನಾಮ-ನಾಮಿ'ಗಳನ್ನು ಮಾನವರೂಪದ ನಾಮ ಮತ್ತು ಈ ನಾಮದೊಳಗೆ ಇರುವ ಜೀವ ಅಥವ ಜೀವಾತ್ಮ ಅಥವಾ ದೇವರನ್ನು 'ನಾಮಿ' ಎನ್ನುತ್ತೇವೆ. ಜೀವಿರೂಪದ 'ನಾಮ'ಗಳ ಒಳಗಿನ 'ನಾಮಿ'ಯೇ ಜೀವಾತ್ಮ. ಅನಾದಿ-ಅನಂತವಾದ ಬ್ರಹ್ಮಾಂಡ ರೂಪದ 'ನಾಮ'ದ ಒಳಗಿನ 'ನಾಮಿ'ಯೇ ಪರಮಾತ್ಮ.

**ಉಪನಿಷತ್ತುಗಳ ಪ್ರಮುಖ ಮಹಾವಾಕ್ಯಗಳು ನಾಲ್ಕು:**

'ಅಹಂ ಬ್ರಹ್ಮಾಸ್ಮಿ'
'ಅಯಂ ಆತ್ಮಾ ಬ್ರಹ್ಮ'
'ತತ್ ತ್ವಂ ಅಸಿ'
'ಸರ್ವಂ ಖಲ್ವಿದಂ ಬ್ರಹ್ಮ'

**ಅಹಂ ಬ್ರಹ್ಮಾಸ್ಮಿ** ಎಂಬುದರಲ್ಲಿ, **ಅಹಂ** ಎಂಬುದು ಮಾನವರೂಪದ ನಾಮದೊಳಗಿನ ಅಂತರಾತ್ಮ. ಈ ಅಂತರಾತ್ಮವೆ ನಾಮಿ. ಮಾನವ ಎಂಬ ನಾಮವು, ತನ್ನೊಳಗಿನ ಜೀವಾತ್ಮರೂಪದ ನಾಮಿ ಮತ್ತು ಬ್ರಹ್ಮಾಂಡವೆಂಬ ನಾಮದೊಳಗಿನ ಪರಮಾತ್ಮರೂಪದ ನಾಮಿಯು ಒಂದೇ ಎಂಬುದನ್ನು **ಅಹಂ ಬ್ರಹ್ಮಾಸ್ಮಿ** ಎನ್ನುವುದರ ಮೂಲಕ ಜಗತ್ತಿಗೆ ತಿಳಿಸುತ್ತಿದೆ.

**ಅಯಂ ಆತ್ಮಾ ಬ್ರಹ್ಮ** ಎಂಬುದರಲ್ಲಿ, ಮಾನವರೂಪದ ನಾಮದೊಳಗಿರುವ ಅಂತರಾತ್ಮ ರೂಪದ ನಾಮಿಯು **ಅಯಂ ಆತ್ಮಾ** ಎನ್ನುತ್ತಿದೆ. ಇದು ಮುಂದುವರಿದು, ಹೀಗೆ ಮಾನವನಾಮ ದೊಳಗೆ ನಾಮಿಯಾಗಿರುವ ಆತ್ಮವೇ ಹೊರಗೆ ಅನಾದಿ-ಅನಂತವಾದ ಬ್ರಹ್ಮಾಂಡದೊಳಗಿನ ನಾಮಿಯಾಗಿರುವ **ಬ್ರಹ್ಮ** ಅಥವ ಪರಬ್ರಹ್ಮ (ಅಯಂ ಆತ್ಮಾ ಬ್ರಹ್ಮ) ಎನ್ನುತ್ತಿದೆ.

**ತತ್ ತ್ವಂ ಅಸಿ** ಎಂಬುದರಲ್ಲಿ, **ತ್ವಂ** ಎಂಬುದು ಮಾನವರೂಪದ ನಾಮದೊಳಗಿನ ನಾಮಿ, ಇದೇ ಜೀವಾತ್ಮ. **ತತ್** ಎಂಬುದು ಬ್ರಹ್ಮಾಂಡರೂಪದ ನಾಮದೊಳಗಿನ ನಾಮಿ, ಇದೇ ಪರಮಾತ್ಮ. ಇಲ್ಲಿ, ಜೀವಾತ್ಮವೂ ನಾಮಿಯೆ, ಪರಮಾತ್ಮವೂ ನಾಮಿಯೆ. ಹೀಗಾಗಿ, ಮಾನವರೂಪದ ನಾಮದೊಳಗಿನ ನಾಮಿಯಾದ ತ್ವಂ ಮತ್ತು ಬ್ರಹ್ಮಾಂಡರೂಪದ ನಾಮದೊಳಗಿನ ನಾಮಿಯಾದ ತತ್ ಎರಡೂ ಒಂದೇ. ಈ ಅರ್ಥದಲ್ಲಿ **ತತ್ ತ್ವಂ ಅಸಿ**ಯ ದರ್ಶನವಾಗುತ್ತಿದೆ.



**ಸರ್ವಂ ಖಲ್ವಿದಂ ಬ್ರಹ್ಮ** ಎಂಬುದರಲ್ಲಿ, ಅನಾದಿ-ಅನಂತವಾದ ಬ್ರಹ್ಮಾಂಡದಲ್ಲಿರುವ, ಅನಂತ ನಾಮರೂಪಗಳಲ್ಲಿರುವ, ಜೀವ-ಜಡಗಳೆಲ್ಲವನ್ನೂ, ಇವುಗಳ ಒಳಗೆ-ಹೊರಗೆ, ಇವುಗಳ ಅಂತರಾತ್ಮ ಚೈತನ್ಯವಾಗಿರುವ '**ನಾಮಿ**'ರೂಪದ ಬ್ರಹ್ಮ ಅಥವ ಪರಬ್ರಹ್ಮವೇ ಒಳಗೊಂಡಿದೆ. ಹೀಗಾಗಿ, ''**ಎಲ್ಲವನ್ನೂ ಬ್ರಹ್ಮವೇ ಆವರಿಸಿದೆ - ಸರ್ವಂ ಖಲ್ವಿದಂ ಬ್ರಹ್ಮ**'' ಎನ್ನಲಾಗಿದೆ.

**'ಬ್ರಹ್ಮಸತ್ಯಂ ಜಗನ್ಮಿಥ್ಯಾ, ಜೀವೋ ಬ್ರಹ್ಮೈವ ನಾಪರಃ'** ಎಂಬುದು ಆದಿ ಶಂಕರಾಚಾರ್ಯರ ಜಾಗತಿಕ ಸತ್ಯವಚನ. ಇದರಲ್ಲಿ, 'ಬ್ರಹ್ಮ'ವು ಸತ್ಯ, ಅಂದರೆ, ಸದಾ ಇದ್ದೇ ಇರುವುದು, ಎಂದೂ ಬದಲಾಗದೆ ಇರುವುದು, ಎಲ್ಲಕ್ಕೂ ಅದ್ವೈತವಾಗಿ ಆಧಾರವಾಗಿರುವುದು. ಜಗತ್ತು ಎಂಬುದು ಜೀವ-ಜಡರೂಪದ **ನಾಮ**. ಈ ಎಲ್ಲ ಜೀವ-ಜಡರೂಪಗಳು ನೀರಿನ ಗುಳ್ಳೆಯಂತೆ ಹುಟ್ಟಿಕೊಳ್ಳುತ್ತವೆ-ಕೆಲವು ಕಾಲ ಇರುತ್ತವೆ-ನಂತರ ಇಲ್ಲವಾಗುತ್ತವೆ. ಆದರೆ, ಇಲ್ಲಿ ಗಮನಿಸ ಬೇಕಾದದ್ದು, ಈ ಎಲ್ಲ ನೀರುಗುಳ್ಳೆಗಳು ಕಾಣಿಸಿಕೊಳ್ಳುವುದು ನೀರಿ ನಿಂದಲೆ, ಇರುವುದೂ ನೀರಿನಲ್ಲಿಯೆ, ಇಲ್ಲವಾಗುವುದು ನೀರಿ ನಲ್ಲಿಯೆ. ಈ '**ಸೃಷ್ಟಿ-ಸ್ಥಿತಿ-ಲಯ**'ವೆಂಬ ಮೂರೂ ರೂಪಗಳಿಗೆ ಸದಾ ಅದ್ವೈತಮಯ ಆಧಾರವಾಗಿರುವುದು ನೀರು. ಹೀಗಾಗಿ, ನೀರು ಸತ್ಯ, ಗುಳ್ಳೆಗಳು ಮಿಥ್ಯಾ. ಮಿಥ್ಯವು ಸತ್ಯವನ್ನೇ ಅವಲಂಬಿಸಿದೆ. ಹಾಗಾದರೆ ಅಪ್ರಿಯವಾದ ಮಿಥ್ಯಕ್ಕೆ ಪ್ರಿಯವಾದ ಸತ್ಯವು ಆಧಾರವಾಗಿರುವುದೇಕೆ ಎಂಬುದಕ್ಕೆ ಉತ್ತರ ''ಅದು ದೈವಲೀಲೆ.'' ಆದ್ದ ರಿಂದ ಅದು ಅನಿರ್ವಚನೀಯ ಎನ್ನಲಾಗುತ್ತಿದೆ. ನೀರಿನ ಗುಳ್ಳೆ ರೂಪದ ಜಗತ್ತೆಂಬ '**ನಾಮ**'ಕ್ಕೆ, ನೀರೆಂಬ ಸತ್ಯಬ್ರಹ್ಮ '**ನಾಮಿ**'ಯು ಆಧಾರ. ಈ ಅರ್ಥದ ಹಿನ್ನೆಲೆಯಲ್ಲಿಯೇ **ಜೀವೋ ಬ್ರಹ್ಮೈವ ನಾಪರಃ** ಎಂಬ ಸತ್ಯವಚನವಿದೆ. ತೋರಿಕೆಯ, ಕೆಲವು ಕಾಲವಿದ್ದು ಕಣ್ಮರೆಯಾಗುವ, ಮಾನವರೂಪದ '**ನಾಮ**'ಗಳೊಳಗಿನ ಜೀವ ಅಥವಾ ಜೀವಾತ್ಮವೆಂಬ '**ನಾಮಿ**'ಯೇ ಬ್ರಹ್ಮ ಅಥವ ಪರಬ್ರಹ್ಮವಲ್ಲದೆ ಬೇರಲ್ಲ ಎಂಬುದಾಗಿದೆ. ಮಾನವ-ಮಾನವ ಸಂಬಂಧಗಳು ರಾಗದಿಂದ ಹತ್ತಿರವಾಗುತ್ತವೆ, ಇದಕ್ಕೆ ಒಳ್ಳೆಯ ಗುಣಗಳೇ ಕಾರಣ; ದ್ವೇಷದಿಂದ ದೂರವಾಗುತ್ತವೆ, ಇದಕ್ಕೆ ಕೆಟ್ಟ ಗುಣಗಳೇ ಕಾರಣ. ಈ ಒಳ್ಳೆಯ ಮತ್ತು ಕೆಟ್ಟಗುಣಗಳು ಸಾಪೇಕ್ಷ ಮತ್ತು ನಶ್ವರ, ಈ ಗುಣಾವಗುಣಗಳು ಮಿಥ್ಯೆಯಾದ ಮಾನವ ರೂಪದ ಹುಟ್ಟಿನೊಡನೆ ಕಾಣಿಸಿಕೊಳ್ಳುತ್ತವೆ, ಸಾವಿನೊಡನೆ ಇಲ್ಲವಾಗುತ್ತವೆ. ಆದ್ದರಿಂದ, ಈ ಗುಣಾವಗುಣಗಳು ಮಿಥ್ಯೆ (ಜಗನ್ಮಿಥ್ಯಾ). ಆದರೆ, ಈ ಮಿಥ್ಯಾರೂಪದ ಮಾನವರೊಳಗಿನ ಜೀವರೂಪದ '**ನಾಮಿ**'ಯು ಸತ್ಯವಾದ ಬ್ರಹ್ಮ ವಲ್ಲದೆ ಬೇರಲ್ಲ. ಈ ಹಿನ್ನೆಲೆಯಲ್ಲಿ, ಸಚ್ಚಿದಾನಂದವನ್ನು ಬಯಸುವವರು, ಸದಾ ಅಂತರ್ಮುಖಿಗಳಾಗಿ, ಎಲ್ಲರೊಳಗಿನ ಅಂತರಾತ್ಮ ವಾದ '**ಜೀವ ರೂಪದ ನಾಮಿ**'ಯನ್ನು ಮಾತ್ರ ನೋಡುತ್ತಿರಬೇಕು, ಅದರ ಸಂಗದಲ್ಲೇ (ಸತ್ಸಂಗ) ಕಾಯಾ-ವಾಚಾ-ಮನಸಾ ಇರಬೇಕು, ಬಹಿರ್ಮುಖಿಗಳಾಗಿ ಮಾನವರ ಗುಣಾವಗುಣಗಳನ್ನು ನೋಡುತ್ತಾ ಸಂಕಟಗಳಲ್ಲಿ ಸಿಲುಕಿ ದುಃಖಿಗಳಾಗಬಾರದು, ಎಂಬುದು '**ಬ್ರಹ್ಮ ಸತ್ಯಂ ಜಗನ್ಮಿಥ್ಯಾ, ಜೀವೋ ಬ್ರಹ್ಮೈವ ನಾಪರಃ**' ಎಂಬ ಸತ್ಯವಚನದ ದಿವ್ಯ ಸಂದೇಶವಾಗಿದೆ.

**ಶ್ರೀರಾಮಕೃಷ್ಣರ ಜೀವನಧಾರ 'ನಾಮ'-'ನಾಮಿ'ಯ ತತ್ತ್ವ :** ಈ ಹಿನ್ನಲೆಯಲ್ಲಿಯೆ ಶ್ರೀಗುರುದೇವರು, ಹಿಂದೂ-ಕ್ರೈಸ್ತ-ಇಸ್ಲಾಂ ಮತಧರ್ಮಗಳ ರೀತಿ-ನೀತಿಗಳ ಪ್ರಕಾರ ಸಾಧನೆ ಮಾಡಿ, ಈ ಮೂರೂ ಮತಧರ್ಮಗಳ ಅಂತರಾತ್ಮವಾದ 'ನಾಮಿ'ಯನ್ನು ಅಭೇದವಾಗಿ-ಅಖಂಡವಾಗಿ-ಅನಂತವಾಗಿ-ಅನಾದಿಯಾಗಿ-ಸರ್ವಾಂತರ್ಯಾಮಿಯಾಗಿ-ಸಚ್ಚಿದಾನಂದವಾಗಿ ಸಾಕ್ಷಾತ್ಕಾರ ಮಾಡಿಕೊಂಡರು.

ಗುರುದೇವ ಶ್ರೀರಾಮಕೃಷ್ಣರೂ ಒಬ್ಬ ಮಾನವಜೀವಿಯಾಗಿ ಅವತರಿಸಿದರು. ರಾಮಕೃಷ್ಣವೆಂಬ '**ನಾಮ**'ದೊಳಗಿನ '**ನಾಮಿ**'ಯೇ ಜಗನ್ಮಾತೆ-ಭವತಾರಿಣಿ-ಆದಿಶಕ್ತಿ-ಪರಾಶಕ್ತಿ-ಪರಬ್ರಹ್ಮಿಣಿಯಾದ ಕಾಳಿ, ದಕ್ಷಿಣೇಶ್ವರದ ಕಾಳಿ. ರಾಮಕೃಷ್ಣರ ಜೀವನ, ಅವರೊಳಗಿನ ನಾಮಿಗೆ ಸಂಪೂರ್ಣ ಶರಣಾದ ಜೀವನ; ನಾಮಿಯನ್ನು ಸಂಪೂರ್ಣ ಅವಲಂಬಿಸಿದ ಜೀವನ; 'ನಾಮಿ'ಯ ದಿವ್ಯ ಆದೇಶದಂತೆ ಲೋಕಹಿತ ಸಾಧನೆಗಾಗಿ ಬಾಳಿದ ಜೀವನ; ಅವತಾರ ಶ್ರೇಷ್ಠ-ಅವತಾರ ವರಿಷ್ಠರಾಗಿ ಬಾಳಿದ ಅಪೂರ್ವ ಪರಿಪೂರ್ಣ ಪವಿತ್ರ ಜೀವನ.

ಸಾಪೇಕ್ಷವಾದ ಪ್ರಾಪಂಚಿಕರ ಮತಧರ್ಮರೂಪದ 'ನಾಮ'ಗಳು ಅನೇಕ. ಅವು 'ಹಿಂದೂ-ಕ್ರೈಸ್ತ-ಇಸ್ಲಾಂ.' ''ದೇವರೊಬ್ಬ ನಾಮ ಹಲವು'' ಎಂಬ ಮಾತಿನಲ್ಲಿ, ಸಚ್ಚಿದಾನಂದ ನಾಮಿಯೇ ಹಿಂದೂ-ಕ್ರೈಸ್ತ-ಇಸ್ಲಾಂರೂಪದ ನಾಮಗಳ ಆಧಾರ. ಈ ಮೂರೂ ಮತಗಳ ತ್ಯಾಗ-ಕ್ಷಮೆ-ದಾನವೆಂಬ ದಿವ್ಯಗುಣಗಳು ನಾಮಿಯ ಮೂರು 'ದಿವ್ಯನಾಮ'ಗಳು.

**ಶ್ರೀರಾಮಕೃಷ್ಣರ ನಾಮ-ನಾಮಿ ತತ್ತ್ವ ಲಿಂಗಾತೀತ:** ಅನಾದಿ-ಅನಂತ-ಅವ್ಯಕ್ತ ನಾಮಿಯು, ಅನಂತ ನಾಮದ ರೂಪಗಳಲ್ಲಿ ವ್ಯಕ್ತ. ಜೀವವೆಂಬ ನಾಮಗಳಲ್ಲಿ ಗಂಡು-ಹೆಣ್ಣೆಂಬ ಎರಡು ರೂಪ; ಒಳಿತು-ಕೆಡುಕೆಂಬ ಎರಡು ಗುಣ. ಸರ್ವ ನಾಮಗಳು, ನಾಮಿಯ ವಿವಿಧ ರೂಪಗಳಾಗಿದ್ದುವು ರಾಮಕೃಷ್ಣರಿಗೆ. ಪತ್ನಿ ಶಾರದಾದೇವಿ ಎಂಬ ನಾಮವು, ಪತಿ ರಾಮಕೃಷ್ಣರಿಗೆ ಪರಬ್ರಹ್ಮಿಣಿ ನಾಮಿಯಾಗಿದ್ದರು. ಆದ್ದರಿಂದಲೇ, ಅವರನ್ನು ಜಗನ್ಮಾತೆ ಎಂದು ಪೂಜಿಸಿದರು. ಅದ್ವೈತಾಧಾರದ 'ನಾಮಿ-ನಾಮ' ಭಾವವು ಈ ಪೂಜೆಗೆ ನಿಮಿತ್ತವಾಗಿತ್ತು.

**ಶ್ರೀರಾಮಕೃಷ್ಣರ ನಾಮ-ನಾಮಿಯ ತತ್ತ್ವವು ಗುಣಾತೀತ :** ಪರಬ್ರಹ್ಮವಾದ '**ನಾಮಿ**'ಯ ನಾಮಗಳಿಗೆ ಒಳಿತು-ಕೆಡುಕು ಎಂಬ ಎರಡು ಗುಣಗಳು. ಗಿರೀಶಚಂದ್ರ ಘೋಷರು ಕೆಡುಕು ಎಂಬ ನಾಮದ ಅವತಾರ. ಈ ಕೆಡುಕೆಂಬ ನಾಮವನ್ನು ಒಳಿತಾಗಿಸಿದ್ದು ಶ್ರೀರಾಮಕೃಷ್ಣಾವತಾರದ ಒಂದು ಮಹಾನ್ ಉದ್ದೇಶ.

**ಶ್ರೀರಾಮಕೃಷ್ಣರ 'ನಾಮ'-'ನಾಮಿ'ಯ ತತ್ತ್ವವು ಜಾತ್ಯತೀತ :** ಹಿಂದೂ ಸಮಾಜದಲ್ಲಿ ಮಾನವರ ನಡುವೆ ಮೇಲು-ಕೀಳೆಂಬ ಭಾವನೆಯು ಬಹಳ ಹಿಂದಿನಿಂದಿಲು ಉಳಿದು ಬಂದಿದೆ. ಭಗವದ್ಗೀತೆಯ ಪ್ರಕಾರ ಜಾತಿ ಎಂಬುದು ವೃತ್ತಿಗೆ ಸಂಬಂಧಿಸಿದೆ. ಸಮಾಜದ ಜೀವನ ಶುಚಿಯಾಗಿರಲು ಜಾಡಮಾಲಿ ಇರಲೇಬೇಕು. ಜಾಡಮಾಲಿ ಎಂದರೆ ಜಾಡುವಿನ ಮಾಲಿಕ. ಜಾಡು ಎಂದರೆ ಕಸಬರಿಕೆ. ಸಮಾಜದ ಬೀದಿ ಬೀದಿಗಳನ್ನು ಗಲ್ಲಿ ಗಲ್ಲಿಗಳನ್ನು ಜಾಡುವಿನಿಂದ

ಸದಾ ಗುಡಿಸುತ್ತಾ ಶುಚಿ ಮಾಡುತ್ತಿರುವವನೇ ಜಾಡಮಾಲಿ. ಒಂದು ವಾರ ಜಾಡಮಾಲಿ ಇರದಿದ್ದರೆ, ಎಲ್ಲ ಬೀದಿಗಳು ಕಸದ ತೊಟ್ಟಿಗಳಾಗಿ, ಕೊಳೆತು ನಾರುತ್ತಾ, ವಿವಿಧ ಸಾಂಕ್ರಾಮಿಕ ರೋಗಗಳ ನೆಲೆಗಳಾಗುತ್ತವೆ. ಸಮಾಜದ ಶುಚಿಗೆ ಆಧಾರನಾದ ಜಾಡಮಾಲಿಯನ್ನು ಉಳಿದ ಎಲ್ಲ ವರ್ಗದ ಜನರು ಬಹಳ ಕೀಳಾಗಿ ಕಾಣುತ್ತಾರೆ. ಹೀಗೆ ಕೀಳಾಗಿ ಕಾಣುವವರೆಂಬ 'ನಾಮ'ಧಾರಿಗಳ ಒಳಗೆ ಇರುವ '**ನಾಮಿ**' ಮತ್ತು ಕೀಳುಜಾತಿಯವನೆನಿಸಿಕೊಂಡಿರುವ ಜಾಡಮಾಲಿ ಎಂಬ ನಾಮಧಾರಿಗಳ ಒಳಗೆ ಇರುವ '**ನಾಮಿ**'ಯು ಅಂತರಾತ್ಮ ರೂಪದ ಅದ್ವೈತಿ ಪರಬ್ರಹ್ಮವೆ ಎಂಬುದನ್ನು ಲೋಕಕ್ಕೆ ಮನವರಿಕೆ ಮಾಡಿಕೊಡುವುದಕ್ಕಾಗಿ, ಶ್ರೀರಾಮಕೃಷ್ಣರು, ಜಾಡಮಾಲಿಯೊಬ್ಬನ ಮನೆಯ ಅಂಗಳವನ್ನು ಶುಚಿಮಾಡಿಬಂದರು. ಶ್ರೀರಾಮಕೃಷ್ಣರ ದೃಷ್ಟಿಯಲ್ಲಿ, ಶ್ರೀರಾಮಕೃಷ್ಣ ಮತ್ತು ಜಾಡಮಾಲಿ ಎಂಬ '**ನಾಮ**'ಗಳೊಳಗಿನ '**ನಾಮಿ**'ಯು ಅದ್ವೈತ ಪರಬ್ರಹ್ಮವೆ ಆಗಿತ್ತು.

**ಶ್ರೀರಾಮಕೃಷ್ಣರ 'ನಾಮ'-'ನಾಮಿ' ತತ್ತ್ವವು ಶಾಸ್ತ್ರೀಯ ಪೂಜಾತೀತ:**
ವೈದಿಕ ಶಾಸ್ತ್ರೀಯ ಪೂಜಾಪದ್ಧತಿಯಲ್ಲಿ ಮಾನವರೂಪದ ಭಕ್ತನಿದ್ದಾನೆ, ವಿಗ್ರಹರೂಪದ ದೇವನಿದ್ದಾನೆ. ಭಕ್ತನು ಮಂದಿರದಲ್ಲಿರುವ ಭಗವಂತನ ಸನ್ನಿಧಿಗೆ ಹೋಗಿ, ವಿವಿಧ ಪೂಜಾಸಾಮಗ್ರಿಗಳ ಮೂಲಕ, ಶ್ರದ್ಧೆ-ಭಕ್ತಿ-ಶರಣಾಗತಿಭಾವದೊಡನೆ, ಏಕಾಗ್ರ ಮನಸ್ಸಿನಿಂದ, ಬಗೆ ಬಗೆಯ ಪೂಜೆಯನ್ನು ಮಾಡಬೇಕು, ಆ ಮೂಲಕ ಅವನ ಜೀವನದ ಸಂಕಷ್ಟಗಳ ಪರಿಹಾರಕ್ಕಾಗಿ ಪ್ರಾರ್ಥನೆ ಮಾಡಬೇಕು ಎಂಬುದು ಪೂಜಾ ವಿಧಿವಿಧಾನ.

ಶ್ರೀರಾಮಕೃಷ್ಣರಿಗೆ ಕಾಶೀ ವಿಶ್ವನಾಥನ ದರ್ಶನ ಮಾಡಬೇಕು, ಅವನನ್ನು ಮನಸಾರೆ ಪೂಜೆಮಾಡಬೇಕು ಎಂಬ ಹಂಬಲ ಬಹಳವಾಗಿತ್ತು. ಇದನ್ನರಿತ ಮಥುರಬಾಬುವು, ಕಾಶೀಯಾತ್ರೆಗೆ ಅಗತ್ಯವಾದ ಸಮೃದ್ಧ ಸಿದ್ಧತೆ ಮಾಡಿದ. ಶ್ರೀರಾಮಕೃಷ್ಣರು, ಮಥುರಬಾಬುವಿನ ಕುಟುಂಬ, ದಕ್ಷಿಣೇಶ್ವರದ ದೇವಸ್ಥಾನದ ಎಲ್ಲರು, ಅಡುಗೆಯವರು, ಅಡುಗೆ ಸಾಮಗ್ರಿಗಳು, ವಿವಿಧ ಆಹಾರ ಪದಾರ್ಥಗಳು, ನೌಕರರು, ಭಕ್ತರು, ತಂಗು ಡೇರಾಗಳು - ಎಲ್ಲವನ್ನು ಅನೇಕ ನೌಕೆಗಳಲ್ಲಿ ತುಂಬಿಕೊಂಡು, ಗೊತ್ತಾದ ಶುಭದಿನದಂದು, ಸುಡು ಬೇಸಗೆಯಲ್ಲಿ, ಗಂಗಾನದಿಯ ಮೂಲಕ, ಕಾಶೀವಿಶ್ವನಾಥನ ದರ್ಶನಕ್ಕೆ ಯಾತ್ರೆ ಹೊರಟಿತು. ಮಾರ್ಗ ಮಾಧ್ಯದಲ್ಲಿ ಒಂದು ಸಣ್ಣ ದ್ವೀಪ. ಅದರಲ್ಲಿ ಕಡುಬಡತನದಿಂದ ನರಳುತ್ತಿದ್ದ ಸಂತಾಲ ಜನ ಅನ್ನಕ್ಕಾಗಿ ಹಾತೊರೆಯುತ್ತಿದ್ದರು, ಈ ನೌಕೆಯತ್ತ ಕೈಚಾಚಿ ಅನ್ನಕ್ಕಾಗಿ ಬೇಡುತ್ತಿದ್ದರು. ಕೃಶ ಶರೀರ, ಬೆನ್ನು ಹತ್ತಿದ ಹೊಟ್ಟೆ, ಗುಳಿಬಿದ್ದ ಕಣ್ಣುಗಳು, ಒಣಗಿದ ಚರ್ಮದ ಆ ದೀನಾವಸ್ಥೆಯ ಹಸಿವಿನ ಸಂಕಟದಲ್ಲಿ ಬೇಯುತ್ತಿದ್ದ ಆ ಸಂತಾಲರು ಶ್ರೀರಾಮಕೃಷ್ಣರಿಗೆ ಕಾಶೀವಿಶ್ವನಾಥನಾಗಿ ಕಂಡರು. ಕೂಡಲೆ ಮಥುರನಾಥನನ್ನು ಕರೆದು, ''ನನ್ನ ಕಾಶೀಕ್ಷೇತ್ರ ಇದೇ. ಇಲ್ಲಿಯೆ ನೌಕೆಗಳನ್ನು ನಿಲ್ಲಿಸಿ. ಎಲ್ಲ ಆಹಾರ ಪದಾರ್ಥಗಳನ್ನು, ಬಟ್ಟೆಬರೆಗಳನ್ನು, ತಂಗುಡೇರಾಗಳನ್ನು ಹಸಿವಿನಿಂದ ನರಳುತ್ತಿರುವ ಈ ಸಂತಾಲಜನರಿಗೆ ವಿತರಿಸಿ. ಇದರಿಂದ, ಇವರೆಲ್ಲರ ಹಸಿವು ನೀಗಿ ಅವರು ಸಂತೃಪ್ತರಾಗುತ್ತಾರೆ. ಈ ದೀನ-ದಲಿತ-ದರಿದ್ರ ಸಂತಾಲರೆ ನನಗೆ ಕಾಶಿಯ ವಿಶ್ವನಾಥ. ಇವರಿಗೆ ನಾವು ಮಾಡುವ ಅನ್ನದಾನ-ವಸ್ತ್ರದಾನಗಳೆ ವಿಶ್ವನಾಥನಿಗೆ ನಾವು ಮಾಡುವ ನೈವೇದ್ಯ- ಪೂಜೆ-ಪ್ರಾರ್ಥನೆ ಎಲ್ಲವೂ'' ಎಂದರು. ಇದನ್ನು ಕೇಳಿದ ಮಥುರ ನಾಥನಿಗೆ ಕಸಿವಿಸಿಯಾಯಿತು, ನಿರಾಶೆಯಾಯಿತು, ಮುನಿಸೂ ಆಯಿತು. ಇದನ್ನರಿತ ಶ್ರೀರಾಮಕೃಷ್ಣರು ಮಗುವಿನಂತೆ ಚಂಡಿಹಿಡಿದು, ತಲೆಮೇಲೆ ಬಟ್ಟೆಹಾಕಿಕೊಂಡು, ಕುಕ್ಕುರುಗಾಲಿನಲ್ಲಿ ಆ ಉರಿಬಿಸಿಲಿನಲ್ಲಿಯೇ ಕುಳಿತು ಬಿಟ್ಟರು. ಪರಿಸ್ಥಿತಿಯ ಗಹನತೆ-ತೀವ್ರತೆ-ಅಗತ್ಯ-ಮಹತ್ವ-ಸಂದೇಶಗಳನ್ನು ಕೂಡಲೆ ಅರ್ಥಮಾಡಿಕೊಂಡ ಮಥುರನಾಥನು, ಗುರುದೇವ ಶ್ರೀರಾಮಕೃಷ್ಣರ ಆದೇಶದಂತೆ, ಎಲ್ಲರೊಡನೆ ಆ ಸಂತಾಲರ ಸೇವೆಗೆ ಮುಂದಾದನು. ಹಸಿದ ಹೊಟ್ಟೆಗೆ ದೊರೆತ ಅನ್ನ-ನೀರು ಮರಳುಗಾಡಿನಲ್ಲಿ ಅಪರೂಪಕ್ಕೆ ಮಳೆ ಬಿದ್ದಂತಾಗಿತ್ತು. ಬಹಳ ದಿನಗಳ ನರಳುವಿಕೆಯ ನಂತರ ತಮ್ಮ ಹಸಿವಿಗೆ ದೊರೆತ ಅನ್ನ-ನೀರಿನಿಂದ ಆ ಸಂತಾಲರ ಕಣ್ಣುಗಳಲ್ಲಿ ಸುಖದ-ಸೌಖ್ಯದ-ಸಂತಸದ-ನೆಮ್ಮದಿಯ-ಆನಂದದ ಕಣ್ಣೀರು ಧಾರಾಕಾರವಾಗಿ ಸುರಿಯಲಾರಂಭವಾಯಿತು. ಆ ಸಂತೃಪ್ತಿಯ-ಸಮಾಧಾನದ ಕಣ್ಣೀರಿನೊಡನೆ ಶ್ರೀರಾಮಕೃಷ್ಣರ ಆನಂದಾಶ್ರುಗಳೂ ಬೆರೆತುಕೊಂಡವು. ಶ್ರೀರಾಮಕೃಷ್ಣರ ಆ ದಿವ್ಯಾನಂದದಲ್ಲಿ ಸಚ್ಚಿದಾನಂದ ಸ್ವರೂಪಿಯಾದ ಕಾಶೀವಿಶ್ವನಾಥನ ಅಭಿವ್ಯಕ್ತವಾಗುತ್ತಿತ್ತು. ಆ ದಿವ್ಯ ದರ್ಶನವು ಅವರೊಡನಿದ್ದ ಎಲ್ಲರಿಗೂ ದೊರೆತು ಅವರೆಲ್ಲರೂ ಧನ್ಯರಾದರು. ಆ ಸಂತಾಲರಿಗೆ ಮಾಡಿದ ಸೇವೆಯ ಸಂದರ್ಭದಲ್ಲಿ, ಆ ಎಲ್ಲಾ ಸಂತಾಲರು ಎಂಬ '**ನಾಮ**'ಧಾರಿಗಳೊಳಗೆ, ಕಾಶೀವಿಶ್ವನಾಥ ನೆಂಬ '**ನಾಮಿ**'ಯ ದರ್ಶನವು ಶ್ರೀರಾಮಕೃಷ್ಣರಿಗೆ ಆಯಿತು. ಹೀಗಾಗಿ, ಅವರು, ''ಆ ಎಲ್ಲಾ ಸಂತಾಲ '**ನಾಮ**'ದೊಳಗಿನ ವಿಶ್ವನಾಥನೆಂಬ '**ನಾಮಿ**'ಗೆ ನೈವೇದ್ಯ ಮಾಡಿ, ಶ್ರದ್ಧೆ-ಭಕ್ತಿಯಿಂದ ನೈವೇದ್ಯ ಮಾಡಿ'' ಎಂದು ಅವರೊಡನಿದ್ದ ಎಲ್ಲರನ್ನು ಮುನ್ನಡೆಸಿದರು, ಆ ಮೂಲಕ ಅವರೆಲ್ಲರಿಗೂ ಜನಸೇವೆಯೆ ಜನಾರ್ಧನ ಸೇವೆ ಎಂಬು ದನ್ನು, ದರಿದ್ರನಾರಾಯಣ ಸೇವೆಯ ಅರ್ಥ-ಮಹತ್ವ- ಅಗತ್ಯವನ್ನು ಮನದಟ್ಟು ಮಾಡಿಕೊಟ್ಟರು.

**ವೇದಾಂತ ದರ್ಶನದಲ್ಲಿ ಶ್ರೀರಾಮಕೃಷ್ಣರ ನಾಮ-ನಾಮಿಯ ತತ್ತ್ವ:**
'**ನಾಮಿ**'ಯು ಪರಮ ಅದ್ವೈತ. ಈ ನಾಮಿಯ ಆಧಾರದಿಂದಲೇ ಅವರು ದ್ವೈತಿ ಮತ್ತು ವಿಶಿಷ್ಟಾದ್ವೈತಿಯಾಗಿದ್ದರು. ದ್ವೈತದಲ್ಲಿ ಅವರು ಪರಮಭಕ್ತರೂಪದ '**ನಾಮ**'ವಾಗಯೂ, ಅವರ ಇಷ್ಟದೈವವಾದ ಕಾಳಿಯು '**ನಾಮಿ**'ಯಾಗಿಯೂ ದರ್ಶನವಿತ್ತಿದೆ. ವಿಶಿಷ್ಟಾದ್ವೈತದಲ್ಲಿ ಅವರು ಪರಮಾತ್ಮರೂಪದ '**ನಾಮಿ**'ಯ ಅನಂತ ರೂಪಗಳಲ್ಲೊಂದು ರಾಮಕೃಷ್ಣವೆಂಬ ಜೀವಾತ್ಮ ನಾಮವಾಗಿ ದರ್ಶನ ವಿತ್ತಿದ್ದಾರೆ.

ಶ್ರೀರಾಮಕೃಷ್ಣರು, ತಮ್ಮ ಸಮಾಕಾಲೀನರಾದ ಈಶ್ವರಚಂದ್ರ ವಿದ್ಯಾಸಾಗರರನ್ನು ಪ್ರಥಮ ಬಾರಿ ಭೇಟಿಯಾದಾಗ ತೋರಿಸಿದ ಸಹಜಸುಂದರ ವಿನೀತಭಾವಗುಣವು ನಾಮಿಯ ದಿವ್ಯಗುಣ ವಲ್ಲವೆ? ಹೀಗೆ, ಶ್ರೀರಾಮಕೃಷ್ಣರ **ನಾಮಿ-ನಾಮ** ತತ್ತ್ವವಿಚಾರವು, ಅವರೊಡನಿದ್ದ ಗಿಡ-ಮರ-ಪ್ರಾಣಿ-ಪಕ್ಷಿ; ಪುರುಷ-ಸ್ತ್ರೀ; ಬಾಲಕ-ವೃದ್ಧ; ಬಡವ-ಬಲ್ಲಿದ; ಉಚ್ಚ-ನೀಚ; ಅಜ್ಞಾನಿ- ಸುಜ್ಞಾನಿಗಳೆಂಬ ವಿವಿಧ **ನಾಮ**ಗಳ ಆಂತರ್ಯದ '**ನಾಮಿ**' ಯಾಗಿ ಅರಳಿ, ಆನಂದದ ಸುಗಂಧವನ್ನು ಇಡೀ ಮನುಕುಲದಲ್ಲೆಲ್ಲ ಹರಡಿದೆ. ❖

# ಶ್ರೀಮಾತೆಯವರ ದೃಷ್ಟಿಯಲ್ಲಿ ಜಪಸಾಧನೆ ಮತ್ತು ಮಂತ್ರದ ಮಹತ್ವ

ಮಾತಾ ತ್ಯಾಗಮಯೀ



**ಶ್ರೀಮಾತೆ ಶಾರದಾದೇವಿಯವರು ಜಪ, ಮಂತ್ರದೀಕ್ಷೆ ಹಾಗೂ ಸಾಧನೆಯನ್ನು ಕುರಿತು ಹೇಳಿರುವ ಅನೇಕ ವಿಚಾರಗಳು ಆಧ್ಯಾತ್ಮಿಕ ಜಗತ್ತಿನಲ್ಲಿ ಅತ್ಯಮೂಲ್ಯವಾದ ಉಪದೇಶಗಳಾಗಿವೆ. ಈ ವಿಷಯವನ್ನು ಕುರಿತು ಅನೇಕ ದೃಷ್ಟಾಂತಗಳು ಹಾಗೂ ನಿದರ್ಶನಗಳೊಂದಿಗೆ ವಿವರಿಸಿರುವ ಮಾತಾಜಿಯವರು ಚಳ್ಳಕೆರೆಯಲ್ಲಿರುವ ಶ್ರೀಶಾರದಾಶ್ರಮದ ಮುಖ್ಯಸ್ಥರಾಗಿದ್ದಾರೆ. ಇವರು ಉತ್ತಮ ವಾಗ್ಮಿಗಳು ಮತ್ತು ಬರಹಗಾರರು.**

ಒಮ್ಮೆ ಒಬ್ಬ ಭಕ್ತ ಶ್ರೀಮಾತೆಯವರ ಹತ್ತಿರ ಬಂದು, ತಾನು ಅವರಿಂದ ಮಂತ್ರ ಉಪದೇಶವನ್ನು ಪಡೆದಿರುವುದಾದರೂ, ತಾನು ಎಷ್ಟು ಜಪ ಮಾಡುತ್ತಿದ್ದರೂ ಅದರಿಂದ ಮನಶ್ಶಾಂತಿ ಲಭಿಸುತ್ತಿಲ್ಲ ಎಂದು ದೂರಿದ. ಶ್ರೀಮಾತೆಯವರು ಅವನಿಗೆ, ''ಇನ್ನಷ್ಟು ಶ್ರದ್ಧೆಯಿಂದ ಜಪವನ್ನು ಅಭ್ಯಾಸ ಮಾಡು. ಖಂಡಿತ ನಿನಗೆ ಮನಶ್ಶಾಂತಿ ಲಭಿಸುತ್ತದೆ'' ಎಂದು ಧೈರ್ಯವನ್ನು ತುಂಬಿದರು. ಆದರೂ ಅವನಿಗೆ ಸಮಾಧಾನವಾಗಲಿಲ್ಲ. ಅವನು, ''ದಯವಿಟ್ಟು ನೀವು ಮಂತ್ರವನ್ನು ಹಿಂದೆಗೆದುಕೊಳ್ಳಿರಿ'' ಎಂದು ಒತ್ತಾಯಿಸತೊಡಗಿದನು. ಶ್ರೀಮಾತೆಯವರು ಹೇಳಿದರು, ''ಇದೆಂತಹ ಮಾತು? ನಿನಗೆ ಮಂತ್ರದೀಕ್ಷೆ ಕೊಟ್ಟ ದಿನದಿಂದಲೇ ಶ್ರೀರಾಮಕೃಷ್ಣರು ನಿನ್ನ ಹೊಣೆಯನ್ನು ಸ್ವೀಕರಿಸಿದ್ದಾರೆ. ಆದರೂ ನೀನು ಮಂತ್ರವನ್ನು ಹಿಂದಿರುಗಿಸಬೇಕು ಎಂದಿರುವೆಯಲ್ಲ?'' ಎನ್ನುತ್ತ ಭಾವಾವಿಷ್ಟರಾಗಿ, ''ಸರಿ, ಇನ್ನು ಮೇಲೆ ನೀನು ಜಪ ಮಾಡಬೇಕಾಗಿಲ್ಲ'' ಎಂದರು. ಆಗ ಅವನಿಗೆ ಭಯವಾಯಿತು, ಎಲ್ಲಿ ಶ್ರೀಮಾತೆಯವರು ತನಗೆ ದೊರೆತ ಮಂತ್ರರಕ್ಷಣೆಯನ್ನು ಹಿಂದೆಗೆದುಕೊಂಡರೋ ಎಂದು. ಆಗ ಅವನು, ''ಹಾಗಾದರೆ ಅಮ್ಮಾ, ನಾನಿನ್ನು ನರಕಕ್ಕೆ ಬೀಳುವುದೇ ನಿಶ್ಚಿತ'' ಎಂದನು. ಒಡನೆಯೇ ಶ್ರೀಮಾತೆಯವರು, ''ನನ್ನ ಸಂತಾನವಾದ ನಿನಗೆ ನರಕವೆ? ಸಾಧ್ಯವೇ ಇಲ್ಲ! ನನ್ನ ಸಂತಾನವನ್ನು ನರಕಕ್ಕೆಳೆಯುವುದಕ್ಕೆ ಯಮನಿಂದಲೂ ಸಾಧ್ಯವಿಲ್ಲ. ನಿನ್ನೆಲ್ಲ ಭಾರವನ್ನು ನನಗೊಪ್ಪಿಸಿ ನಿಶ್ಚಿಂತೆಯಿಂದಿರು'' ಎಂದರು.

''ನನ್ನ ಸಂತಾನವನ್ನು ನರಕಕ್ಕೆ ಎಳೆಯುವುದಕ್ಕೆ ಯಮನಿಂದಲೂ ಸಾಧ್ಯವಿಲ್ಲ.'' ಈ ಮಾತನ್ನು ಹೇಳುವ ಧೈರ್ಯ ಜಗಜ್ಜನನಿಯ ಹೊರತಾಗಿ ಯಾರಿಗೆ ತಾನೇ ಇದ್ದೀತು? ಇದು ಶ್ರೀಮಾತೆಯವರು ಜಗತ್ತಿಗೆ ತೋರಿಸಿಕೊಟ್ಟ ಮಂತ್ರದ ಮಹಿಮೆ. ತಾಯಿ ಸರಸ್ವತಿಯ ಒಂದು ಕರದಲ್ಲಿ ಅಧ್ಯಾತ್ಮವಿದ್ಯೆಯ ಪ್ರತೀಕವಾಗಿ ಅಕ್ಷಮಾಲೆ ಇದೆ. ಅದೇ ಸಾರದಾಯಿನಿ, ಸರಸ್ವತಿ. ಈ ಯುಗದಲ್ಲಿ ಶ್ರೀಮಾತೆಯವರಾಗಿ ಅವತರಿಸಿ ತಮ್ಮ ಜೀವನದುದ್ದಕ್ಕೂ ಜಪಸಾಧನೆ ಮತ್ತು ಮಂತ್ರದ ಮಹತ್ವವನ್ನು ವಿಶ್ವಮಾನವತೆಗೆ ಮನವರಿಕೆಯಾಗುವಂತೆ ಪ್ರಚುರಪಡಿಸಿದ್ದಾರೆ.

೧. *ಈ ಜಪಸಾಧನೆಯ ಮಹತ್ವ ನಿನಗೆ ಗೊತ್ತೆ? ಅದರಿಂದ ಇಂದ್ರಿಯಗಳನ್ನು ಹತೋಟಿಯಲ್ಲಿಡಬಹುದು.*

೨. *ಗಾಳಿಯು ಮೋಡವನ್ನು ಚದುರಿಸುವಂತೆ ಭಗವನ್ನಾಮವು ಪ್ರಾಪಂಚಿಕತೆಯ ಮೋಡವನ್ನು ಚದುರಿಸುತ್ತದೆ.*

೩. *ಜಪದಿಂದ ಕುಂಡಲಿನಿಯೇ ಎಚ್ಚರವಾಗುತ್ತದೆ.*

–ಹೀಗೆ ಶ್ರೀಮಾತೆಯವರು ಮಂತ್ರದ ಮಹತ್ವವನ್ನು ಸಾರಿ ಹೇಳಿದುದು ಮಾತ್ರವಲ್ಲ, ತಮ್ಮ ಜೀವನದ ದಿನದಿನವೂ ಲಕ್ಷಗಟ್ಟಲೆ ಜಪ ಮಾಡಿದರು. ತಮ್ಮ ಅತಿಸಮರ್ಥ ಶಿಷ್ಯರಾದ ಸ್ವಾಮಿ ಯೋಗಾನಂದಜಿಯಂಥವರಿಗೆ ಮಂತ್ರವನ್ನು ನೀಡಿದರು. ದುರ್ಬಲ ಮಾನವನ ಉದ್ಧಾರ ಏನಿದ್ದರೂ ಮಂತ್ರದಿಂದ ಮಾತ್ರ ಎಂದರಿತು, ಶ್ರೀ ರಾಮಕೃಷ್ಣರು ತಮ್ಮ ಬಳಿಗೆ ಕಳುಹಿಸಿದ ಇರುವೆ ಸಾಲಿನಂತಹ ಅಸಂಖ್ಯ ಪಾಪಿ-ತಾಪಿ, ದೀನ-ದುಃಖಿಗಳಿಗೂ ಮಂತ್ರವನ್ನು ನೀಡಿ, ಅವರ ಜವಾಬ್ದಾರಿಯನ್ನು ತಾವು ತೆಗೆದುಕೊಂಡರು; ಅವರಿಗಾಗಿ ತಮ್ಮ ಕೊನೆಯ ದಿನಗಳ ತಮ್ಮ ಅನಾರೋಗ್ಯದ ನಡುವೆಯೂ ಅವರು ಹಗಲಿರುಳೆನ್ನದೆ ನಾಮಜಪವನ್ನು ಮಾಡುತ್ತಿದ್ದರು.

ಹಾಗೆ ನೋಡಿದರೆ, ಆಧ್ಯಾತ್ಮಿಕ ಸಾಧನೆ ಕಠಿಣ – ಸರಳವಲ್ಲ, ಸರಸವಲ್ಲ. ಅದನ್ನು ನಾಮಜಪಸಾಧನೆಯ ಮೂಲಕ ಸರಳಗೊಳಿಸಿದ್ದಾರೆ ಶ್ರೀಮಾತೆಯವರು. ಸುಮ್ಮನೆ ಜಪ ಮಾಡುತ್ತ ಹೋದರೆ ಸಾಕು, ಅದು ಸಾಧಕನನ್ನು ಭಗವಂತನ ಹತ್ತಿರ ಕರೆದೊಯ್ಯುತ್ತದೆ ಎನ್ನುತ್ತಾರೆ ಅವರು. 'ಸುಮ್ಮನೆ ಜಪ ಮಾಡುತ್ತ ಹೋದರೆ ಸಾಕು' ಎಂದು ಹೇಳಿದ ಮಾತ್ರಕ್ಕೆ ಹೇಗೆಂದರೆ ಹಾಗೆ ಜಪವನ್ನು ಮಾಡುವುದಲ್ಲ–

೧. *ಜಪವನ್ನು ಶ್ರದ್ಧೆ, ಶರಣಾಗತಿ ಮತ್ತು ಪ್ರಾಮಾಣಿಕ ಭಾವದಿಂದ ಮಾಡಬೇಕು.*

೨. *ಜಪದ ಜೊತೆಯಲ್ಲಿ ಪ್ರಾರ್ಥನೆ ಸೇರಿಕೊಂಡಿರಬೇಕು. ಪ್ರಾರ್ಥನೆ ಎಂದು ಹೇಳಿದಾಗ ಭಗವಂತನೊಂದಿಗೆ*

*ಒಂದು ಪ್ರೇಮಪೂರ್ಣ ಸಂಬಂಧವನ್ನು ಹೊಂದಿರಬೇಕು ಎಂದು ಅರ್ಥ.*

*೩. ಜಪದ ಹೆಸರಿನಲ್ಲಿ ಕರ್ತವ್ಯಕರ್ಮಗಳನ್ನು ಬಿಡುವಂತಿಲ್ಲ. ಕರ್ತವ್ಯಕರ್ಮಗಳ ಹೆಸರಿನಲ್ಲಿ ಜಪವನ್ನು ಬಿಡುವಂತಿಲ್ಲ. ದಿನದಲ್ಲಿ ಎರಡು ಸಲವಾದರೂ ಬೆಳಗ್ಗೆ ಮತ್ತು ಸಂಜೆ ಜಪಕ್ಕೆ ಕುಳಿತುಕೊಳ್ಳಬೇಕು. ಅದು ದೋಣಿಗೆ ಚುಕ್ಕಾಣಿ ಇರುವಂತೆ ಬಾಳಿಗೆ ಚುಕ್ಕಾಣಿಯನ್ನು ನೀಡುತ್ತದೆ.*

*೪. ಜಪಸಂಖ್ಯೆಯಲ್ಲ, ನಾವು ಎಷ್ಟು ಪ್ರೇಮದಿಂದ ಮನಸ್ಸು ಕೊಟ್ಟು ಜಪ ಮಾಡುತ್ತೇವೆ ಎಂಬುದೇ ಮುಖ್ಯವಾದುದು.*

–ಎನ್ನುತ್ತಾರೆ ಶ್ರೀಮಾತೆಯವರು. ಶ್ರೀಮಾತೆಯವರು ಜಪ ಮಾಡಿದ್ದು ಹೀಗೆ. ಪರಿಣಾಮ ತಮ್ಮ ಅತ್ಯಂತ ಕಷ್ಟಕರ ದಿನಗಳಲ್ಲೂ ಅವರು, ''ನನ್ನ ಹೃದಯದಲ್ಲಿ ಯಾವಾಗಲೂ ಆನಂದದ ಅಮೃತ ಕಲಶವಿಟ್ಟಂತೆ ನನಗೆ ಅನುಭವವಾಗುತ್ತಿತ್ತು'' ಎನ್ನುತ್ತಾರೆ. ದಿನವಿಡೀ ಶ್ರಮಸಾಧ್ಯವಾದ ಕೆಲಸಕಾರ್ಯಗಳಲ್ಲಿ ತೊಡಗಿಯೂ ಅವರು ಬೆಳಿಗ್ಗೆ–ಸಂಜೆ ಜಪ–ಧ್ಯಾನಕ್ಕೆ ಕುಳಿತೊಡನೆ ಅದರಲ್ಲಿ ಗಾಢವಾಗಿ ತನ್ಮಯರಾಗಿಬಿಡುತ್ತಿದ್ದರು. ಅವರು ಜಪ–ಧ್ಯಾನಕ್ಕೆ ಕುಳಿತಾಗ ಕೆಲವೊಮ್ಮೆ ಬೆಳಿಗ್ಗೆಯ ಆ ಪರಮಮೌನ ವಾತಾವರಣದಲ್ಲಿ ಶ್ರೀರಾಮಕೃಷ್ಣರು ಪಂಚವಟಿಯ ಕಡೆಗೆ ನಡೆದುಕೊಂಡು ಹೋದರೂ ಅವರ ಹೆಜ್ಜೆ ಸದ್ದು ಶ್ರೀಮಾತೆಯವರಿಗೆ ಕೇಳಿಸುತ್ತಿರಲಿಲ್ಲ. ಅದೆಷ್ಟು ಬಾರಿ ಅವರು ಜಪಕ್ಕೆ ಕುಳಿತುಕೊಳ್ಳುತ್ತಲೇ ಸಮಾಧಿಸ್ಥರಾಗಿರಲಿಲ್ಲ! ಆಗ ಅವರನ್ನು ಎತ್ತಿಕೊಂಡು ಒಂದು ಕಡೆಯಿಂದ ಇನ್ನೊಂದು ಕಡೆಯಲ್ಲಿ ಕೂಡಿಸಿದರೂ ಅವರಿಗದು ಗೊತ್ತಾಗುತ್ತಿರಲಿಲ್ಲ. ಬೃಂದಾವನದಲ್ಲಿದ್ದಾಗ ಅವರು ದಿನವಿಡೀ ಅದೆಷ್ಟು ಆನಂದದಿಂದ ಜಪ ಮಾಡುತ್ತಿದ್ದರು! ಅವರ ಜಪ ಯಾಂತ್ರಿಕವಾಗಿರಲಿಲ್ಲ, ಸಜೀವವಾಗಿತ್ತು.

ಶ್ರೀಮಾತೆಯವರ ದೃಷ್ಟಿಯಲ್ಲಿ ನಾಮಜಪವು ಭಗವತ್ಪ್ರಾಪ್ತಿಗೆ, ಚಾರಿತ್ರ್ಯ ಪರಿಪಾಕಕ್ಕೆ ಪ್ರಧಾನ ಸಾಧನ. ಕಬೀರದಾಸರು ಹೇಳುವಂತೆ ಸಾಧಕಯೋಧನು ನಾಮವೆಂಬ ಕವಚವನ್ನು ಧರಿಸಿ, ನಾಮವೆಂಬ ಖಡ್ಗವನ್ನೇ ಹಿಡಿದುಕೊಂಡು ಷಡ್ರಿಪುಗಳ ವಿರುದ್ಧ, ಅಹಂಕಾರಾದಿಗಳ ವಿರುದ್ಧ ಹೂಡುವ ಯುದ್ಧವಿದು. ಶ್ರೀಮಾತೆಯವರ ಜೀವನದಲ್ಲಿ ನಾವು **'ಸಂಕಟಗಳ ವನವಸನವನುಟ್ಟು ನಿಂತ ಶಿಖರ'** ಅವರು ಎಂಬುದನ್ನು ನೋಡುತ್ತೇವೆ. ಅವರಲ್ಲಿ ನಾವು ಅತ್ಯಂತ ಆರೋಗ್ಯಕರ ಮನಸ್ಸನ್ನು– ***'ನಿತ್ಯಂ ಚ ಸಮಚಿತ್ತತ್ವಂ ಚ ಇಷ್ಟಾನಿಷ್ಟೋಪಪತ್ತಿಷು'*** – ನೋಡುತ್ತೇವೆ. ದೊಡ್ಡ ದೊಡ್ಡ ಆಧ್ಯಾತ್ಮಿಕ ಅನುಭವಗಳನ್ನೂ ತುಂಬ ನಿರಭಿಮಾನದಿಂದ, ಗುಪ್ತವಾಗಿ ಧರಿಸಿಕೊಂಡ ಪ್ರಚಂಡ ಸಾಮರ್ಥ್ಯವನ್ನು ನೋಡುತ್ತೇವೆ. ಸಮಾಜ ಜೀವನದ ಪ್ರತಿಯೊಂದು ಮುಖದಲ್ಲಿ ಅವರ ಅದ್ಭುತವಾದ ವ್ಯವಹಾರ ಪ್ರಜ್ಞೆಯನ್ನು ದರ್ಶಿಸುತ್ತೇವೆ. ಸಮಾಜದ ಅಥವಾ ಆಧ್ಯಾತ್ಮಿಕ ಸಾಧನೆಗೆ ಸಂಬಂಧಿಸಿದ ಕಠಿಣ ಸಮಸ್ಯೆಗಳಿಗೂ, ನಿತ್ಯಸಿದ್ಧರಿಗೂ ಅವು ಕಠಿಣವೆನ್ನಿಸುವ ಸಂದರ್ಭದಲ್ಲಿ ಅವರು ಅದಕ್ಕೆ ನಿಶ್ಚಿತವಾದ ಪರಿಹಾರವನ್ನು ದಿಗ್ದರ್ಶನವನ್ನು ನೀಡುವುದನ್ನು ಗಮನಿಸುತ್ತೇವೆ. ಇದೆಲ್ಲದರ ಕಾರಣವನ್ನು ನಾವು ಜಪಸಾಧನೆಯಿಂದ ಅವರಲ್ಲಿ ಅರಳಿದ ಮನಶ್ಶುದ್ಧಿಗೆ ನೀಡಿದರೆ ಒಂದಿನಿತೂ ತಪ್ಪಾಗದು. ಜಪ ಸಾಧಕನ ಕೈಯಲ್ಲಿರುವ ಎಂತಹ powerful instrument – ಪರಿಣಾಮಕಾರಿ ಸಾಧನ ಎಂಬುದನ್ನು ನಾವು ಶ್ರೀಮಾತೆಯವರ ಜೀವನದಲ್ಲಿ ಸುಸ್ಪಷ್ಟವಾಗಿ ನೋಡುತ್ತೇವೆ. ಆದ್ದರಿಂದ ಜಪ ಸಜೀವವಾಗಬೇಕು. ಜಪ ಕೇವಲ ಯಾಂತ್ರಿಕವಾದರೆ ಈ ಪರಿಣಾಮವನ್ನು ಬೀರಲಾರದು. ಶ್ರೀಮಾತೆಯವರೆನ್ನುತ್ತಾರೆ, ''ಒಂದು ಚಿಕ್ಕ ಬೀಜದಲ್ಲಿ ಮಹತ್ತಾದ ಆಲದಮರ ಅಡಗಿರುವಂತೆ ಚಿಕ್ಕ ಮಂತ್ರದಲ್ಲಿ ಅನಂತನಾದ ಭಗ ವಂತನೇ ಅಡಗಿದ್ದಾನೆ. ನೆಲದೊಳಗೆ ಸೇರಿದ ಬೀಜದಿಂದ ಮಹತ್ತಾದ ವೃಕ್ಷ ಹೊರಹೊಮ್ಮುವಂತೆ ಹೃದಯದೊಳಗೆ ಸೇರಿದ ಮಂತ್ರದಿಂದ ಅನಂತನಾದ ಭಗವಂತನೇ ಪ್ರಕಟವಾಗುತ್ತಾನೆ.''

ಮಂತ್ರ ಎಂದು ಹೇಳಿದಾಗ ಅದರರ್ಥ ಭಗವಂತನ ನಾಮ. ಆ ಮಂತ್ರವನ್ನು ನಮಗೆ ಬೋಧಿಸುವವನು ಗುರು. ಮಂತ್ರ ಅತ್ಯಂತ ಶಕ್ತಿಶಾಲಿಯಾದುದು. ಗುರು ನಿರಂತರ ಜಪವನ್ನು ಮಾಡಿ ಆ ಮಂತ್ರ ದೇವತೆಯನ್ನು ಸಾಕ್ಷಾತ್ಕರಿಸಿಕೊಂಡಿರುತ್ತಾನೆ. ಆದ್ದರಿಂದ ಅದು ಸಿದ್ಧ ಮಂತ್ರ. ಗುರುಮುಖದಿಂದ ಬಂದ ಅಂತಹ ಮಂತ್ರವನ್ನು ನಾವು ಮನನ ಮಾಡಿದಾಗ, ಪುರಶ್ಚರಣಗೈದಾಗ ಅದು ನಮ್ಮನ್ನು ಭವದಿಂದ ಪಾರುಗಾಣಿಸುತ್ತದೆ. ಆದ್ದರಿಂದ ಶ್ರೀಮಾತೆಯವರು ಗುರುವಿನಿಂದಲೇ ಮಂತ್ರವನ್ನು ಪಡೆದು ಅದನ್ನು ಜಪಿಸಬೇಕು ಎಂದು ಒತ್ತು ಕೊಡುತ್ತಾರೆ. ಅವರಿಗೆ ಪ್ರತಿಯೊಬ್ಬ ಗುರುವಿನ ಬಗೆಗೆ ವಿಶೇಷ ಗೌರವಾದರ ಭಾವವಿದ್ದಿತು. ಮತ್ತು ಒಮ್ಮೆ ಗುರುವಿನಿಂದ ಮಂತ್ರವನ್ನು ಪಡೆದ ಮೇಲೆ ಅದನ್ನು ಶ್ರದ್ಧೆಯಿಂದ ಜಪ ಮಾಡುತ್ತ ಹೋಗಬೇಕು. ಗುರುವನ್ನು ಮತ್ತೆ ಮತ್ತೆ ಬದಲಿಸುವಂತೆಯೇ ಇಲ್ಲ. ಒಬ್ಬ ಗುರು, ಒಂದು ಮಂತ್ರ, ಒಬ್ಬ ಇಷ್ಟದೇವತೆ – ಎಂಬ ಶ್ರೀರಾಮಕೃಷ್ಣರ ನುಡಿಯನ್ನು ಅವರು ಯಾವಾಗಲೂ ನೆನಪಿಸುತ್ತಿದ್ದರು.

ಇನ್ನು ಅವತಾರನಾದ ಗುರು ಶಿಷ್ಯನಿಗೆ ಮಂತ್ರವನ್ನು ನೀಡಿ ಅವರ ಪಾಪಕರ್ಮಗಳನ್ನು ತಾನು ತೆಗೆದುಕೊಳ್ಳುತ್ತಾನೆ. ಆದ್ದರಿಂದ ಅವರ ಪರಮಪರಿಶುದ್ಧವಾದ, ಪಾಪದೂರವಾದ ಶರೀರವೂ ಬಗೆಬಗೆಯ ಯಾತನೆಗಳನ್ನು ಅನುಭವಿಸಬೇಕಾಗಿ ಬರುತ್ತದೆ. ಶ್ರೀಮಾತೆಯವರು ಈ ಕೆಲಸವನ್ನು ಅದೆಷ್ಟು ಸಲ ಮಾಡಿದ್ದಾರೆ ಎಂದು ಕೇಳಲೇ ಬೇಡಿರಿ. ಮೇಲಾಗಿ ಅವರು ಅದನ್ನು ಸ್ವಪ್ರೀತಿಯಿಂದ ಮಾಡುತ್ತಾರೆ. ''ನಾವು ಬಂದಿರುವುದೇ ಅದಕ್ಕಾಗಿ. ಜನರ ಪಾಪ–ತಾಪ–ಸಂಕಟಗಳನ್ನು ನಾವು ಸ್ವೀಕರಿಸದೆ ಹೋದರೆ ಇನ್ನಾರು ಮಾಡುತ್ತಾರೆ?'' ಎನ್ನುತ್ತಾರೆ ಅವರು. ಒಮ್ಮೆ ಕಲ್ಕತ್ತಾದಿಂದ ಜಯರಾಂಬಾಟಿಗೆ ಮೂವರು ವ್ಯಕ್ತಿಗಳು ಬಂದಿದ್ದರು – ಮಂತ್ರದೀಕ್ಷೆಯ ಆಸೆಯಿಂದ. ಅವರನ್ನು ನೋಡುತ್ತಲೇ ಶ್ರೀಮಾತೆಯವರಿಗೆ ಅರ್ಥವಾಯಿತು. ಮೊದಲು ಅವರು ಅವರಿಗೆ ದೀಕ್ಷೆಯನ್ನು ನೀಡಲು ಅನುಮತಿಸಲೇ ಇಲ್ಲ. ಆದರೆ ಅವರು ಕಂಬನಿಗರೆದಾಗ ಶ್ರೀಮಾತೆಯವರು ಅವರಿಗೆ ಜಯರಾಂಬಾಟಿಯಲ್ಲಿ ಮೂರು ರಾತ್ರಿಗಳನ್ನು ಕಳೆಯಲು ಹೇಳಿ, ಬಳಿಕ ಮಂತ್ರವನ್ನು ನೀಡುತ್ತಾರೆ. ಈ ಘಟನೆಯನ್ನು ಕೇಳಿ ಸ್ವಾಮಿ ಪ್ರೇಮಾನಂದಜಿಯವರು, ''ಶ್ರೀಮಾತೆಯವರು ಎಂತಹ ಭಯಂಕರ ವಿಷವನ್ನು ಜೀರ್ಣಿಸಿಕೊಂಡಿದ್ದಾರೆಂದರೆ ನಾವೇನಾದರೂ ಹಾಗೆ ಮಾಡಿದ್ದರೆ ಸುಟ್ಟು ಹೋಗುತ್ತಿದ್ದೆವು'' ಎನ್ನುತ್ತಾರೆ. ಅವತಾರ ಮಾತ್ರ ಮಾಡುವಂತಹ ಕಾರ್ಯವಿದು.

ಅವತಾರಿಣಿಯಾಗಿ ಶ್ರೀಮಾತೆಯವರು ದೀಕ್ಷೆಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಕಟ್ಟುಕಟ್ಟಲೆಗಳ ನಿಯಮಗಳು, ದೇಶ ಕಾಲದ

ನಿಯಮಗಳನ್ನು ಬಹಳಷ್ಟು ಉದಾರಗೊಳಿಸಿದರು. ತನ್ಮೂಲಕ ಮಂತ್ರದ ಮಹಿಮೆಯನ್ನು ಮತ್ತೂ ಪ್ರಕಾಶಮಾನಗೊಳಿಸಿದರು. ಅವರು ಹಾಕಿದ ನಿಯಮವೊಂದೇ - ಭಗವಂತ ಬೇಕು ಎನ್ನುವ ಉತ್ಕಟ ವ್ಯಾಕುಲತೆ ಇರಬೇಕು. ಅವತಾರಿಣಿಯಾಗಿ ಶ್ರೀಮಾತೆಯವರು ಇನ್ನೊಂದು ಮಾತನ್ನು ಹೇಳುತ್ತಾರೆ, ಯಾವುದೇ ದೇವ ದೇವತೆಗಳ ಪೂಜೆ ಹಾಗೂ ನೈವೇದ್ಯವನ್ನು ಮಾಡುವಾಗಲೂ ಪೂಜಾಸಂಬಂಧಿಯಾದ ಆಯಾ ಮಂತ್ರಗಳು ಬರದಿದ್ದರೂ ತೊಂದರೆಯಿಲ್ಲ, ಗುರು ಉಪದೇಶಿಸಿದ ಇಷ್ಟಮಂತ್ರವನ್ನೇ ಹೇಳುತ್ತ, ಭಗವಂತನಿಗೆ ''ಇಲ್ಲಿ ಬಾ, ಇಲ್ಲಿ ಕುಳಿತುಕೋ, ನನ್ನ ಪೂಜೆಯನ್ನು ಸ್ವೀಕರಿಸು'' ಎಂದು ಹೇಳಬೇಕಂತೆ. ಅವರ ಪ್ರಕಾರ ಪೂಜೆ ನೈವೇದ್ಯಾದಿಗಳಲ್ಲಿ ಮಂತ್ರವಲ್ಲ, ಭಾವ ಮುಖ್ಯವಾದದ್ದು. ಜಪಸಾಧನೆಯೇ ಆ ಭಾವವಿಕಾಸಕ್ಕೆ ನೆರವನ್ನು ನೀಡುವಾಗ ಪೂಜಾದಿ ಇತರ ಸಾಧನೆಗಳು ಇದ್ದರೂ ಸರಿ, ಇಲ್ಲದಿದ್ದರೂ ಸರಿ ಎಂಬುದು ಶ್ರೀಮಾತೆಯವರ ಅಭಿಮತ.

### ಜಪಸಾಧನೆಯಲ್ಲಿ ಸಾಧಕನು ಗಮನಿಸಬೇಕಾದ ಅಂಶಗಳಾವುವು?

೧. ಪ್ರತಿದಿನ ಜಪಕ್ಕೆ ಒಂದು ನಿಶ್ಚಿತ ಸಮಯವನ್ನು ಇಟ್ಟುಕೊಂಡಿದ್ದರೆ ಒಳಿತು, ಬೆಳಿಗ್ಗೆ ಮತ್ತು ಸಾಯಂಕಾಲ ಸೂಕ್ತವಾದ ಸಮಯ. ಒಂದು ವೇಳೆ ಆ ನಿಶ್ಚಿತ ಸಮಯದಲ್ಲಿ ಜಪ ಮಾಡಲಾಗದಿದ್ದರೂ ಜಪವನ್ನು ಬಿಟ್ಟುಬಿಡದೆ ಬೇರೊಂದು ಸಮಯದಲ್ಲಿ ಮಾಡಬೇಕು.

೨. ಭಗವತ್ಪ್ರಾಪ್ತಿ ನಮ್ಮ ಗುರಿಯಾಗಿರುವಾಗ ಪ್ರಾಣಾಯಾಮ, ಯೋಗಾಸನಾದಿಗಳ ಕಡೆಗೆ ನಾವು ಎಷ್ಟು ಬೇಕೋ ಅದಕ್ಕಿಂತ ಹೆಚ್ಚಿನ ಗಮನವನ್ನು ಕೊಡಬೇಕಿಲ್ಲ. ಅವುಗಳ ಕಡೆಗೆ ಅತಿ ಗಮನವನ್ನು ಕೊಟ್ಟರೆ ಮನಸ್ಸು ದೇಹಬುದ್ಧಿಯನ್ನು ತಾಳುವ ಅಪಾಯವಿರುತ್ತದೆ.

೩. ನಿರಂತರ ಮಾಡುವ ಜಪದಿಂದ ಕರ್ಮಪಾಶ ಕಳಚುತ್ತದೆ ಎಂಬುದೇನೋ ನಿಜ, ಆದರೆ ಪ್ರೇಮವಿಲ್ಲದೆ ಭಗವಂತನನ್ನು ಪಡೆಯಲಾಗುವುದಿಲ್ಲ, ಬೃಂದಾವನದ ಗೋಪಗೋಪಿಯರು ಜಪ-ಧ್ಯಾನದಿಂದಲ್ಲ, ಸರಳ ಪ್ರೇಮದಿಂದ ಕೃಷ್ಣನನ್ನು ಒಲಿಸಿಕೊಂಡಿದ್ದು.

೪. ಗಾಳಿ ಬೀಸುವುದರಿಂದ ದೀಪ ಅಲುಗಾಡುವಂತೆ ಆಶೆಗಳಿಂದ ಮನಸ್ಸು ಚಂಚಲವಾಗುತ್ತದೆ. ಚಂಚಲ ಮನಸ್ಸು ಜಪವನ್ನು ಹೃತ್ಪೂರ್ವಕವಾಗಿ ಮಾಡಲಾರದು. ಆದ್ದರಿಂದ ಆಶೆಗಳು ಕಡಿಮೆಯಾದಷ್ಟು ಜಪ ಸುಲಭವಾಗುತ್ತದೆ.

೫. ಜಪ ಮಾಡುವ ಅಭ್ಯಾಸವನ್ನು ಬೆಳೆಸಿಕೊಳ್ಳಬೇಕು. ಒಂದೇ ಸಮನೆ ಜಪ ಮಾಡುವುದನ್ನು ಅಭ್ಯಾಸ ಮಾಡಿಕೊಂಡರೆ ಮನುಷ್ಯ ಭಗವಂತನನ್ನೇ ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ನಿರಂತರ ನಾಮಸ್ಮರಣೆಯ ಅಭ್ಯಾಸ ಎಲ್ಲವನ್ನೂ ತಂದುಕೊಡುತ್ತದೆ. ಮತ್ತೇನನ್ನೂ ಮಾಡ ಬೇಕಾಗಿಲ್ಲ, ಅಭ್ಯಾಸಕ್ಕೆ ಸ್ವಲ್ಪ ಅಂಟಿಕೊಂಡರೆ ಸಾಕು, ಎಷ್ಟು ಆನಂದ ಸಿಗುತ್ತದೆ!

ಆರಂಭದ ಸಾಧಕರಿಗೆ ಶ್ರೀಮಾತೆಯವರು ಹೇಳುತ್ತಾರೆ, ''ಮನಸ್ಸು ಒಂದು ಕಡೆ ಇರಲಿ ಅಥವಾ ಬಿಡಲಿ, ಜಪವನ್ನಂತು ಮಾಡು. ಪ್ರತಿದಿನ ಒಂದು ಗೊತ್ತಾದ ಸಂಖ್ಯೆಯಲ್ಲಿ ಜಪವನ್ನು ಮಾಡುವುದರಿಂದ ನಿನಗೆ ಒಳ್ಳೆಯದಾಗುತ್ತದೆ, ಆದರೆ ಮುಂದುವರಿದಂತೆ ಕ್ರಮೇಣ ಮನಸ್ಸು ಭಗವಂತನ ರೂಪದಲ್ಲಿ ಒಂದಾಗಬೇಕು, ಮನಸ್ಸು ಸ್ಥಿರವಾಗಬೇಕು. ಆರಂಭದಲ್ಲಿ ಅಂತಹ ಭಕ್ತಿಯೇನೂ ಇಲ್ಲದಿದ್ದರೂ ಭಗವಂತನ ನಾಮಜಪವನ್ನು ಮಾಡಬೇಕು. ಅದರಿಂದ ಪ್ರಯೋಜನವಿದೆ. ನೀರಿನಲ್ಲಿ ನಾವಾಗಿ ಬಿದ್ದರೂ ಅಥವಾ ಇನ್ನೊಬ್ಬರು ತಳ್ಳಿದರೂ ನಮ್ಮ ಬಟ್ಟೆ ಒದ್ದೆ ಆಗಿಯೇ ಆಗುತ್ತದೆ. ಆದರೆ ಕ್ರಮ ಕ್ರಮೇಣ ಒಂದೇ ಮನಸ್ಸಿನಿಂದ ಪ್ರೀತಿಯಿಂದ ಧ್ಯಾನವನ್ನು ಮಾಡಲು ಕಲಿಯಬೇಕು. ಆರಂಭದಲ್ಲಿ ಹೇಗೆ ಜಪ ಮಾಡಿದರೂ ಸರಿ, ಆದರೆ ಕ್ರಮೇಣ ಜಪದಲ್ಲಿ ಏಕಾಗ್ರತೆ ಬರಲೇಬೇಕು. ಆಗ ಮಾತ್ರ ಭಗವಂತನ ಕೃಪೆಯಾಗುತ್ತದೆ. ಆರಂಭದಲ್ಲಿ ಜಪವೇ ಬೇರೆ, ದಿನದಿನದ ಜೀವನವೇ ಬೇರೆಯಾಗಿರುತ್ತದೆ, ಆದರೆ ಮುಂದುವರಿದಂತೆ ಕ್ರಮ ಕ್ರಮೇಣ ದಿನದಿನದ ಎಲ್ಲ ಕ್ಷಣಗಳನ್ನು ಜಪವೇ ತುಂಬಿಕೊಳ್ಳುವಂತಾಗಬೇಕು. **''ಜಪತೋ ನಾಸ್ತಿ ಪಾತಕಮ್''** ಅಂತಹ ಜಪಶೀಲ ಸಾಧಕನಿಂದ ಪಾಪ ನಡೆಯಲು ಸಾಧ್ಯವಿಲ್ಲ. ಆರಂಭದಲ್ಲಿ ಜಪಸಂಖ್ಯೆ, ಜಪಕ್ಕೆ ನಿಶ್ಚಿತ ಸಮಯ ಎಲ್ಲ ಬೇಕು, ಆದರೆ ಮುಂದುವರಿದಂತೆ ಉಸಿರು ಉಸಿರಿಗೂ ಹರಿಯನ್ನೇ ನೆನೆಯುವಂತಾಗಬೇಕು.

ಶ್ರೀಮಾತೆಯವರು ಜಪಕ್ಕೆ ಅತ್ಯಧಿಕ ಪ್ರಾಮುಖ್ಯತೆಯನ್ನು ನೀಡಿದರು. ಹಾಗೆಂದು ಜ್ಞಾನಯೋಗ, ರಾಜಯೋಗ ಇನ್ನಿತರ ಸಾಧನೆಗಳಲ್ಲಿ ಆಸಕ್ತಿ ಉಳ್ಳವರನ್ನು ಅಲ್ಲಗಳೆಯಲಿಲ್ಲ, ನಿರುತ್ಸಾಹಗೊಳಿಸಲಿಲ್ಲ. ಶ್ರೀ ರಾಮಕೃಷ್ಣರು ಹೇಗೆ ''ನಾನು ಒಂದು ವಾದ್ಯವನ್ನು ಬೊ ಎಂದು ಊದುವವನಲ್ಲ, ನಾನು ನಾನಾ ರಾಗರಾಗಿಣಿಗಳನ್ನು ಊದುವವನು'' ಎಂದು ಹೇಳಿದ್ದರೋ ಅದೇ ರೀತಿ ಶ್ರೀಮಾತೆಯವರೂ ಎಲ್ಲ ಸಾಧನಾಮಾರ್ಗಗಳಿಗೂ ಮಾನ್ಯತೆಯನ್ನು ನೀಡಿದವರಾಗಿದ್ದರು. ಅವರ ದೃಷ್ಟಿ ಉದಾರವಾಗಿತ್ತು, ಪರಮಸಹಿಷ್ಣುವಾಗಿತ್ತು.

ಒಬ್ಬ ಶ್ರೀಮಂತನ ಮನೆಯ ದೇವರ ಕೋಣೆಯಲ್ಲಿ ಮಂತ್ರ ಜಪದ ಕ್ಯಾಸೆಟನ್ನು ೨೪ ಗಂಟೆ ಹಾಕಲಾಗುತ್ತಿತ್ತು. ಅವನ ಮಿತ್ರನೊಬ್ಬ ಅವನಿಗೆ, ''ಆ ರೀತಿ ಕ್ಯಾಸೆಟ್ ಹಾಕುವುದರಿಂದ ನಿನಗೆ ಏನಾದರೂ ಲಾಭವಿದೆಯೆ?'' ಎಂದು ಕೇಳಿದನು. ಆಗ ಅವನು, ''ಹೌದು ಅದೊಂದು ರಾತ್ರಿ ಕಳ್ಳರು ಬಂದಿದ್ದರು. ಅವರು ಅದಾರೋ ಮಂತ್ರ ಜಪಿಸುತ್ತ ಎಚ್ಚರವಾಗಿದ್ದಾರೆ ಎಂದು ಮನೆಗೆ ಕನ್ನವನ್ನು ಹಾಕಲಿಲ್ಲ'' ಎಂದನು. ಅದೇ ರೀತಿ ಯಾರ ಹೃದಯಮಂದಿರದಲ್ಲಿ ನಿರಂತರ ನಾಮಜಪ ನಡೆಯುತ್ತಿರುತ್ತದೆಯೋ ಅಲ್ಲಿ ಕಾಮಾದಿ ಷಡ್‌ರಿಪುಗಳು ಕಳ್ಳತನವನ್ನು ಮಾಡುವುದಿಲ್ಲ.

ಆದ್ದರಿಂದ ಶ್ರೀಮಾತೆಯವರು ಹೇಳುತ್ತಾರೆ, ಜಪವನ್ನು ಮಾಡಬೇಕು, ಜಪವನ್ನು ಲಕ್ಷ್ಯಕೊಟ್ಟು ಮಾಡಬೇಕು. ಜಪದ ಕುರಿತು ಅವರಿಗೆ ಅದೆಷ್ಟು ಭರವಸೆಯೆಂದರೆ, ಅವರು ಹೇಳುತ್ತಾರೆ, ''ಮೊದಲು ಜಪವನ್ನು ಮಾಡಲಿ, ಅದು ಫಲಕಾರಿಯಾಗದಿದ್ದರೆ, ಅನಂತರ ಬಂದು ನನ್ನನ್ನು ಕೇಳಲಿ. ಆದರೆ ಜನ ಜಪವನ್ನು ಮಾಡುವುದಿಲ್ಲ, ಮತ್ತೆ ಬಹಳಷ್ಟು ಪ್ರಶ್ನೆ ಸಂಶಯಗಳನ್ನು ಕೇಳುತ್ತಾರೆ.

''ಆದ್ದರಿಂದ ಗುರು ಉಪದೇಶಿಸಿದ ಮಂತ್ರವನ್ನು ಪ್ರತಿದಿನ ಜಪ ಮಾಡಲೇಬೇಕು. ಒಂದು ದಿನವಾದರೂ ಜಪ ಮಾಡದೆ ಇರುವುದು ಒಳ್ಳೆಯದಲ್ಲ. ನೀನು ಪಡೆದ ಉಪದೇಶ, ಶ್ರೀರಾಮಕೃಷ್ಣರ ನಾಮ ಕೇವಲ ಟೊಳ್ಳು ಶಬ್ದ ಎಂದು ತಿಳಿದುಕೊಂಡೆಯಾ? ಆ ನಾಮ ಎಂದಿಗೂ ವ್ಯರ್ಥವಾಗುವುದೇ ಇಲ್ಲ. ಯಾರುಯಾರು ಶ್ರೀ ರಾಮಕೃಷ್ಣರಲ್ಲಿ ನೆಟ್ಟ ಮನಸ್ಸುಳ್ಳವರಾಗಿ ಇರುತ್ತಾರೆಯೋ ಅವರಿಗೆ ಇಷ್ಟ ದರ್ಶನ ಆಗಿಯೇ ಆಗುತ್ತದೆ.''

# ಸ್ವಾಮೀಜಿ ಕೃತಿಗಳಲ್ಲಿ ಮಂತ್ರ, ಭಗವನ್ನಾಮಗಳನ್ನು ಕುರಿತು

**ಕೆ.ಆರ್.ಮೋಹನ್**



ಆಧ್ಯಾತ್ಮಿಕ ಅನುಭವ ಹಾಗೂ ಶಾಸ್ತ್ರಜ್ಞಾನ ಇವೆರಡರ ಹಿನ್ನೆಲೆಯಲ್ಲಿ ಸ್ವಾಮಿ ವಿವೇಕಾನಂದರು ಸಾಧಕರಿಗೆ ನೀಡಿರುವ ದಾರ್ಶನಿಕ ವಿಚಾರಗಳು ಎಲ್ಲ ಕಾಲಕ್ಕೂ ಉಪಯುಕ್ತವಾದ ಹೊಳಹುಗಳನ್ನು ನೀಡುತ್ತವೆ. ಈ ಕುರಿತು ವಿಶ್ಲೇಷಿಸಿರುವ ಲೇಖಕರು ನಿವೃತ್ತ ಬ್ಯಾಂಕ್ ಅಧಿಕಾರಿಗಳು. ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರಾಗಿರುವ ಇವರ ಅನೇಕ ಲೇಖನಗಳು 'ವಿವೇಕಪ್ರಭ'ದಲ್ಲಿ ಪ್ರಕಟವಾಗಿವೆ.

"ನಾನು ಸ್ವಾಮಿ ವಿವೇಕಾನಂದರ ಜತೆ ಇದ್ದಾಗ ಕಂಡ ಸತ್ಯವಿದು. ಅವರು ಪ್ರತಿ ದಿನ ರಾತ್ರಿ ಒಂಬತ್ತು ಗಂಟೆಗೆ ಧ್ಯಾನಕ್ಕೆ ಕುಳಿತರೆ, ಬೆಳಗಿನ ಜಾವ ಐದು ಗಂಟೆಗೆ ಏಳುತ್ತಿದ್ದರು. ಧ್ಯಾನಕ್ಕೆ ಕುಳಿತಾಗ ಒಂದು ಕಂಬಳಿಯನ್ನು ಹೊದ್ದುಕೊಂಡಂತೆ ಸೊಳ್ಳೆಗಳು ಅವರ ಶರೀರದ ಮೇಲೆಲ್ಲಾ ಕುಳಿತಿರುತ್ತಿದ್ದವು ಮನಸ್ಸು ಇಂದ್ರಿಯಗಳ ಸಂಪೂರ್ಣ ನಿಗ್ರಹ ಮತ್ತು ಮನಸ್ಸಿನ ಪ್ರಶಾಂತತೆ ಲಕ್ಷಣಗಳೊಡನೆ ಸಾಕ್ಷಾತ್ ಶಿವನಂತೆ ಕಂಗೊಳಿಸುತ್ತಿದ್ದರು." ಎಂದು ಸ್ವಾಮಿ ತುರೀಯಾನಂದರು ತಮ್ಮ ಗುರುಭಾಯಿ ಹಾಗೂ ಧ್ಯಾನಸಿದ್ಧ ವಿವೇಕಾನಂದರ ಬಗ್ಗೆ ಹೇಳಿದ್ದರು.

ಸ್ವಾಮೀಜಿ ಧ್ಯಾನದ ಬಗ್ಗೆ ಬಹಳ ವಿವರವಾಗಿ ಹಾಗೂ ವಿಸ್ತಾರವಾಗಿ ಹಲವಾರು ಪ್ರವಚನಗಳಲ್ಲಿ ಹೇಳಿದ್ದಾರೆ. ಆದರೆ ಮಂತ್ರ ಮತ್ತು ಭಗವನ್ನಾಮದ ಬಗ್ಗೆ ಪ್ರಾಸಂಗಿಕವಾಗಿ ಆಗಾಗ ಹೇಳಿದ್ದನ್ನು ಸಂಗ್ರಹಿಸಿ ಈ ಲೇಖನಗಳಲ್ಲಿ ಕೊಡಲಾಗಿದೆ.

**ಮಂತ್ರದೀಕ್ಷೆ:** ಪರಿವ್ರಾಜಕರಾಗಿದ್ದಾಗ, ಸ್ವಾಮೀಜಿ ಒಂದು ವಾರ ತಮ್ಮ ಹಳೆಯ ಪರಿಚಯದ ಹರಿದಾಸ ಚಟರ್ಜಿ ಮನೆಯಲ್ಲಿ ತಂಗಿದ್ದರು. ಅಲ್ಲಿಂದ ಹೊರಡುವ ಹಿಂದಿನ ರಾತ್ರಿ, ಹರಿದಾಸನು ಸ್ವಾಮೀಜಿಯವರ ಪಾದಗಳನ್ನು ಬಿಗಿಯಾಗಿ ಹಿಡಿದು ತನಗೆ ಮಂತ್ರೋಪದೇಶ ನೀಡುವಂತೆ ಕೇಳಿಕೊಂಡ. ಆದರೆ ಸ್ವಾಮೀಜಿ ಅವನಿಗೆ ಮಂತ್ರೋಪದೇಶ ನೀಡಲಿಲ್ಲ. ಸ್ವಾಮೀಜಿ ಸ್ವಭಾವತಃ ಅತ್ಯಂತ ಧರ್ಮಾರ್ಥರು. ಹೀಗಿದ್ದೂ ದೀಕ್ಷೆ ಕೊಡಲಿಲ್ಲವೆಂದರೆ ಒಂದೇ ಒಂದು ಕಾರಣ ಊಹಿಸಬಹುದು. ಅದೇನೆಂದರೆ, ಹರಿ ದಾಸನು ಸ್ವಾಮೀಜಿಯವರ ವಲಯಕ್ಕೆ ಸೇರಿದವನಲ್ಲ. ತಮ್ಮ ಅಂತರ್ದೃಷ್ಟಿಯಿಂದ ಈ ವಿಚಾರವನ್ನು ಸ್ವಾಮೀಜಿ ಕಂಡುಕೊಂಡಿರಬೇಕು. ಹೀಗೆ ಗುರು ಶಿಷ್ಯ ಸಂಬಂಧವೆನ್ನುವುದು ತುಂಬಾ ಸೂಕ್ಷ್ಮವಾದದ್ದು.

ಒಮ್ಮೆ ಸ್ವಾಮೀಜಿಯವರ ಶಿಷ್ಯ ಪ್ರಿಯನಾಥ್ ಸಿನ್ಹ ಒಂದು ಪ್ರಶ್ನೆ ಕೇಳಿದ:

**ಪ್ರಶ್ನೆ:** ನೀವು ಪಾಶ್ಚಾತ್ಯರಿಗೆ ಮಂತ್ರದೀಕ್ಷೆ ಹೇಗೆ ಕೊಟ್ಟಿರಿ? ಶಾಸ್ತ್ರಗಳಲ್ಲಿ ಬ್ರಾಹ್ಮಣರ ಹೊರತು ಮತ್ತಾವ ಶೂದ್ರರಿಗೆ ಪ್ರಣವ ಮಂತ್ರೋಚ್ಚಾರಣೆಯ ಅಧಿಕಾರವಿಲ್ಲವೆಂದು ಹೇಳಿದೆ. ಅಲ್ಲದೆ ಪಾಶ್ಚಾತ್ಯರು ಶೂದ್ರರು ಕೂಡ ಅಲ್ಲ ಮ್ಲೇಚ್ಛರು.

**ಸ್ವಾಮೀಜಿ:** ನನ್ನ ಶಿಷ್ಯರೆಲ್ಲಾ ಬ್ರಾಹ್ಮಣರು. ಬಾಹ್ಮಣ ಜಾತಿ ಮತ್ತು ಬ್ರಾಹ್ಮಣ ಗುಣಗಳು ಎರಡೂ ಭಿನ್ನವಾದ ವಿಷಯಗಳು. ಭರತಖಂಡದಲ್ಲಿ ಜಾತಿಯಿಂದ ಬ್ರಾಹ್ಮಣರೆಂದು ನಿಷ್ಕರ್ಷಿಸುವರು. ಪಶ್ಚಿಮದಲ್ಲಿ ಬ್ರಾಹ್ಮಣ ಗುಣಗಳಿಂದ ಬ್ರಾಹ್ಮಣರೆಂದು ಗುರುತಿಸಬೇಕು. ಬ್ರಾಹ್ಮಣ ಪದವಿಗೆ ಅರ್ಹತೆ ಪಡೆದಿರುವವರೂ ಅಲ್ಲಿ ಅನೇಕರಿದ್ದಾರೆ.

ಒಮ್ಮೆ ಸ್ವಾಮೀಜಿ ಬೇಲೂರು ಮಠದಲ್ಲಿ ತಮ್ಮ ಇಬ್ಬರು ಶಿಷ್ಯರನ್ನು ಅಂದರೆ ವಿರಜಾನಂದ ಹಾಗೂ ಪ್ರಕಾಶಾನಂದರನ್ನು ದೀಕ್ಷೆ ನೀಡಲು ಪೂಜಾಗೃಹಕ್ಕೆ ಕರೆದುಕೊಂಡು ಹೋದರು. ಅಲ್ಲಿ ಮೂವರೂ ಧ್ಯಾನಕ್ಕೆ ಕುಳಿತುಕೊಂಡರು. ಸ್ವಾಮೀಜಿ ಗಾಢ ಧ್ಯಾನದಲ್ಲಿ ಲೀನರಾದರು. ಸ್ವಲ್ಪ ಹೊತ್ತಿನ ಮೇಲೆ ಆ ಸ್ಥಿತಿಯಿಂದ ಹೊರಬಂದು ಗಂಭೀರ ದನಿಯಲ್ಲಿ ನುಡಿದರು: "ಈಗ ನಾನು ನಿಮ್ಮಲ್ಲಿ ಶಕ್ತಿ ಸಂಚಾರ ಮಾಡುತ್ತೇನೆ. ನನ್ನ ಶಕ್ತಿಯನ್ನು ನಿಮ್ಮಲ್ಲಿ ಹರಿಸಬಯಸುತ್ತೇನೆ." ಅನಂತರ ವಿಧ್ಯುಕ್ತವಾಗಿ ಮಂತ್ರದೀಕ್ಷೆ ನೀಡಿದರು. ನಂತರ ಶಿಷ್ಯರಿಗೆ ಹೇಗೆ ಆಧ್ಯಾತ್ಮಿಕ ತತ್ತ್ವಗಳನ್ನು ಬೋಧಿಸಬೇಕು, ಮಂತ್ರೋಪದೇಶವನ್ನು ನೀಡುವ ಬಗೆ ಹೇಗೆ ಎಂದು ತಿಳಿಸಿಕೊಟ್ಟರು. ಬಳಿಕ ಆ ಇಬ್ಬರು ಶಿಷ್ಯರನ್ನೂ ಢಾಕಾ ಕಡೆ ಕಳುಹಿಸಿದರು.

ತಮ್ಮ ಸೋದರ ಸಂನ್ಯಾಸಿಗಳಾದ ಸ್ವಾಮಿ ಶಾರದಾನಂದ ಹಾಗೂ ಸ್ವಾಮಿ ತುರೀಯಾನಂದರಿಗೆ ಮಂತ್ರೋಪದೇಶ ನೀಡುವ ಅಧಿಕಾರ ಕೊಟ್ಟು, ಗುಜರಾತ್ ಪ್ರದೇಶದಲ್ಲಿ ಧರ್ಮಪ್ರಸಾರ ಮಾಡಲು ಸ್ವಾಮೀಜಿ ಕಳುಹಿಸಿಕೊಟ್ಟರು.

**ಗಾಯತ್ರೀ ಮಂತ್ರೋಪದೇಶ:** ೧೮೯೮ ಇಸವಿಯ ಶ್ರೀರಾಮಕೃಷ್ಣ ಜಯಂತಿ ದಿನ ಬೆಳಿಗ್ಗೆ ೧೦೦ ಯಜ್ಞೋಪವೀತಗಳನ್ನು ತಂದಿಡುವಂತೆ ಸ್ವಾಮೀಜಿ ತಮ್ಮ ಶಿಷ್ಯ ಶರತ್‌ಚಂದ್ರನಿಗೆ ಹೇಳಿದ್ದರು. ಆಮೇಲೆ ಅವನಿಗೆ, ''ನೋಡು ನಮ್ಮ ಶ್ರೀರಾಮಕೃಷ್ಣ ದೇವರ ಮಕ್ಕಳೆಲ್ಲಾ ನಿಜಕ್ಕೂ ಬ್ರಾಹ್ಮಣರೇ ಸರಿ. ಅವರಿಗೆ ಯಜ್ಞೋಪವೀತ ಧಾರಣೆ ಮಾಡಿಸಲು ಇಂದಿನ ದಿನವೇ ಅತ್ಯಂತ ಪ್ರಶಸ್ತವಾದದು. ಆದ್ದರಿಂದ ಕ್ಷತ್ರಿಯ, ವೈಶ್ಯ ಶಿಷ್ಯರಿಗೆ ಗಂಗಾಸ್ನಾನ ಮಾಡಿದ ನಂತರ ನೀನು ಗಾಯತ್ರೀ ಮಂತ್ರ ಉಪದೇಶಮಾಡು. ಇವರೆಲ್ಲರನ್ನೂ ಕ್ರಮೇಣ ಬ್ರಾಹ್ಮಣತ್ವಕ್ಕೆ ಏರಿಸಬೇಕು'' ಎಂದು ಸ್ವಾಮೀಜಿ ಹೇಳಿದರು.

ಆ ದಿನ ಸುಮಾರು ಐವತ್ತಕ್ಕೂ ಹೆಚ್ಚು ಜನ ಗಂಗೆಯಲ್ಲಿ ಸ್ನಾನ ಮಾಡಿ ಬಂದು ಶ್ರೀರಾಮಕೃಷ್ಣರ ಭಾವಚಿತ್ರಕ್ಕೆ ನಮಿಸಿ, ಯಜ್ಞೋಪವೀತ ಧಾರಣೆ ಮಾಡಿ ಗಾಯತ್ರೀ ಮಂತ್ರೋಪದೇಶವನ್ನು ಪಡೆದರು. ನಿಜಕ್ಕೂ ಇದು ಹಿಂದೂಸಂಪ್ರದಾಯಕ್ಕೆ ವಿರುದ್ಧಕಾರ್ಯ. ಸಂಪ್ರದಾಯಸ್ಥರು ಇದರ ಬಗ್ಗೆ ಆಡಿಕೊಂಡು ಮೂಗು ಮುರಿದದ್ದೂ ಉಂಟು. ಆದರೆ ಸ್ವಾಮೀಜಿ ಇವುಗಳಿಗೆಲ್ಲ ಗಮನ ಕೊಡುವವರಲ್ಲ. ಬದಲಾಗಿ ತಾವು ಯಾವ ನೂತನ ಆದರ್ಶವನ್ನು ಸರ್ವರೂ ಅನುಷ್ಠಾನಕ್ಕೆ ತರುವಂತೆ ಮಾಡಬೇಕೆಂದು ಸಂಕಲ್ಪ ಮಾಡಿದ್ದರೋ, ಅದನ್ನು ಧೀರತೆಯಿಂದ ಮಾಡಿ ತೋರಿಸಿದರು.

**ಭಗವನ್ನಾಮ:** ಸಾಮೂಹಿಕ ಯಜ್ಞೋಪವೀತ ಧಾರಣ ಕಾರ್ಯಕ್ರಮ ಮುಗಿದ ನಂತರ ಮಠದ ಸಂನ್ಯಾಸಿಗಳು ಸ್ವಾಮೀಜಿಗೆ ತಮ್ಮ ಮನದಣಿಯೆ ಶಿವನ ವೇಷಭೂಷಣಗಳನ್ನು ಹಾಕತೊಡಗಿದರು. ಆಗ ಸಾಕ್ಷಾತ್ ಭೈರವನೇ ಅವತರಿಸಿದ್ದಾನೆಂದು ಅಲ್ಲಿ ನೆರೆದವರಿಗೆ ಭಾಸವಾಯಿತು. ಆನಂತರ ಸ್ವಾಮೀಜಿ ಪಶ್ಚಿಮ ದಿಕ್ಕಿಗೆ ತಿರುಗಿಕೊಂಡು, ಮುಕ್ತ ಪದ್ಮಾಸನದಲ್ಲಿ ಕುಳಿತುಕೊಂಡು '**ಕೂಜಂತಂ ರಾಮ ರಾಮೇತಿ**' ಎಂಬ ಪ್ರಾರ್ಥನಾ ಶ್ಲೋಕವನ್ನು ಮಧುರವಾಗಿ ಹೇಳುತ್ತಾ, ಅದು ಮುಗಿದ ಮೇಲೆ '**ರಾಮ ರಾಮ ಶ್ರೀ ರಾಮ ರಾಮ**' ಎಂಬುದನ್ನೇ ಪುನಃ ಪುನಃ ಹೇಳತೊಡಗಿದರು. ಅವರ ಅಕ್ಷರಕ್ಷರದಲ್ಲಿಯೂ ಅಮೃತವು ತೊಟ್ಟಿಕ್ಕುವಂತಿತ್ತು. ಸ್ವಾಮೀಜಿಯವರ ಕಣ್ಣುಗಳು ಅರ್ಧ ಮುಚ್ಚಿದೆ. ಕೈಯಲ್ಲಿ ತಂಬೂರಿಯ ಸ್ವರ ಶ್ರುತಿಗೊಡುತ್ತಿದೆ. '**ರಾಮ ರಾಮ ಶ್ರೀರಾಮ ರಾಮ**' ಎಂಬ ಧ್ವನಿಯನ್ನು ಬಿಟ್ಟು ಸ್ವಲ್ಪ ಹೊತ್ತಿನ ತನಕ ಮತ್ತೆ ಯಾವುದೂ ಕೇಳುತ್ತಿರಲಿಲ್ಲ. ಹಿಂದೆ ಸುಮಾರು ಅರ್ಧ ಗಂಟೆಗಿಂತ ಹೆಚ್ಚಾಗಿ ಸ್ವಾಮೀಜಿಯವರ ಬಾಯಿಂದ ಬರುತ್ತಿದ್ದ ರಾಮನಾಮಾಮೃತ ಪಾನ ಮಾಡಿ ಎಲ್ಲರೂ ಮತ್ತರಾಗಿ ಬಿಟ್ಟಿದ್ದರು. 'ಇದೇನು, ಸ್ವಾಮೀಜಿ ಇವತ್ತು ಶಿವಭಾವದಲ್ಲಿ ಮತ್ತರಾಗಿ ರಾಮ ನಾಮವನ್ನು ಹೇಳುವುದಕ್ಕೆ ತೊಡಗಿದ್ದಾರೆ?' ಎಂದು ಎಲ್ಲರೂ ಭಾವಿಸಿಕೊಂಡರು. ರಾಮನಾಮ ಸಂಕೀರ್ತನೆ ಮುಗಿದ ನಂತರ, ಸ್ವಾಮೀಜಿ ಮೊದಲಿನಂತೆ ಆನಂದಪ್ರಮತ್ತತೆಯಲ್ಲಿಯೇ '**ಸೀತಾಪತಿ ರಾಮಚಂದ್ರ ರಘುರಾಯೀ**' ಎಂಬುದಾಗಿ ಗಾನ ಮಾಡಿದರು. ಅನಂತರ ಅವರು ಸ್ವಾಮಿ ಶಾರದಾನಂದರಿಗೆ ಹಾಡಲು ಹೇಳಿ ತಾವೇ ಮೃದಂಗ ನುಡಿಸಿದರು.

**ನಾಮ ಸಂಕೀರ್ತನೆ:** ''ಸ್ವಾಮೀಜಿ, ಭಗವಂತನ ನಾಮ ಸಂಕೀರ್ತನೆ ತುಂಬಾ ಸಹಾಯ ಮಾಡುತ್ತದೆ, ಮನಸ್ಸಿನಲ್ಲಿ ಹರ್ಷಭಾವನೆ ಮೂಡುತ್ತದೆ. ನಮ್ಮ ಪುರಾಣ ಹೀಗೆ ಹೇಳುತ್ತದೆ. ಶ್ರೀಚೈತನ್ಯದೇವನೂ ಜನ ಸಮುದಾಯಕ್ಕೆ ಇದನ್ನೇ ಬೋಧಿಸಿದ್ದು. ಮೃದಂಗ ಬಾರಿಸುತ್ತಿದ್ದಾಗ, ಉಲ್ಲಾಸವಾಗಿ ಎಲ್ಲಿಗೋ ಹೋದಂತೆ ಭಾಸವಾಗಿ ಕುಣಿಯುವ ಹಾಗೆ ಆಗುತ್ತದೆ'' ಎಂದು ಸ್ವಾಮೀಜಿಯವರ ಶಿಷ್ಯ ಹೇಳಿದ.

**ಸ್ವಾಮೀಜಿ:** ''ಅದು ಸರಿ, ಆದರೆ ಕೀರ್ತನೆ ಎಂದರೆ ಬರೀ ಕುಣಿತವೋ ಎಂದು ಯೋಚಿಸಬೇಡ. ನಿನಗಿಷ್ಟ ಬಂದ ರೀತಿಯಲ್ಲಿ ದೇವರ ಮಹಿಮೆ ಹಾಡುವುದು ಎಂದರ್ಥ. ಈ ರೀತಿ ಪ್ರಚಂಡವಾಗಿ ಭಾವೋದ್ರೇಕವನ್ನುಂಟುಮಾಡುವ ಭಾವನೆ ಮತ್ತು ಕುಣಿತ ಒಳ್ಳೆಯದು ಮತ್ತು ಮನಸ್ಸಿಗೆ ಹಿಡಿಸುವಂಥದು ನಿಜ. ಆದರೆ ಇದರ ಸಾಧನೆಯಿಂದ ಉಂಟಾಗುವ ಅಪಾಯದಿಂದಲೂ ನೀವು ಪಾರಾಗಬೇಕು. ಒಂದು ಕಡೆ ಮನಸ್ಸು ಇದ್ದಕ್ಕಿದ್ದಂತೆ ಅತ್ಯುಚ್ಚ ಮಟ್ಟಕ್ಕೆ ಏರುವುದು, ಮತ್ತೊಂದು ಕಡೆ ಸಂಕೀರ್ತನೆ ಮುಕ್ತಾಯವಾದೊಡನೆ ಭಾವನೆಗಳು ಅಷ್ಟೇ ರಭಸವಾಗಿ ಕೆಳಕ್ಕೆ ಬೀಳುವುದು. ಯೋಗ್ಯವಾದ ವಿವೇಕ ಜ್ಞಾನವಿಲ್ಲದಿದ್ದಲ್ಲಿ ಸಹಜವಾಗಿ ಕಾಮ ಮೊದಲಾದ ಕೀಳು ಪ್ರವೃತ್ತಿಗಳಿಗೆ ವಶರಾಗುವೆವು.''

**ನಾಮ ಜಪ:** ''ಭಕ್ತಿಯನ್ನು ಪಡೆಯಬೇಕಾದರೆ ಭಗವಂತನ ನಾಮ ಜಪ ಮಾಡಬೇಕು. ಅವನ ನಾಮ ಅನಂತವಾಗಿದೆ ಹಾಗೂ ಪೂರ್ಣವಾಗಿದೆ. ಭಗವಂತನ ನಾಮ ಭಗವಂತನಿಗಿಂತ ದೊಡ್ಡದು.''

**ಮಂತ್ರೋಚ್ಚಾರಣೆ:** ''ಶಕ್ತಿಗೆಲ್ಲಾ ಕಾರಣ ಮಂತ್ರೋಚ್ಚಾರಣೆ. ಬರಿಯ ಮಂತ್ರೋಚ್ಚಾರಣೆಯಿಂದಲೇ ಎಷ್ಟೋ ಪ್ರಯೋಜನವಿದೆ. ಹಿಂದಿನ ಕಾಲದ ಅಸ್ತ್ರ ಶಕ್ತಿಯ ಹಿಂದೆಲ್ಲ ಮಂತ್ರಶಕ್ತಿ ಇತ್ತು. ನಮ್ಮ ಶಾಸ್ತ್ರದಲ್ಲಿ ಅದನ್ನೂ ನಂಬುವರು. ಈ ಶಾಸ್ತ್ರವೆಲ್ಲ ಬರಿಯ ಕಲ್ಪನೆಯೆಂದು ಹೇಳುವುದು ಒಂದು ಮೂಢನಂಬಿಕೆ.

**ಸ್ವಾಮೀಜಿಯವರ ಔದಾರ್ಯ:** ೧೮೯೮ರ ನವೆಂಬರ್‌ನಲ್ಲಿ ಸ್ವಾಮೀಜಿ ಚಿಕಿತ್ಸೆಗೆ ಬಲರಾಮ ಬಸು ಮನೆಯಲ್ಲಿ ತಂಗಿದ್ದರು. ಆಗ ಅವರು ಪ್ರೇಮದ ಮೂರ್ತರೂಪವೇ ಆಗಿ ಬಿಟ್ಟಿದ್ದರು. ಸಜ್ಜನ ದುರ್ಜನರೆನ್ನದೆ ಸಕಲರೂ ಅವರ ಕೃಪೆಗೆ ಪಾತ್ರರಾಗುತ್ತಿದ್ದರು. ಜಗತ್ತಿನ ದುಃಖ ಅವರೆದೆಗೆ ತೀವ್ರವಾಗಿ ತಟ್ಟುತ್ತಿತ್ತು. ಆಗ ಅವರ ಶಿಷ್ಯ ಹೇಳಿದ, ''ನೀವು ವ್ಯಕ್ತಿಗಳ ಪೂರ್ವಾಪರಗಳನ್ನರಿಯದೆ, ಅವರ ಸ್ವಭಾವಗಳನ್ನು ತಿಳಿದುಕೊಳ್ಳದೆ ಎಲ್ಲರ ಮೇಲೂ ನಿಮ್ಮ ಕೃಪೆ ಹರಿಸುತ್ತೀರಿ. ಇದರಿಂದ ಎಷ್ಟೋ ಜನ ನಿಮ್ಮ ಶಿಷ್ಯರು ನಿಮ್ಮ ಆಶೀರ್ವಾದ ಪಡೆದೂ, ತಮ್ಮ ಹಿಂದಿನ ಚಾಳಿಯನ್ನು ಮುಂದುವರೆಸುತ್ತಿದ್ದಾರೆ.'' ಆಗ ಸ್ವಾಮೀಜಿ ಭಾವಾವಿಷ್ಟರಾಗಿ ನುಡಿದರು, ''ಮಗು, ನಾನು ಒಬ್ಬ ಮನುಷ್ಯನನ್ನು ಅರ್ಥಮಾಡಿಕೊಳ್ಳಲಾರೆನೆಂದು ಹೇಳುವೆಯಾ? ನಾನು ಒಬ್ಬನನ್ನು ನೋಡಿದಾಗ ಅವನ ಒಳಗಿರುವುದು, ಅವನ ಪೂರ್ವಜನ್ಮಗಳನ್ನು ತಿಳಿಯಬಲ್ಲೆ. ಹೀಗಿದ್ದರೂ, ಅಂಥವರ ಮೇಲೆ ನಾನೇಕೆ ಕೃಪೆ ಮಾಡುತ್ತೇನೆ ಬಲ್ಲೆಯಾ? ಪಾಪ, ಆ ಬಡಜೀವಿಗಳು ಮನಶ್ಶಾಂತಿಗಾಗಿ ಎಲ್ಲೆಡೆ ಅಲೆದಾಡಿಬಿಟ್ಟಿದ್ದಾರೆ. ಆದರೆ ಎಲ್ಲರೂ ಅವರನ್ನು ತಿರಸ್ಕರಿಸಿದ್ದಾರೆ. ಆದ್ದರಿಂದ ಅವರು ಕೊನೆಯಲ್ಲಿ ನನ್ನ ಬಳಿ ಬಂದಿದ್ದಾರೆ. ನಾನೂ ಅವರನ್ನು ತಿರಸ್ಕರಿಸಿಬಿಟ್ಟರೆ, ಅವರಿಗೆ ದಿಕ್ಕು ತೋರುವವರು ಯಾರು? ಆದ್ದರಿಂದ ನಾನು ಭೇದ ಮಾಡಲಾರೆ.'' ಸ್ವಾಮೀಜಿಯವರ ಔದಾರ್ಯದ ಅಗಾಧತೆ ತಿಳಿದ ಶಿಷ್ಯರು ಬೆರಗಾದರು.

# ‘‘ಶ್ರೀ ರಾಮಕೃಷ್ಣ ನಾಮವೇ ಕಲಿಯುಗದ ಮಂತ್ರ’’

## (ಸ್ವಾಮಿ ಶಿವಾನಂದರು ಕಂಡಂತೆ ನಾಮಮಹಿಮೆ)

**ಸ್ವಾಮಿ ಸೌಖ್ಯಾನಂದ**

**ಭ**ಗವಂತನ ನಾಮದ ಮಹಿಮೆಯನ್ನು ಎಲ್ಲಾ ಶಾಸ್ತ್ರಗಳು, ಪುರಾಣಗಳು ಮುಕ್ತಕಂಠದಿಂದ ಹೊಗಳಿವೆ. ಅದೇ ರೀತಿ ಎಲ್ಲಾ ಸಾಧುಸಂತರು, ಋಷಿಮುನಿಗಳು ಸಹ ಭಗವಂತನ ನಾಮದ ಮಹಿಮೆಯನ್ನು ಹಾಡಿ ಹೊಗಳಿದ್ದಾರೆ. ಭಗವಂತನ ನಾಮ ಎಲ್ಲಾ ಮನಸ್ಸಿನ ಕೊಳೆಯನ್ನು ತೆಗೆದು ಅವನನ್ನು ಪವಿತ್ರಗೊಳಿಸಬಲ್ಲದು. ಪತಿತರನ್ನು ಪಾವನ ಮಾಡಬಲ್ಲದು. ದೀನರ ದೈನ್ಯತೆಯನ್ನು ಕಳೆಯಬಲ್ಲದು. ದುಃಖಿಗಳ ದುಃಖವನ್ನು ನೀಗಬಲ್ಲದು. ಶಕ್ತಿಹೀನರಿಗೆ ಶಕ್ತಿ ತುಂಬಬಲ್ಲದು. ಅದು ಕಾಮಧೇನು, ಅದು ಕಲ್ಪವೃಕ್ಷ. ಅದರಲ್ಲೂ ಸಹಸ್ರ ನಾಮಗಳ ಫಲಶ್ರುತಿಯಲ್ಲಿ ಭಗವಂತನ ಎರಡು ಅಕ್ಷರದ ಮಹಿಮೆಯನ್ನು ನಾನಾ ಬಗೆಯಾಗಿ ಹೊಗಳಿದ್ದಾರೆ.



ಆದ್ದರಿಂದಲೇ ಪುರಂದಸರದಾಸರು, ‘ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು ಪಾಮರರು ತಾವೇನು ಬಲ್ಲರಯ್ಯಾ’ ಎಂದರು. ಭಗವಂತನ ನಾಮದ ಮಹಿಮೆಯನ್ನು ಕೆಲವರು ಮಾತ್ರ ತಿಳಿದಿದ್ದಾರೆ ಎಂದರು.

ಇನ್ನೊಂದು ಹಾಡಿನಲ್ಲಿ , ‘ಕಲಿಯುಗದಲಿ ಹರಿನಾಮವ ನೆನೆದರೆ ಕುಲಕೋಟಿಗಳು ಉದ್ಧರಿಸುವವೋ ರಂಗ’ ಎಂದಿದ್ದಾರೆ.

ಶ್ರೀರಾಮಕೃಷ್ಣರು ಸಹ ಕಲಿಯುಗದಲ್ಲಿ ಅನ್ನಗತಪ್ರಾಣವಾದ್ದರಿಂದ, ಮನುಷ್ಯ ಹಿಂದಿನ ಯುಗಗಳಲ್ಲಿ ಮಾಡಿದಂತೆ ಕಠೋರ ವಾದ ತಪಸ್ಯೆ ಮಾಡಲಾರನು. ಅದು ಅಸಾಧ್ಯವೂ ಸಹ. ಈ ಯುಗದಲ್ಲಿ ಭಗವಂತನ ನಾಮಸ್ಮರಣೆಯೇ ಸರಳ, ಸುಲಭವಾದ ಸಾಧನೆ. ಅದು ಜೀವರಿಗೆ ಮುಕ್ತಿ ನೀಡಬಲ್ಲದು ಎಂದು ಹೇಳಿದ್ದಾರೆ. ದಾಸರಿಗೆ, ಭಗವಂತನ ನಾಮದಲ್ಲಿ ಅದೆಷ್ಟು ವಿಶ್ವಾಸ, ಅದೆಂಥ ಶ್ರದ್ಧೆ! ಅವರು ‘‘ನೀನ್ಯಾಕೋ ರಂಗ, ನಿನ್ನ ಹಂಗ್ಯಾಕೋ ರಂಗ, ನಿನ್ನ ನಾಮದ ಬಲವೊಂದಿದ್ದರೆ ಸಾಕೊ’’ ಎಂದು ಸಾರಿದ್ದಾರೆ. ರಾಮಭಕ್ತರಿಗೆ ರಾಮ ನಾಮವೇ ತಾರಕ ಮಂತ್ರ. ಕೃಷ್ಣಭಕ್ತರಿಗೆ ಕೃಷ್ಣನಾಮವೇ ತಾರಕ ಮಂತ್ರ. ಕಾಳಿಯ ಭಕ್ತರಿಗೆ ಕಾಳೀ ನಾಮ ಇತ್ಯಾದಿ, ಇತ್ಯಾದಿ. ಇಂದು ಕಲಿಯುಗದಲ್ಲಿ ಸರ್ವದೇವದೇವೀ ಸ್ವರೂಪರಾದ ಶ್ರೀರಾಮಕೃಷ್ಣರ ನಾಮವೇ ತಾರಕ ಮಂತ್ರ ಎಂದು ನಂಬಿದವರು, ಶ್ರೀರಾಮಕೃಷ್ಣರ ಭಕ್ತರು ಮತ್ತು ಶ್ರೀರಾಮಕೃಷ್ಣರ ಶಿಷ್ಯರು. ಶ್ರೀರಾಮಕೃಷ್ಣರ ಶಿಷ್ಯರಾದ ಸ್ವಾಮಿ ಶಿವಾನಂದಜಿ ಮಹಾರಾಜ್ ಅವರ ಮಾತು, ಕೃತಿಗಳಲ್ಲಿ, ಅವರ ಉಪದೇಶಗಳಲ್ಲಿ ಇದನ್ನು ಸ್ಪಷ್ಟವಾಗಿ ಕಾಣುತ್ತೇವೆ.

**ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲಿ ಒಬ್ಬರಾದ ಸ್ವಾಮಿ ಶಿವಾನಂದರು ತಮ್ಮ ಆಧ್ಯಾತ್ಮಿಕ ಔನ್ನತ್ಯದಿಂದಾಗಿ ಅನೇಕಾನೇಕ ಮಂದಿ ಸಾಧಕರ ಜೀವನದಲ್ಲಿ ಬೆಳಕು ನೀಡಿದವರು. ಅವರು ಜಪಸಾಧನೆ, ನಾಮಜಪ ಈ ವಿಷಯಗಳನ್ನು ಕುರಿತಂತೆ ತಮ್ಮ ಶಿಷ್ಯಂದಿರಿಗೆ ಹಾಗೂ ಭಕ್ತರಿಗೆ ನೀಡಿರುವ ನೀಡಿರುವ ಉಪದೇಶ, ಸಲಹೆಗಳನ್ನು ಕುರಿತು ಸರಳ, ಸುಂದರ ನಿರೂಪಣೆ ಮಾಡಿರುವ ಪೂಜ್ಯ ಸ್ವಾಮೀಜಿಯವರು ಬೆಂಗಳೂರು ರಾಮಕೃಷ್ಣ ಮಠದ ಶಾಖಾಕೇಂದ್ರವಾದ ಶಿವನಹಳ್ಳಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

**ಭಗವಂತನ ಅವತಾರ:** ‘ಯಾವಾಗ ಈ ಜಗತ್ತಿನಲ್ಲಿ ಅಧರ್ಮ ಮೇಲೆ ಬಂದು, ಧರ್ಮ ಅವನತಿಯನ್ನು ಹೊಂದುತ್ತದೆಯೋ, ಅಗ ಧರ್ಮ ಸಂಸ್ಥಾಪನೆಗೆ ಹಾಗೂ ಸಜ್ಜನರ ರಕ್ಷಣೆಗೆ ಹಾಗೂ ದುಷ್ಟರ ಶಿಕ್ಷಣೆಗಾಗಿ ನನ್ನ ದೈವಮಾಯೆಯನ್ನು ಅವಲಂಬಿಸಿ ನಾನು ಮಾನುಷರೂಪದಿಂದ ಧರೆಯ ಮೇಲೆ ಅವತರಿಸುತ್ತೇನೆ’ ಎಂಬುದು ಗೀತೆಯಲ್ಲಿ ಶ್ರೀಕೃಷ್ಣನು ನಮಗೆ ನೀಡಿರುವ ಆಶ್ವಾಸನೆ. ಅದರಂತೆ ಶ್ರೀರಾಮಕೃಷ್ಣರು ತಾವೇ ಹೇಳಿದಂತೆ, ‘‘ಯಾರು, ಹಿಂದೆ ರಾಮನಾಗಿ ಬಂದನೋ, ಯಾರು ಕೃಷ್ಣನಾಗಿ ಬಂದನೋ, ಅದೇ ರೀತಿ ಮಾನವ ಕಲ್ಯಾಣಕ್ಕಾಗಿ ಯಾವ ಭಗವಂತನು ಧರೆಯ ಮೇಲೆ ಆಗಾಗ್ಗೆ ಅವತಾರ ಮಾಡಿ ಬರುತ್ತಾನೋ, ಅವನೇ ಇಂದು ಈ ರೂಪದಲ್ಲಿ (ತಮ್ಮನ್ನು ತೋರಿಸುತ್ತಾ) ಬಂದಿದ್ದಾನೆ’’ ಎಂದು ಹೇಳಿದರು. ಅದನ್ನು ತಮ್ಮ ಶಿಷ್ಯರಿಗೆ ಹಾಗೂ ಭಕ್ತರಿಗೆ ಪ್ರಕಟಣೆಗೊಳಿಸುವುದರ ಮೂಲಕ ಜಗತ್ತಿಗೆ ತಾವಾರೆಂದು ತೋರಿಸಿಕೊಟ್ಟರು; ಅವರ ಶಿಷ್ಯರು, ಭಕ್ತರು ಅದನ್ನು ಪ್ರತ್ಯಕ್ಷ ಸಾಕ್ಷಾತ್ಕರಿಸಿಕೊಂಡು ಅದನ್ನು ಅನುಭವಿಸಿ ಜಗತ್ತಿನಲ್ಲೆಲ್ಲ ಅದರ ಮಹಿಮೆಯನ್ನು ಸಾರಿದರು. ಮಹಾಪುರುಷ್ ಮಹಾರಾಜ್, ಅಂದರೆ ಸ್ವಾಮಿ ಶಿವಾನಂದಜಿ ಮಹಾರಾಜ್ ಅವರು ಶ್ರೀರಾಮಕೃಷ್ಣರ ಅಂತರಂಗ ಶಿಷ್ಯರಲ್ಲೊಬ್ಬರು. ಆಧ್ಯಾತ್ಮಿಕ ಜೀವನದ ಉತ್ತುಂಗ ಶಿಖರವನ್ನು ಏರಿ, ಅಲ್ಲಿ ನೆಲೆನಿಂತವರು;

ಸಹಸ್ರಾರು ಜನರಿಗೆ ಆಧ್ಯಾತ್ಮಿಕ ಜೀವನದ ದಾರಿದೀಪವಾದರು. ಅವರ ಅನುಭವವು ಸಹ ''ಸನಾತನವಾದ ಪರಬ್ರಹ್ಮನು ಮಾನವಕಲ್ಯಾಣಕ್ಕಾಗಿ ಶ್ರೀರಾಮಕೃಷ್ಣರೂಪದಿಂದ ಬಂದಿದ್ದಾನೆ'' ಎಂದು. ಅವರ ಜೀವನ ಉಪದೇಶಗಳೇ ಇಂದಿನ ಯುಗಕ್ಕೆ ಪ್ರಸ್ತುತ, ಅವರ ನಾಮವೇ ದಿವ್ಯನಾಮ. ಅವರ ದಿವ್ಯ ನಾಮವೇ ಕಲಿಯ ಮಹಿಮೆಯನ್ನು ಕಳೆದು ಮಾನವನಿಗೆ ಪವಿತ್ರತೆ, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಕರುಣಿಸಬಲ್ಲದು; ಮಾನವನನ್ನು ಭವ ಸಾಗರದಾಚೆ ದಾಟಿಸಬಲ್ಲದು. ಶ್ರೀರಾಮಕೃಷ್ಣರು ಪತಿತೋದ್ಧಾರಕರು, ಅವರ ನಾಮವೇ ಪತಿತಪಾವನ ನಾಮ ಎಂದು ನಂಬಿದವರು ಅವರು; ದೀನರು, ದರಿದ್ರರು, ದುಃಖಿಗಳು, ಸಾಧಕರು, ತಮ್ಮ ಬಳಿಗೆ ಬಂದಾಗ ಮಹಾಪುರಷ ಮಹಾರಾಜರು ಹೇಳುತ್ತಿದ್ದುದು ಇದನ್ನೇ. ಶ್ರೀರಾಮಕೃಷ್ಣರ ದಿವ್ಯನಾಮವನ್ನು ಅವರಿಗೆ ದೀಕ್ಷೆಯ ರೂಪದಲ್ಲಿ ನೀಡಿ ಅವರನ್ನು ಉದ್ಧಾರ ಮಾಡುತ್ತಿದ್ದರು. ಅವರ ಒಳಗೆ-ಹೊರಗೆಲ್ಲ ಅವರು ಶ್ರೀರಾಮಕೃಷ್ಣಮಯರಾಗಿದ್ದರು; ಎಲ್ಲೆಲ್ಲೂ ಶ್ರೀರಾಮಕೃಷ್ಣರ ದಿವ್ಯ ಸಾನ್ನಿಧ್ಯವನ್ನು ಅನುಭವಿಸುತ್ತಿದ್ದರು.

ಒಂದು ದಿನ ಒಬ್ಬ ದೀಕ್ಷಾರ್ಥಿಯಾಗಿ ಮಹಾಪುರುಷ್ ಮಹಾರಾಜರ ಬಳಿ ಬಂದು, 'ತಾವು ನನಗೆ ಕೃಪೆ ಮಾಡಬೇಕು' ಎಂದು ಬೇಡಿದಾಗ, ಮಹಾಪುರುಷ್ ಮಹಾರಾಜರು, 'ನನಗೆ ದೀಕ್ಷೆಯ ಬಗ್ಗೆ ಏನೂ ತಿಳಿಯದು, ನಾನು ಯಾರಿಗೂ ದೀಕ್ಷೆ ಕೊಡುವುದಿಲ್ಲ. ಇದುವರೆಗೂ ನನಗೆ ಯಾವ ಆದೇಶವೂ ದೊರೆತಿಲ್ಲ. ನಾನು ತಿಳಿದುಕೊಂಡಿದ್ದೇನೆ, **ರಾಮಕೃಷ್ಣ ನಾಮವೆ ಯುಗದ ಮಹಾಮಂತ್ರ**. ಯಾರು ಭಕ್ತಿಭರದಿಂದ ಪತಿತಪಾವನ, ಯುಗಾವತಾರ ಠಾಕೂರರ ನಾಮಜಪ ಮಾಡುತ್ತಾರೋ, ಅವರಿಗೆ ಭಕ್ತಿ, ಮುಕ್ತಿ ಎಲ್ಲಾ ಕರತಲಾಮಲಕದಂತೆ. 'ರಾಮಕೃಷ್ಣ' - ಅದೇ ಈ ಯುಗದ ಮುಕ್ತಿದಾಯಕ ನಾಮ. ಜೀವನದ ಮುಕ್ತಿಗೆ ರಾಮಕೃಷ್ಣ ಜಪವೇ ಯಥೇಷ್ಟ, ಬೇರೆ ಪ್ರತ್ಯೇಕವಾದ ದೀಕ್ಷೆಯಲ್ಲಿ ಏನು ಪ್ರಯೋಜನವಿದೆಯೋ ನನಗೆ ತೋರುವುದಿಲ್ಲ. ಯಾರು ಮನೋವಾಕ್ಕಾಯಗಳಿಂದ ಶ್ರೀರಾಮಕೃಷ್ಣರಲ್ಲಿ ಆಶ್ರಯ ಪಡೆಯುತ್ತಾರೋ, ಅವರಿಗೆ ಮುಕ್ತಿ ಸಿದ್ಧವಸ್ತು. ಅದರಲ್ಲಿ ಬಿಂದು ಮಾತ್ರವೂ ಸಂದೇಹವಿಲ್ಲ. ಯಾರು ರಾಮನೋ, ಯಾರು ಕೃಷ್ಣನೋ ಅವನೇ ಇಂದು ರಾಮಕೃಷ್ಣರೂಪದಲ್ಲಿ ಅವಿರ್ಭೂತನಾಗಿದ್ದಾನೆ, ಜೀವರಿಗೆ ಮುಕ್ತಿ ಕೊಡುವುದಕ್ಕಾಗಿ.'' *('ಗುರುವಿನೊಡನೆ ದೇವರಡಿಗೆ', ಪುಟ ೨೧೯-೨೦)*. ಇನ್ನೊಂದು ದಿವಸ ಇನ್ನೊಬ್ಬ ದೀಕ್ಷಾರ್ಥಿ ದೀಕ್ಷೆಗೋಸುಗ ಬೇಡಿದಾಗ ಆ ಭಕ್ತನಿಗೆ ಹೀಗೆ ಹೇಳಿದರು: ''ನನ್ನ ದೀಕ್ಷೆಯಲ್ಲಿ ಮುಚ್ಚುಮರೆ, ರಹಸ್ಯವೇನೂ ಇಲ್ಲ. ನಾನು ತಿಳಿದಿರುವುದೇನೆಂದರೆ, ಯುಗಾವತಾರ ಭಗವಾನ್ ಶ್ರೀರಾಮಕೃಷ್ಣರ ನಾಮಗ್ರಹಣದಿಂದಲೇ ಮುಕ್ತಿ. ಯಾರು ಅವರಿಗೆ ಶರಣಾಗುತ್ತಾರೋ, ಅವರ ಉದ್ಧಾರ ನಿಶ್ಚಯ. ಇದೇ ಯುಗಧರ್ಮ. ಠಾಕೂರರು ಹೇಳುತ್ತಿದ್ದಂತೆ ಬಾದಷಾಹಿ ಆಳ್ವಿಕೆ ನಾಣ್ಯ ಈ ಯುಗದಲ್ಲಿ ಚಲಾವಣೆಯಾಗುವುದಿಲ್ಲ. ಶ್ರೀರಾಮಕೃಷ್ಣರ ನಾಮವೇ ಯುಗದ ಮಂತ್ರ. ದೀಕ್ಷೆ ಎಂದರೆ ಮತ್ತೇನು? ಠಾಕೂರರೇ ದೀಕ್ಷೆ, ಅವರ ನಾಮಜಪ ಮಾಡಿನೋಡು, ಜೊತೆಗೆ ಎದೆ ಮುಟ್ಟಿ ಪ್ರಾರ್ಥನೆ ಮಾಡು: 'ಹೇ ಪ್ರಭು, ನನ್ನ ಮೇಲೆ ದಯೆ ತೋರು' ಎಂದು. ಹೃತ್ಪೂರ್ವಕವಾದ ಪ್ರಾರ್ಥನೆಗೆ ಅವನು ಕಿವಿ ಕೊಟ್ಟೇ ಕೊಡುತ್ತಾನೆ. ಠಾಕೂರರು ತಾವೇ ಹೇಳಿದ್ದಾರೆ ಯಾರು ರಾಮನೋ, ಯಾರು ಕೃಷ್ಣನೋ ಅವನೇ ಇಂದು ಈ ರೂಪದಲ್ಲಿದ್ದಾನೆ ಎಂದು.

''ಇದು ಸ್ವಯಂ ಭಗವಂತನ ಮಾತು ಕಾಣಯ್ಯ, ಯುಗಾವತಾರನ ವಾಣಿ, ನಾವು ಅದನ್ನೇ ಹೇಳುತ್ತೇವೆ. ಈ ಯುಗದಲ್ಲಿ ಠಾಕೂರರ ಹೆಸರಿನಿಂದಲೇ ಮುಕ್ತಿ. ಈ ಅಂಧವಿಶ್ವಾಸವನ್ನೇ ಹಿಡಿದು ಬದುಕಲು ಸಮರ್ಥನಾದರೆ ಬಾ, ನನಗೆ ತಿಳಿದಿರುವುದನ್ನು ಹೃದಯ ತೆರೆದು ಹೇಳಿಕೊಡುತ್ತೇನೆ. ಇಲ್ಲದಿದ್ದರೆ ತರ್ಕ, ಯುಕ್ತಿ ಮಾಡಿಕೊ. ಆಮೇಲೆ ಸಮಯ ಬಂದಾಗ ಬರುವಿಯಂತೆ. ಇದೇನು ಮತಭ್ರಾಂತಿಯಲ್ಲ, ಪ್ರತ್ಯಕ್ಷ ಸತ್ಯ. ನಾವು ತಿಳಿದಿರುವಂತೆ ಠಾಕೂರರೇ ಸ್ವಯಂ ಸನಾತನ ಪರಬ್ರಹ್ಮ. ಇಂತಹ ವಿಶ್ವಾಸ ಬೇಕು. ನೀನು ಒಳ್ಳೆಯ ಹುಡುಗ.'' *('ಗುರುವಿನೊಡನೆ ದೇವರಡಿಗೆ', ಪುಟ ೩೫೭-೫೮)*

ಇದೇ ವಾಣಿ, ಇದೇ ವಿಶ್ವಾಸ, ನಂಬಿಕೆ ಅನುಭವಗಳನ್ನು ಬೇರೆ ಶಿಷ್ಯರ ಜೀವನ ಉಪದೇಶಗಳಲ್ಲೂ ಕಾಣುತ್ತೇವೆ.

ಶ್ರೀರಾಮಕೃಷ್ಣರ ದಿವ್ಯನಾಮದಲ್ಲಿ ಸರ್ವಸ್ವವೂ ಅಡಗಿದೆ ಎಂಬುದನ್ನು ಅವರು ತಿಳಿದಿದ್ದರು; ಅದನ್ನೇ ಬೋಧಿಸಿದರು.

ನಾಮಜಪ, ಸ್ಮರಣೆ ಬಗ್ಗೆ ಇತರ ಸಲಹೆಗಳು:

೧. **ಭಗವಂತನ ನಾಮಸ್ಮರಣೆಗೆ ಕಾಲ-ಅಕಾಲ ಎಂಬುದಿಲ್ಲ.**
೨. **ಭಗವಂತನನ್ನು ಸರ್ವಕಾಲಗಳಲ್ಲೂ ಜಪಿಸಬಹುದು.**
೩. **ಕೈಯಲ್ಲಿ ಕೆಲಸ ಬಾಯಲ್ಲಿ ಸ್ಮರಣೆ ನಿರಂತರವಾಗಿ ನಡೆಯುತ್ತಿರಲಿ.**

ನಿರ್ಜನ ಪ್ರದೇಶದಲ್ಲಿ ಯಾವ ಶಬ್ದವನ್ನೂ ಮಾಡದೆ ಭಗವನ್ನಾಮೋಚ್ಚಾರಣೆ ಮಾಡುವುದಕ್ಕೆ ಜಪ ಅಂತ ಹೆಸರು. ಏಕಾಗ್ರಚಿತ್ತದಿಂದ ಆತನ ನಾಮೋಚ್ಚಾರಣೆ ಮಾಡುತ್ತ ಮಾಡುತ್ತ ಎಂದರೆ - ಜಪ ಮಾಡುತ್ತ ಮುಂದುವರಿದರೆ ಆತನ ರೂಪ ದರ್ಶನವಾಗುತ್ತದೆ, ಎಂದರೆ ಆತನ ಸಾಕ್ಷಾತ್ಕಾರ ದೊರೆಯುತ್ತದೆ. ಒಂದು ಮರದ ದಿಮ್ಮಿಗೆ ಸರಪಣಿಯ ಒಂದು ಕೊನೆಯನ್ನು ಕಟ್ಟಿ ಆ ದಿಮ್ಮಿಯನ್ನು ಗಂಗಾನದಿಯಲ್ಲಿ ಮುಳುಗಿಸಿ ಅದೇ ಸರಪಣಿಯ ಕೊಂಡಿಯಾದ ಮೇಲೆ ಕೊಂಡಿಯನ್ನು ಒಂದೊಂದನ್ನಾಗಿ ಹಿಡಿದು ಹಿಡಿದು ನೀರಿಗಿಳಿದು ಮುಂದುವರಿಯುತ್ತಿದ್ದರೆ ಕೊನೆಗೆ ಹೋಗಿ ಆ ದಿಮ್ಮಿಯನ್ನು ಮುಟ್ಟಬಹುದು. ಅದೇ ರೀತಿ ಜಪ ಮಾಡುತ್ತ ಮಾಡುತ್ತ ಆತನಲ್ಲೇ ಮಗ್ನವಾಗಿಬಿಟ್ಟರೆ, ಕೊನೆಗೆ ಆತನ ಸಾಕ್ಷಾತ್ಕಾರ ದೊರೆಯುತ್ತದೆ.

*-ಶ್ರೀರಾಮಕೃಷ್ಣ*

# ಸ್ವಾಮಿ ಬ್ರಹ್ಮಾನಂದರ ಉಪದೇಶಗಳಲ್ಲಿ ನಾಮ ಮಹತ್ವ

ಬ್ರಹ್ಮಚಾರಿ ಶಾಂತಿಚೈತನ್ಯ



ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಮಾನಸಪುತ್ರರೆಂದೇ ಕರೆಯಲ್ಪಟ್ಟ ಸ್ವಾಮಿ ಬ್ರಹ್ಮಾನಂದರು ಒಬ್ಬರು ಅಸಾಧಾರಣ ಆಧ್ಯಾತ್ಮಿಕ ಮೇರುಶಿಖರವಾಗಿದ್ದರು. ತಮ್ಮ ಗುರುಗಳ ಸಂದೇಶ ಹಾಗೂ ಪರಂಪರೆಯನ್ನು ಮುಂದುವರಿಸುತ್ತಾ, ಆಧ್ಯಾತ್ಮಿಕ ಜೀವನವನ್ನು ಕುರಿತು ಹಲವು ಉಪಯುಕ್ತವಾದ ಉಪದೇಶಗಳನ್ನು ತಮ್ಮ ಶಿಷ್ಯಂದಿರ ಮೂಲಕ ಅವರು ಕೊಟ್ಟು ಹೋಗಿದ್ದಾರೆ. ಅವರ ಉಪದೇಶಗಳಲ್ಲಿ ನಾಮ, ಜಪ ಇವುಗಳ ಮಹತ್ವವನ್ನು ಕುರಿತು ಬರೆದಿರುವ ಲೇಖಕರು ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರವಾದ ಬೇಲೂರು ಮಠದಲ್ಲಿ ಸೇವಾನಿರತರಾಗಿದ್ದಾರೆ.

ಭಗವಾನ್ ಶ್ರೀರಾಮಕೃಷ್ಣರ ಮಾನಸಪುತ್ರರೆಂದೇ ಖ್ಯಾತರಾದ ಸ್ವಾಮಿ ಬ್ರಹ್ಮಾನಂದರದು ಅಸದೃಶ ಆಧ್ಯಾತ್ಮಿಕ ವ್ಯಕ್ತಿತ್ವ. ಅದಕ್ಕಾಗಿಯೇ ರಾಮಕೃಷ್ಣ ಸಂಪ್ರದಾಯದಲ್ಲಿ ಅವರದು ವಿಶಿಷ್ಟ ಸ್ಥಾನ. ಸಾಕ್ಷಾತ್ ಶಿವನ ಅಂಶಸಂಭೂತರೂ ಸಪ್ತರ್ಷಿಗಳಲ್ಲಿ ಒಬ್ಬರೂ ಆದ ಸ್ವಾಮಿ ವಿವೇಕಾನಂದರೇ ತಮ್ಮ ಈ ಸೋದರ ಶಿಷ್ಯನ ಆಧ್ಯಾತ್ಮಿಕ ಉನ್ನತಿಯನ್ನು ಹಲವು ಬಾರಿ ಕೊಂಡಾಡಿದ್ದಾರೆ. ಸ್ವಾಮಿ ಬ್ರಹ್ಮಾನಂದರು ತಮಗಿಂತಲೂ ಹೆಚ್ಚು ಆಧ್ಯಾತ್ಮಿಕಸಂಪನ್ನರು ಎಂದೂ ನುಡಿದಿದ್ದಾರೆ. ಶ್ರೀರಾಮಕೃಷ್ಣರ ಮತ್ತೊಬ್ಬ ಸಾಕ್ಷಾತ್ ಶಿಷ್ಯರಾದ ಸ್ವಾಮಿ ರಾಮಕೃಷ್ಣಾನಂದರಿಗಂತೂ ಶ್ರೀರಾಮಕೃಷ್ಣರಲ್ಲಿ ಎಷ್ಟು ಶ್ರದ್ಧಾಭಕ್ತಿಗಳಿದ್ದವೋ ಅದಕ್ಕೆ ಸರಿಸಮನಾಗಿ ಸ್ವಾಮಿ ಬ್ರಹ್ಮಾನಂದರಲ್ಲೂ ಸಹ ಅಷ್ಟೇ ಶ್ರದ್ಧಾಭಕ್ತಿಗಳಿದ್ದವು.

ಸ್ವಾಮಿ ಬ್ರಹ್ಮಾನಂದರ ವಿಶೇಷತೆ ಎಂದರೆ ಅವರು ಆಧ್ಯಾತ್ಮಿಕ ಪಿಪಾಸುಗಳಿಗೆ ಸಾಧನೆಯಲ್ಲಿ ಮುಂದುವರೆಯಲು ಬಗೆಬಗೆಯಾಗಿ ನೀಡುತ್ತಿದ್ದ ಪ್ರೋತ್ಸಾಹ ಮತ್ತು ಮಾರ್ಗದರ್ಶನ. ಸರಳ ಹಾಗೂ ನೇರನುಡಿಗಳಲ್ಲಿ ತಮ್ಮ ಸ್ವಂತ ಅನುಭವದಿಂದ ದೃಢೀಕರಿಸಿಕೊಂಡ ಆಧ್ಯಾತ್ಮಿಕ ವಿಚಾರಗಳನ್ನು ಅವರು ಇತರರಿಗೆ ಧಾರೆಯೆರೆಯುತ್ತಿದ್ದರು. ಹಾಗೆಂದ ಮಾತ್ರಕ್ಕೆ ಅವರು ಅವಕಾಶ ದೊರೆತಾಗಲೆಲ್ಲ ಯಾರೆಂದರೆ ಅವರ ಮುಂದೆ ತಮ್ಮ ಉಪದೇಶದ ಸುರುಳಿಯನ್ನು ಬಿಚ್ಚುತ್ತಿದ್ದರು ಎಂದು ತಿಳಿಯಬಾರದು. ತೀರ ಪ್ರಾಪಂಚಿಕರೇನಾದರೂ ಅವರನ್ನು ಭೇಟಿಮಾಡಲು ಬಂದರೆ ಅವರು ಕೇವಲ ಲೋಕಾಭಿರಾಮ ಮಾತುಗಳನ್ನಾಡಿ ಅಥವಾ ಹಾಸ್ಯಚಟಾಕಿಗಳನ್ನು ಹಾರಿಸುತ್ತ ಬಂದವರು ತಬ್ಬಿಬ್ಬಾಗುವಂತೆ ಮಾಡಿಬಿಡುತ್ತಿದ್ದರು. ಆದರೆ ಶ್ರದ್ಧಾವಂತ ಸಾಧಕರಿಗೆ, ಅದರಲ್ಲೂ ಸಂನ್ಯಾಸಿ ಬ್ರಹ್ಮಚಾರಿಗಳಿಗೆ ಅವರು ಸದಾ ಸ್ಫೂರ್ತಿಯ ಸೆಲೆಯಾಗಿದ್ದರು. ಅವರು ಸಾಧಾರಣವಾಗಿಯೇ ಎಂತಹ ಉನ್ನತ ಭಾವಾವಸ್ಥೆಯಲ್ಲಿ ಇರುತ್ತಿದ್ದರೆಂದರೆ ಮೌಖಿಕವಾಗಿ ಉಪದೇಶ ನೀಡದಿದ್ದರೂ ಅವರ ಸಾನ್ನಿಧ್ಯವೇ ಭಕ್ತರಲ್ಲಿ ಅಗಾಧವಾದ ಶಾಂತಿಯನ್ನೂ ದೈವೀಭಾವವನ್ನೂ ತುಂಬಿ ಭಗವನ್ಮುಖರನ್ನಾಗಿಸುತ್ತಿತ್ತು.

ಸ್ವಾಮಿ ಬ್ರಹ್ಮಾನಂದರು ಆಧ್ಯಾತ್ಮಿಕ ಜೀವನದಲ್ಲಿ ಉಳಿದೆಲ್ಲ ಸಾಧನೆಗಳಿಗಿಂತ ನಾಮಜಪಕ್ಕೆ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದರು. ಅವರ ಪ್ರಕಾರ ಭಗವಂತನ ಬಳಿಸಾರಲು ಇರುವ ಸುಲಭದ ಉಪಾಯವೆಂದರೆ ಆತನ ಅವಿರತ ಸ್ಮರಣೆ, ಆತನ ನಾಮಜಪ. ಯಾವುದೇ ಕೆಲಸದಲ್ಲಿ ತೊಡಗಿದ್ದರೂ ಕೂಡ ಆತನ ನಾಮವು ಸ್ರೋತದಂತೆ ಸದಾ ನಮ್ಮಲ್ಲಿ ಎಡೆಬಿಡದೆ

ಹರಿಯುತ್ತಿರಬೇಕು. ಈ ಸಾಧನೆಯನ್ನು ಅವರು 'ಸಹಜಯೋಗ' ಎಂದು ಕರೆಯುತ್ತಿದ್ದರು. ಅವ್ಯಾಹತ ನಾಮಜಪದಿಂದ ಮನಸ್ಸಿನ ಎಲ್ಲ ತಾಪಗಳೂ ಶಾಂತಗೊಳ್ಳುತ್ತವೆ. ಎಷ್ಟೋ ಪಾಪಿಗಳು ಭಗವಂತನ ನಾಮಜಪದ ಬಲದಿಂದಲೇ ಪುನೀತರಾಗಿದ್ದಾರೆ. ಭಗವಂತನಲ್ಲಿ ಮತ್ತು ಆತನ ನಾಮದ ಮಹಿಮೆಯಲ್ಲಿ ದೃಢ ಶ್ರದ್ಧೆಯನ್ನು ಬೆಳೆಸಿಕೊಳ್ಳಬೇಕು ಮತ್ತು ಇವೆರಡೂ ಬೇರೆಯಲ್ಲ, ಒಂದೇ ಎಂದು ತಿಳಿಯಬೇಕೆಂದು ಸ್ವಾಮಿ ಬ್ರಹ್ಮಾನಂದರು ಮತ್ತೆ ಮತ್ತೆ ಉಪದೇಶಿಸುತ್ತಿದ್ದರು.

ಸ್ವತಃ ಬ್ರಹ್ಮಾನಂದರೇ ತಮ್ಮ ಸಾಧನಾವಸ್ಥೆಯಲ್ಲಿ ಮುಖ್ಯವಾಗಿ ಜಪವನ್ನು ಅವಲಂಬಿಸಿದ್ದರು ಎಂದು ಕಂಡುಬರುತ್ತದೆ. 'ವಚನವೇದ' ದಲ್ಲಿ ಶ್ರೀರಾಮಕೃಷ್ಣರು ರಾಖಾಲನನ್ನು ಕುರಿತು ಹೇಳಿರುವ ಈ ಮಾತುಗಳು ಉಲ್ಲೇಖಾರ್ಹ: ''ಆಹ, ರಾಖಾಲ ಈಗ ಕೆಲವು ಕಾಲದಿಂದ ಎಂಥ ಒಳ್ಳೆ ಗುಣಗಳನ್ನು ಬೆಳೆಸಿಕೊಂಡುಬಿಟ್ಟಿದ್ದಾನೆ! ಆತನ ಮುಖವನ್ನು ದೃಷ್ಟಿಸಿ ನೋಡಿ. ಆಗಾಗ ತುಟಿಗಳು ಅಲುಗುತ್ತಿರುತ್ತವೆ. ಅಂತರ್ಯದಲ್ಲಿ ಆತ ಭಗವನ್ನಾಮೋಚ್ಚಾರಣೆ ಮಾಡುತ್ತಿರುವುದರಿಂದ ಆತನ ತುಟಿಗಳು ಅಲುಗುತ್ತಿರುತ್ತವೆ.''

ಬಹುಶಃ ಬ್ರಹ್ಮಾನಂದರಿಗೆ ಭಗವಂತನ ನಾಮದಲ್ಲಿ ಇಂತಹ ಅಚಲ ಶ್ರದ್ಧೆಯುಂಟಾಗಲು ಶ್ರೀರಾಮಕೃಷ್ಣರೇ ಕಾರಣ. ಬ್ರಹ್ಮಾನಂದರೇ ಒಂದೆಡೆ ಹೇಳಿರುವಂತೆ ಶ್ರೀರಾಮಕೃಷ್ಣರೊಮ್ಮೆ ಭಕ್ತರಿಗೆ ವಿವಿಧ ಉಪದೇಶಗಳನ್ನು ನೀಡುತ್ತಾ ಶಬ್ದಬ್ರಹ್ಮದ ಬಗ್ಗೆ ವಿವರಿಸಿದರು. ಇದರಿಂದ ಪ್ರಭಾವಗೊಂಡು ಅಂದೇ ಅವರು ಶಬ್ದಬ್ರಹ್ಮವನ್ನು ಕುರಿತು ಧ್ಯಾನ ಮಾಡಿ ಅದರ ಸಾಕ್ಷಾತ್ಕಾರ ಮಾಡಿಕೊಂಡರಂತೆ.

ಶ್ರೀಮದ್ಭಾಗವತದಲ್ಲಿ ಭಗವಂತನ ನಾಮಸಂಕೀರ್ತನೆಯನ್ನು ಕುರಿತು ಒಂದು ಸುಂದರ ಶ್ಲೋಕವಿದೆ:

**ಕಲೇರ್ದೋಷನಿಧೇ ರಾಜನ್ ಅಸ್ತಿ ಹ್ಯೇಕೋ ಮಹಾನ್ ಗುಣಃ।**
**ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಮ್ ವ್ರಜೇತ್ ॥**

'ಎಲೈ ರಾಜನೆ, ಕಲಿಯುಗವು ಅನೇಕ ದೋಷಗಳಿಂದ ಕೂಡಿದ್ದರೂ ಈ ಯುಗದಲ್ಲಿ ಒಂದು ಮಹತ್ತರವಾದ ಗುಣವಿದೆ. ಅದೇನೆಂದರೆ ಕೇವಲ ಕೃಷ್ಣನ ಸಂಕೀರ್ತನೆಯಿಂದಲೇ ಸಂಸಾರ ಬಂಧನದಿಂದ ಪಾರಾಗಿ ಮುಕ್ತಿಯನ್ನು ಪಡೆಯಬಹುದು' *(೧೨.೩.೫೧)*. ಸ್ವಾಮಿ ಬ್ರಹ್ಮಾನಂದರೂ ಸಹ ಕಲಿಯುಗಕ್ಕೆ ನಾಮಜಪವೇ ಹೆಚ್ಚು ಸೂಕ್ತವಾದದ್ದು ಎಂದು ಹಲವು ಬಾರಿ ಹೇಳಿದ್ದಾರೆ. ಒಮ್ಮೆ ಸಾಧಕರೊಬ್ಬರು ತಮ್ಮ ಕಷ್ಟವನ್ನು ಅವರ ಮುಂದೆ ತೋಡಿಕೊಳ್ಳುತ್ತಾ, ''ಧ್ಯಾನಕ್ಕೆ ಕುಳಿತಾಗ ನನ್ನ ಮನಸ್ಸು ಇಡೀ ಜಗತ್ತನ್ನು ಸುತ್ತಲಾರಂಭಿಸುತ್ತದೆ. ಕೊನೆ ಮೊದಲಿಲ್ಲದೆ ಇಲ್ಲಸಲ್ಲದ ವಿಷಯಗಳನ್ನು ಕುರಿತು ಚಿಂತಿಸುತ್ತದೆ. ಈ ಚಂಚಲ ಮನಸ್ಸನ್ನು ತಡೆಹಿಡಿಯುವುದು ಹೇಗೆ?'' ಎಂದು ಕೇಳಿದರು. ಆಗ ಬ್ರಹ್ಮಾನಂದರು, ''ಮೊದಮೊದಲಿಗೆ ಈ ರೀತಿ ಆಗುವುದು ಸಹಜವೇ. ಈ ಕಲಿಯುಗದಲ್ಲಿ ನಾಮಜಪವೇ ಸುಲಭೋಪಾಯ. ಸತತವಾಗಿ ಜಪವನ್ನು ಮಾಡುವುದರಿಂದ ಮನಸ್ಸನ್ನು ಶಾಂತಗೊಳಿಸಬಹುದು ಮತ್ತು ಕಾಲಕ್ರಮೇಣ ಭಗವಂತನಲ್ಲಿ ಸಂಪೂರ್ಣವಾಗಿ ಒಂದಾಗಿಸಬಹುದು. ಗುರಿಯನ್ನು ತಲುಪುವುದಕ್ಕೆ ಬೇರೆ ಮಾರ್ಗಗಳು ಇವೆ. ಆದರೆ ಈ ಕಾಲಕ್ಕೆ ಅವೆಲ್ಲ ಕಷ್ಟಕರ. ಆದ್ದರಿಂದ ನೀನು ಸಾಧ್ಯವಾದಷ್ಟು ಮಟ್ಟಿಗೆ ಜಪವನ್ನು ಅಭ್ಯಾಸ ಮಾಡು. ಜಪ ಮಾಡುವಾಗ ನಿನ್ನ ಇಷ್ಟದೈವವನ್ನು ಕುರಿತು ಧ್ಯಾನಿಸು. ಜಪ ಮತ್ತು ಧ್ಯಾನ ಜೊತೆಜೊತೆಯಾಗಿ ಸಾಗಿದಾಗ ಶೀಘ್ರವಾಗಿ ಗುರಿಯನ್ನು ತಲುಪಬಹುದು'' ಎಂದು ಆ ಸಾಧಕನಿಗೆ ಉಪದೇಶಿಸಿದರು.

ಮತ್ತೊಂದು ಸಂದರ್ಭದಲ್ಲಿ ಸ್ವಾಮಿ ಬ್ರಹ್ಮಾನಂದರು ಮನಸ್ಸನ್ನು ನಿಗ್ರಹಿಸುವ ಮಾರ್ಗವನ್ನು ವಿವರಿಸುತ್ತ ಹೀಗೆಂದರು: ''ಜಪ ಮತ್ತು ಧ್ಯಾನ ಮನಸ್ಸಿಗೆ ಆಹಾರವಿದ್ದಂತೆ. ಅವುಗಳನ್ನು ನಿಯಮಿತವಾಗಿ ಅಭ್ಯಾಸ ಮಾಡಬೇಕು. ಮೊದಮೊದಲು ಅವುಗಳು ನಮಗೆ ನೀರಸವಾಗಿ ಕಂಡರೂ ಪ್ರತಿನಿತ್ಯ ತಪ್ಪದೇ ಅಭ್ಯಾಸ ಮಾಡಬೇಕು. ಸತತ ಅಭ್ಯಾಸದಿಂದ ಮಾತ್ರವೇ ಜಪ-ಧ್ಯಾನಗಳಲ್ಲಿ ರುಚಿಯುಂಟಾಗುವುದು.''

ಬ್ರಹ್ಮಾನಂದರ ಶಿಷ್ಯರೊಬ್ಬರು ಅವರನ್ನು ಕುಂಡಲಿನೀ ಶಕ್ತಿಯನ್ನು ಜಾಗೃತಗೊಳಿಸುವ ಉಪಾಯವನ್ನು ಕೇಳಿದಾಗ ಅವರೆಂದರು, ''ಕೆಲವರ ಪ್ರಕಾರ ಕುಂಡಲಿನಿಯನ್ನು ಜಾಗೃತಗೊಳಿಸಲು ವಿಶೇಷ ಸಾಧನೆಗಳಿವೆ. ಆದರೆ ನನ್ನ ಅಭಿಪ್ರಾಯದಲ್ಲಿ ಜಪ ಮತ್ತು ಧ್ಯಾನವೇ ಇದಕ್ಕಿರುವ ಅತ್ಯುತ್ತಮ ಸಾಧನೆಗಳು. ಈಗಿನ ಕಾಲಕ್ಕೆ ಜಪವೇ ಹೆಚ್ಚು ಸೂಕ್ತವಾದದ್ದು.''

ನಾಮಜಪವು ಸಂಪೂರ್ಣ ಫಲವನ್ನು ನೀಡಬೇಕಾದರೆ ಕೆಲವು ಪೂರಕವಾದ ಸಾಧನೆಗಳು ಅತ್ಯಾವಶ್ಯಕ. ಸ್ವಾಮಿ ಬ್ರಹ್ಮಾನಂದರು ಚೈತನ್ಯ ಮಹಾಪ್ರಭುಗಳ ಈ ಕೆಳಗಿನ ಸುಪರಿಚಿತ ಸಾಲುಗಳನ್ನು ಮತ್ತೆ ಮತ್ತೆ ಉದ್ಧರಿಸುತ್ತಿದ್ದರೆಂದು ಅವರ ಆಪ್ತ ಶಿಷ್ಯರಾದ ಸ್ವಾಮಿ ಪ್ರಭವಾನಂದರಿಂದ ನಮಗೆ ತಿಳಿದುಬರುತ್ತದೆ.

**ತೃಣಾದಪಿ ಸುನೀಚೇನ ತರೋರಪಿ ಸಹಿಷ್ಣುನಾ ।**
**ಅಮಾನಿನಾ ಮಾನದೇನ ಕೀರ್ತನೀಯಃ ಸದಾ ಹರಿಃ ॥**

''ತೃಣಕ್ಕಿಂತಲೂ ನಿಕೃಷ್ಟನಾಗಿ, ಮರಕ್ಕಿಂತಲೂ ಸಹನೆಯುಳ್ಳವನಾಗಿ, ತನ್ನ ಅಭಿಮಾನವನ್ನು ತೊರೆದು, ಇತರರಿಗೆ ಮನ್ನಣೆಯನ್ನು ಕೊಡುತ್ತ ಯಾವಾಗಲೂ ಶ್ರೀಹರಿಯ ಕೀರ್ತನೆಯನ್ನು ಮಾಡಬೇಕು.'' *(ಶಿಕ್ಷಾಷ್ಟಕ, ೩)* ಇದರ ಜೊತೆಗೆ ಅವರು ನೀಡುತ್ತಿದ್ದ ಮತ್ತೊಂದು ಉಪದೇಶವೆಂದರೆ, ''ಯಾವಾಗಲೂ ಸತ್ಯವನ್ನೇ ಹೇಳು. ಆದರೆ ಮತ್ತೊಬ್ಬರಿಗೆ ಘಾಸಿಯನ್ನು ಉಂಟುಮಾಡಬಹುದಾದ ಸತ್ಯವನ್ನು ಹೇಳಬೇಡ.''

ಸ್ವಾಮಿ ಬ್ರಹ್ಮಾನಂದರು ತಮ್ಮ ಶಿಷ್ಯರಿಗೆ ಸಾಧನೆಯನ್ನು ತೀವ್ರಗೊಳಿಸುವುದರ ಕುರಿತು ಕಿವಿಮಾತೊಂದನ್ನು ಹೇಳುತ್ತಿದ್ದರು. ಸಾಧನೆಯ ಪ್ರಾರಂಭಾವಸ್ಥೆಯಲ್ಲಿ ಜಪ ಮತ್ತು

ಧ್ಯಾನಗಳಲ್ಲಿ ನಿಧಾನಗತಿಯಲ್ಲಿ ಮುಂದುವರಿಯಬೇಕು. ಜಪದ ಸಮಯವನ್ನು ಹಂತಹಂತವಾಗಿ ಹೆಚ್ಚುಮಾಡುವುದು ಒಳ್ಳೆಯದು. ಇಂದು ಒಂದು ತಾಸು ಸಮಯವನ್ನು ಜಪದಲ್ಲಿ ಕಳೆದರೆ ಕೆಲವು ದಿನಗಳ ನಂತರ ಅರ್ಧತಾಸು ಹೆಚ್ಚಿಸಬೇಕು. ಹೀಗೆ ಕ್ರಮೇಣ ಮುಂದುವರೆಯಲು ಪ್ರಯತ್ನಿಸಬೇಕು. ಹೀಗಲ್ಲದೆ ಕ್ಷಣಿಕ ಉತ್ಸಾಹದಲ್ಲಿ ಒಮ್ಮೆಗೇ ವಿಪರೀತವಾಗಿ ಜಪ-ಧ್ಯಾನದಲ್ಲಿ ತೊಡಗಿದರೆ ಶಾರೀರಿಕ ಹಾಗೂ ಮಾನಸಿಕ ಅಸ್ವಸ್ಥತೆಗೆ ಗುರಿಯಾಗಬಹುದೆಂದು ಎಚ್ಚರಿಸುತ್ತಿದ್ದರು.

ಜಪದ ಬಗ್ಗೆ ಸಾಧಾರಣವಾಗಿ ಎರಡು ತಪ್ಪು ಕಲ್ಪನೆಗಳು ಅನೇಕರಲ್ಲಿ ಮನೆ ಮಾಡಿರುತ್ತವೆ. ಮೊದಲನೆಯದಾಗಿ ಯಾಂತ್ರಿಕವಾಗಿ ಜಪ ಮಾಡಿದರೆ ಯಥೇಷ್ಟ, ಜಪ ಮಾಡುವಾಗ ದೇವರ ಕುರಿತು ಚಿಂತಿಸದಿದ್ದರೂ ಪರವಾಗಿಲ್ಲ ಎಂಬುದು. ಬ್ರಹ್ಮಾನಂದರು ಹೇಳುವಂತೆ ಯಾಂತ್ರಿಕವಾಗಿ ಮಾಡಿದ ನಾಮ ಜಪ ಸಂಪೂರ್ಣವಾಗಿ ನಿರರ್ಥಕವಾಗದಿದ್ದರೂ, ಅದು ನಮ್ಮನ್ನು ಆಧ್ಯಾತ್ಮಿಕ ಉನ್ನತಿಗೆ ಕೊಂಡೊಯ್ಯಲಾರದು. ಮಂತ್ರವನ್ನು ಜಪಿಸುವುದರ ಜೊತೆಗೆ ದೇವರ ಧ್ಯಾನವೂ ಅತ್ಯವಶ್ಯ. ಆದ್ದರಿಂದಲೇ ಕೆಲವು ಸಂಪ್ರದಾಯಗಳಲ್ಲಿ ಗುರುಗಳು ಜಪದ ಸಮಯದಲ್ಲಿ ಮಂತ್ರದ ಅರ್ಥವನ್ನು ಕುರಿತು ಧ್ಯಾನಿಸಬೇಕೆಂದು ಉಪದೇಶಿಸುವುದುಂಟು. ಆದರೆ ಈ ಉಪದೇಶ ಮತ್ತೊಂದು ತಪ್ಪುಕಲ್ಪನೆಗೆ ಎಡೆಮಾಡಿಕೊಟ್ಟಿದೆ. ಒಮ್ಮೆ ಭಕ್ತರೊಬ್ಬರು ಬ್ರಹ್ಮಾನಂದರನ್ನು ಈ ಕುರಿತಾಗಿ ಪ್ರಶ್ನಿಸಿದರು, ''ಮಂತ್ರದ ಅರ್ಥವನ್ನು ಹೇಗೆ ಚಿಂತಿಸುವುದು? ಮಂತ್ರದ ಅಕ್ಷರಗಳನ್ನು ಒಂದೊಂದಾಗಿ ಚಿಂತಿಸಬೇಕೇ ಅಥವಾ ಮಂತ್ರದ ಒಟ್ಟರ್ಥ ವನ್ನು ಚಿಂತಿಸಬೇಕೆ?'' ಬ್ರಹ್ಮಾನಂದರು ಆಗ ನೀಡಿದ ಉತ್ತರ ಮೇಲ್ನೋಟಕ್ಕೆ ಸರಳವಾಗಿ ಕಂಡರೂ ತನ್ನ ಒಡಲಿನಲ್ಲಿ ಗಹನತತ್ತ್ವವನ್ನು ತುಂಬಿಕೊಂಡಿರುವಂಥದು. ಅವರು ಹೇಳಿದರು, ''ನಿನಗೆ ಮಂತ್ರ ಏನೆಂದು ಗೊತ್ತಿದೆಯೆ? ಅದು ನಾವು ಇನ್ನೊಬ್ಬರನ್ನು ಹೆಸರಿಟ್ಟು ಕೂಗುವಂತೆ. ನಾನು ಯಾವಾಗ ನಿನ್ನ ಹೆಸರನ್ನು ಹಿಡಿದು ಕೂಗುವೆನೊ, ಆ ಕ್ಷಣ ನಿನ್ನ ಮುಖ ನನ್ನ ಮನಸ್ಸಿನಲ್ಲಿ ಮೂಡುತ್ತದೆ. ಮಂತ್ರದ ವಿಷಯದಲ್ಲೂ ಹಾಗೆಯೇ. ಮಂತ್ರ ಹಾಗೂ ದೇವರ ರೂಪಗಳ ನಡುವೆ ಅವಿನಾಭಾವ ಸಂಬಂಧವಿದೆ.''

ಮಂತ್ರಕ್ಕೆ ದೇವರನ್ನು ತೋರಿಸಿಕೊಡುವ ವಿಶೇಷ ಶಕ್ತಿಯಿರುವುದು ತಿಳಿದಿರುವ ವಿಷಯವೇ. ಆದ್ದರಿಂದ ಅದು ಇತರೆ ಸಾಮಾನ್ಯ ಶಬ್ದಗಳಂತಲ್ಲ. ನಾವು ವ್ಯವಹಾರದಲ್ಲಿ ಬಳಸುವ ಪದಗಳಿಗೂ ಸಹ ಒಂದು ಬಗೆಯ ಶಕ್ತಿ ಇದೆ. ಅದೆಂದರೆ ಯಾವುದೊ ವಸ್ತುವನ್ನೊ ಅಥವಾ ಭಾವವನ್ನೊ ಮನಸ್ಸಿಗೆ ಸೂಚಿಸುವ ಶಕ್ತಿ. ಇದನ್ನು ವಾಚ್ಯಶಕ್ತಿ ಎಂದು ಕರೆಯುತ್ತಾರೆ. 'ಹಸು' ಎಂಬ ಶಬ್ದ ಕೇಳಿದಾಗ ನಮ್ಮಲ್ಲಿ ಹಸುವಿನ ತಿಳುವಳಿಕೆ ಉಂಟಾಗುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಎರಡು ಅಂಶಗಳಿವೆ. ಮೊದಲನೆಯದಾಗಿ, ಹಸುವಿನ ತಿಳುವಳಿಕೆ ಉಂಟಾಗುವುದಕ್ಕೆ 'ಹಸು' ಶಬ್ದವನ್ನು ಒಂದು ಬಾರಿ ಹೇಳಿದರೆ ಸಾಕು. 'ಹಸು' 'ಹಸು' ಎಂದು ಪುನಃ ಪುನಃ ಹೇಳಬೇಕಿಲ್ಲ. ಎರಡನೆಯದಾಗಿ, 'ಹಸು' ಶಬ್ದ ಹಸುವಿನ ಕುರಿತಾಗಿ ನಮ್ಮಲ್ಲಿರುವ ಜ್ಞಾನಕ್ಕೆ ಸಂಬಂಧಪಟ್ಟಿರುವುದೇ ಹೊರತು ಹೊರಗಿರುವ 'ಹಸು' ಎಂಬ ಪ್ರಾಣಿಗೆ ನೇರವಾಗಿ ಸಂಬಂಧಪಟ್ಟಿಲ್ಲ. ಆದ್ದರಿಂದಲೇ ಯಾರಿಗೆ 'ಹಸು' ಎಂದರೇನೆಂದು ತಿಳಿಯದೊ, ಅಂತಹವರು 'ಹಸು' ಶಬ್ದವನ್ನು ಕೇಳಿದರೂ ನಿರರ್ಥಕ. ಈ ನಿಯಮ ಎಲ್ಲ ವ್ಯಾವಹಾರಿಕ ಶಬ್ದಗಳಿಗೂ ಅನ್ವಯಿಸುತ್ತದೆ.

ಆದರೆ ಗುರುವಿನಿಂದ ಪಡೆಯುವ ಬೀಜಾಕ್ಷರ ಸಹಿತವಾದ ಮಂತ್ರಕ್ಕೆ ವಾಚ್ಯಶಕ್ತಿಯ ಜೊತೆಗೆ ತನ್ನದೇ ಆದ ವಿಶೇಷಶಕ್ತಿಯೊಂದಿದೆ. ಅದನ್ನು ವಾಚಕಶಕ್ತಿ ಎಂದು ತಂತ್ರಶಾಸ್ತ್ರಗಳಲ್ಲಿ ಕರೆಯುತ್ತಾರೆ. ಈ ಶಕ್ತಿಯಿರುವುದರಿಂದಲೇ ಮಂತ್ರದ ಮೂಲಕ ದೇವತೆಯ ಸಾಕ್ಷಾತ್ಕಾರ ಸಾಧ್ಯ. ಆದರೆ ಮಂತ್ರದಿಂದ ಈ ಉನ್ನತ ಪ್ರಯೋಜನವನ್ನು ಪಡೆಯಬೇಕಾದರೆ ಮಂತ್ರವನ್ನು ಒಂದು ಬಾರಿ ಉಚ್ಚರಿಸಿದರೆ ಸಾಲದು. ಮತ್ತೆ ಮತ್ತೆ ಶ್ರದ್ಧಾಭಕ್ತಿಗಳಿಂದ ಜಪಿಸಬೇಕು. ಆಗಲೇ ಮಂತ್ರವು ನಮ್ಮನ್ನು ದೇವರ ಬಳಿಗೆ ಕರೆದೊಯ್ಯಬಲ್ಲದು. ಹೀಗಾಗಿ ಮಂತ್ರವನ್ನು ಉಚ್ಚರಿಸುವುದೆಂದರೆ ಭಗವಂತನನ್ನು ಹೆಸರಿಟ್ಟು ನಮ್ಮ ಬಳಿ ಕರೆದಂತೆ. ಈ ಕಾರಣದಿಂದಲೇ ಬ್ರಹ್ಮಾನಂದರು ಹೇಳಿದ್ದು ಮಂತ್ರದ ಅರ್ಥವನ್ನು ಕುರಿತು ಧ್ಯಾನಿಸುವುದೆಂದರೆ ಅದರ ವಾಚ್ಯಾರ್ಥವನ್ನು ಚಿಂತಿಸುವುದಲ್ಲ, ಬದಲಾಗಿ ಆ ಮಂತ್ರದ ವಿಷಯವಾದ ದೇವತೆಯನ್ನು ಕುರಿತು ಧ್ಯಾನಿಸುವುದು ಎಂದು.

ಶ್ರೀರಾಮಕೃಷ್ಣರು ಜಪವನ್ನು ಒಂದು ಸರಪಳಿಗೆ ಹೋಲಿಸುತ್ತಿದ್ದರು. ಸರಪಳಿಯ ಒಂದು ತುದಿಯಿಂದ ಮತ್ತೊಂದು ತುದಿಗೆ ಹೇಗೆ ನಾವು ಕೊಂಡಿಯಿಂದ ಕೊಂಡಿಗೆ ಮುಂದುವರೆಯುತ್ತ ತಲುಪಬಹುದೋ, ಹಾಗೆಯೇ ಜಪದ ಮೂಲಕ ನಾವು ಭಗವಂತನನ್ನು ಸೇರಬಹುದು. ಈ ರೀತಿಯಲ್ಲಿ ಸ್ವಾಮಿ ಬ್ರಹ್ಮಾನಂದರು ಜಪದ ಮೂಲಕ ಆಧ್ಯಾತ್ಮಿಕ ಜೀವನದಲ್ಲಿ ಸಾರ್ಥಕತೆಯನ್ನು ಪಡೆಯುವ ಬಗೆಯನ್ನು ನಮಗೆ ತೋರಿಸಿದ್ದಾರೆ. ❖

ನಿರಂತರ ಜಪ ಮಾಡು. ಪ್ರತಿ ಉಸಿರಿನೊಂದಿಗೂ ಜಪ ಮಾಡು. ಅದು ನಿಮ್ಮ ಎರಡನೆಯ ಸ್ವಭಾವವಾಗುವವರೆಗೂ ಅದನ್ನು ಅಭ್ಯಾಸ ಮಾಡು. ಹೀಗೆ ಮಾಡಿದಾಗ ನಿದ್ರೆಯಲ್ಲೂ, ಎಚ್ಚರದಲ್ಲೂ ನೀವು ಜಪ ಮಾಡುತ್ತಲೇ ಇರುವುದನ್ನು ಗುರುತಿಸುವಿರಿ.

*-ಸ್ವಾಮಿ ಬ್ರಹ್ಮಾನಂದ*

ಯಾವಾಗಲೂ ಜಪ ಮಾಡುತ್ತಿರು. ಊಟ ಮಾಡುವಾಗ, ಮಲಗಿದ್ದಾಗ, ಕುಳಿತಿದ್ದಾಗ ಜಪ ಮಾಡು. ತುಟಿಗಳನ್ನು ತೆರೆಯದೆ ಭಗವಂತನ ನಾಮವನ್ನು ಉಚ್ಚರಿಸುತ್ತಾ ಹೋಗು. ನಿಮ್ಮ ಮನಸ್ಸಿಗೆ ತರಬೇತು ನೀಡಿ. ಜಪ ಮಾಡುವಾಗ ಯಾರಾದರೂ ಬಂದರೆ, ಅವರು ಹೋದ ಕೂಡಲೇ ಮತ್ತೆ ಜಪ ಮಾಡಲು ತೊಡಗಿ.

*-ಸ್ವಾಮಿ ತುರೀಯಾನಂದ*

# ಶ್ರೀರಾಮಕೃಷ್ಣರ ನೇರ ಶಿಷ್ಯರ ಮೇಲೆ ಮಂತ್ರೋಪದೇಶದ ಪ್ರಭಾವ

**ಡಾ. ವಸಂತಕುಮಾರ್ ಇ.**

ಶ್ರೀರಾಮಕೃಷ್ಣರು ಮಂತ್ರದೀಕ್ಷೆ ನೀಡುತ್ತಿದ್ದ ವಿಧಾನ ಅತ್ಯಂತ ವಿಶಿಷ್ಟವೂ, ಶಕ್ತಿಯುತವೂ ಪ್ರಭಾವಶಾಲಿಯೂ ಆಗಿರುತ್ತಿತ್ತು. ಸಂಪೂರ್ಣ ನಿಗೂಢವೂ ವೈಯಕ್ತಿಕ ನೆಲೆಯಲ್ಲೂ ನಡೆಯುತ್ತಿದ್ದ ಈ ದೀಕ್ಷೆಯನ್ನು ಕುರಿತಂತೆ, ಹಾಗೂ ಅವು ಶಿಷ್ಯಂದಿರ ಜೀವನದಲ್ಲಿ ಉಂಟುಮಾಡಿರುವ ಪರಿಣಾಮಗಳ ಬಗ್ಗೆ ವಿವಿಧ ಮೂಲಗಳಿಂದ ಮಾಹಿತಿ ಸಂಗ್ರಹಿಸಿ ಬರೆದಿರುವ ಲೇಖಕರು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಸಂಖ್ಯಾಶಾಸ್ತ್ರದ ಪ್ರಾಧ್ಯಾಪಕರಾಗಿದ್ದು, ಈಗ ನಿವೃತ್ತರಾಗಿದ್ದಾರೆ. ಅವರು ಆಶ್ರಮದ ಭಕ್ತರು ಹಾಗೂ ಉತ್ತಮ ಲೇಖಕರು.

ಮಂತ್ರಜಪವೆಂದರೆ ದೇವರ ಹೆಸರನ್ನು ಮತ್ತೆ ಮತ್ತೆ ಸ್ಮರಿಸುವುದು. ಇದರಿಂದ ನಾವು ಭವಸಾಗರವನ್ನು ದಾಟಬಹುದು. ಬೇರೆ ಯಾವುದನ್ನು ಜಪಿಸಿದರೂ ಇದು ಸಾಧ್ಯವಾಗುವುದಿಲ್ಲ. ಶ್ರೀರಾಮಕೃಷ್ಣರು ಬ್ರಹ್ಮದರ್ಶನವನ್ನು ಪಡೆದಿದ್ದವರು. ಕೇವಲ ದರ್ಶನ ಸ್ಪರ್ಶನ ಇಚ್ಛೆಯಿಂದಲೇ ಅದರ ಅನುಭವವನ್ನು ಇತರರಿಗೆ ಕೊಡಬಲ್ಲವರಾಗಿದ್ದರು. ಆದರೂ ತಮ್ಮ ಶಿಷ್ಯರಿಗೆ, 'ಸಾಧನೆ ಮಾಡಿ ಸ್ವಪ್ರಯತ್ನದ ಮೇಲೆ ನಿಲ್ಲಿ' ಎಂದು ಹೇಳುತ್ತಿದ್ದರು. ಆಧ್ಯಾತ್ಮಿಕ ಜೀವನದಲ್ಲಿ ಕೆಲವು ವೇಳೆ ಗುರುವಿನ ಇಚ್ಛಾಮಾತ್ರದಿಂದ ಕೆಲವು ಅನುಭವಗಳಾಗಬಹುದು. ಆದರೆ ಅದು ಮಿಂಚಿನಂತೆ ಬಂದು ಹೋಗುವುದು. ಅದನ್ನು ನಾವೇ ಸ್ವಂತ ಪಡೆಯಬೇಕಾದರೆ, ನಮ್ಮ ಜೀವನದ ಅನುಗಾಲದ ಅನುಭವವನ್ನಾಗಿ ಮಾಡಿಕೊಳ್ಳಬೇಕಾದರೆ ಅದಕ್ಕೆ ಸಾಧನೆಯನ್ನು ಮಾಡಬೇಕು. ಶಿಷ್ಯರಿಗೆ ತಮ್ಮ ನೇತೃತ್ವದಲ್ಲಿ ಅವರು ಸಾಧನೆ ಮಾಡಿಸಿದರು. ಧ್ಯಾನ, ಜಪಗಳನ್ನು ಮಾಡುವಾಗ ಅವರಿಗೆ ಬಂದೊದಗಿದ ಅಡಚಣೆಗಳಿಂದ ಪಾರಾಗಲು ಸಲಹೆಗಳನ್ನು ಕೊಡುತ್ತಿದ್ದರು. ಇವನ್ನು ಅವರ ಶಿಷ್ಯರ ಮಾತುಗಳಿಂದಲೇ ಇಲ್ಲಿ ಕೊಡಲಾಗಿದೆ.

### ಸ್ವಾಮಿ ವಿವೇಕಾನಂದ (ನರೇಂದ್ರನಾಥ ದತ್ತ)

ಸ್ವಾಮೀಜಿಯರು ಬಾಲ್ಯದಿಂದಲೇ ಧ್ಯಾನಸಿದ್ಧರು. ''ನನಗೆ ನೆನಪಿರುವಂತೆ, ನಾನು ಬಾಲಕನಾಗಿದ್ದಾಗಲೇ ನಿದ್ರೆಗೆ ಹೋಗುವಾಗ ಪ್ರಖರ ಜ್ಯೋತಿಯೊಂದು ನನ್ನ ಹುಬ್ಬುಗಳ ನಡುವೆ ಕಾಣಿಸಿಕೊಳ್ಳುತ್ತಿತ್ತು. ಅದು ಬದಲಾಗುವುದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದೆ. ಆ ಜ್ಯೋತಿ ಬಣ್ಣವನ್ನು ಬದಲಾಯಿಸುತ್ತ ದೊಡ್ಡದಾಗುತ್ತ ಒಂದು ಚೆಂಡಿನ ಆಕಾರ ತಾಳುತ್ತಿತ್ತು. ಕೊನೆಗೆ ಅದು ಒಡೆದು ದ್ರವರೂಪದ ಶ್ವೇತ ಜ್ಯೋತಿಯಾಗಿ ನನ್ನ ದೇಹವನ್ನು ತಲೆಯಿಂದ ಕಾಲಿನವರೆಗೆ ಆವರಿಸುತ್ತಿತ್ತು. ಕೂಡಲೆ ನನ್ನ ಬಾಹ್ಯಜ್ಞಾನ ತಪ್ಪಿ, ನಾನು ನಿದ್ರೆಗೆ ಹೋಗುತ್ತಿದ್ದೆ. ಇದು ಎಲ್ಲರಿಗೂ ಆಗುವ ಸಾಮಾನ್ಯ ಅನುಭವವೆಂದು ಭಾವಿಸುತ್ತಿದ್ದೆ. ನಾನು ದೊಡ್ಡವನಾಗುತ್ತ ಧ್ಯಾನವನ್ನು ಅಭ್ಯಾಸ ಮಾಡುತ್ತಿದ್ದಾಗ ಆ ಜ್ಯೋತಿ ನಾನು ಕಣ್ಣನ್ನು ಮುಚ್ಚಿದ ಕೂಡಲೆ ಕಾಣಿಸಿಕೊಳ್ಳುತ್ತಿತ್ತು, ಅದರ ಮೇಲೆ ಮನಸ್ಸನ್ನು ಏಕಾಗ್ರ ಮಾಡುತ್ತಿದ್ದೆ.'' ಮೊದಲ ಭೇಟಿಯಲ್ಲೆ ಶ್ರೀರಾಮಕೃಷ್ಣರು ನರೇಂದ್ರನನ್ನು, ''ನೀನು ನಿದ್ರೆಗೆ ಹೋಗುವಾಗ ಜ್ಯೋತಿಯೊಂದು ಕಾಣಿಸಿಕೊಳ್ಳುವುದೆ?'' ಎಂದು ಕೇಳಿದರು. ಯುವಕ ನರೇಂದ್ರ ಆಶ್ಚರ್ಯದಿಂದ, ''ಹೌದು, ಎಲ್ಲರಿಗೂ ಅದು ಹಾಗೆಯೇ ಆಗುವುದಲ್ಲವೆ?'' ಎಂದು ಉದ್ಗರಿಸಿದನು. ಈ ಉತ್ತರದಿಂದ ಶ್ರೀರಾಮಕೃಷ್ಣರಿಗೆ ನರೇಂದ್ರನ ಪೂರ್ವವೃತ್ತಾಂತ, ಅವನ ನಿಜಸ್ವರೂಪ, ಮತ್ತು ಮುಂದೆ ಅವನು ಸ್ವಾಮಿ ವಿವೇಕಾನಂದರಾಗಿ ಮಾಡಬೇಕಾದ ಅದ್ಭುತ ಕಾರ್ಯ ಎಲ್ಲವೂ ಗೋಚರವಾಯಿತು. ನರೇಂದ್ರನನ್ನು ಭೇಟಿಯಾಗುವ ಮೊದಲು ಅವರಿಗೆ ಆದ ದರ್ಶನದಲ್ಲಿ ನರೇಂದ್ರ ನಾಮರೂಪಗಳಿಗೆ ಅತೀತವಾದ ಸಪ್ತರ್ಷಿಗಳ ಲೋಕಕ್ಕೆ ಸೇರಿದವನೆಂಬುದನ್ನು ಕಂಡಿದ್ದರು.



ನರೇಂದ್ರ ೧೫ ವರ್ಷದವನಾಗಿದ್ದಾಗಲೆ ಅವನಿಗೆ ಭಾವಸಮಾಧಿಯ ಅನುಭವವಾಗಿತ್ತು. ಆಗ ಅವನು ತನ್ನ ಪರಿವಾರದೊಂದಿಗೆ ರಾಯಪುರಕ್ಕೆ ಹೋಗುತ್ತಿದ್ದ. ನಿರ್ಮಲ ವಾತಾವರಣದಲ್ಲಿ ಹಸಿರಾದ ಫಲಪುಷ್ಪಗಳಿಂದ ತುಂಬಿದ ಮರಗಿಡಗಳಿಂದ, ವಿವಿಧ ವರ್ಣ ವಿನ್ಯಾಸಗಳ ಪಕ್ಷಿಸಂಕುಲಗಳ ಇಂಚರದಿಂದ ಕೂಡಿದ ವನದಲ್ಲಿ ಅವರು ಸಾಗುತ್ತಿದ್ದರು. ಎರಡು ಕಡೆಯೂ ಇದ್ದ ಬೆಟ್ಟಗುಡ್ಡಗಳ ನಡುವೆ ಕಿರುದಾರಿಯಲ್ಲಿ, ಎತ್ತಿನ ಗಾಡಿಯಲ್ಲಿ ನಿಧಾನವಾಗಿ ಚಲಿಸುತ್ತಿದ್ದಾಗ ಬಾಗಿದ ಬೆಟ್ಟದ ತುದಿಯಲ್ಲಿ ಕಟ್ಟಿದ್ದ ಬೃಹತ್ ಜೇನುಗೂಡನ್ನು ನೋಡಿದ ನರೇಂದ್ರನು ಭಾವಾವಿಷ್ಟನಾಗಿ ಬಾಹ್ಯಜ್ಞಾನಶೂನ್ಯನಾಗಿ ದೇಹಾತೀತ ಆನಂದವನ್ನು ಸವಿದನು. ಅನೇಕ ಜ್ಯೋತಿರ್ಮಯ ದರ್ಶನಗಳು ಅವನಿಗೆ ಬಾಲ್ಯದಲ್ಲಿ ಆಗಿದ್ದುವು.

ನರೇಂದ್ರ ಶ್ರೀರಾಮಕೃಷ್ಣರ ಕೋಣೆಯನ್ನು ದಕ್ಷಿಣೇಶ್ವರದಲ್ಲಿ ಮೊದಲ ಬಾರಿ ಪ್ರವೇಶಿಸಿದಾಗ 'ಇಂತಹ ಆಧ್ಯಾತ್ಮಿಕ ವ್ಯಕ್ತಿ ಪ್ರಾಪಂಚಿಕರಿಂದ ತುಂಬಿದ ಕಲ್ಕತ್ತೆಯಂತಹ ನಗರದಲ್ಲಿ ಇರಲು ಸಾಧ್ಯವೆ?' ಎಂದು ಶ್ರೀರಾಮಕೃಷ್ಣರು ಅಚ್ಚರಿಪಟ್ಟರು. ಒಂದು ತಿಂಗಳ ನಂತರ

ನರೇಂದ್ರ ಶ್ರೀರಾಮಕೃಷ್ಣರನ್ನು ನೋಡಲು ಹೋದಾಗ ಅವರು ಭಾವಾವಸ್ಥೆಯಲ್ಲಿ ಏನನ್ನೋ ಮಾತನಾಡಿಕೊಳ್ಳುತ್ತ, ನರೇಂದ್ರನ ಕಡೆ ನೋಡುತ್ತ ಅವನನ್ನು ಮುಟ್ಟಿದರು. ನರೇಂದ್ರನ ಕಣ್ಣಿನ ಮುಂದೆಯೆ ಭೌತಿಕ ಪ್ರಪಂಚ ಮಾಯವಾಯಿತು. ಅವನ ವ್ಯಕ್ತಿತ್ವವೂ ಕರಗ ಲಾರಂಭಿಸಿತು. ''ನೀವೇನು ಮಾಡುತ್ತಿರುವಿರಿ? ಮನೆಯಲ್ಲಿ ನನಗೆ ತಂದೆತಾಯಿಗಳಿರುವರೆಂಬುದು ನಿಮಗೆ ತಿಳಿಯದೆ?'' ಎಂದು ನರೇಂದ್ರ ಕಿರಿಚಿದನು. ಶ್ರೀರಾಮಕೃಷ್ಣರು ನಗುತ್ತ ಅವನ ಮನಸ್ಸನ್ನು ಸಾಮಾನ್ಯ ಸ್ಥಿತಿಗೆ ತಂದರು. ಮುಂದಿನ ಭೇಟಿಯಲ್ಲಿ ನರೇಂದ್ರ ಎಚ್ಚರ ವಾಗಿದ್ದನು. ಅವನಿಗೆ ಬಲಿಷ್ಠವಾದ ದೇಹ, ದೃಢವಾದ ಮನಸ್ಸು, ಪ್ರಚಂಡ ಧೀಶಕ್ತಿ ಇದ್ದರೂ ಅವನ ಇಚ್ಛಾಶಕ್ತಿ ಶ್ರೀರಾಮಕೃಷ್ಣರ ಮುಂದೆ ದುರ್ಬಲವಾಯಿತು. ಶ್ರೀರಾಮಕೃಷ್ಣರು ನರೇಂದ್ರನೊಡನೆ ಯದುಮಲ್ಲಿಕನ ತೋಟದಮನೆಯವರೆಗೆ ನಡೆದುಕೊಂಡು ಹೋದರು. ಅಲ್ಲಿ ಕುಳಿತಿದ್ದಾಗ ಭಾವಾವಸ್ಥೆಯಲ್ಲಿ ನರೇಂದ್ರನನ್ನು ಮುಟ್ಟಿದರು. ಆ ಕೂಡಲೇ ಅವನಿಗೆ ಬಾಹ್ಯಜ್ಞಾನವಿಲ್ಲದಾಯಿತು. ಆಗ ಅವನಿಗೆ ಅನೇಕ ಪ್ರಶ್ನೆಗಳನ್ನು ಕೇಳಿ, ಅವನ ಹಿಂದಿನ ಸ್ಥಿತಿ, ಇಹ ಲೋಕದಲ್ಲಿ ಅವನ ಜೀವನಧ್ಯೇಯ, ಅವನ ಜೀವಿತಕಾಲ ಮುಂತಾದ ವಿವರಗಳನ್ನು ತಿಳಿದುಕೊಂಡರು. ಇದರಿಂದ ಅವರು ಹಿಂದೆ ಕಂಡಿದ್ದ ದರ್ಶನದ ವಿವರಗಳು ಸತ್ಯವೆಂದು ಅವರಿಗೆ ಖಾತ್ರಿಯಾಯಿತು. 'ನರೇಂದ್ರ ಧ್ಯಾನಸಿದ್ಧ, ಭವ್ಯ ವ್ಯಕ್ತಿ; ತನ್ನ ನಿಜಸ್ವರೂಪ ತಿಳಿದೊಡನೆ ಇಚ್ಛಾಮಾತ್ರದಿಂದ ಯೋಗದಲ್ಲಿ ದೇಹವನ್ನು ಕಿತ್ತೊಗೆಯುವನು' ಎಂದು ಅವರು ಹೇಳಿದರು.

ಪ್ರಾರಂಭದಲ್ಲಿ ನರೇಂದ್ರನಿಗೆ ಅದ್ವೈತವನ್ನು ಒಪ್ಪಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. 'ಎಲ್ಲವೂ ಬ್ರಹ್ಮ' ಎಂಬ ತತ್ತ್ವವನ್ನು ಹಾಜರಾ ಎಂಬುವನೊಡನೆ ಶ್ರೀರಾಮಕೃಷ್ಣರ ಕೊಠಡಿಯ ಹೊರಗಡೆ ಹಾಸ್ಯ ಮಾಡುತ್ತಿದ್ದನು. ಶ್ರೀರಾಮಕೃಷ್ಣರು ಅಲ್ಲಿಗೆ ಬಂದು ನರೇಂದ್ರನನ್ನು ಮುಟ್ಟಿದರು. ''ತಕ್ಷಣವೇ ಬಾಹ್ಯಪ್ರಪಂಚ ಮಾಯವಾಯಿತು. ಬ್ರಹ್ಮವಲ್ಲದೆ ಏನೂ ಕಾಣುತ್ತಿರಲಿಲ್ಲ. ಆ ಭಾವ ಇಳಿಯಲೂ ಇಲ್ಲ. ಹಾಗೆಯೇ ಮನೆಗೆ ಹೋದೆ. ಎಲ್ಲವೂ ಬ್ರಹ್ಮಮಯವಾಗಿ ಕಾಣು ತ್ತಿತ್ತು. ಊಟಕ್ಕೆ ಕುಳಿತೆ. ಆಹಾರ, ತಟ್ಟೆ, ಬಡಿಸುವವರು, ಕೊನೆಗೆ ನಾನು ಎಲ್ಲವೂ ಬ್ರಹ್ಮವೇ! ಮಲಗಿರಲಿ, ನಡೆಯುತ್ತಿರಲಿ ಯಾವಾ ಗಲೂ ಅದೇ ಅನುಭವ. ರಸ್ತೆಯಲ್ಲಿ ನಡೆಯುವಾಗ ಗಾಡಿ ಬಂದರೆ ದಾರಿ ಬಿಟ್ಟು ಸರಿಯಬೇಕೆಂಬುದೂ ತಿಳಿಯುತ್ತಿರಲಿಲ್ಲ, ಏಕೆಂದರೆ ಗಾಡಿ ಮತ್ತು ನಾನು ಒಂದೇ. ಅಂಗಾಂಗಗಳು ನಿರ್ಜೀವವಾಗಿ ಪಾರ್ಶ್ವವಾಯು ಬಡಿದಂತೆ ಅನ್ನಿಸುತ್ತಿತ್ತು. ರುಚಿ ಗೊತ್ತಾಗುತ್ತಿರಲಿಲ್ಲ. ಯಾರೋ ಊಟ ಮಾಡುತ್ತಿರುವಂತೆ ಭಾಸವಾಗುತ್ತಿತ್ತು. ಕೆಲವು ವೇಳೆ ಒಂದು ರಾಶಿ ತಿನ್ನುತ್ತಿದ್ದೆ. ಏನೂ ಆಗುತ್ತಿರಲಿಲ್ಲ. ಗರ ಬಡಿದ ವನಂತೆ ಇದ್ದುದನ್ನು ನೋಡಿ ನನ್ನ ತಾಯಿಗೆ ಗಾಬರಿ ಆಯಿತು. ಕಾರ್ನ್‌ವಾಲಿಸ್ ಚೌಕದಲ್ಲಿ ನಡೆಯುವಾಗ ಕಂಬವೊಂದಕ್ಕೆ ತಲೆ ಹೊಡೆದುಕೊಂಡು ಪರೀಕ್ಷಿಸಿದೆ, ಅದು ನಿಜವೊ ಕನಸೊ ಎಂದು. ಈ ಸ್ಥಿತಿ ಕೆಲವು ದಿನಗಳು ಮುಂದುವರಿಯಿತು. ನಂತರ ಸಾಧಾರಣ ಸ್ಥಿತಿಗೆ ಬಂದೆ. ಆಗ ಮನವರಿಕೆ ಆಯಿತು, ಅದ್ವೈತದ ಸ್ಥಿತಿಯ ಅನು ಭವ ಇದೇ ಎಂದು. ಅಂದಿನಿಂದ ಅದ್ವೈತ ತತ್ತ್ವ ಸತ್ಯವೆಂದು ಮನದ ಟ್ಟಾಯಿತು. ಅದನ್ನು ಒಪ್ಪದೆ ಇರಲು ಸಾಧ್ಯವಾಗಲಿಲ್ಲ.'' ಎಂದು ನರೇಂದ್ರ ತನ್ನ ಅನುಭವವನ್ನು ವಿವರಿಸಿದನು.

ಶ್ರೀರಾಮಕೃಷ್ಣರ ಜೀವಿತಕಾಲದ ಕೊನೆಯ ಭಾಗದಲ್ಲಿ ನರೇಂದ್ರ, ಅದ್ವೈತ ವೇದಾಂತದ ಚರಮ ಸಾಕ್ಷಾತ್ಕಾರವಾದ ನಿರ್ವಿಕಲ್ಪ ಸಮಾಧಿ ಯ ಅನುಭವಕ್ಕಾಗಿ ಶ್ರೀರಾಮಕೃಷ್ಣರಲ್ಲಿ ಬೇಡಿದನು. ಅದು ಅಲ್ಪ , ಅದಕ್ಕಿಂತ ಮೇಲಿನ ಸ್ಥಿತಿ ಪ್ರಾಪ್ತವಾಗುವುದೆಂದು ಶ್ರೀರಾಮಕೃಷ್ಣರು ಅವನಿಗೆ ಹೇಳಿದರು. ಸಂಜೆ ನರೇಂದ್ರ ಧ್ಯಾನ ಮಾಡುತ್ತಿದ್ದಾಗ ಅವನ ತಲೆಯ ಹಿಂಭಾಗದಲ್ಲಿ ಒಂದು ದೀಪವನ್ನು ಹೊತ್ತಿಸಿ ಇಟ್ಟಂತೆ ಬೆಳಕು ಕಾಣಿಸಿಕೊಳ್ಳುವುದಕ್ಕೆ ಪ್ರಾರಂಭಿಸಿತು. ಕ್ರಮೇಣ ಅದು ಪ್ರಕಾಶ ಮಾನ ವಾಗಿ ಸಿಡಿಯುವಂತಾಯಿತು. ಅದರಲ್ಲಿ ಅವನು ಮುಳುಗಿದನು. ದೇಹಪ್ರಜ್ಞೆ ಹೋಯಿತು. ಪ್ರಜ್ಞೆ ಬಂದಾಗ ''ನನ್ನ ದೇಹವೆಲ್ಲಿ?'' ಎಂದು ಕಿರಿಚಿದನು. ಅವನ ಗುರುಭಾಯಿಗಳು ಅವನ ದೇಹವನ್ನು ಮುಟ್ಟಿ ತೋರಿಸಿದರು. ಬಹಳ ಕಾಲ ಆ ದೇಹ-ಕಾಲ-ನಿಮಿತ್ತಕ್ಕೆ ಅತೀತವಾದ ಸಮಾಧಿಸ್ಥಿತಿಯಲ್ಲಿ ಇದ್ದನು. ಪ್ರಕೃತಿಸ್ಥನಾದ ಮೇಲೆ ಶ್ರೀರಾಮಕೃಷ್ಣರ ಬಳಿಗೆ ಹೋದನು. ''ಈಗ ತಾಯಿ, ನಿನಗೆ ಎಲ್ಲ ವನ್ನೂ ತೋರಿಸಿರುವಳು. ಆದರೆ ಈ ಅನುಭವರತ್ನವನ್ನು ಬೀರುವಿ ನಲ್ಲಿಟ್ಟು ಬೀಗ ಹಾಕಲಾಗಿದೆ. ಬೀಗದ ಕೈ ನನ್ನ ಹತ್ತಿರ ಇದೆ. ನಿನ್ನ ಜೀವಿ ತದ ಉದ್ದೇಶ ಮುಗಿದ ಮೇಲೆ ಮಾತ್ರವೆ ಬೀಗವನ್ನು ತೆಗೆಯ ಲಾಗುವುದು'' ಎಂದು ಶ್ರೀರಾಮಕೃಷ್ಣರು ಹೇಳಿದರು.

ಒಂದುದಿನ ಶ್ರೀರಾಮಕೃಷ್ಣರು ನರೇಂದ್ರನಿಗೆ ಶ್ರೀರಾಮ ಮಂತ್ರ ವನ್ನು ಉಪದೇಶಿಸಿದರಂತೆ. ಈ ಮಂತ್ರವನ್ನು ಸ್ವೀಕರಿಸಿದ ನಂತರ ನರೇಂದ್ರ ಭಾವೋನ್ಮತ್ತನಾದ. ಸಂಜೆ 'ರಾಮ ರಾಮ' ಎಂದು ಹೇಳುತ್ತ ಪ್ರಪಂಚವನ್ನೇ ಮರೆತು ಮನೆಯ ಸುತ್ತಲೂ ಪ್ರದಕ್ಷಿಣೆ ಮಾಡಲು ಆರಂಭಿಸಿದ. ಶ್ರೀರಾಮಕೃಷ್ಣರಿಗೆ ಯಾರೋ ಈ ಪ್ರಸಂಗ ವನ್ನು ಹೇಳಿದಾಗ, 'ಚಿಂತೆಯಿಲ್ಲ. ಕ್ರಮೇಣ ಅವನು ತನ್ನ ಸಹಜ ಸ್ಥಿತಿಗೆ ಬರುವನು' ಎಂದರಂತೆ.

### ಸ್ವಾಮಿ ಬ್ರಹ್ಮಾನಂದ (ರಾಖಾಲ್)

ಒಂದು ದಿನ ಮಧ್ಯಾಹ್ನ ರಾಖಾಲ್ ದಕ್ಷಿಣೇಶ್ವರಕ್ಕೆ ಹೋದಾಗ ಶ್ರೀರಾಮಕೃಷ್ಣರು ಒಬ್ಬರೇ ವಿಶ್ರಮಿಸುತ್ತಿದ್ದರು. ಮಂಚದ ಮೇಲೆ ಕುಳಿತು ತಮ್ಮ ಕಾಲನ್ನು ಒತ್ತುವಂತೆ ರಾಖಾಲನಿಗೆ ಹೇಳಿದರು. ರಾಖಾಲ ಸಂಕೋಚಪಡುತ್ತಿದ್ದುದನ್ನು ಕಂಡು, ''ನೋಡು, ಸಾಧು ವಿಗೆ ಸೇವೆ ಮಾಡಿದರೆ ಅದರಿಂದ ಪ್ರಯೋಜನವಾಗುವುದು'' ಎಂದರು. ರಾಖಾಲ ಶ್ರೀರಾಮಕೃಷ್ಣರ ಪಾದ ಗಳನ್ನು ಒತ್ತಲು ಪ್ರಾರಂಭಿಸಿ ದುದೇ ತಡ, ಜಗನ್ಮಾತೆ ಏಳೆಂಟು ವರ್ಷದ ಬಾಲಕಿ ಯಂತೆ ಕಾಣಿಸಿಕೊಂಡಳು. ಶ್ರೀರಾಮಕೃಷ್ಣರ ಹಾಸಿಗೆ ಯನ್ನು ಕೆಲವು ಸಲ ಪ್ರದ ಕ್ಷಿಣೆ ಮಾಡಿ ಅವರ ದೇಹ ವನ್ನು ಪ್ರವೇಶಿಸಿದಳು. ಈ ದೃಶ್ಯದಿಂದ ರಾಖಾಲನ ಮನಸ್ಸು ತುಂಬಿಬಂದಿತು.



ಶ್ರೀರಾಮಕೃಷ್ಣರು ನಗುತ್ತ, ''ನೋಡಿದೆಯಾ, ಸಾಧುವಿಗೆ ಸೇವೆ ಮಾಡಿದುದರ ಫಲವನ್ನು?'' ಎಂದರು.

ರಾಖಾಲ್ ಒಮ್ಮೆ ಶ್ರೀರಾಮಕೃಷ್ಣರ ದೇಹಕ್ಕೆ ಎಣ್ಣೆ ಹಚ್ಚುತ್ತಿದ್ದಾಗ, ತನಗೆ ಅತ್ಯಂತ ಮೇಲಿನ ಆಧ್ಯಾತ್ಮಿಕ ಅನುಭವ ಬೇಕೆಂದು ಕೇಳಿಕೊಂಡನು. ಆದರೆ ಶ್ರೀರಾಮಕೃಷ್ಣರು ಅದನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ರಾಖಾಲ್ ಹಠ ಮಾಡಿದಾಗ ಅವರು ಅವನನ್ನು ಬೈದರು. ರಾಖಾಲ್ ಹಠಮಾರಿತನದಿಂದ ಕೋಪಗೊಂಡು ಎಣ್ಣೆಯ ಬಟ್ಟಲನ್ನು ಬಿಸುಟು, 'ಇನ್ನು ಹಿಂತಿರುಗಿ ಬರುವುದಿಲ್ಲ' ಎಂದು ಹೊರಟು ಹೋದನು. ಯದುಮಲ್ಲಿಕನ ತೋಟದ ಮನೆಯವರೆಗೆ ಹೋಗುವಷ್ಟರಲ್ಲಿ ಕಾಲು ಜೊಂಪು ಹಿಡಿದು ನಿಸ್ಸಹಾಯಕನಾಗಿ ನೆಲದ ಮೇಲೆ ಕುಳಿತುಕೊಳ್ಳಬೇಕಾಯಿತು. ಶ್ರೀರಾಮಕೃಷ್ಣರು ರಾಮಲಾಲನಿಗೆ ಹೇಳಿ ರಾಖಾಲನನ್ನು ಹಿಂದಕ್ಕೆ ಕರೆಸಿದರು. ಕ್ಷಮಾಮೂರ್ತಿಯಾದ ಶ್ರೀರಾಮಕೃಷ್ಣರು, ''ನಿನಗೆ ಹೋಗಲು ಸಾಧ್ಯವಾಯಿತೆ? ಅಲ್ಲಿಂದ ಮುಂದಕ್ಕೆ ನೀನು ಹೋಗಲು ಆಗದಂತೆ ನಾನು ಗೆರೆ ಎಳೆದಿದ್ದೆ'' ಎಂದರು. ಒಂದೆರಡು ದಿನಗಳ ನಂತರ, ಶ್ರೀರಾಮಕೃಷ್ಣರು ಕಾಳೀಮಂದಿರಕ್ಕೆ ಹೋಗುತ್ತಿರುವುದನ್ನು ನೋಡಿ, ರಾಖಾಲ ಅವರನ್ನು ಹಿಂಬಾಲಿಸಿದನು. ಶ್ರೀರಾಮಕೃಷ್ಣರು ಗುಡಿಯೊಳಕ್ಕೆ ಹೋದರು. ಆದರೆ, ರಾಖಾಲ ನಟಮಂದಿರದಲ್ಲಿ ಧ್ಯಾನಕ್ಕೆ ಕುಳಿತನು. ಸ್ವಲ್ಪ ಸಮಯದ ನಂತರ ಇದ್ದಕ್ಕಿದ್ದಂತೆ ಒಂದು ಪ್ರಖರ ಜ್ಯೋತಿಯನ್ನು ಕಂಡನು. ಅದು ಲಕ್ಷಾಂತರ ಸೂರ್ಯರಂತೆ ಪ್ರಖರವಾಗಿದ್ದು ಕಾಳೀಮಂದಿರದಿಂದ ಅವನೆಡೆಗೆ ನುಗ್ಗುವುದನ್ನು ನೋಡಿ ಭಯದಿಂದ ರಾಮಕೃಷ್ಣರ ಕೋಣೆಗೆ ಓಡಿಹೋದನು. ನಂತರ ರಾಮಕೃಷ್ಣರು ಮಂದಿರದಿಂದ ಅವರ ಕೋಣೆಗೆ ಹಿಂತಿರುಗಿದರು. ರಾಖಾಲನನ್ನು ನೋಡಿ, ''ಈ ಸಂಜೆ ಧ್ಯಾನಕ್ಕೆ ಕುಳಿತುಕೊಂಡೆಯಾ?'' ಎಂದು ಕೇಳಿದರು. ರಾಖಾಲನು ಹೌದೆಂದು ಹೇಳಿ ತನ್ನ ಅನುಭವವನ್ನು ತಿಳಿಸಿದನು. ಆಗ ಶ್ರೀರಾಮಕೃಷ್ಣರು, ''ನಿನಗೆ ಯಾವ ಅನುಭವವೂ ಆಗುತ್ತಿಲ್ಲವೆಂದು ದೂರುತ್ತ, ಧ್ಯಾನವನ್ನು ಅಭ್ಯಾಸ ಮಾಡುತ್ತಿದ್ದರೆ ಏನು ಪ್ರಯೋಜನ ಎಂದು ಕೇಳುತ್ತಿದ್ದೆಯಲ್ಲ, ಅನುಭವ ಬಂದಾಗ ಏಕೆ ಓಡಿಹೋದೆ?'' ಎಂದರು.

ಒಮ್ಮೆ ಬ್ರಹ್ಮಾನಂದರು ಹೇಳಿದರು: ''ಕಾಳೀಮಂದಿರದಲ್ಲಿ ಒಮ್ಮೆ ಧ್ಯಾನ ಮಾಡುತ್ತಿದ್ದಾಗ, ಮನಸ್ಸನ್ನು ಏಕಾಗ್ರಗೊಳಿಸಲಾಗಲಿಲ್ಲ. ಇದರಿಂದ ನನಗೆ ದುಃಖವಾಯಿತು. ನನ್ನಷ್ಟಕ್ಕೆ ಹೇಳಿಕೊಂಡೆ: 'ದಕ್ಷಿಣೇಶ್ವರದಲ್ಲಿ ಎಷ್ಟು ಕಾಲದಿಂದ ವಾಸವಿರುವೆ, ಆದರೂ ನಾನು ಏನನ್ನೂ ಸಾಧಿಸಲಾಗಿಲ್ಲ. ಇನ್ನು ಇಲ್ಲಿ ಇದ್ದು ಪ್ರಯೋಜನವೇನು? ಆದದ್ದಾಯಿತು. ಇದರ ವಿಷಯವಾಗಿ ನಾನು ರಾಮಕೃಷ್ಣರಿಗೆ ಹೇಳುವುದಿಲ್ಲ. ಇದೇ ಮನಸ್ಥಿತಿ ಮುಂದುವರಿದರೆ, ಒಂದೆರಡು ದಿನಗಳಲ್ಲಿ ಮನೆಗೆ ಹಿಂದಿರುಗುತ್ತೇನೆ. ಅಲ್ಲಿ ನನ್ನ ಮನಸ್ಸು ಬೇರೆ ವಿಷಯಗಳಲ್ಲಿ ತೊಡಗುತ್ತದೆ.' ಮಂದಿರದಲ್ಲಿ ಹೀಗೆ ಯೋಚಿಸಿಕೊಂಡು ಶ್ರೀರಾಮಕೃಷ್ಣರ ಕೋಣೆಗೆ ಹೋದೆ. ಅವರು ವರಾಂಡದಲ್ಲಿ ತಿರುಗಾಡುತ್ತಿದ್ದರು. ನನ್ನನ್ನು ನೋಡಿ ಅವರೂ ಕೋಣೆಗೆ ಬಂದರು. ಅವರಿಗೆ ನಮಸ್ಕಾರ ಮಾಡಿದ ತಕ್ಷಣ ಅವರು ಹೇಳಿದರು: ''ನೀನು ಮಂದಿರದಿಂದ ಹಿಂತಿರುಗಿದಾಗ ನಿನ್ನ ಮನಸ್ಸು ದಟ್ಟವಾದ ಬಲೆಯಿಂದ ಕವಿದಿದ್ದುದನ್ನು ನೋಡಿದೆ.'' ಅವರಿಗೆ ಎಲ್ಲವೂ ತಿಳಿದಿದೆ ಎಂದು ಗೊತ್ತಾಯಿತು. ''ಮಹಾಶಯರೆ, ನಿಮಗೆ ನನ್ನ ಮನಸ್ಸಿನ ದುಃಸ್ಥಿತಿ ಗೊತ್ತಿದೆ'' ಎಂದೆ. ಆಗ ಅವರು ನನ್ನ ನಾಲಿಗೆಯ ಮೇಲೆ ಏನನ್ನೋ ಬರೆದರು. ತಕ್ಷಣವೇ ನನ್ನ ಹಿಂದಿನ ದುಗುಡವೆಲ್ಲ ಮಾಯವಾಗಿ ಮನಸ್ಸು ವರ್ಣನಾತೀತ ಆನಂದದಿಂದ ತುಂಬಿತು.

ಮತ್ತೊಂದು ದಿನ ರಾಖಾಲ ನಟಮಂದಿರದಲ್ಲಿ ಧ್ಯಾನ ಮಾಡುತ್ತಿದ್ದಾಗ ಶ್ರೀರಾಮಕೃಷ್ಣರು ಭಾವಾವಸ್ಥೆಯಲ್ಲಿ ಅಲ್ಲಿಗೆ ಬಂದರು. ರಾಖಾಲನ ಕಡೆ ನೋಡುತ್ತ ಹೇಳಿದರು: ''ನೋಡು, ಇದು ನಿನ್ನ ಇಷ್ಟಮಂತ್ರ. ಇದು ನಿನ್ನ ಇಷ್ಟದೇವತೆ.'' ಕೂಡಲೆ ರಾಖಾಲ ಭಗವಂತನ ಜ್ಯೋತಿರ್ಮಯ ರೂಪ ಎದುರಿಗೆ ಇರುವುದನ್ನು ಕಂಡು ಭಾವೋನ್ಮತ್ತನಾದನು. ಯಾರಿಗೆ ಬೇಕಾದರೂ ಭಗವಂತನನ್ನು ತೋರಿಸುವ ಶಕ್ತಿ ತನ್ನ ಗುರುವಿಗೆ ಇರುವುದೆಂದು ಅವನಿಗೆ ಮನದಟ್ಟಾಯಿತು. ಭಾವಭಕ್ತಿಯಿಂದ ತುಂಬಿದ ರಾಖಾಲ ಶ್ರೀರಾಮಕೃಷ್ಣರ ಪಾದಗಳಿಗೆ ದೀರ್ಘದಂಡ ಪ್ರಣಾಮವನ್ನು ಮಾಡಿ ಮತ್ತೆ ಧ್ಯಾನಾಸಕ್ತನಾದನು.

### ಸ್ವಾಮಿ ಶಿವಾನಂದ (ತಾರಕನಾಥ ಘೋಷಾಲ್)

''ಮೊದಲ ಬಾರಿ ನಾನು ಶ್ರೀರಾಮಕೃಷ್ಣರನ್ನು ನೋಡಿದುದು ರಾಮಚಂದ್ರ ದತ್ತರ ಮನೆಯಲ್ಲಿ. ಆಗ ಅವರೊಡನೆ ಮಾತನಾಡಲು ಆಗಲಿಲ್ಲ. ಒಂದು ಶನಿವಾರ ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಹೋದೆ. ಶ್ರೀರಾಮಕೃಷ್ಣರು ತಮ್ಮ ಕಾಲುಗಳನ್ನು ಮಡಚಿಕೊಂಡು ಕುಳಿತಿದ್ದುದು ದೀಪದ ಮಂದ ಕಾಂತಿಯಲ್ಲಿ ಕಾಣಿಸಿತು. 'ನೀನು ನನ್ನನ್ನು ಹಿಂದೊಮ್ಮೆ ನೋಡಿದ್ದೆಯಾ?' ಎಂದು ಪ್ರೀತಿಯಿಂದ ಅವರು ನನ್ನನ್ನು ಕೇಳಿದರು. 'ಹೌದು' ಎನ್ನುತ್ತ ಶ್ರೀರಾಮಕೃಷ್ಣರ ತೊಡೆಯ ಮೇಲೆ ತಲೆಯಿಟ್ಟು ನಮಸ್ಕರಿಸಿದೆ. ಶ್ರೀರಾಮಕೃಷ್ಣರು ನನ್ನ ತಲೆಯನ್ನು ಮೃದುವಾಗಿ ನೇವರಿಸಿದರು. ಕೂಡಲೆ ನನಗೆ ಅವರ ಮೇಲೆ ಅದ್ಭುತವಾದ ಪ್ರೀತಿಯುಂಟಾಯಿತು. ಬಹುಕಾಲದಿಂದ ನಾನು ಅವರನ್ನು ಕಂಡಿರುವಂತೆ ಅನ್ನಿಸಿತು. ನನ್ನ ಹೃದಯ ಆನಂದದಿಂದ ತುಂಬಿತು. ಪ್ರೀತಿ ಮತ್ತು ಕರುಣೆಯಿಂದ ನನಗಾಗಿ ಕಾಯುತ್ತಿರುವ ತಾಯಿಯಂತೆ ಅವರು ಕಂಡರು. ಮಗುವಿನ ವಿಶ್ವಾಸ ಮತ್ತು ದೃಢ ನಂಬಿಕೆಯಿಂದ ಅವರ ರಕ್ಷಣೆಗೆ ನನ್ನನ್ನು ನಾನು ಅರ್ಪಿಸಿಕೊಂಡೆ, ಅವರಲ್ಲಿ ಶರಣಾಗತನಾದೆ. ಇಷ್ಟುಕಾಲ ಯಾರಿಗಾಗಿ ನಾನು ಕಾಯುತ್ತಿದ್ದೆನೊ ಅವರು ನನಗೆ ದೊರೆತರೆಂದು ನನಗೆ ಖಾತ್ರಿಯಾಯಿತು. ಅಂದಿನಿಂದ ನಾನು ಶ್ರೀರಾಮಕೃಷ್ಣರನ್ನು ನನ್ನ ತಾಯಿಯಂತೆ ಕಂಡೆ.



''ನಂತರದ ಭೇಟಿಯಲ್ಲಿ ನಾನು ಶ್ರೀರಾಮಕೃಷ್ಣರಿಗೆ ಸೇವೆ ಮಾಡುತ್ತಿದ್ದೆ. ಇದ್ದಕ್ಕಿದ್ದಂತೆ ಅವರು ಭಾವಾವಸ್ಥೆಯಲ್ಲಿ ನನ್ನ ಎದೆಯನ್ನು ಮುಟ್ಟಿದರು. ಅದು ನನ್ನನ್ನು ಬಾಹ್ಯಜ್ಞಾನಶೂನ್ಯನನ್ನಾಗಿ

ಮಾಡಿ ಧ್ಯಾನಸ್ಥಿತಿಯಲ್ಲಿ ನನ್ನನ್ನು ಮುಳುಗಿಸಿತು. ನಾನು ನಿತ್ಯ ಮುಕ್ತನಾದ ಆತ್ಮ ಎಂದು ನನಗೆ ಸಾಕ್ಷಾತ್ಕಾರವಾಯಿತು. ಶ್ರೀರಾಮಕೃಷ್ಣರು, ಮಾನವರ ಕಲ್ಯಾಣಕ್ಕಾಗಿ ಮಾನವ ರೂಪಿನಲ್ಲಿ ಅವತರಿಸಿರುವ ಭಗವಂತ, ಮತ್ತು ಅವರ ಸೇವೆಗಾಗಿ ಪ್ರಪಂಚದಲ್ಲಿ ಜನ್ಮವೆತ್ತಿರುವೆನು ಎಂದು ಅನುಭವವಾಯಿತು. ಮತ್ತೊಂದು ದಿನ ಪಂಚವಟಿಯಲ್ಲಿ ಅಶ್ವತ್ಥವೃಕ್ಷದ ಕೆಳಗೆ ಇಂಥದೇ ಒಂದು ಆಶೀರ್ವಾದವನ್ನು ಶ್ರೀರಾಮಕೃಷ್ಣರು ಮಾಡಿದರು.''

ಒಮ್ಮೆ ತಾರಕನು ಸಮಾಧಿಯ ಅನುಭವಕ್ಕಾಗಿ ಶ್ರೀರಾಮಕೃಷ್ಣರನ್ನು ಕೇಳಿಕೊಂಡನು. ''ನಿನಗೆ ಸಿಗುತ್ತದೆ. ತಾಳ್ಮೆಗೆಡಬೇಡ. ಜಗನ್ಮಾತೆ ಸರಿ ಯಾದ ಸಮಯದಲ್ಲಿ ನಿನ್ನನ್ನು ಆಶೀರ್ವದಿಸುವಳು'' ಎಂದು ಶ್ರೀರಾಮಕೃಷ್ಣರು ಹೇಳಿದರು. ಮತ್ತೊಂದು ದಿನ ಶ್ರೀರಾಮಕೃಷ್ಣರು ತಾರಕನನ್ನು ಪಂಚವಟಿಗೆ ಕರೆದೊಯ್ದು, ಅವನ ನಾಲಿಗೆಯ ಮೇಲೆ ಒಂದು ಮಂತ್ರವನ್ನು ಬರೆದರು. ಅದು ಅವನನ್ನು ಗಾಢ ಧ್ಯಾನಸ್ಥನನ್ನಾಗಿ ಮಾಡಿತು. ದೇಹದ ಮೇಲೆ ಪ್ರಜ್ಞೆ ಹೋಯಿತು. ನಂತರ ಶ್ರೀರಾಮಕೃಷ್ಣರು ಅವನ ಎದೆಯ ಮೇಲೆ ಬೆರಳುಗಳಿಂದ ಉಜ್ಜುತ್ತ ಅವನನ್ನು ಪ್ರಕೃತಿಸ್ಥನಾಗುವಂತೆ ಮಾಡಿದರು. ಇದು ಗುರು ಶಿಷ್ಯನಿಗೆ ಆಧ್ಯಾತ್ಮಿಕ ಶಕ್ತಿಯನ್ನು ಪ್ರದಾನ ಮಾಡುವ ಒಂದು ತಾಂತ್ರಿಕ ದೀಕ್ಷಾವಿಧಾನ. ''ಶ್ರೀರಾಮಕೃಷ್ಣರ ಸ್ಪರ್ಶ, ತಾರಕನ ಮನಸ್ಸಿನಲ್ಲಿ ಭಗವತ್ ವ್ಯಾಕುಲತೆಯನ್ನು ಮೇಲೆಬ್ಬಿಸಿತು. ಇದ್ದಕ್ಕಿದ್ದಂತೆ ಅವನ ಹೃದಯಗ್ರಂಥಿಗಳು ಸಡಿಲಗೊಂಡವು.'' ಎಂದು ಸ್ವಾಮಿ ಶಾರದಾ ನಂದರು 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದಲ್ಲಿ ಬರೆದಿದ್ದಾರೆ.

ತಾರಕ, ಶ್ರೀರಾಮಕೃಷ್ಣರನ್ನು ಭೇಟಿ ಮಾಡುತ್ತಿದ್ದ ಕಾಲದ ಅದ್ಭುತ ಅನುಭವಗಳನ್ನು ಹೀಗೆ ಸ್ಮರಿಸುತ್ತಿದ್ದ: ''ನಾನು ಶ್ರೀರಾಮಕೃಷ್ಣರನ್ನು ಮೊದಮೊದಲು ಭೇಟಿ ಮಾಡುತ್ತಿದ್ದಾಗ, ಆಗಾಗ್ಗೆ ನನಗೆ ಅಳು ಬರುತ್ತಿತ್ತು. ಒಂದು ರಾತ್ರಿ ಬಕುಲ ವೃಕ್ಷದ ಬಳಿ ಬಿಕ್ಕಿಬಿಕ್ಕಿ ಅಳುತ್ತಿದ್ದೆ. ಶ್ರೀರಾಮಕೃಷ್ಣರು ಅವರ ಕೋಣೆಯಲ್ಲಿದ್ದರು. ನಾನು ಎಲ್ಲಿಗೆ ಹೋಗಿರುವೆನೆಂದು ವಿಚಾರಿಸಿದರು. ನಾನು ಹಿಂತಿರುಗಿದಾಗ, ನನ್ನನ್ನು ಕುಳಿತುಕೊಳ್ಳಲು ಹೇಳಿ, 'ಅವನಿಗಾಗಿ ಅತ್ತರೆ, ಭಗವಂತ ಸಂತೋಷಪಡುವನು. ಪ್ರೀತಿಯ ಕಣ್ಣೀರು ಜನ್ಮಜನ್ಮಾಂತರಗಳಿಂದ ಸಂಚಿತವಾದ ಮನಸ್ಸಿನ ಕಲ್ಮಶವನ್ನು ತೊಳೆದುಬಿಡುವುದು. ದೇವರಿಗಾಗಿ ಅಳುವುದು ಬಹಳ ಒಳ್ಳೆಯದು' ಎಂದು ಹೇಳಿದರು.

''ಮತ್ತೊಂದು ದಿನ ನಾನು ಪಂಚವಟಿಯ ಬಳಿ ಧ್ಯಾನ ಮಾಡುತ್ತಿದ್ದಾಗ ಮನಸ್ಸು ಗಾಢವಾಗಿ ಅದರಲ್ಲಿ ಮುಳುಗಿತು. ಶ್ರೀರಾಮಕೃಷ್ಣರು ಅಲ್ಲಿಗೆ ಬಂದರು. ನನ್ನ ಕಡೆ ನೋಡಿದ ಕೂಡಲೆ ನನ್ನ ಕಣ್ಣೀರು ಉಕ್ಕಿ ಹರಿಯಿತು. ಶ್ರೀರಾಮಕೃಷ್ಣರು ನಿಶ್ಚಲರಾಗಿ ನಿಂತಿದ್ದರು. ನನ್ನ ಎದೆಯೊಳಗೆ ಏನೋ ಮೇಲಕ್ಕೆ ಹರಿಯುತ್ತಿರುವಂತೆ ಅನುಭವವಾಯಿತು. ನಾನು ಕಂಪಿಸಲಾರಂಭಿಸಿದೆ. 'ನಿನ್ನ ಅಳು ಅರ್ಥಹೀನವಾದುದಲ್ಲ. ಅದೊಂದು ಬಗೆಯ ಭಾವಾವಸ್ಥೆ' ಎಂದು ಅವರು ಹೇಳಿದರು. ನಂತರ ಅವರೊಡನೆ ಅವರ ಕೋಣೆಗೆ ಹೋದೆ; ನನಗೆ ತಿನ್ನಲು ಕೊಟ್ಟರು. ಕುಂಡಲಿನಿಯನ್ನು ಜಾಗ್ರತಗೊಳಿಸುವುದು ಅವರಿಗೆ ಸುಲಭದ ವಿಷಯವಾಗಿತ್ತು. ಮುಟ್ಟದೆ, ಕೇವಲ ಒಂದು ನೋಟದಿಂದ ಅವರು ಅದನ್ನು ಮಾಡಬಲ್ಲವರಾಗಿದ್ದರು.''

## ಸ್ವಾಮಿ ನಿರಂಜನಾನಂದ (ನಿತ್ಯನಿರಂಜನ ಘೋಷ್)

ಶ್ರೀರಾಮಕೃಷ್ಣರ ಮತ್ತೊಬ್ಬ ಪ್ರತ್ಯಕ್ಷ ಶಿಷ್ಯರಾದ ಸ್ವಾಮಿ ಅದ್ಭುತಾನಂದರು ಸ್ವಾಮಿ ನಿರಂಜನಾನಂದರ ಬಗ್ಗೆ ಒಂದು ಘಟನೆಯನ್ನು ತಿಳಿಸಿರುವರು:



''ಒಮ್ಮೆ ಶ್ರೀರಾಮಕೃಷ್ಣರು ನಿರಂಜನನನ್ನು ಮುಟ್ಟಿದರು. ಮೂರು ದಿನಗಳು, ಹಗಲು ಮತ್ತು ರಾತ್ರಿ ನಿರಂಜನ ನಿದ್ರಿಸಲಾಗಲಿಲ್ಲ. ಅಲೌಕಿಕ ಜ್ಯೋತಿಯೊಂದನ್ನು ಸತತವಾಗಿ ನೋಡುತ್ತ ಭಗವನ್ನಾಮ ವನ್ನು ಜಪಿಸುತ್ತಲೇ ಇದ್ದನು. ಅವನ ನಾಲಿಗೆ ಮೂರು ಹಗಲು ಮತ್ತು ರಾತ್ರಿ ನಾಮ ಜಪ ಮಾಡುತ್ತ ಚಲಿಸುತ್ತಲೇ ಇತ್ತು. ಶ್ರೀರಾಮ ಕೃಷ್ಣರನ್ನು ಭೇಟಿಯಾಗುವುದಕ್ಕಿಂತ ಮುಂಚೆ ಅವನು ಭೂತ ಪ್ರೇತಗಳನ್ನು ಆವಾಹನೆ ಮಾಡುವವರಿಗೆ ಒಂದು ಮಾಧ್ಯಮದಂತೆ ಕೆಲಸ ಮಾಡುತ್ತಿದ್ದನು. ಒಂದು ದಿನ ಶ್ರೀರಾಮಕೃಷ್ಣರು ಹಾಸ್ಯವಾಗಿ ಹೇಳಿದರು: 'ನೋಡಪ್ಪ, ಈಗ ಮತ್ತೊಂದು ಭೂತ ದೈವೀಭೂತ – ನಿನ್ನ ಮೇಲೆ ಎರಗಿದೆ. ನೀನೆಷ್ಟೇ ಪ್ರಯತ್ನಿಸಿದರೂ ಅದನ್ನು ನೀನು ಓಡಿಸಲಾಗುವುದಿಲ್ಲ.''

ನಿರಂಜನ ಶ್ರೀರಾಮಕೃಷ್ಣರಿಂದ ಮಂತ್ರೋಪದೇಶವನ್ನು ಪಡೆದ. ನಂತರ ಅವನಿಗಾದ ಅನುಭವವನ್ನು ಹೀಗೆ ವಿವರಿಸಿದ: ''ಆಗ ನಾನು ಒಂದು ಕಛೇರಿಯಲ್ಲಿ ನೌಕರನಾಗಿದ್ದೆ. ಶ್ರೀರಾಮಕೃಷ್ಣರು ನನ್ನ ನಾಲಿಗೆಯ ಮೇಲೆ ಒಂದು ಮಂತ್ರವನ್ನು ಬರೆದು ಅದನ್ನು ಪುನರುಚ್ಚರಿಸುವಂತೆ ಹೇಳಿದರು. ಅದೆಂತಹ ಅನುಭವ! ಮನೆಗೆ ಹಿಂತಿರುಗಿದ ಮೇಲೆ, ನನ್ನ ಕಣ್ಣುಗಳು ಮುಚ್ಚಿದ್ದರೂ, ಅಸಂಖ್ಯ ಮಿಂಚು ಹುಳುಗಳನ್ನು ನೋಡಲಾರಂಭಿಸಿದೆ. ಮಂತ್ರ ನನ್ನ ತಲೆಯಲ್ಲಿ ಮತ್ತು ದೇಹದ ಅಂಗಾಂಗಳಲ್ಲೆಲ್ಲ ಕಂಪಿತವಾಗುತ್ತಿತ್ತು. ನಾನು ನಿದ್ರಿಸಬೇಕಾಗಿತ್ತು, ಆದರೆ ಮಂತ್ರದ ಉಚ್ಚಾರಣೆಯನ್ನು ನಿಲ್ಲಿಸಲು ಆಗಲೇ ಇಲ್ಲ. ಇಂತಹ ಅನುಭವದ ಪರಿಚಯ ನನಗೆ ಇದಕ್ಕೆ ಮುಂಚೆ ಇರಲಿಲ್ಲ. ನನ್ನ ತಲೆ ಕೆಟ್ಟುಹೋಗುವುದೆಂದು ನನಗೆ ಭಯವಾಯಿತು. ಮೂರು ದಿನಗಳ ನಂತರ ನಾನು ದಕ್ಷಿಣೇಶ್ವರಕ್ಕೆ ಹೋಗಿ ಶ್ರೀರಾಮಕೃಷ್ಣರಿಗೆ ಹೇಳಿದೆ, 'ಸ್ವಾಮಿ, ನೀವು ನನಗೇನು ಮಾಡಿದಿರಿ?' ನನ್ನ ಕತೆಯನ್ನು ಕೇಳಿ ಶ್ರೀರಾಮಕೃಷ್ಣರು ನಕ್ಕು, ಮಂತ್ರದ ಶಕ್ತಿಯನ್ನು ಹಿಂತೆಗೆದುಕೊಂಡರು. ನಂತರ ಹೇಳಿದರು, 'ಅದನ್ನು 'ಅಜಪಾ ಜಪ' ಎಂದು ಕರೆಯತ್ತಾರೆ. ಹಾಗೆಂದರೆ, ಪ್ರಯತ್ನವಿಲ್ಲದೆ ಎಡೆಬಿಡದೆ ನಡೆಯುವ ಮಂತ್ರಜಪ.''

## ಸ್ವಾಮಿ ಶಾರದಾನಂದ (ಶರತ್ ಚಂದ್ರ ಚಕ್ರವರ್ತಿ)

ಒಮ್ಮೆ ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ಭಾವಾವಸ್ಥೆಯಲ್ಲಿದ್ದಾಗ ಶರತ್‌ಚಂದ್ರನ ತೊಡೆಯ ಮೇಲೆ ಕುಳಿತರಂತೆ. ಇದನ್ನು

ಕಂಡು ಅವಾಕ್ಕಾದ ಭಕ್ತರಿಗೆ, 'ಶರತ್ ಎಷ್ಟು ಭಾರವನ್ನು ತಡೆಯಬಲ್ಲ ಎಂದು ಪರೀಕ್ಷಿಸಿದೆ' ಎಂದರಂತೆ. ಮುಂದೆ ಶರತ್‌ಚಂದ್ರರು ಶ್ರೀರಾಮ ಕೃಷ್ಣ ಸಂಘದ ಭಾರವನ್ನು ಕಾರ್ಯ ದರ್ಶಿಗಳಾಗಿ ೩೦ ವರ್ಷಗಳ



ಕಾಲ ಹೊತ್ತರು. ಶ್ರೀರಾಮಕೃಷ್ಣರು ಒಮ್ಮೆ ಗಣೇಶನ ಮಾತೃಭಕ್ತಿ ಮತ್ತು ಶುದ್ಧ ಮನಸ್ಸನ್ನು ಪ್ರಶಂಸಿಸಿದಾಗ ಶರತ್, ''ನನಗೆ ಗಣೇಶನ ಶೀಲ ಬಹಳ ಇಷ್ಟ. ಅವನು ನನ್ನ ಆದರ್ಶ'' ಎಂದರು. ಆಗ ಶ್ರೀರಾಮ ಕೃಷ್ಣರು, ''ಗಣೇಶ ನಿನ್ನ ಆದರ್ಶವಲ್ಲ , ನಿನ್ನ ಆದರ್ಶ ಶಿವ. ಶಿವನ ಗುಣಗಳು ನಿನ್ನಲ್ಲಿ ಸುಪ್ತವಾಗಿವೆ. ನಿನ್ನನ್ನು ಶಿವನೆಂದೂ ನನ್ನನ್ನು ಶಕ್ತಿ ಎಂದೂ ಯಾವಾಗಲೂ ಚಿಂತಿಸು. ನಿನ್ನ ಎಲ್ಲ ಶಕ್ತಿಗಳ ಅಂತಿಮ ಆಗರ ನಾನೇ.'' ಶ್ರೀರಾಮಕೃಷ್ಣರ ಈ ದೈವೀವಾಣಿ ಶರತ್‌ನ ಮುಂದಿನ ಜೀವನದಲ್ಲಿ ನಿಜವಾಯಿತು. ಒಮ್ಮೆ ಶರತ್‌ಗೆ ಮನಸ್ಸನ್ನು ಏಕಾಗ್ರಗೊಳಿಸಲಾಗಲಿಲ್ಲ. ಅದನ್ನು ಶ್ರೀರಾಮಕೃಷ್ಣರಿಗೆ ತಿಳಿಸಿದಾಗ ಅವರು ಕೂಡಲೆ ಶರತ್‌ನ ಭ್ರೂಮಧ್ಯದಲ್ಲಿ ತಮ್ಮ ತೋರುಬೆರಳಿನಿಂದ ಒತ್ತಿದರಂತೆ. ಆಗ ಅವನ ಮನಸ್ಸು ಗಾಳಿ ಇಲ್ಲದ ಕಡೆ ದೀಪದ ಕುಡಿ ನಿಶ್ಚಲವಾಗಿ ಉರಿಯುವಂತೆ ಶಾಂತವಾಯಿತು.

ಒಂದು ದಿನ ಶ್ರೀರಾಮಕೃಷ್ಣರು ಕಲ್ಪತರುವಿನಂತೆ ಆದಾಗ ತಮ್ಮ ಶಿಷ್ಯರ ಆಸೆಗಳನ್ನು ಪೂರೈಸಿದರು. ಕೆಲವರು ಭಕ್ತಿ, ಕೆಲವರು ಮುಕ್ತಿ ಬೇಡಿದರು. ಶರತ್ ಸುಮ್ಮನೆ ಇರುವುದನ್ನು ನೋಡಿ, ''ನೀನು ದೇವ ರನ್ನು ಹೇಗೆ ಸಾಕ್ಷಾತ್ಕಾರ ಮಾಡಿಕೊಳ್ಳಲು ಬಯಸುವೆ? ಧ್ಯಾನಕಾಲ ದಲ್ಲಿ ಯಾವ ದರ್ಶನವನ್ನು ನೋಡಲು ಬಯಸುವೆ?'' ಎಂದು ಕೇಳಿದರು. ''ನಾನು ಧ್ಯಾನದಲ್ಲಿ ದೇವರ ಯಾವ ರೂಪವನ್ನು ನೋಡಲೂ ಬಯಸುವುದಿಲ್ಲ. ನಾನು ಅವನನ್ನು ಎಲ್ಲ ಜೀವಿಗ ಳಲ್ಲಿಯೂ ಕಾಣಬಯಸುವೆ. ನನಗೆ ದರ್ಶನಗಳಲ್ಲಿ ಆಸಕ್ತಿಯಿಲ್ಲ.'' ಎಂದನಂತೆ. ಶ್ರೀರಾಮಕೃಷ್ಣರು ನಕ್ಕು ಹೇಳಿದರು: ''ಅದು ಸಾಕ್ಷಾ ತ್ಕಾರದ ಚರಮ ಸ್ಥಿತಿ. ಅದನ್ನು ಒಮ್ಮೆಗೇ ಪಡೆಯಲಾಗುವುದಿಲ್ಲ.'' ''ಆದರೆ, ಅದಕ್ಕಿಂತ ಕಡಿಮೆಯದರಲ್ಲಿ ನಾನು ತೃಪ್ತನಾಗುವುದಿಲ್ಲ. ಅದನ್ನು ಪಡೆಯುವವರೆಗೂ ನಾನು ಶ್ರಮಿಸುತ್ತೇನೆ'' ಎಂದು ಶರತ್ ಉತ್ತರವಿತ್ತನು. ಕೊನೆಗೆ ಶ್ರೀರಾಮಕೃಷ್ಣರು, ''ಆಗಲಿ, ನೀನು ಆ ಸ್ಥಿತಿಯನ್ನು ಮುಟ್ಟುವೆ'' ಎಂದು ಆಶೀರ್ವದಿಸಿದರು.

### ಸ್ವಾಮಿ ಅದ್ಭುತಾನಂದ (ಲಟು)

ಶ್ರೀರಾಮಕೃಷ್ಣರು ಲಟುವನ್ನು ಮೊದಲ ಬಾರಿ ರಾಮಚಂದ್ರ ದತ್ತನ ಜತೆ ನೋಡಿದಾಗ, ''ರಾಮ್, ಈ ಹುಡುಗನನ್ನು ನೀನು ಕರೆದುಕೊಂಡು ಬಂದೆಯಾ? ಇವನು ನಿನಗೆಲ್ಲಿ ಸಿಕ್ಕಿದ? ಇವನಲ್ಲಿ ಕೆಲವು ಶುಭ ಲಕ್ಷಣಗಳಿವೆ'' ಎಂದು ಹೇಳಿದರು. ಅವನನ್ನು ಕುಳಿತು ಕೊಳ್ಳುವಂತೆ ಹೇಳಿ ನಿತ್ಯಮುಕ್ತರ ಬಗ್ಗೆ ಮಾತನಾಡತೊಡಗಿದರು. ''ಯಾರು ನಿತ್ಯಮುಕ್ತರೊ, ಅವರ ಜ್ಞಾನದ ಮೇಲೆ ಒಂದು ತೆರೆ ಇರು ತ್ತದೆ, ಅದನ್ನು ಸರಿಸಬೇಕಷ್ಟೆ. ಅವರು ಭೂಮಿಯ ಒಳಗೆ ಇರುವ ಚಿಲುಮೆಯಂತೆ. ನೆಲವನ್ನು ಅಗೆಯುವಾಗ ಅದನ್ನು ಮುಚ್ಚಿರುವ ಬಂಡೆಯನ್ನು ಸರಿಸಿದ ತಕ್ಷಣವೆ ನೀರು ಚಿಮ್ಮಲಾರಂಭಿಸುವುದು. ಹೀಗೆ ಹೇಳುತ್ತ ಅವರು ಲಟುವನ್ನು ಮುಟ್ಟಿದರು. ಆತ ಭಾವಸಮಾಧಿ ಗೆ ಹೋದನು. ಅವನ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿತು. ತುಟಿಗಳು ಕಂಪಿಸಲಾರಂಭಿಸಿದುವು. ಹೀಗೆ ಒಂದು ಗಂಟೆ ಕಳೆಯಿತು. ನಂತರ ಶ್ರೀರಾಮಕೃಷ್ಣರು ಲಟುವನ್ನು ಮುಟ್ಟಿದರು. ನಿಧಾನವಾಗಿ ಆತ ಎಂದಿನಂತಾದನು. ಶ್ರೀರಾಮಕೃಷ್ಣರು ತಮ್ಮ ಸೋದರಳಿಯ ರಾಮಲಾಲನನ್ನು ಕರೆದು ಲಟುವಿಗೆ ಸ್ವಲ್ಪ ಪ್ರಸಾದವನ್ನು ಕೊಡಲು ಹೇಳಿ, ಅನಂತರ ಅವನನ್ನು ಕಾಳೀಮಂದಿರವನ್ನು ನೋಡುವಂತೆ ಹೇಳಿ ಕಳುಹಿಸಿದರು.

ಕೆಲವು ವರ್ಷಗಳ ನಂತರ, ಶ್ರೀರಾಮಕೃಷ್ಣರು ಲಟುವಿನ ಆಧ್ಯಾ ತ್ಮಿಕ ಪ್ರಜ್ಞೆಯನ್ನು ಹೇಗೆ ಜಾಗ್ರತಗೊಳಿಸಿದರು ಎಂಬುದನ್ನು ಸ್ವಾಮಿ ಬ್ರಹ್ಮಾನಂದರು ಈ ರೀತಿ ವಿವರಿಸಿದರು:

''ಒಂದುದಿನ ಬೆಳಗ್ಗೆ, ಶ್ರೀರಾಮಕೃಷ್ಣರು ಹೇಳಿದಂತೆ ಲಟು ನಮ್ಮನ್ನೆಲ್ಲ ಧ್ಯಾನ ಮಾಡಲು ಎಬ್ಬಿಸಿದನು. ಇನ್ನೂ ಬೆಳಗಾಗಿರಲಿಲ್ಲ. ಬೇಗನೆ ಮುಖ ತೊಳೆದುಕೊಂಡು ನಾವೆಲ್ಲ ಜಪ ಮಾಡಲು ಕುಳಿತೆವು. ಶ್ರೀರಾಮ ಕೃಷ್ಣರು ನಮಗೆ ಹೇಳಿದರು, 'ದೇವರ ಹೆಸರನ್ನು ಭಕ್ತಿಯಿಂದ ಹೇಳುತ್ತ ಈ ದಿನ ನೀವೆಲ್ಲ ಧ್ಯಾನದಲ್ಲಿ ಆಳವಾಗಿ ಮುಳು ಗಿರಿ.' ನಂತರ ಅವರು 'ಓ, ತಾಯಿ ಕುಂಡಲಿನಿ, ಏಳಮ್ಮ' ಎಂದು ಹಾಡುತ್ತ ನಮ್ಮ ಸುತ್ತ ಸುತ್ತಲಾರಂಭಿಸಿದರು. ನಾವು



ಜಪ ಮಾಡುತ್ತಿದ್ದಂತೆ ಅವರು ಮುಂದುವರಿಸಿದರು. ಇದ್ದಕಿದ್ದಂತೆ, ಏನು ಕಾರಣವೊ ತಿಳಿಯದು, ನನ್ನ ದೇಹ ಜೋರಾಗಿ ನಡುಗಲಾರಂಭಿಸಿತು. ಅದೇ ಸಮಯದಲ್ಲಿ ಲಟು ಜೋರಾಗಿ ಕಿರಿಚಿದನು. ಶ್ರೀರಾಮಕೃಷ್ಣರು ತಮ್ಮ ಕೈಯಿಂದ ಅವನ ಭುಜವನ್ನು ಒತ್ತಿಹಿಡಿದು, 'ಏಳಬೇಡ. ಹಾಗೆಯೆ ಕುಳಿತುಕೊ' ಎಂದರು. ಲಟುವಿಗೆ ವೇದನೆ ಆಗುತ್ತಿದ್ದುದನ್ನು ನಾನು ನೋಡಿದೆ. ಆದರೆ ಅವನು ಏಳುವುದಕ್ಕೆ ಶ್ರೀರಾಮಕೃಷ್ಣರು ಬಿಡಲಿಲ್ಲ. ಸ್ವಲ್ಪ ಸಮಯದ ನಂತರ ಲಟುವಿಗೆ ಬಾಹ್ಯಪ್ರಜ್ಞೆ ಹೋಯಿತು. ಶ್ರೀರಾಮಕೃಷ್ಣರು ಅದೇ ಹಾಡನ್ನು ಹಾಡುತ್ತಿದ್ದರು. ಇನ್ನೂ ಒಂದು ಗಂಟೆಗೂ ಹೆಚ್ಚು ಕಾಲ ಹಾಗೆಯೆ ಹಾಡುತ್ತಿದ್ದರು. ಹೀಗೆ ಹಾಡಿನ ಮೂಲಕವೂ ಅವರು ಆಧ್ಯಾತ್ಮಿಕ ಶಕ್ತಿಯನ್ನು ನಮಗೆ ಹರಿಸುತ್ತಿದ್ದರು.''

ಶ್ರೀರಾಮಕೃಷ್ಣರಿಗೆ ತಮ್ಮ ಶಿಷ್ಯರ ಸ್ವಭಾವ ತಿಳಿದಿತ್ತು. ಅದರಂತೆ ಆಧ್ಯಾತ್ಮಿಕ ಸಾಧನೆಯನ್ನು ಮಾಡಲು ಅವರನ್ನು ಬೇರೆ ಬೇರೆ ದೇವಸ್ಥಾನಗಳಿಗೆ ಅಥವಾ ದಕ್ಷಿಣೇಶ್ವರ ದೇವಾಲಯದ ತೋಟದಲ್ಲಿ ಬೇರೆ ಬೇರೆ ಸ್ಥಳಗಳಿಗೆ ಕಳುಹಿಸುತ್ತಿದ್ದರು. ರಾಮಲಾಲ ಈ ಘಟನೆ ಯನ್ನು ಹೇಳಿದರು:

‘‘ಒಂದು ಮಧ್ಯಾಹ್ನ ಶ್ರೀರಾಮಕೃಷ್ಣರು ಲಟುವನ್ನು ಒಂದು ಶಿವಮಂದಿರಕ್ಕೆ ಧ್ಯಾನ ಮಾಡಲು ಕಳುಹಿಸಿದರು. ಮಧ್ಯಾಹ್ನ ಕಳೆದರೂ ಲಟು ಹಿಂದಿರುಗಿ ಬರಲಿಲ್ಲ. ಅವನನ್ನು ನೋಡಿಕೊಂಡು ಬರಲು ಶ್ರೀರಾಮಕೃಷ್ಣರು ನನ್ನನ್ನು ಕಳುಹಿಸಿದರು. ದೇವಸ್ಥಾನಕ್ಕೆ ಹೋಗಿ ನೋಡಿದಾಗ ಲಟು ನಿಶ್ಚಲನಾಗಿ ಗಾಢ ಧ್ಯಾನದಲ್ಲಿ ಮುಳುಗಿದ್ದನು. ದೇಹವೆಲ್ಲ ಬೆವರಿನಿಂದ ಒದ್ದೆಯಾಗಿತ್ತು. ರಾಮಕೃಷ್ಣರಿಗೆ ಇದನ್ನು ತಿಳಿಸಿದಾಗ, ಒಂದು ಬೀಸಣಿಗೆಯನ್ನು ಕೈಗೆತ್ತಿಕೊಂಡು ಅವರೇ ಆ ದೇವಸ್ಥಾನಕ್ಕೆ ಹೋದರು. ಒಂದು ಲೋಟ ನೀರನ್ನು ತರಲು ನನಗೆ ಹೇಳಿದರು. ನಾನು ದೇವಸ್ಥಾನಕ್ಕೆ ಹಿಂತಿರುಗಿದಾಗ ಅವರು ಲಟುವಿಗೆ ಗಾಳಿ ಹಾಕುತ್ತಿದ್ದುದು ಕಂಡು ಬಂತು. ಲಟು ನಡುಗಲು ಪ್ರಾರಂಭಿಸಿದನು. ‘ಮಗು, ಸಂಜೆಯಾಯಿತು. ದೀಪಗಳನ್ನು ಸರಿಮಾಡಿ ಹೊತ್ತಿಸುವುದು ಯಾವಾಗ?’ ಎಂದು ರಾಮಕೃಷ್ಣರು ಕೇಳಿದರು. ರಾಮಕೃಷ್ಣರ ಧ್ವನಿಯನ್ನು ಕೇಳಿ ಲಟು ನಿಧಾನವಾಗಿ ಮರಳಿ ಬಾಹ್ಯಪ್ರಜ್ಞೆ ಪಡೆದನು. ಅವನು ಕಣ್ಣುಗಳನ್ನು ತೆರೆದು ಶ್ರೀರಾಮಕೃಷ್ಣರನ್ನು ನೋಡಿ ತಬ್ಬಿಬ್ಬಾದನು. ಶ್ರೀರಾಮಕೃಷ್ಣರು, ‘ನೀನು ಬಹಳ ಬೆವೆತಿರುವೆ. ಆಸನದಿಂದ ಏಳುವ ಮುನ್ನ ಸ್ವಲ್ಪ ಸುಧಾರಿಸಿಕೊ’ ಎಂದರು. ಈ ಹೊತ್ತಿಗೆ ಲಟು ಸಂಪೂರ್ಣವಾಗಿ ಬಾಹ್ಯಪ್ರಪಂಚಕ್ಕೆ ಬಂದಿದ್ದು, ‘ನೀವೇನು ಮಾಡುತ್ತಿರುವಿರಿ? ಇದು ನನಗೆ ಅವಮಾನವಲ್ಲವೆ? ನಿಮ್ಮ ಸೇವೆಯನ್ನು ಮಾಡಬೇಕಾದವನು ನಾನು’ ಎಂದು ಜೋರಾಗಿ ಹೇಳಿದನು. ‘ಇಲ್ಲ ಮಗು, ನಾನು ಸೇವೆ ಮಾಡುತ್ತಿರುವುದು ನಿನಗಲ್ಲ, ನಿನ್ನಲ್ಲಿರುವ ಭಗವಾನ್ ಶಿವನಿಗೆ. ಅಂತಹ ತಡೆಯಲಾಗದ ಧಗೆಯಲ್ಲಿ ಅವನು ಕಷ್ಟಪಡುತ್ತಿದ್ದ. ಅವನು ನಿನ್ನನ್ನು ಪ್ರವೇಶಿಸಿದುದು ನಿನಗೆ ತಿಳಿಯಿತೆ?’ ಎಂದು ಶ್ರೀರಾಮಕೃಷ್ಣರು ಕೇಳಿದರು. ‘ಇಲ್ಲ, ನನಗೊಂದೂ ತಿಳಿಯಲಿಲ್ಲ. ನಾನು ಲಿಂಗವನ್ನು ಎವೆಯಿಕ್ಕದೆ ನೋಡುತ್ತಿದ್ದೆ. ಒಂದು ಅದ್ಭುತವಾದ ಜ್ಯೋತಿ ಕಾಣಿಸಿತು. ಅದು ದೇವಸ್ಥಾನವನ್ನೆಲ್ಲ ಆವರಿಸಿತು. ನಂತರ ನನಗೆ ಪ್ರಜ್ಞೆ ತಪ್ಪಿತು’ ಎಂದು ಲಟು ಹೇಳಿದನು.’’

## ಸ್ವಾಮಿ ಅಭೇದಾನಂದ (ಕಾಳಿ ಪ್ರಸಾದ ಚಂದ್ರ)

ಕಾಳಿ ಶ್ರೀರಾಮಕೃಷ್ಣರನ್ನು ಮೊದಲು ಭೇಟಿ ಮಾಡಿದುದನ್ನು ಹೀಗೆ ವಿವರಿಸಿರುವನು: ‘‘ನನಗೆ ಯೋಗವನ್ನು ಕಲಿಯಬೇಕೆಂಬ ಬಯಕೆ ಇತ್ತು. ಅದನ್ನು ಹೇಳಿಕೊಡುವ ಗುರುವನ್ನು ಕಂಡುಹಿಡಿಯಲು ಮನಸ್ಸು ತವಕಿಸಿತು. ನನ್ನ ಪ್ರಿಯ ಸಹಾಧ್ಯಾಯಿ ಯಜ್ಞೇಶ್ವರ ಭಟ್ಟಾಚಾರ್ಯನಲ್ಲಿ ನನ್ನ ಉತ್ಕಟಾಕಾಂಕ್ಷೆಯನ್ನು ಹೇಳಿಕೊಂಡೆ. ಅವನು, ‘ಒಬ್ಬರು ಅದ್ಭುತವಾದ ಯೋಗಿಗಳಿದ್ದಾರೆ. ಅವರ ಹೆಸರು ಶ್ರೀರಾಮಕೃಷ್ಣ ಪರಮಹಂಸ. ಅವರು ದಕ್ಷಿಣೇಶ್ವರದ ರಾಣಿ ರಾಸಮಣಿಯ ದೇವಸ್ಥಾನದ ತೋಟದಲ್ಲಿದ್ದಾರೆ. ಬಹುಶಃ ಅವರು ನಿನ್ನ ಯೋಗದ ಆಸೆಯನ್ನು ಈಡೇರಿಸಬಹುದು’ ಎಂದು ಹೇಳಿದ. ಇದನ್ನು ಕೇಳಿ ನನ್ನ ಆಸೆಗೆ ಮೇರೆಯಿಲ್ಲದಂತಾಯಿತು. ಒಂದು ಭಾನುವಾರ ಬೆಳಗ್ಗೆ ದಾರಿಯನ್ನು ಕೇಳಿಕೊಂಡು ದಕ್ಷಿಣೇಶ್ವರಕ್ಕೆ ಹೋದೆ. ರಾಮಕೃಷ್ಣರು ಕಲ್ಕತ್ತೆಗೆ ಹೋಗಿದ್ದರು. ಸಂಜೆಯ ಆರತಿಯಾದ ನಂತರ ಶ್ರೀರಾಮಕೃಷ್ಣರು ಹಿಂತಿರುಗಿದರು. ನಾನು ಅವರ ಕೋಣೆಗೆ ಹೋಗಿ, ನನ್ನ ಆಸೆಯ ಬಗ್ಗೆ ಹೇಳಿದೆ. ಅವರು ಸ್ವಲ್ಪ ಕಾಲ ಸುಮ್ಮನಿದ್ದು ನಂತರ ಹೇಳಿದರು: ‘ನಿನಗೆ ಯೋಗವನ್ನು ಕಲಿಯಬೇಕೆಂಬ ಆಸೆ ಈ ಸಣ್ಣ ವಯಸ್ಸಿನಲ್ಲಿಯೇ ಇರುವುದು ಒಳ್ಳೆಯ ಲಕ್ಷಣ. ನಿನ್ನ ಹಿಂದಿನ ಜನ್ಮದಲ್ಲಿ ನೀನು ಯೋಗಿಯಾಗಿದ್ದೆ. ಅದರಲ್ಲಿ ಸಿದ್ಧಿಯನ್ನು ಪಡೆಯುವುದರಲ್ಲಿ ಸ್ವಲ್ಪ ಮಾತ್ರ ಬಾಕಿ ಇದೆ. ಇದು ನಿನ್ನ ಕೊನೆಯ ಜನ್ಮ. ಆಗಲಿ, ನಿನಗೆ ಯೋಗವನ್ನು ಹೇಳಿಕೊಡುತ್ತೇನೆ. ರಾತ್ರಿ ವಿಶ್ರಮಿಸು. ನಾಳೆ ಬೆಳಗ್ಗೆ ಬಾ’ ಎಂದರು. ಮಾರನೆಯ ದಿನ ಶ್ರೀರಾಮಕೃಷ್ಣರು ನನಗಾಗಿ ಕಾಯುತ್ತಿರುವರೆಂದು ರಾಮಲಾಲ ಹೇಳಿದರು. ನಾನು ಶ್ರೀರಾಮಕೃಷ್ಣರ ಕೋಣೆಗೆ ಹೋಗಿ ಅವರಿಗೆ ನಮಸ್ಕರಿಸಿ ಕುಳಿತೆ. ನನ್ನ ವ್ಯಾಸಂಗದ ಬಗ್ಗೆ ವಿಚಾರಿಸಿದರು. ಬಹಳ ಒಳ್ಳೆಯದು ಎಂದು ಹೇಳಿ ಉತ್ತರ ವರಾಂಡಕ್ಕೆ ಕರೆದುಕೊಂಡು ಹೋಗಿ ಒಂದು ಮಂಚದ ಮೇಲೆ ಕುಳಿತುಕೊಳ್ಳುವಂತೆ ಹೇಳಿದರು. ನಾನು ಪದ್ಮಾಸನದಲ್ಲಿ ಕುಳಿತುಕೊಂಡ ಮೇಲೆ ನನ್ನ ನಾಲಿಗೆಯನ್ನು ಚಾಚಲು ಹೇಳಿ ಅದರ ಮೇಲೆ ತಮ್ಮ ಬಲಗೈ ಮಧ್ಯದ ಬೆರಳಿನಿಂದ ಒಂದು ಮಂತ್ರವನ್ನು ಬರೆದು, ಜಗನ್ಮಾತೆ ಕಾಳಿಯ ಮೇಲೆ ಧ್ಯಾನಿಸಲು ಹೇಳಿದರು. ಅವರು ಹೇಳಿದಂತೆ ಮಾಡಿದೆ. ಕ್ರಮೇಣ ಬಾಹ್ಯಪ್ರಜ್ಞೆ ಹೋಗಿ ಗಾಢ ಧ್ಯಾನಸ್ಥನಾದೆ. ನನ್ನೊಳಗೆ ಅವರ್ಣನೀಯ ಆನಂದವನ್ನು ಅನುಭವಿಸಿದೆ. ಎಷ್ಟು ಹೊತ್ತು ಆ ಸ್ಥಿತಿಯಲ್ಲಿ ಇದ್ದೆನೊ ತಿಳಿಯದು. ಸ್ವಲ್ಪ ಹೊತ್ತಿನ ನಂತರ ಶ್ರೀರಾಮಕೃಷ್ಣರು ನನ್ನ ಎದೆಯನ್ನು ಮುಟ್ಟಿದರು. ನಾನು ಪ್ರಕೃತಿಸ್ಥನಾದೆ.’



## ಸ್ವಾಮಿ ಸುಬೋಧಾನಂದ (ಸುಬೋಧ ಚಂದ್ರ ಘೋಷ್)

ಸುಬೋಧ ಚಂದ್ರ ಶ್ರೀರಾಮಕೃಷ್ಣರ ಬಗ್ಗೆ ಬ್ರಾಹ್ಮ ಸಮಾಜದ ಪತ್ರಿಕೆಯಲ್ಲಿ ಓದಿದ್ದ. ‘ಶ್ರೀರಾಮಕೃಷ್ಣ ಪರಮಹಂಸರ ಉಕ್ತಿಗಳು’ ಎಂಬ ಪುಸ್ತಕವನ್ನು ಓದಿದ ಮೇಲೆ ಶ್ರೀರಾಮಕೃಷ್ಣರನ್ನು ಭೇಟಿ ಮಾಡಬೇಕೆಂಬ ಹಂಬಲ ಹೆಚ್ಚಾಯಿತು. ಒಮ್ಮೆ ಅವರನ್ನು ನೋಡಲು ದಕ್ಷಿಣೇಶ್ವರಕ್ಕೆ ಹೋದ. ಶ್ರೀರಾಮಕೃಷ್ಣರು ಇವನ ಬಗ್ಗೆ ವಿಚಾರಿಸಿದರು. ‘‘ನೀನು ಇಲ್ಲಿಗೆ ಬರುವೆಯೆಂದು ಗೊತ್ತಿತ್ತು. ಯಾರು ಭಗವಂತನೆಡೆಗೆ ಹೋಗುವರೊ ಅವರನ್ನು ಜಗನ್ಮಾತೆ ಇಲ್ಲಿಗೆ ಕಳುಹಿಸುವಳು. ನೀನು ಇಲ್ಲಿಗೆ ಸೇರಿದವನು’’ ಎಂದರು. ಅದಕ್ಕೆ ಸರಳನಾದ ಸುಬೋಧ, ‘‘ಸ್ವಾಮಿ, ನಾನು ಇಲ್ಲಿಗೆ ಸೇರಿದವನಾದರೆ, ನೀವು ಮುಂಚೆಯೇ ಏತಕ್ಕೆ ನನ್ನನ್ನು ಕರೆಯಲಿಲ್ಲ?’’ ಎಂದು ಕೇಳಿದನು. ‘‘ನೋಡು, ಎಲ್ಲವೂ ಸಕಾಲದಲ್ಲಿ ಆಗುವುದು’’ ಎಂದು ಶ್ರೀರಾಮಕೃಷ್ಣರು ಹೇಳಿದರು. ಶ್ರೀರಾಮಕೃಷ್ಣರು ಸುಬೋಧನ ಕೈಯನ್ನು ಹಿಡಿದುಕೊಂಡು ಸ್ವಲ್ಪ ಹೊತ್ತು ಕಣ್ಣುಮುಚ್ಚಿದರು. ಕೊನೆಗೆ ಅವರು, ‘‘ನೀನು ಗುರಿ ಮುಟ್ಟುವೆ. ತಾಯಿ ಹಾಗೆ ಹೇಳುವಳು’’ ಎಂದರು. ನಂತರ ಸುಬೋಧನನ್ನು ತಮ್ಮ ಪಕ್ಕದಲ್ಲಿ ಹಾಸಿಗೆಯ ಮೇಲೆ ಕುಳಿತುಕೊಳ್ಳಲು ಹೇಳಿದರು. ಅದಕ್ಕೆ ಸುಬೋಧ, ‘ತನ್ನ ಬಟ್ಟೆ ಮಲಿನವಾಗಿದೆ’ ಎಂದು ಕುಳಿತುಕೊಳ್ಳಲು ಒಪ್ಪಲಿಲ್ಲ. ಶ್ರೀರಾಮಕೃಷ್ಣರು ಬಲವಂತದಿಂದ



ಅವನನ್ನು ತಮ್ಮ ಪಕ್ಕದಲ್ಲಿ ಕುಳ್ಳಿರಿಸಿ ಹೇಳಿದರು: ''ನೀನು ನನ್ನ ಸ್ವಂತದವನು. ಬಟ್ಟೆ ಕೊಳೆ ಯಾಗಿದ್ದರೆ ಏನಂತೆ?'' ಎಂದು ಪ್ರೀತಿ ತೋರಿದರು. ಪ್ರಸಾದ ಕೊಟ್ಟು ದೋಣಿಯಲ್ಲಿ ಹೋಗಲು ಹಣ ಕೊಟ್ಟರು. ಸುಬೋಧ ಹಣ ನಿರಾಕರಿಸಿದ. ''ನಿಮ್ಮ ಬೋಧನೆಗಳು ಅದ್ಭುತ. ನೀವು ಪ್ರಸಿದ್ಧ ಮಹಾತ್ಮರು. ಆದ್ದರಿಂದ ನಿಮ್ಮನ್ನು ನೋಡಲು ಬಂದೆ'' ಎಂದ. ಈ ಮಾತುಗಳನ್ನು ಕೇಳಿದ ಕೂಡಲೆ ಶ್ರೀರಾಮಕೃಷ್ಣರ ಚಹರೆ ಮಾರ್ಪಾಡಾಯಿತು. ಅತ್ಯಂತ ದೈನ್ಯತೆಯಿಂದ ಅವರು ಹೇಳಿದರು: ''ಆಹಾ, ನಾನೊಂದು ಕ್ರಿಮಿಗಿಂತ ಕಡಿಮೆ. ಹೆಸರು ಮತ್ತು ಕೀರ್ತಿಯೆ? ಅದು ಅರ್ಥಹೀನ. ನಿಜವಾಗಿ ನಾನು ಒಂದು ಹುಳುವಿಗಿಂತ ಕೀಳು.'' ಸ್ವಲ್ಪ ಸಮಯದ ನಂತರ, ಸುಬೋಧನಿಗೆ ಹೇಳಿದರು: ''ಯಾರು ತಾಯಿಯ ಕೃಪೆಯನ್ನು ಪಡೆಯುವರೊ ಅವರನ್ನು ಅವಳು ಇಲ್ಲಿಗೆ ಕಳುಹಿಸುವಳು. ನೀನು ಮಂಗಳವಾರ ಮತ್ತು ಶನಿವಾರ ಇಲ್ಲಿಗೆ ಬಾ.'' ಮುಂದಿನ ಶನಿವಾರ ಸುಬೋಧ ದಕ್ಷಿಣೇಶ್ವರಕ್ಕೆ ಧಾವಿಸಿದ. ಶ್ರೀರಾಮಕೃಷ್ಣರ ಕೋಣೆ ಭಕ್ತರಿಂದ ತುಂಬಿತ್ತು. ಸುಬೋಧ ಬಾಗಿಲಿನ ಸಂದಿಯಿಂದ ಇಣುಕಿ ಶ್ರೀರಾಮಕೃಷ್ಣರಿಗೆ ಕೈ ಜೋಡಿಸಿ ನಮಸ್ಕರಿಸಿದ. ಶ್ರೀರಾಮಕೃಷ್ಣರು, ಅವನನ್ನು ಹೊರಗಡೆಯೇ ಇರು ವಂತೆ ಸನ್ನೆ ಮಾಡಿ, ಭಕ್ತರಿಗೆ ಕಾಯುವಂತೆ ಹೇಳಿ ಕೋಣೆಯಿಂದ ಹೊರಬಂದು ಇವನನ್ನು ಮಾತನಾಡಿಸಿದರು. ಸ್ವಲ್ಪ ಗಂಗಾಜಲವನ್ನು ತರುವಂತೆ ರಾಖಾಲನಿಗೆ ಹೇಳಿ, ಅದರಿಂದ ತಮ್ಮ ಕೈಗಳನ್ನು ತೊಳೆದು ಕೊಂಡು, ಸುಬೋಧನನ್ನು ಶಿವ ದೇವಾಲಯಗಳ ಕಡೆ ಕರೆದೊಯ್ದರು. ತಾವು ನೆಲದ ಮೇಲೆ ಕಾಲುಗಳನ್ನು ಮಡಚಿ ಕುಳಿತು, ಇವನನ್ನೂ ಕುಳಿತುಕೊಳ್ಳಲು ಹೇಳಿ ಅಂಗಿಯ ಗುಂಡಿಗಳನ್ನು ಬಿಚ್ಚುವಂತೆ ತಿಳಿಸಿ ನಾಲಿಗೆಯನ್ನು ಹೊರ ಚಾಚಲು ಹೇಳಿದರು. ನಾಲಿಗೆಯ ಮೇಲೆ ಏನನ್ನೊ ಬರೆದು ಹೊಕ್ಕುಳಿನಿಂದ ಗಂಟಲಿನವರೆಗೆ ಎದೆಯ ಮೇಲೆ ನೇವರಿಸಿ, ''ಜಾಗ್ರತಳಾಗು, ತಾಯಿ, ಜಾಗ್ರತಳಾಗು!'' ಎಂದರು. ನಂತರ ಅವನಿಗೆ ಧ್ಯಾನ ಮಾಡಲು ಹೇಳಿದರು. ಶ್ರೀರಾಮಕೃಷ್ಣರ ಮಾಂತ್ರಿಕ ಸ್ಪರ್ಶದಿಂದ ಸುಬೋಧನ ಸುಪ್ತ ಆಧ್ಯಾತ್ಮಿಕತೆ ಜಾಗ್ರತವಾಯಿತು. ಧ್ಯಾನ ಮಾಡಲು ಪ್ರಾರಂಭಿಸಿದ ಕೂಡಲೆ ಅವನ ದೇಹ ಕಂಪಿಸಿತು. ಶಕ್ತಿ ಬೆನ್ನಿನ ತುದಿಯಿಂದ ಮೆದುಳಿನ ಕಡೆಗೆ ಧಾವಿಸಿದ ಅನುಭವವಾಯಿತು. ಅವರ್ಣನೀಯ ಆನಂದ ಅವನ ಮನಸ್ಸಿನಲ್ಲಿ ತುಂಬಿತು. ಅವನೊಳಗೆ ಕಂಡ ಒಂದು ಅಪೂರ್ವ ಜ್ಯೋತಿಯಲ್ಲಿ ಅನೇಕ ದೇವ ದೇವಿಯರ ರೂಪಗಳು ಕಾಣಿಸಿಕೊಂಡುವು. ಅವನ ಧ್ಯಾನ ಗಾಢ ವಾಯಿತು. ಅವನ ವ್ಯಕ್ತಿತ್ವ ಸಂಪೂರ್ಣವಾಗಿ ಲುಪ್ತವಾಯಿತು. ಅವನಿಗೆ ಪ್ರಜ್ಞೆ ಮರಳಿದಾಗ ಶ್ರೀರಾಮಕೃಷ್ಣರು ಅವನ ದೇಹವನ್ನು ತಲೆ ಯಿಂದ ಕೆಳಕ್ಕೆ ಸವರುತ್ತಿದ್ದುದು ಕಂಡಿತು. ''ಒಳ್ಳೆಯದು, ನೀನು ಮನೆಯಲ್ಲಿ ಧ್ಯಾನ ಮಾಡುತ್ತಿದ್ದೆಯಾ?'' ಎಂದು ಕೇಳಿದರು. ''ಎಲ್ಲೋ ಸ್ವಲ್ಪ. ದೇವ ದೇವಿಯರನ್ನು ಕುರಿತು ಸ್ವಲ್ಪ ಚಿಂತಿಸುತ್ತಿದ್ದೆ, ಏಕೆಂದರೆ ಅವರ ಬಗ್ಗೆ ನಮ್ಮ ತಾಯಿಯಿಂದ ಕೇಳಿದ್ದೆ.'' ಎಂದು ಸುಬೋಧ ಹೇಳಿದ. ''ಹಾ, ಆದುದರಿಂದಲೇ ನೀನು ಅಷ್ಟು ಸುಲಭವಾಗಿ ಮನಸ್ಸನ್ನು ಏಕಾಗ್ರಗೊಳಿಸಲು ಸಾಧ್ಯವಾಯಿತು.'' ಎಂದು ಶ್ರೀರಾಮಕೃಷ್ಣರು ಹೇಳಿದರು. ನಂತರ ಪಂಚವಟಿಯಲ್ಲಿ ಧ್ಯಾನ ಮಾಡಲು ಅವನನ್ನು ಕಳುಹಿಸಿದರು. ಸುಬೋಧ ಶಿಶುಸಹಜ ಮುಗ್ಧತೆಯಿಂದ ತನ್ನ ವೈಯುಕ್ತಿಕ ಸಮಸ್ಯೆಗಳನ್ನು ಶ್ರೀರಾಮಕೃಷ್ಣರಲ್ಲಿ ಸಂಕೋಚವಿಲ್ಲದೆ ಹೇಳಿಕೊಳ್ಳುತ್ತಿದ್ದನು. ತನಗೆ ದೆವ್ವ ಭೂತಗಳ ಭಯ ವಿರುವುದಾಗಿ ಶ್ರೀರಾಮಕೃಷ್ಣರಿಗೆ ಹೇಳಿದನು. ಅವರು ತಮ್ಮ ಹೆಬ್ಬೆರಳಿನ ಉಗುರಿನಿಂದ ಅವನ ಭ್ರೂಮಧ್ಯಕ್ಕೆ ಒತ್ತಿದರು. ಅಂದಿನಿಂದ ಅವನ ಹಣೆಯ ಮೇಲೆ ಒಂದು ಮಂದಕಾಂತಿ ಗೋಚರಿಸುವುದನ್ನು ನೋಡಿದನು; ದೆವ್ವ ಭೂತಗಳ ಭಯ ಅವನನ್ನು ಬಿಟ್ಟುಹೋಯಿತು. ತನ್ನ ತಾಯಿಗೆ ಈ ವಿಷಯವನ್ನು ತಿಳಿಸಿದಾಗ ಆಕೆ, ''ಅದನ್ನು ಮತ್ತಾರಿಗೂ ಹೇಳಬೇಡ, ನೀನು ಅದೃಷ್ಟಶಾಲಿ. ಇತರರಿಗೆ ತಿಳಿಸಿದರೆ ಆ ಜ್ಯೋತಿ ನಿನ್ನನ್ನು ಬಿಟ್ಟುಹೋಗಬಹುದು'' ಎಂದಳು. ಅದಕ್ಕೆ ಸುಬೋಧ, ''ಅದರಿಂದೇನು ತೊಂದರೆಯಮ್ಮಾ? ನನಗೆ ಬೇಕಾದುದು ಆ ಬೆಳಕಲ್ಲ, ಯಾವುದರಿಂದ ಅದು ಬರುತ್ತದೆಯೋ ಅದು.'' ಎಂದನು.

### ಸ್ವಾಮಿ ಅಖಂಡಾನಂದ (ಗಂಗಾಧರ ಗಂಗೋಪಾಧ್ಯಾಯ)

ಗಂಗಾಧರ ಬಹಳ ಸಣ್ಣವನಾಗಿದ್ದಾಗಲೇ ಶ್ರೀರಾಮಕೃಷ್ಣರು ಸಮಾಧಿ ಸ್ಥಿತಿಯಲ್ಲಿರುವುದನ್ನು ಒಬ್ಬ ಭಕ್ತರ ಮನೆಯಲ್ಲಿ ನೋಡಿದ್ದ. ನಂತರ ೧೭ ವರ್ಷದವನಾಗಿದ್ದಾಗ ಶ್ರೀರಾಮಕೃಷ್ಣರನ್ನು ದಕ್ಷಿಣೇಶ್ವರದಲ್ಲಿ ಭೇಟಿ ಮಾಡಿದ. ಆಗ ಶ್ರೀರಾಮಕೃಷ್ಣರು, ''ನೀನು ನನ್ನನ್ನು ಹಿಂದೆ ನೋಡಿದ್ದೆಯಾ?'' ಎಂದು ಪ್ರಶ್ನಿಸಿದರು. ಗಂಗಾಧರ ವಯಸ್ಸಿಗಿಂತ ಚಿಕ್ಕವನಾಗಿ ಕಾಣುತ್ತಿದ್ದ. ಒಂದೆರಡು ಬಾರಿ ರಾಮಕೃಷ್ಣರು ಗಂಗಾಧರನನ್ನು ಒಂದು ರಾತ್ರಿ ದಕ್ಷಿಣೇಶ್ವರದಲ್ಲಿಯೇ ಕಳೆಯಲು ಹೇಳಿದರು. ''ಒಂದು ಸಂಜೆ ಆರತಿಯಾದ ನಂತರ ನನಗೆ ಒಂದು ಚಾಪೆಯನ್ನು ಕೊಟ್ಟು ಪಶ್ಚಿಮ ವರಾಂಡದಲ್ಲಿ ಹಾಸಲು ಹೇಳಿದರು. ಅವರೂ ಒಂದು ದಿಂಬನ್ನು ಇಟ್ಟುಕೊಂಡು ಚಾಪೆಯ ಮೇಲೆ ಕುಳಿತರು. ಸುಖಾಸನದಲ್ಲಿ ಕುಳಿತು ಧ್ಯಾನಿಸಲು ನನಗೆ ಹೇಳಿದರು. ಮುಂದಕ್ಕೆ ಬಾಗುವುದಾಗಲಿ ಅಥವಾ ತುಂಬ ನೆಟ್ಟಗೆ ಸೆಟೆದು ಕುಳಿತು ಕೊಳ್ಳುವುದಾಗಲಿ ಒಳ್ಳೆಯದಲ್ಲ ಎಂದರು. ಅಂದು ಸಂಜೆ ನನ್ನ ನಾಲಗೆಯ ಮೇಲೆ ಒಂದು ಮಂತ್ರವನ್ನು ಬರೆದರು. ನಂತರ ತಮ್ಮ ಪಾದವನ್ನು ನನ್ನ ತೊಡೆಯ ಮೇಲಿಟ್ಟು ಸ್ವಲ್ಪ ಒತ್ತುವುದಕ್ಕೆ ಹೇಳಿದರು. ನಾನು ಕುಸ್ತಿ ಮಾಡಿ



ಬಲವಾಗಿದ್ದೆ. ಅವರ ಕಾಲನ್ನು ಒತ್ತುವುದಕ್ಕೆ ಪ್ರಾರಂಭಿಸಿದ ಕೂಡಲೆ ಅವರು ಜೋರಾಗಿ ಹೇಳಿದರು: 'ನೀನು ಏನು ಮಾಡಿತ್ತಿರುವೆ? ನನ್ನ ಕಾಲುಗಳು ಪುಡಿಯಾಗುತ್ತವೆ! ಮೃದುವಾಗಿ ಒತ್ತು' ಎಂದರು. ಶ್ರೀರಾಮಕೃಷ್ಣರ ದೇಹ ಬೆಣ್ಣೆಯಿಂದ ಸುತ್ತಿರುವ ಮೂಳೆಗಳಂತೆ ಮೃದು ಎಂದು ಕೂಡಲೆ ನನಗೆ ಅರಿವಾಯಿತು.

## ಸ್ವಾಮಿ ವಿಜ್ಞಾನಾನಂದ (ಹರಿಪ್ರಸನ್ನ ಚಟ್ಟೋಪಾಧ್ಯಾಯ)

ಹರಿಪ್ರಸನ್ನ ಶ್ರೀರಾಮಕೃಷ್ಣರನ್ನು ಭೇಟಿಯಾದುದು ಬಹಳ ನಾಟಕೀಯವಾಗಿ ಅಪರೂಪವಾದುದಾಗಿದೆ. ಅದನ್ನು ಅವರು ಹೀಗೆ ವಿವರಿಸಿರುವರು: ಶ್ರೀರಾಮಕೃಷ್ಣರ ಕೋಣೆಯ ವಾತಾವರಣ ಶಾಂತಿಯಿಂದ ಕಂಪಿಸುತ್ತಿರುವುದನ್ನು ಅನುಭವಿಸಬಹುದಾಗಿತ್ತು. ಅಲ್ಲಿ ಕುಳಿತಿದ್ದ ಭಕ್ತರು ಶ್ರೀರಾಮಕೃಷ್ಣರ ಅಮೃತಮಯ ವಾಣಿಯನ್ನು ಕೇಳುತ್ತ ಆನಂದದಲ್ಲಿ ಮಗ್ನರಾಗಿದ್ದರು. ಅವರು ಏನು ಹೇಳುತ್ತಿದ್ದರೊ ಅದು ನನಗೆ ನೆನಪಿಲ್ಲ. ಆದರೆ ನನ್ನ ಮನಸ್ಸಿನಲ್ಲಿ ಅದ್ಭುತ ಆನಂದವನ್ನು ಅನುಭವಿಸಿದೆ. ಅಲ್ಲಿ ನಾನು ಬಹಳ ಹೊತ್ತು ಕುಳಿತಿದ್ದೆ. ನನ್ನ ಗಮನವೆಲ್ಲ ಶ್ರೀರಾಮಕೃಷ್ಣರ ಮೇಲಿತ್ತು. ಅವರು ನನಗೆ ಏನನ್ನೂ ಹೇಳಲಿಲ್ಲ, ನಾನೂ ಅವರನ್ನು ಏನೂ ಕೇಳಲಿಲ್ಲ. ನಂತರ ಭಕ್ತರೆಲ್ಲ ಒಬ್ಬೊಬ್ಬರಾಗಿ ಎದ್ದುಹೋದರು. ಇದ್ದಕ್ಕಿದ್ದಂತೆ ನಾನೊಬ್ಬನೇ ಉಳಿದೆ. ಶ್ರೀರಾಮಕೃಷ್ಣರು ನನ್ನನ್ನೇ ದಿಟ್ಟಿಸಿ ನೋಡುತ್ತಿದ್ದರು. ನನಗೂ ಹೊರಡುವ ಸಮಯವಾಯಿತು ಎಂದುಕೊಂಡು ಅವರಿಗೆ ನಮಸ್ಕರಿಸಿದೆ. ನಾನು ಎದ್ದು ಹೊರಡಲು ಅನುವಾದಾಗ, ಅವರು ಕೇಳಿದರು: ''ನೀನು ಕುಸ್ತಿ ಮಾಡಬಲ್ಲೆಯಾ? ಬಾ, ನೀನು ಎಷ್ಟು ಚೆನ್ನಾಗಿ ಕುಸ್ತಿ ಮಾಡಬಲ್ಲೆ, ನೋಡೋಣ.'' ಹೀಗೆ ಹೇಳುತ್ತ ಅವರು ನನ್ನನ್ನು ಹಿಡಿದುಕೊಳ್ಳಲು ಅನುವಾದರು. ಈ ಸವಾಲಿನಿಂದ ನನಗೆ ಆಶ್ಚರ್ಯವಾಯಿತು. ಇವರೆಂತಹ ಸಾಧುಪುರುಷರು ಎಂದು ಮನಸ್ಸಿನಲ್ಲಿ ಯೋಚಿಸಿದೆ. ''ಹೌದು, ನನಗೇನೊ ಕುಸ್ತಿ ಮಾಡಲು ಬರುತ್ತದೆ'' ಎಂದು ಹೇಳಿದೆ. ಶ್ರೀರಾಮಕೃಷ್ಣರು ನಗುತ್ತ ಹತ್ತಿರ ಬಂದರು. ನನ್ನ ತೋಳುಗಳನ್ನು ಹಿಡಿದು ನನ್ನನ್ನು ತಳ್ಳಲು ಪ್ರಾರಂಭಿಸಿದರು. ನಾನು ಬಲವಾಗಿ ಗಟ್ಟಿಮುಟ್ಟಾದ ಯವಕನಾಗಿದ್ದೆ. ಅವರನ್ನು ಹಿಂದಕ್ಕೆ ಗೋಡೆಗೆ ತಳ್ಳಿದೆ. ಅವರು ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡು ನಗುತ್ತಿದ್ದರು. ಕ್ರಮೇಣ ಅವರ ಕೈಗಳಿಂದ ವಿದ್ಯುಚ್ಛಕ್ತಿಯಂತಹ ಒಂದು ಶಕ್ತಿ ಹರಿಯುತ್ತ ನನ್ನ ದೇಹವನ್ನು ಪ್ರವೇಶಿಸುತ್ತಿರುವುದರ ಅನುಭವವಾಯಿತು. ಆ ಸ್ಪರ್ಶ ನನ್ನನ್ನು ಸಂಪೂರ್ಣವಾಗಿ ನಿಸ್ಸಹಾಯಕನನ್ನಾಗಿ ಮಾಡಿತು. ನನ್ನ ದೇಹಬಲ ಉಡುಗಿಹೋಯಿತು. ನಾನು ಭಾವಾವಿಷ್ಟನಾದೆ. ನನ್ನ ಮೈಕೂದಲುಗಳೆಲ್ಲ ಎದ್ದುನಿಂತುವು. ಶ್ರೀರಾಮಕೃಷ್ಣರು ತಮ್ಮ ಹಿಡಿತವನ್ನು ಸಡಿಲಿಸಿ ನಗುತ್ತ, ''ಒಳ್ಳೆಯದು, ನೀನು ಗೆದ್ದೆ'' ಎಂದು ಹೇಳುತ್ತ, ಮಂಚದ ಮೇಲೆ ಕುಳಿತರು. ನಾನು ಮಾತಾಡದೆ ಹೋದೆ. ಆನಂದ ಅಲೆಅಲೆಯಾಗಿ ನನ್ನನ್ನು ವ್ಯಾಪಿಸಿತು. ಶ್ರೀರಾಮಕೃಷ್ಣರು ಕುಸ್ತಿಯಲ್ಲಿ ಗೆಲ್ಲಲಿಲ್ಲ, ಆದರೆ ಅವರ ಆಧ್ಯಾತ್ಮಿಕ ಶಕ್ತಿ ನನ್ನನ್ನು ನಿಶ್ಶಕ್ತನನ್ನಾಗಿ ಮಾಡಿತ್ತು. ಸ್ವಲ್ಪ ಸಮಯ ಕಳೆಯಿತು. ಶ್ರೀರಾಮಕೃಷ್ಣರು ಎದ್ದುನಿಂತರು.ನನ್ನ ಬೆನ್ನನ್ನು ತಟ್ಟುತ್ತ, ''ಆಗಾಗ ಇಲ್ಲಿಗೆ ಬಾ. ಒಮ್ಮೆ ಬಂದರೆ ಸಾಲದು'' ಎಂದು ಹೇಳಿ ಸಿಹಿ ಪ್ರಸಾದ ಕೊಟ್ಟರು. ನಾನು ಕಲ್ಕತ್ತೆಗೆ ಹಿಂತಿರುಗಿದೆ. ಅನೇಕ ದಿನಗಳವರೆಗೆ ಆ ಉನ್ನತ ಆನಂದ ಮನದಲ್ಲಿ ಹರಿದಾಡುತ್ತಿತ್ತು. ಅವರು ಆಧ್ಯಾತ್ಮಿಕ ಶಕ್ತಿಯನ್ನು ನನಗೆ ಕೊಟ್ಟರೆಂಬುದು ಮನವರಿಕೆಯಾಯಿತು. ಕಾಲಾನಂತರ, ಶ್ರೀರಾಮಕೃಷ್ಣರು ಹರಿಪ್ರಸನ್ನನ ಬಗ್ಗೆ, ''ಅವನು ಹಿಂದಿನ ಜನ್ಮದಲ್ಲಿ ಶ್ರೀಕೃಷ್ಣನೊಂದಿಗೆ ಕುಸ್ತಿ ಮಾಡಿದ್ದ, ಆತ ಸಾಮಾನ್ಯನಲ್ಲ'' ಎಂದು ಹೇಳಿದರು.



ಈ ಕೆಲವು ಘಟನೆಗಳು ಶ್ರೀರಾಮಕೃಷ್ಣರು ಮತ್ತು ಅವರ ಶಿಷ್ಯರ ಮೊದಲ ಭೇಟಿಯ ಅಲೌಕಿಕ ಆಧ್ಯಾತ್ಮಿಕ ಅನುಭವಗಳು ಮಾತ್ರ. ಇವು ನಾಟಕೀಯವಾಗಿ ರೋಮಾಂಚನಕಾರಿಯಾಗಿ ಕೌತುಕದಿಂದ ಕೂಡಿವೆ. '**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ**' ಎಂಬ ಉಪನಿಷತ್ ವಾಕ್ಯವನ್ನು ನೆನಪಿಗೆ ತರುತ್ತವೆ. ಎಲ್ಲ ಹದಿನಾರು ಶಿಷ್ಯರ ಅನುಭವಗಳನ್ನೂ ಇಲ್ಲಿ ಕೊಟ್ಟಿಲ್ಲ. ಯಾವುದನ್ನು ಅವರು ಬಾಯಿ ತಪ್ಪಿ ಹೇಳಿದರೊ, ಯಾವ ಘಟನೆಗಳು ದಾಖಲಾಗಿವೆಯೊ ಅವನ್ನು ಮಾತ್ರ ಅಡಕವಾಗಿ ಕೊಡಲಾಗಿದೆ. ಅನುಭವಗಳು ಇಷ್ಟೇ ಎಂದಲ್ಲ; ಇಲ್ಲಿ ಉಲ್ಲೇಖಿತವಾಗಿಲ್ಲದವರಿಗೆ ಇಂತಹ ಅನುಭವಗಳು ಆಗಿಲ್ಲವೆಂದು ಭಾವಿಸಲಾಗದು. ಈ ಅನುಭವಗಳು ಅಲೌಕಿಕ, ಅಸಾಮಾನ್ಯ, ಮತ್ತು ಸಾಮಾನ್ಯರ ಅನುಭವಕ್ಕೆ ಅತೀತ. ಏಕೆಂದರೆ, ಶ್ರೀರಾಮಕೃಷ್ಣರ ಶಿಷ್ಯರು ಸಿದ್ಧರು, ಮುಕ್ತರು, ನಿತ್ಯಮುಕ್ತರು, ಭಗವಂತನ ಸಂಗಾತಿಗಳು, ಸ್ವಯಂ ಅಂಶಾವತಾರಿಗಳು. ಶ್ರೀರಾಮಕೃಷ್ಣರು ತಿಳಿಸದಿದ್ದರೆ, ಇವರು ಯಾವ ಶ್ರೇಣಿಗೆ ಸೇರಿದವರು ಎಂಬುದನ್ನು ಸಾಮಾನ್ಯರು ಊಹಿಸಲು ಸಾಧ್ಯವಿಲ್ಲ. ಚಕ್ರವರ್ತಿಗಳು ಬಂದಾಗ ಸಾಮಂತ ರಾಜರು ಹಿಂದೆ ಕೈಕಟ್ಟಿಕೊಂಡು ನಡೆದು ಬರುವಂತೆ, ಭಗವಂತನ ಪೂರ್ಣ ಅವತಾರ ಧರೆಗೆ ಬಂದಾಗ ಇವರೆಲ್ಲ ಬರಬೇಕಾಗುವುದು, ಭಗವಂತನ ಲೀಲಾಸಹಾಯಕರಾಗಿ ಎಂದು ಶ್ರೀರಾಮಕೃಷ್ಣರೇ ಹೇಳಿರುವರು. ಶ್ರೀರಾಮಕೃಷ್ಣರ ಶಿಷ್ಯರ ಜೀವನದ ಈ ಘಟನೆಗಳು ಅತೀಂದ್ರಿಯ ಪ್ರಪಂಚಕ್ಕೆ ಕೊರೆದ ಗವಾಕ್ಷಗಳಂತಿವೆ. ಇವು ನಮ್ಮ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸುತ್ತವೆ. ❖

ಶುದ್ಧ ಹೃದಯದ ವ್ಯಕ್ತಿ ಜಪ ಮಾಡುವಾಗ, ಮಂತ್ರ ತನ್ನೊಳಗಿನಿಂದ ತಾನೇತಾನಾಗಿ ಎದ್ದು ಬರುವಂತೆ ಅನುಭವವಾಗುತ್ತದೆ. ಮಂತ್ರವನ್ನು ಜಪಿಸಲು ಯಾವುದೇ ಪ್ರಯತ್ನ ಮಾಡಬೇಕಾಗಿಯೇ ಬರುವುದಿಲ್ಲ.

ನಿನ್ನ ಹೃದಯಾಂತರಾಳದಲ್ಲಿ ಭಗವಂತನ ನಾಮವನ್ನು ಜಪಿಸು ಮತ್ತು ಶ್ರದ್ಧೆಯಿಂದ ಶ್ರೀರಾಮಕೃಷ್ಣರಲ್ಲಿ ಶರಣಾಗು.

*–ಶ್ರೀಮಾತೆ ಶಾರದಾದೇವಿ*

# ಸ್ವಾಮಿ ಅದ್ಭುತಾನಂದರ ಜೀವನ ಮತ್ತು ಸಾಧನೆ

ಗಿರಿಜಾದೇವಿ



ಸ್ವಾಮಿ ಅದ್ಭುತಾನಂದರ ಹೆಸರೇ ಸೂಚಿಸುವಂತೆ, ಅವರು ಶ್ರೀರಾಮಕೃಷ್ಣರು ಮಾಡಿ ತೋರಿಸಿದ ಒಂದು ಅದ್ಭುತವೇ ಆಗಿದ್ದಾರೆ. ತೀರ ಸಾಮಾನ್ಯ ಕುಟುಂಬದಿಂದ ಬಂದಿದ್ದ ಲಟು ಎಂಬೊಬ್ಬ ಹುಡುಗನನ್ನು ತಮ್ಮ ಆಧ್ಯಾತ್ಮಿಕ ತರಬೇತಿಯಿಂದ ಒಬ್ಬ ಮಹಾನ್ ಸಂತನನ್ನಾಗಿಸಿದ ಮಹಿಮೆಯನ್ನು ಅವರ ಜೀವನದಲ್ಲಿ ನೋಡುತ್ತೇವೆ. ಅವರ ಉಪದೇಶಗಳಲ್ಲಿ ಕಂಡುಬರುವ ನಾಮಮಹತ್ವವನ್ನು ಕುರಿತು ವಿಸ್ತೃತವಾಗಿ ಬರೆದಿರುವ ಲೇಖಕಿ ಶ್ರೀರಾಮಕೃಷ್ಣ ಆಶ್ರಮದ ಭಕ್ತರು ಹಾಗೂ ವಾರಾಣಸಿ ಸೇವಾಶ್ರಮದಲ್ಲಿ ವಾಸವಾಗಿದ್ದಾರೆ.

**'ಯಸ್ಯ ಸ್ಮರಣ ಮಾತ್ರೇಣ ಜನ್ಮಸಂಸಾರ ಬಂಧನಾತ್ ವಿಮುಚ್ಯತೇ'** – ಈ ಮಾತು ವಿಷ್ಣುಸಹಸ್ರನಾಮ ಭಕ್ತರಿಗೆ ನೀಡಿರುವ ಭರವಸೆ. ತರ್ಕ ಮಾಡುವುದರಿಂದಾಗಲಿ ಅಥವಾ ವಿಚಾರದಿಂದಾಗಲಿ ಪರಮಾತ್ಮನನ್ನು ಪಡೆಯುವುದು ಸಾಧ್ಯವಾಗದು. ಅವನನ್ನು ಪಡೆ ಯಲು, ಅವನ ಪಾದಾರವಿಂದಗಳಲ್ಲಿ ಶುದ್ಧಭಕ್ತಿ ಮತ್ತು ಅವನ ಪವಿತ್ರ ನಾಮೋಚ್ಚಾರಣೆ ಒಂದು ಅತಿ ಸುಲಭದ ಸಾಧನೆ. ಭಗವಾನ್ ಶ್ರೀರಾಮಕೃಷ್ಣರು ಭಗವಂತನ ನಾಮ ಕಿವಿಗೆ ಬಿತ್ತು ಎಂದರೆ ಭಾವಾ ವಿಷ್ಟರಾಗುತ್ತಿದ್ದರು. ಇದು ನಾಮದ ಮಹಿಮೆ.

ಭಗವದ್ಗೀತೆಯಲ್ಲಿ ಭಗವಂತ ಅಂಗೀಕರಿಸಿ ಅನುಸರಿಸಲು ಆದೇ ಶಿಸಿರುವ ಸುಲಭವಾದ ಸಗುಣೋಪಾಸನೆಯ ಒಂದು ಅಂಗವೇ ನಾಮಸ್ಮರಣೆ. ನಾಮಸ್ಮರಣೆಯಿಂದ ಪ್ರಾರಂಭವಾದ ಸಾಧನೆ, ಭಕ್ತನನ್ನು ಕ್ರಮಕ್ರಮವಾಗಿ, ಭಕ್ತಿಯ ಅಂತಿಮ ಗುರಿಯಾದ ಸಮಾ ಧಿಗೆ ಕೊಂಡೊಯ್ಯುತ್ತದೆ. ಸಮಾಧಿ ಎಂದರೆ ಸಾಧಕ ತನ್ನ ಧ್ಯೇಯ ವಸ್ತುವಿನೊಡನೆ ಒಂದಾಗುವುದು. ಅಂದರೆ ಇಷ್ಟದೈವದಲ್ಲಿ ಒಂದಾ ಗುವುದೇ ಆಗಿದೆ. ಹಸಿವು, ನಿದ್ರೆ, ಮೈಥುನ, ಭಯ ಇವು ಸೃಷ್ಟಿಯ ಸಕಲ ಪ್ರಾಣಿಗಳಿಗೂ ಸಮಾನ. ಭಗವಂತನನ್ನು ಆರಾಧಿಸುವ ಮತ್ತು ಅವನ ನಾಮಗುಣಕೀರ್ತನೆ ಮಾಡುವ ಸಾಮರ್ಥ್ಯವಿರುವುದು ಕೇವಲ ಮಾನವನಿಗೆ ಮಾತ್ರ.

ಗುರುಮುಖೇನ ಪಡೆದ ಭಗವಂತನ ನಾಮವನ್ನು ಸದಾ ಪುನ ರುಚ್ಚರಿಸುವುದನ್ನೇ ನಾಮಜಪ ಎನ್ನುವುದು. ಶ್ರೀರಾಮಕೃಷ್ಣರು ಜಪಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದರು ಮಾತ್ರವಲ್ಲ ಶ್ರೀಮಾತೆ ಶಾರದಾ ದೇವಿಯವರು, **'ಜಪಾತ್ ಸಿದ್ಧಿಃ'** ಎಂದು ಬೋಧಿಸಿದ್ದಾರೆ.

ಬಿಹಾರ ರಾಜ್ಯದ ಛಾಪ್ರಾ ಜಿಲ್ಲೆಯ ಯಾವುದೋ ಒಂದು ಕುಗ್ರಾಮ. ತಂದೆ-ತಾಯಿಯರನ್ನು ಯಮನು ಕೊಂಡೊಯ್ದಾಗ, ಐದು ವರ್ಷದ ಬಾಲಕ ರಖ್ತುರಾಮ ಚೌಧುರಿ ಅನಾಥನಾದ. ಪಕ್ಕದ ಗ್ರಾಮದಲ್ಲಿ ವಾಸಿಸಿದ್ದ ಮಕ್ಕಳಿಲ್ಲದ ತನ್ನ ಚಿಕ್ಕಪ್ಪನ ಮನೆಯಂಗಳದ ಕೂಸಾದ. ಬಾಲ್ಯಾವಸ್ಥೆಯನ್ನು ಕಳೆದು ಯೌವ್ವನದ ಮೊದಲ ಮೆಟ್ಟ ಲೇರುವಷ್ಟರಲ್ಲಿಯೇ ರಖ್ತುರಾಮನ ಚಿಕ್ಕಪ್ಪ ಪರಿಸ್ಥಿತಿಗಳ ಒತ್ತಡಕ್ಕೆ ಸಿಕ್ಕಿ, ವಾಸದ ಮನೆ, ವ್ಯವಸಾಯದ ಭೂಮಿ ಎರಡನ್ನು ಕಳೆದುಕೊಂಡು ನಿರ್ಗತಿಕನಾದ. ಬದುಕಿಗೊಂದು ಮಾರ್ಗ ಕಂಡುಕೊಳ್ಳುವ ಯೋಚನೆ ಯಲ್ಲಿದ್ದ ಈತ, ರಖ್ತುರಾಮನನ್ನೂ ಸಂಗಡ ಕರೆದುಕೊಂಡು ಕಾಲ್ನಡಿಗೆ ಯಲ್ಲಿ ಕೊಲ್ಕತ್ತ ನಗರ ಸೇರಿದ. ಕಂಡು ಅರಿಯದ ಆ ಮಹಾನಗರದಲ್ಲಿ 'ನೀವು ಯಾರು' ಏನಾಗಬೇಕು?' ಎಂದು ಕರುಣೆ ಯಿಂದ ವಿಚಾರಿಸು ವವರಿಲ್ಲದೆ, ಬೀದಿ ನಲ್ಲಿಯಲ್ಲಿ ನೀರು ಕುಡಿದು, ರಸ್ತೆಯಂಚಿನ ಮರ ದಡಿ ಮಲಗಿದಾಗ, 'ಮುಂದೇನು?' ಎನ್ನುವ ಪ್ರಶ್ನೆ ಪಡೆಂಭೂತವಾಗಿ ಕಾಡಿತ್ತು. ಆದರೇನು, ಕಾಣದ ಕೈಯ ಕೈವಾಡ ಬೇರೆಯೇ ಇತ್ತು ! ಈ ದರಿದ್ರರ ಕುರುಬರ ಮನೆಯಲ್ಲಿ ಜನಿಸಿದ ಈ ಅನಕ್ಷರಸ್ಥ, ಅನಾಥ ಹುಡುಗ ಊಹೆಗೆ ನಿಲುಕದ, ಅದ್ಭುತವೂ, ಆಶ್ಚರ್ಯಕರವೂ ಆದ,

ಕಣ್ಣು ಅಗಲಿಸಿ, ತಲೆದೂಗಿ 'ಆಹಾ!' ಎನ್ನುತ್ತ ಬೆಕ್ಸಸ ಬೆರಗಾಗುವ ರೀತಿಯಲ್ಲಿ, ವಿಧಿ ಹೆಣೆದ ಸಂದರ್ಭಗಳ ಅಲೆಗಳಲ್ಲಿ ತೇಲಾಡುತ್ತಾ ಬಂದು, ನೇರವಾಗಿ ಯುಗಾವತಾರಿ ಭಗವಾನ್ ಶ್ರೀರಾಮಕೃಷ್ಣರ ದಿವ್ಯ ಸಾನ್ನಿಧ್ಯ ಸೇರಿಬಿಟ್ಟ!

ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತನಾಗಿದ್ದ ಅವರ ಸೋದರ ರಳಿಯ ಹೃದಯರಾಮ ಮುಖ್ಯೋಪಾಧ್ಯಾಯ, ತಾನು ಮಾಡಿದ ತಪ್ಪಿಗೆ ಶಿಕ್ಷೆಯಾಗಿ ಕಾಳೀಮಂದಿರ ತೊರೆದು ಹೋಗಬೇಕಾಯಿತು. ಸರಿಯಾದ ಸೇವಕರಿಲ್ಲದೆ ಶ್ರೀರಾಮಕೃಷ್ಣರಿಗೆ ವಿಪರೀತ ತೊಂದರೆ ಯಾಗಿತ್ತು. ಈ ವೇಳೆಗೆ ರಖ್ತುರಾಮ, ಶ್ರೀರಾಮಕೃಷ್ಣರ ಉತ್ಸಾಹಿ ಗೃಹೀಭಕ್ತ ರಾಮಚಂದ್ರ ದತ್ತರ ಮನೆಯ ಕೆಲಸದ ಆಳಾಗಿ ನಿಯುಕ್ತ ನಾಗಿದ್ದ. ತನ್ನ ಯಜಮಾನನೊಂದಿಗೆ ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರ ದರ್ಶನ ಮಾಡಿದ್ದ. ಅವರ ಪವಿತ್ರ ಸ್ಪರ್ಶದ ಅಲೌಕಿಕವಾದ ಆನಂದಾಭೂತಿಯನ್ನು ಅನುಭವಿಸಿದ್ದ.

ಇದೆಲ್ಲವೂ ಪವಾಡದ ರೀತಿಯಲ್ಲಿ ನಡೆದು ಹೋಗಿತ್ತು. ದತ್ತರ ಮನೆಯಲ್ಲಿ ರಖ್ತುರಾಮನನ್ನು 'ಲಲಟೂ' ಎಂದು ಪ್ರೀತಿಯ ಅಡ್ಡಹೆಸರಿನಿಂದ ಕರೆಯುತ್ತಿದ್ದರು. ಶ್ರೀರಾಮಕೃಷ್ಣರ ದರ್ಶನ ಮತ್ತು ಸ್ಪರ್ಶದಿಂದ ಪ್ರಭಾವಿತನಾಗಿದ್ದ ಲಲಟೂಗೆ, ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆನ್ನುವ ಉತ್ಕಟೇಚ್ಛೆ ಕಾಡಲಾರಂಭಿಸಿತ್ತು. ಮನೆ ಕೆಲಸ ಬೇಡವಾಯಿತು. ಮನಸ್ಸು ಸದಾ ಶ್ರೀರಾಮಕೃಷ್ಣರ ಸಾನ್ನಿಧ್ಯಕ್ಕಾಗಿ ತವಕಿಸುತ್ತಿತ್ತು. ಬಯಸಿದ ವಸ್ತು ಪ್ರಾಪ್ತಿಯಾಗದಿದ್ದರೆ, ಮನದಲ್ಲಿ ವ್ಯಾಕುಲತೆಯ ತಳಮಳ ಕಾಡಲಾರಂಭಿಸುತ್ತದೆ. ಈ ವ್ಯಾಕುಲತೆಯೇ ಕಾರ್ಯಸಿದ್ಧಿಗೆ ಪ್ರೇರಣೆ ನೀಡುತ್ತದೆ.

ಒಂದು ದಿನ ರಾಮಚಂದ್ರದತ್ತರು ಶ್ರೀರಾಮಕೃಷ್ಣರ ದರ್ಶನಕ್ಕೆ ಬಂದರು. ಕುಶಲಪ್ರಶ್ನೆಗಳ ನಂತರ ಶ್ರೀರಾಮಕೃಷ್ಣರು ಹೇಳಿದರು, ''ನೋಡಯ್ಯ ರಾಮ್, ಈ ಹುಡುಗ ಪೂರ್ಣವಾಗಿ ಸತ್ವಗುಣ ಸಂಪನ್ನ. ಇಲ್ಲಿಯೇ ಇರಲು ತವಕಿಸುತ್ತಿದ್ದಾನೆ. ಸರಿಯಾದ ಸೇವಕ ರಿಲ್ಲದೆ ನನಗಾಗುತ್ತಿರುವ ಕಷ್ಟ ನಿನಗೆ ತಿಳಿದೇ ಇದೆ. ಇವನು ಇಲ್ಲಿಯೇ ಇರಲಿ. ತನ್ನ ಗುರುಗಳ ಮಾತಿಗೆ ರಾಮಚಂದ್ರದತ್ತರು ಎದುರಾಡ ಲಿಲ್ಲ. ಸುಮಾರು ೧೮೮೧ನೇ ವರ್ಷದ ಅಂತ್ಯಕ್ಕೆ, ಲಲಟೂ ಶ್ರೀರಾಮಕೃಷ್ಣರ ಸಾನಿಧ್ಯವನ್ನು ಸೇರಿ, ಅವರ ಸೇವಕನೂ, ಮೊದಲ ಶಿಷ್ಯನೂ ಆಗಿ ತೃಪ್ತನಾದ. ಶ್ರೀರಾಮಕೃಷ್ಣರು ತಮ್ಮ ಸೇವಕನನ್ನು 'ಲ್ಯಾಟೋ', 'ನ್ಯಾಟೋ' ಎಂದು ಕರೆದರೆ, ಸ್ವಾಮಿ ವಿವೇಕಾನಂದರು 'ಪ್ಲೇಟೋ' ಎಂದು ಕರೆಯುತ್ತಿದ್ದರು.

ಶ್ರೀರಾಮಕೃಷ್ಣರ ಮಾರ್ಗದರ್ಶನದಲ್ಲಿ, ಅವರ ಇತರ ಶಿಷ್ಯ ರೊಂದಿಗೆ ಲಾಟೂ ಮಹಾರಾಜರೂ, ಜಪಧ್ಯಾನಾದಿಗಳಲ್ಲಿ ನಿರತ ರಾದರು. ಇವರು ಜಪಕ್ಕೆ ಕುಳಿತರೆಂದರೆ, ಇಹದ ಪರಿವೆಯನ್ನು ಪೂರ್ಣವಾಗಿ ಕಳೆದುಕೊಳ್ಳುತ್ತಿದ್ದರು. ಗಂಗೆಯ ತೀರದಲ್ಲಿ ಧ್ಯಾನ ಮಗ್ನರಾಗಿದ್ದ ಇವರಿಗೆ ನದಿಯ ಉಬ್ಬರದ ಅರಿವಾಗಲಿಲ್ಲ. ಶಿಲಾ ವಿಗ್ರಹದಂತೆ ಅಲುಗಾಡದೆ ಕುಳಿತಿದ್ದ ಇವರ ರಕ್ಷಣೆಗೆ ಶ್ರೀರಾಮ ಕೃಷ್ಣರೇ ಧಾವಿಸಿ ಬರಬೇಕಾಯಿತು.

ಪಂಚವಟಿಯ ನಿರ್ಜನ ಪ್ರದೇಶದಲ್ಲಿ ಜಪಕ್ಕೆ ಕುಳಿತು ಮೈಮರೆತಿದ್ದ ಲಾಟು ಮಹಾರಾಜರನ್ನು ಕರೆತರಲು ಬಂದ ನರೇಂದ್ರರು (ಸ್ವಾಮಿ ವಿವೇಕಾನಂದ) ಶತಪ್ರಯತ್ನ ಮಾಡಿಯೂ ಇಹದ ಅರಿವನ್ನುಂಟುಮಾಡುವುದು ಸಾಧ್ಯವಾಗಲಿಲ್ಲ. ಮತ್ತೆ ಶ್ರೀರಾಮಕೃಷ್ಣರೇ ಬರಬೇಕಾಯಿತು. ಶ್ರೀರಾಮಕೃಷ್ಣರ ಆದೇಶದಂತೆ ಪಂಚವಟಿಯ, ಪಂಚಮುಂಡಿ ಆಸನದಲ್ಲಿ ಕುಳಿತು ಜಪ–ಧ್ಯಾನದಲ್ಲಿ ರಾತ್ರಿ ಕಳೆದರು. ನೇಸರು ಮೂಡುವ ಸಮಯದಲ್ಲಿ ನೋಡುತ್ತಾರೆ, ಸುತ್ತಲೂ ಭಯಂಕರ ಬೀಭತ್ಸ ದೃಶ್ಯಗಳು! ಅಳುಕಿದ ಅವರು ಪಾರಾ ಗುವುದು ಹೇಗೆಂದು ಯೋಚಿಸುವಷ್ಟರಲ್ಲಿಯೇ, ಶ್ರೀರಾಮಕೃಷ್ಣರು ಅಲ್ಲಿ ಪ್ರತ್ಯಕ್ಷ! ''ಎದ್ದು ಬಾರೋ, ನಿನಗೇತರ ಭಯ ?'' ಶ್ರೀರಾಮ ಕೃಷ್ಣರ ಧ್ವನಿ, ಲಾಟು ಮಹಾರಾಜರಿಗೆ ಧೈರ್ಯ ನೀಡಿತು. ಆ ಭಯಂಕರ ದೃಶ್ಯಗಳೂ ಎತ್ತಲೋ ಮಾಯವಾದುವು ! ಲಾಟು ಮಹಾರಾಜರು ಗಳಿಸಿದ ಈ ಆಧ್ಯಾತ್ಮಿಕ ಉನ್ನತಿಗೆ ಶ್ರೀರಾಮಕೃಷ್ಣ ರಿಂದ ಪಡೆದಿದ್ದ ಮಂತ್ರದ ಜಪವೇ ಕಾರಣವೆನ್ನುವುದು ಸುಸ್ಪಷ್ಟ.

೧೮೮೬ನೇ ವರ್ಷದ ಆಗಸ್ಟ್ ತಿಂಗಳಲ್ಲಿ, ಕ್ಯಾನ್ಸರ್ ರೋಗವನ್ನು ನಿಮಿತ್ತ ಮಾಡಿಕೊಂಡ ಶ್ರೀರಾಮಕೃಷ್ಣರು, ಶರೀರತ್ಯಾಗ ಮಾಡಿದರು. ಅನಂತರ ಅವರ ತ್ಯಾಗೀಶಿಷ್ಯರು ಬಾರಾನಗರದ ಅರ್ಧಪಾಳು ಬಿದ್ದಿದ್ದ, ಭೂತಗಳ ಮನೆಯೆಂದು ಹೆಸರುಗಳಿಸಿದ್ದ, ಒಂದು ಮನೆ ಯನ್ನು ಬಾಡಿಗೆಗೆ ಪಡೆದು ರಾಮಕೃಷ್ಣ ಮಠ ಸ್ಥಾಪನೆ ಮಾಡಿದರು. ವಿರಜಾಹೋಮ ಮಾಡಿ ಸಂನ್ಯಾಸಾಶ್ರಮ ಸ್ವೀಕರಿಸಿದರು. ಲಾಟು ಮಹಾರಾಜರ ಜೀವನದಲ್ಲಿ ಘಟಿಸಿದ ಅದ್ಭುತಗಳನ್ನು, ಲೌಕಿಕ ವಿದ್ಯೆ ಲೇಶ ಮಾತ್ರವಿಲ್ಲದೆ ಗಳಿಸಿಕೊಂಡ ಪರಮಾದ್ಭುತ ಆಧ್ಯಾತ್ಮಿಕ ಉನ್ನತಿ ಯನ್ನು, ಅವರ ಮೇಧಾಶಕ್ತಿಯನ್ನು ಗುರುತಿಸಿದ್ದ ಸ್ವಾಮಿ ವಿವೇಕಾ ನಂದರು ಅವರನ್ನು 'ಸ್ವಾಮಿ ಅದ್ಭುತಾನಂದ' ಎಂದೇ ಕರೆದರು.

ಹಲವು ವರ್ಷಗಳ ಅನಂತರ, ಮಠವನ್ನು ಆಲಂಬಜಾರಿನ ಬೇರೊಂದು ಬಾಡಿಗೆ ಮನೆಗೆ ಸ್ಥಳಾಂತರಿಸಲಾಯಿತು. ೧೮೯೭ ನೇ ವರ್ಷದಲ್ಲಿ ಸ್ವಾಮಿ ವಿವೇಕಾನಂದರು ವಿಶ್ವವಿಖ್ಯಾತರಾಗಿ ತಾಯ್ನಾಡಿಗೆ ಹಿಂತಿರುಗಿದರು. ಹೌರಾ ಜಿಲ್ಲೆಯ ಬೇಲೂರು ಗ್ರಾಮದ ಗಂಗಾ ತೀರದಲ್ಲಿ ಮಠದ ನಿರ್ಮಾಣಕ್ಕೆ ಜಮೀನನ್ನು ಖರೀದಿಸಲಾಯಿತು. ಈ ಜಮೀನಿಗೆ ಸಮೀಪದಲ್ಲಿದ್ದ ನೀಲಾಂಬರ ಬಾಬುಗಳ ತೋಟದ ಮನೆಗೆ ಮಠವನ್ನು ಸ್ಥಳಾಂತರಿಸಲಾಯಿತು. ಹೆಚ್ಚು ವಿಳಂಬವಿಲ್ಲದೆ, ಬೇಲೂರಿನ ಸ್ವಂತ ಸ್ಥಳದಲ್ಲಿ ಮಠ ಸ್ಥಾಪನೆಯಾಯಿತು.

ಲಾಟುಮಹಾರಾಜರು, ಮಠ ಕಾರ್ಯನಿರ್ವಹಿಸಿದ ಈ ಯಾವುದೇ ಸ್ಥಳದಲ್ಲಿ, ತಮ್ಮ ಇತರ ಸೋದರ ಸನ್ಯಾಸಿಗಳೊಂದಿಗೆ, ಸ್ಥಾಯಿಯಾಗಿ ನಿಲ್ಲಲಿಲ್ಲ. ತನ್ನ ಗುರುಸ್ಥಾನ ದಕ್ಷಿಣೇಶ್ವರದ ಆಸು ಪಾಸಿನ ಸ್ನಾನಘಟ್ಟಗಳಲ್ಲಿ, ದೇವಮಂದಿರಗಳಲ್ಲಿ ನಿರಂತರ ಜಪ– ಧ್ಯಾನದಲ್ಲಿ ನಿರತರಾಗಿರುತ್ತಾ ಕಾಲ ಕಳೆದರು. ಭಿಕ್ಷೆಬೇಡಿ ದೊರೆತ ನಾಲ್ಕು ಕಾಸಿಗೆ, ಪೂರಿಯನ್ನೋ ಕಡಲೆಕಾಳನ್ನೋ ಕೊಂಡು ತಿನ್ನು ತ್ತಿದ್ದರು. ಸ್ನಾನಘಟ್ಟಗಳಲ್ಲಿ, ದೇವಾಲಯಗಳ ಪ್ರಾಂಗಣದಲ್ಲಿ ನಡೆ ಯುತ್ತಿದ್ದ ಭಾಗವತ, ಭಗವದ್ಗೀತೆ ಇತ್ಯಾದಿಗಳ ವ್ಯಾಖ್ಯೆಯನ್ನು ಏಕಾಗ್ರಚಿತ್ತದಿಂದ ಶ್ರವಣ ಮಾಡುತ್ತಿದ್ದರು. ಸೋದರ ಸಂನ್ಯಾಸಿಗಳ ಮತ್ತು ಭಕ್ತರ ಒತ್ತಾಯಕ್ಕೆ ಒಪ್ಪಿ ಹಲವು ವರ್ಷಗಳನ್ನು ಬಲರಾಮ ಮಂದಿರದಲ್ಲಿ ಕಳೆದರು. ತಮ್ಮ ಅಂತಿಮ ದಿನಗಳನ್ನು ಕಾಶೀಧಾಮದ ಬಾಡಿಗೆ ಮನೆಗಳಲ್ಲಿ ಕಳೆಯುತ್ತಾ, ಅಸಂಖ್ಯ ಭಕ್ತರಿಗೆ ಆಧ್ಯಾತ್ಮಿಕ

ಉಪದೇಶಗಳನ್ನು ನೀಡಿದರು. ಡಯಾಬಿಟೀಸ್ ವ್ಯಾಧಿಯಿಂದ ಕೆಲವು ಕಾಲ ಪೀಡಿತರಾಗಿ ೧೯೨೦ನೇ ವರ್ಷದ ಏಪ್ರಿಲ್ ತಿಂಗಳು ೨೪ನೇಯ ತಾರೀಖು ಶನಿವಾರ ಇಹಲೋಕ ತ್ಯಜಿಸಿ ತಮ್ಮ ಗುರು ಸಾನ್ನಿಧ್ಯವನ್ನು ಸೇರಿಕೊಂಡರು.

ಸಾಧಕರ ಆಧ್ಯಾತ್ಮಿಕ ಜೀವನಯಾತ್ರೆಯಲ್ಲಿ ದಾರಿದೀಪಗಳಾಗಿ ಬೆಳಕು ಬೀರುವ ಅಸಂಖ್ಯ ಉಪದೇಶಗಳನ್ನು ಲಾಟು ಮಹಾರಾಜರು ಅನುಗ್ರಹಿಸಿದ್ದಾರೆ. ಅವುಗಳಲ್ಲಿ **ನಾಮಜಪಕ್ಕೆ** ಮೊದಲ ಸ್ಥಾನ. ಒಂದು ಉಪಯುಕ್ತ ಉಪದೇಶವನ್ನು ಅವರಿಂದಲೇ ಕೇಳೋಣ: ''ಶ್ರಮ ಪಡದೆ ಏನೂ ಲಭ್ಯವಾಗದು. ಭಗವಂತನೂ ಕಠಿಣ ಶ್ರಮಕ್ಕೆ ಮಾತ್ರವೇ ತಲೆದೂಗಿ ಮೈದೋರುತ್ತಾನೆ. ಮೈಗಳ್ಳತನವನ್ನು ಮೆಟ್ಟಿ ನಿಂತು ಜಪ ಧ್ಯಾನದಲ್ಲಿ ತೊಡಗಿಕೊಳ್ಳಿ. ಭಿಕ್ಷಾನ್ನ ತಿಂದ ಮಾತ್ರಕ್ಕೆ ದುಃಖ ಶಮನವಾಗುತ್ತದೆಯೆ? ಆತ್ಮದ ಹಸಿವು ಇಂಗುತ್ತದೆಯೆ? ಇತರರಲ್ಲಿರುವ ದೋಷಗಳನ್ನು ಎಣಿಸುವುದರಲ್ಲಿ ಮಾತ್ರ ನೀವು ನಿಸ್ಸೀಮರು. ನಿಮ್ಮಲ್ಲಿ ಈ ಬುದ್ಧಿ ಇರುವುದರಿಂದಲೇ ನಿಮ್ಮ ಜಪಕ್ಕೆ ತಕ್ಕ ಫಲ ಪ್ರಾಪ್ತಿಯಾಗುತ್ತಿಲ್ಲ. ಮನದಲ್ಲಿ ಹಿಂಸೆ, ದ್ವೇಷ ತುಂಬಿ ಕೊಂಡು ಜಪಮಾಲೆ ತಿರುಗಿಸುವುದರಿಂದ ಬಂದ ಭಾಗ್ಯವಾದರೂ ಏನು ಹೇಳಿ. ಮನುಷ್ಯರ ಕಣ್ಣಿಗೆ ಧೂಳೆರಚುವುದು ಬಲು ಸುಲಭ. ಆದರೆ, ನಿಮ್ಮ ನಾಟಕ ಭಗವಂತನ ಮುಂದೆ ಸಾಗುವುದಿಲ್ಲ. ಯಾರ ಮನಸ್ಸು ಶುದ್ಧವಿಲ್ಲವೋ ಅವರ ದೃಷ್ಟಿಗೆ ಇತರರ ದೋಷಗಳೇ ಕಾಣು ತ್ತವೆ. ಪವಿತ್ರರ ದೃಷ್ಟಿಗೆ ಪವಿತ್ರತೆಯೇ ಗೋಚರಿಸುತ್ತದೆ.''

ಲಾಟು ಮಹಾರಾಜರು ಭಕ್ತರೊಂದಿಗೆ ಮಾತುಕತೆಯಲ್ಲಿ ತೊಡಗಿದ್ದಾಗ, ತಮ್ಮ ನೆನಪಿನ ಅಂಗಳದಿಂದ ಹೆಕ್ಕಿ ತೆಗೆದ ತಮ್ಮ ಗುರು ದೇವರ ಒಂದು ಉಪದೇಶವನ್ನು ಹೀಗೆ ತಿಳಿಸಿದರು, ''ಭಕ್ತ ಮನಮೋಹನ ಬಾಬುಗಳ ಮನೆಯಲ್ಲಿ ಸಂಕೀರ್ತನೆಯ ಆಯೋ ಜನೆಯಾಗಿತ್ತು. ಶ್ರೀರಾಮಕೃಷ್ಣರೊಂದಿಗೆ ನಾನೂ ಹೋಗಿದ್ದೆ. ಸಂಕೀ ರ್ತನೆ ಮುಗಿದ ನಂತರ ಮಾತನಾಡುವಾಗ ಅವರು ಹೇಳಿದರು, 'ನಾಮಕ್ಕೆ ಮೊದಲು ಪ್ರಣಾಮ ಮಾಡಿ, ಜಪ ಪ್ರಾರಂಭಿಸಬೇಕು. ದೃಢ ಸಂಕಲ್ಪದಿಂದ ಶ್ರದ್ಧೆಯಿಂದ ನಾಮದ ಆಶ್ರಯ ಪಡೆಯಬೇಕು. ನಾಮ, ನಾಮಿ ಬೇರೆ ಅಲ್ಲ. ನಾಮದ ಸಮಕ್ಷಮ ಶ್ರದ್ಧೆ, ಭಕ್ತಿ ನಿವೇದಿಸಿಕೊಂಡರೆ, ಆಗ ಅದು ನಾಮಿಯ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತದೆ. ನಾಮವೇ ಶಕ್ತಿ. ನಾಮಿಯಾದರೋ ದೇವತೆ. ಶಕ್ತಿಯ ಸಾಧನೆ ಮಾಡದಿದ್ದರೆ, ದೇವತೆಯನ್ನು ಪಡೆಯಲಾಗದು.' ''

ಜಪ-ಧ್ಯಾನದ ನಿಶ್ಚಿತ ಫಲ ಪ್ರಾಪ್ತಿಗೆ ಬ್ರಹ್ಮಚರ್ಯ ಅಗತ್ಯವೆ ಎಂದು ಪ್ರಶ್ನಿಸಿದ ಭಕ್ತನಿಗೆ ಲಾಟು ಮಹಾರಾಜರು ಉತ್ತರ ನೀಡಿದ್ದು ಹೀಗೆ, ''ಹೌದಯ್ಯ, ಭಗವಂತನ ಪ್ರಾಪ್ತಿಗೆ ಬ್ರಹ್ಮಚರ್ಯೆ ಅತಿ ಅಗತ್ಯ. ಭಗವಂತನಲ್ಲಿ ಅಚಲವೂ, ದೃಢವೂ ಆದ ವಿಶ್ವಾಸ ಉಂಟಾ ಗಲು ಬ್ರಹ್ಮಚರ್ಯ ವ್ರತ ನೆರವು ನೀಡುತ್ತದೆ. ಹಗಲು ರಾತ್ರಿ ಜಪ-ಧ್ಯಾನದಲ್ಲಿ ತೊಡಗುವುದು ಅಭ್ಯಾಸವಾದರೆ, ಅಂಥವರ ಮನಸ್ಸಿನಿಂದ ಕಾಮ-ಕಾಂಚನದ ಆಸಕ್ತಿ ತೊಲಗಿ ಹೋಗುತ್ತದೆ.'' ಇಷ್ಟು ಹೇಳಿ ಮೌನ ತಾಳಿದ ಅವರು ಮತ್ತೆ ಮಾತು ಮುಂದು ವರಿಸಿದರು, ''ನನ್ನ ಸ್ವಂತ ಅನುಭವವನ್ನೇ ಹೇಳುತ್ತೇನೆ ಕೇಳಿ. ನಾಮದಲ್ಲಿ ಲೀನವಾಗುವುದು ಸಾಧ್ಯವಾದರೆ ಬೇರೆ ಯಾವುದೂ ಮನಸ್ಸಿಗೆ ಆನಂದವನ್ನು ಕೊಡುವುದಿಲ್ಲ. ನಾಮದಲ್ಲಿನ ರಸ ಭಕ್ತನನ್ನು ಮತ್ತೇರಿಸಿ ಹಿಡಿದಿಡುತ್ತದೆ. ಆಗ ಮನಸ್ಸು ಬೇರಾವ ಆನಂದದ ಕಡೆಗೂ ಹರಿಯುವುದಿಲ್ಲ. ಮನಸ್ಸು ಸದಾ ಆನಂದದ ಕಲ್ಪನೆ ಯಲ್ಲಿಯೇ ಇರುತ್ತದೆ. ನಾಮಜಪ ಮಾಡುತ್ತ ಮಾಡುತ್ತ ನಾಮವು ಭಕ್ತನ ಹೃದಯದಲ್ಲಿ ಮನೆ ಮಾಡಿಕೊಂಡು ಆನಂದದ ಅಮೃತ ಧಾರೆಯನ್ನೇ ಸುರಿಸುತ್ತದೆ. ಮನಸ್ಸು ಶಾಂತವಾಗುತ್ತದೆ.''

ಇವರ ಮಾತುಗಳನ್ನು ಶ್ರದ್ಧೆಯಿಂದ ಶ್ರವಣ ಮಾಡುತ್ತಿದ್ದ ಬೇರೊಬ್ಬ ಭಕ್ತ ಹೀಗೆ ಪ್ರಶ್ನಿಸಿದ, ''ಮಹಾರಾಜ್, ನೀವು ಹೇಳುವುದೆಲ್ಲ ಜಾಗ್ರದವಸ್ಥೆಗೆ ರಕ್ಷಣೆಯಾಯಿತು. ನಿದ್ರಾವಸ್ಥೆ ಯಲ್ಲಿಯೂ ಕಾಮದ ಆಕ್ರಮಣವಿರುತ್ತದೆ. ಅದಕ್ಕೇನು ಮಾಡು ವುದು?'' ಲಾಟು ಮಹಾರಾಜರು ತಮ್ಮ ಸ್ವಾನುಭವದ ಹಿನ್ನೆಲೆಯಲ್ಲಿ ದೃಢವಾದ ಸ್ವರದಲ್ಲಿ ಉತ್ತರ ಕೊಟ್ಟದ್ದು ಹೀಗೆ, ''ನೋಡಯ್ಯಾ, ನಿಷ್ಠೆಯಿಂದ ನಾಮವನ್ನು ಭದ್ರವಾಗಿ ಹಿಡಿದಿದ್ದರೆ ನಾಮವು ನೀನು ಹೇಳುತ್ತಿರುವ ಆಕ್ರಮಣದಿಂದಲೂ ಬಹು ಎಚ್ಚರಿಕೆಯ ಪಹರೆ ನೀಡಿ ನಿನ್ನನ್ನು ರಕ್ಷಿಸುತ್ತದೆ. ನಾಮಜಪ ಸರಿಯಾಗಿ ನಡೆದದ್ದೇ ಆದರೆ ನಾಮದ ಶಕ್ತಿ ನಿದ್ರೆಯಲ್ಲಿಯೂ ಯಾವ ರೀತಿ ಉಸಿರಾಟ ನಡೆಯು ತ್ತದೆಯೋ, ಅದೇ ರೀತಿಯಲ್ಲಿ ನಾಮದ ಕೆಲಸ ಮನಸ್ಸಿನಲ್ಲಿ ನಡೆದಿರು ತ್ತದೆ. ದಿನಪೂರ್ತಿ ವಿಷಯಚಿಂತನೆಯಲ್ಲಿ ಕಳೆಯುತ್ತಾ, ಕೇವಲ ಹದಿನೈದು ನಿಮಿಷವೋ ಒಂದು ಘಂಟೆಯೋ ನಾಮ ಜಪಮಾಡಿ ಹೆಚ್ಚಿನ ಫಲ ಪಡೆಯುವುದು ಸಾಧ್ಯವಾಗದು. ನೆನಪಿಟ್ಟುಕೊ, ನಿರಂ ತರವಾಗಿ ಮನಸ್ಸಿನಲ್ಲಿ ಭಗವಂತನ ಚಿಂತನೆ, ನಾಮಜಪ ನಡೆಯು ತ್ತಲೇ ಇರಬೇಕು. ಆಗ ಮಾತ್ರವೇ ಅದರ ಪೂರ್ಣಫಲ ಪ್ರಾಪ್ತಿ ಮಾಡಿ ಕೊಳ್ಳಬಹುದು.''

## ಜಪ ಸಾಧನೆ

ಮಂತ್ರದೀಕ್ಷೆ ಪಡೆಯುವಾಗ ನೀವು ಸ್ವೀಕರಿಸುವ ಮಂತ್ರ ನಿಮ್ಮ ಪಾಲಿಗೆ ಅತ್ಯಂತ ಪವಿತ್ರವಾದುದು. ಇದು ನಿಮ್ಮ ಮಂತ್ರ . ಅದನ್ನು ಕುರಿತು ನೀವು ನಿಮ್ಮ ಗುರುವಿಗಲ್ಲದೆ ಬೇರೆ ಯಾರಿಗೂ ಹೇಳಬಾರದು. ಯಾವುದೇ ನಿಗೂಢ ಕಾರಣಕ್ಕಾಗಿ ಹೀಗೆ ಹೇಳಿ ದ್ದಲ್ಲ. ನಿಮ್ಮ ಪ್ರಜ್ಞೆಯ ಆಳದಲ್ಲಿ ಇಳಿದು ಸತ್ಯದ ದರ್ಶನ ನಿಮ ಗಾಗಲಿ ಎಂದು ಹೀಗೆ ಹೇಳಿದೆ. ಅಂತಹ ಆಳವಾದ ಜ್ಞಾನ ನಿಮಗೆ ಮುಕ್ತಿಯನ್ನು ದೊರಕಿಸಿಕೊಡುವುದು. ನಿರಂತರ ನಾಮಜಪವನ್ನು ಮಾಡುವುದು ನಿಮಗೆ ಒಳ್ಳೆಯ ಸಂಗಾತಿ ದೊರಕಿದಂತೆ. ನಾಮಜಪ ಉಸಿರಿನಂತೆ ಸಹಜವಾಗಿ ನಡೆಯ ಬೇಕು. ನಾಮೋಚ್ಚಾರಣೆಯು ನಿಮ್ಮ ಸತ್ಸಂಗವನ್ನು ದೊರಕಿಸು ವುದು, ಭಗವಂತನ ದಿವ್ಯಗುಣಗಳನ್ನು ನೀಡುವುದು ಹಾಗೂ ನಮ್ಮೊಳಗಿರುವ ಕಲ್ಮಶವನ್ನೆಲ್ಲ ತೊಲಗಿಸುವುದು. ದೀಕ್ಷೆ ಪಡೆ ದವನು ತಾಳ್ಮೆ, ದೃಢನಿರ್ಧಾರಗಳಿಂದ ವಿಶೇಷ ಶ್ರಮವಹಿಸಿ ಸಾಧನೆ ಮಾಡಬೇಕು. ಹೃದಯದಲ್ಲಿ ಭಗವಂತನ ಪ್ರತ್ಯಕ್ಷ ದರ್ಶನವಾಗುವವರೆಗೂ ಇದನ್ನು ಮುಂದುವರಿಸುತ್ತ ಹೋಗ ಬೇಕು.

*-ಸ್ವಾಮಿ ಶಾರದಾನಂದ*

# ಸ್ವಾಮಿ ವಿರಜಾನಂದರ ದೃಷ್ಟಿಯಲ್ಲಿ ನಾಮ ಜಪದ ಮಹತ್ತ್ವ

**ಸ್ವಾಮಿ ಶಾಂತಿವ್ರತಾನಂದ**



ಶ್ರೀಮಾತೆ ಶಾರದಾದೇವಿಯವರಿಂದ ಮಂತ್ರದೀಕ್ಷೆಯನ್ನು ಪಡೆದ ಸ್ವಾಮಿ ವಿರಜಾನಂದರು ಸ್ವಾಮಿ ವಿವೇಕಾನಂದರ ನಿಕಟ ಸಂಪರ್ಕ ಹಾಗೂ ಒಡನಾಟಗಳನ್ನು ಹೊಂದಿದ್ದು, ಅಪಾರ ಆಧ್ಯಾತ್ಮಿಕ ಅನುಭವಗಳನ್ನು ಗಳಿಸಿ ಪ್ರಸಿದ್ಧರಾದವರು. ರಾಮಕೃಷ್ಣ ಮಹಾಸಂಘದ ಅಧ್ಯಕ್ಷರಾಗಿದ್ದ ಅವರು ಹಲವು ಮಂದಿ ಸಾಧಕರಿಗೆ ಮಂತ್ರದೀಕ್ಷೆ ನೀಡಿ ಆಧ್ಯಾತ್ಮಿಕ ಮಾರ್ಗದರ್ಶನ ಮಾಡಿದರು. ಅವರು ತಮ್ಮ ಜೀವನ, ಕೃತಿಗಳಲ್ಲಿ ಜಪ, ನಾಮಮಹಿಮೆಗಳನ್ನು ಕುರಿತಂತೆ ಹೇಳಿರುವ ಅಮೂಲ್ಯ ಮಾಹಿತಿಗಳನ್ನು ಕುರಿತು ಸುಲಲಿತವಾಗಿ ಬರೆದಿರುವ ಲೇಖಕರು ಮೈಸೂರು ರಾಮಕೃಷ್ಣ ಆಶ್ರಮದ ಅಂಗಸಂಸ್ಥೆಯಾದ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಯುಗಾವತಾರ ಭಗವಾನ್ ಶ್ರೀರಾಮಕೃಷ್ಣ ಪರಮಹಂಸರು ಕಲಿಯುಗದಲ್ಲಿ ಜೀವಿಯು ಅನ್ನಗತಪ್ರಾಣವಾಗಿರುವುದರಿಂದ ನಾರದೀಯ ಭಕ್ತಿಯು ಸುಲಭವಾದ ಆಧ್ಯಾತ್ಮಿಕ ಸಾಧನೆ ಎಂಬ ಸಲಹೆಯನ್ನು ನೀಡುತ್ತಾರೆ. ಕರ್ಮಯೋಗ, ಜ್ಞಾನಯೋಗ, ಹಠಯೋಗ, ರಾಜ ಯೋಗ ಮುಂತಾದ ಆಧ್ಯಾತ್ಮಿಕ ಸಾಧನೆಗಳು ಎಲ್ಲರಿಗೂ ಸಾಧ್ಯವಾಗುವುದಿಲ್ಲ ಎಂದು ತಿಳಿಸಿದ್ದಾರೆ. ಆದ್ದರಿಂದಲೇ ಪ್ರಾರ್ಥನೆ, ಜಪ ಮತ್ತು ಧ್ಯಾನಗಳನ್ನು ರಾಮಕೃಷ್ಣ ಮಹಾಸಂಘದ ಭಕ್ತರಲ್ಲಿ ವಿಶೇಷವಾದ ಉಪಾಸನಾ ಪದ್ಧತಿಯಾಗಿ ಕಾಣಬಹುದು. ಇವು ಮೂರು ತ್ರಿಕೋನದ ಕೋನಗಳಿದ್ದಂತೆ.

ಪರಮ ಪೂಜ್ಯ ಸ್ವಾಮಿ ವಿರಜಾನಂದಜೀ ಮಹಾರಾಜ್‌ರವರು ರಾಮಕೃಷ್ಣ ಮಹಾ ಸಂಘದ ಆರನೇ ಅಧ್ಯಕ್ಷರಾಗಿದ್ದರು. ಸ್ವಾಮೀಜಿಯವರ ಭಾವಚಿತ್ರವನ್ನು ನೋಡಿದಾಗ ಅವರು ವೇದಕಾಲದ ಋಷಿಯೋ, ಮಹಾತಪಸ್ವಿಯೋ ಎಂಬಂತೆ ಭಾಸವಾಗುತ್ತದೆ. ಶ್ರೀಮಾತೆ ಶಾರದಾದೇವಿಯವರಿಂದ ಮಂತ್ರದೀಕ್ಷೆಯನ್ನು ಪಡೆದು ಸಾಧನೆಯನ್ನು ಮಾಡಿ ಜಪಸಿದ್ಧಿಯನ್ನು ಹೊಂದಿದ್ದರು. ಅವರು ಸ್ವಾಮಿ ವಿವೇಕಾನಂದರಿಂದ ಸಂನ್ಯಾಸ ದೀಕ್ಷೆಯನ್ನು ಪಡೆದರು. ತಮ್ಮ ಮಂತ್ರದೀಕ್ಷೆಯ ಗುರುಗಳಾದ ಶ್ರೀಮಾತೆ ಶಾರದಾದೇವಿಯವರಂತೆ ಅವರೂ ಪ್ರತಿನಿತ್ಯ ಒಂದು ಲಕ್ಷಜಪವನ್ನು ಮಾಡುತ್ತಿದ್ದರು. ಆದ್ದರಿಂದ ನಾಮ-ಜಪದ ಮಹತ್ತ್ವದ ಕುರಿತು ಅವರ ಮಾತುಗಳು ಬರಿಯ ಬಾಯಿಮಾತಾಗಿರದೆ ಅವು ಅನುಭಾವಿಯ ವಾಕ್ಯಗಳಾಗಿವೆ. ಅವರ ಪ್ರತಿಯೊಂದು ನುಡಿಯೂ ಸಾಧಕರಿಗೆ ನೆರವಾಗುತ್ತವೆ, ದಾರಿದೀಪ ವಾಗುತ್ತವೆ ಎಂಬುದು ನಿರ್ವಿವಾದ.

**ಜಪ ಮತ್ತು ಮಂತ್ರದೀಕ್ಷೆಯ ಮಹತ್ವ :** ಯಾವ ಪವಿತ್ರನಾಮದ ಉಚ್ಚಾರಣೆಯಿಂದ ನಮ್ಮ ಮನಸ್ಸು ಅಜ್ಞಾನದಿಂದ ಪಾರಾಗುವುದೋ ಅದಕ್ಕೆ ಮಂತ್ರವೆಂದು ಕರೆಯುತ್ತಾರೆ. ಪಶ್ಚಿಮ ದೇಶಗಳಲ್ಲಿರುವ ರಾಮಕೃಷ್ಣ ಮಿಷನ್ನಿನ ಕೇಂದ್ರ ಒಂದಕ್ಕೆ ಹಲವಾರು ವರ್ಷಗಳಿಂದ ಭಕ್ತೆ ಯೊಬ್ಬರು ಬರುತ್ತಿದ್ದರು. ಆಧ್ಯಾತ್ಮಿಕ ಜೀವನದಲ್ಲಿ ಮುಂದುವರೆಯಬೇಕೆಂಬ ಬಯಕೆಯಿಂದ ಮಂತ್ರದೀಕ್ಷೆಯನ್ನೂ ಪಡೆದರು. ಪ್ರತಿನಿತ್ಯ ಜಪವನ್ನು ನಿಯಮಿತವಾಗಿ ಮಾಡುತ್ತಿದ್ದರು. ಆದರೆ ಒಂದೆರಡು ವರ್ಷಗಳ ನಂತರ ತಾನು ಆಧ್ಯಾತ್ಮಿಕ ಸಾಧನೆಯಲ್ಲಿ ಯಾವ ಪ್ರಗತಿಯನ್ನೂ ಕಾಣ ಲಿಲ್ಲ, ಯಾವುದೇ ದರ್ಶನಗಳಾಗಲಿಲ್ಲ, ಯಾವ ಸಿದ್ಧಿಯನ್ನೂ ಪಡೆಯಲಿಲ್ಲ ಎಂಬ ಆಲೋಚನೆ ಅವರನ್ನು ಕಾಡತೊಡಗಿತು. ಗುರುಗಳು ನೀಡಿರುವ ಮಂತ್ರದ ಕುರಿತು ಸಂಶಯ ಮೂಡಿತು. ಗುರುಗಳು ನೀಡಿರುವ ಮಂತ್ರವು ಅಪ್ರಯೋಜನಕಾರಿ ಎಂಬ ನಿರ್ಣಯಕ್ಕೆ ಅವರು ಬಂದರು. ಆದ್ದರಿಂದ ಮನದ ಇಚ್ಛೆಯಂತೆ ಪುಸ್ತಕಗಳನ್ನು ಓದಿ ಅವರಿಗೆ ಇಷ್ಟವಾಗುವ ರೀತಿಯಲ್ಲಿ ಮಂತ್ರವನ್ನು ರಚಿಸಿಕೊಂಡು ಜಪಿಸಲು ಪ್ರಾರಂಭಿಸಿದರು. ಹೊಸ ಮಂತ್ರವು ಮೊದಲನೇ ಕೆಲವು ದಿವಸಗಳು ಮನಸ್ಸಿಗೆ ಸ್ವಲ್ಪ ಮುದವನ್ನು ನೀಡಿತು. ಆದರೆ ಕಾಲಕ್ರಮೇಣ ಜೀವನವು ಬರಿದಾದಂತಾಯಿತು. ತಲೆನೋವು ಉಂಟಾಗಿ, ಮೊದಲಿದ್ದ ಸ್ವಲ್ಪ ಮನಃಶಾಂತಿಯೂ ಮಾಯವಾಯಿತು. ಶಕ್ತಿಮೀರಿ ಎಷ್ಟೇ ಪ್ರಯತ್ನಪಟ್ಟರೂ ಯಾವುದೇ ಪ್ರಯೋಜನವಾಗಲಿಲ್ಲ. ಆಶ್ಚರ್ಯವೆಂಬಂತೆ ಗುರುಗಳು ನೀಡಿದ್ದ ಮಂತ್ರವನ್ನು ಮನಸ್ಸು ತಾನೇ ತಾನಾಗಿ ಪಠಿಸಲು ಪ್ರಾರಂಭಿಸಿತು. ಮನಸ್ಸಿಗೆ ಶರಣಾಗಿ, ಗುರುಗಳು ಕೊಟ್ಟಿದ್ದ ಮಂತ್ರವನ್ನು ಜಪಿಸಲು ಪ್ರಾರಂ ಭಿಸಿದರು. ಮನಸ್ಸು ಕೊಂಚ ಸ್ಥಿರವಾಗಿ ಶಾಂತಿಯನ್ನು ಪಡೆಯಿತು. ಆಗ ಮಹಿಳಾ ಭಕ್ತೆಯು ತನ್ನ ಹಿಂದಿನ ಮನಸ್ಥಿತಿಯನ್ನು ಈಗಿನ ಮನಸ್ಥಿತಿಗೆ ಹೋಲಿಸಿಕೊಂಡು ಗುರುಗಳು ಕೊಟ್ಟಿದ್ದ ಮಂತ್ರದ ಮಹತ್ವವನ್ನು ಅರಿತು ತನ್ನ ಸಾಧನೆಯನ್ನು ಮುಂದುವರೆಸಿದರು. ಆದ್ದರಿಂದ

ಮಂತ್ರದೀಕ್ಷೆಯಲ್ಲಿ ಪಡೆದಿರುವ ಮಂತ್ರವು, ಭಗವಂತನ ನಾಮವು ಬರಿಯ ಹೆಸರಾಗಿರದೆ ಅದು ಅದ್ಭುತ ಶಕ್ತಿ-ಸಾಮರ್ಥ್ಯವನ್ನು ಹೊಂದಿದೆ ಎಂಬ ವಿಷಯವನ್ನು ನಾವು ತಿಳಿಯಬೇಕು. ಸ್ವಾಮಿ ವಿರಜಾನಂದರು, ''**ಮಂತ್ರವು (ಭಗವಂತನ ನಾಮ) ಮಹಾಶಕ್ತಿಯ ಮೂಲ, ನಿನ್ನ ಇಷ್ಟ ದೈವತಾಸಾರವೆಂದು ತಿಳಿ. ಸೂಕ್ಷ್ಮ ವಸ್ತುವನ್ನು ಮುಟ್ಟಬೇಕಾದರೆ ಸ್ಥೂಲವನ್ನು ಹಿಡಿದುಕೊಳ್ಳಬೇಕು. ಸೂಕ್ಷ್ಮ ವಸ್ತುವಿನ ಮೂಲಕ ಮಾತು ಮತ್ತು ಮನಸ್ಸನ್ನು ಮೀರಿರುವ ಅತಿ ಸೂಕ್ಷ್ಮವನ್ನು (ಭಗವಂತನನ್ನು) ಪಡೆಯಬಹುದು**'' ಎಂದು ನುಡಿಯುತ್ತಾರೆ.

ಗುರುಪರಂಪರೆಯು ಸಾಧಕನಿಗೆ ಆವಶ್ಯಕವೆಂದು ಸ್ವಾಮಿ ವಿರಜಾನಂದಜಿ ಹೇಳಿದ್ದಾರೆ. ಏಕೆಂದರೆ, ಪರಾತ್ಪರ ವಸ್ತುವಿನ ಸಾಕ್ಷಾತ್ಕಾರವಾಗಬೇಕಾದರೆ ಗುರುಪರಂಪರೆಯಿಂದ ಬಂದ ಉಪದೇಶವನ್ನು ಪಡೆದು, ಸಾಧಕನು ಅದಕ್ಕೆ ತಲೆಬಾಗದ ಹೊರತು ಮುಕ್ತಿಯು ಸುಲಭ ಸಾಧ್ಯವಾಗಲಾರದು. ಗುರುಪರಂಪರೆಯಲ್ಲಿ ಗುರುವಿನಿಂದ ಶಿಷ್ಯನಿಗೆ ಒಂದು ಶಕ್ತಿ ಹರಿಯುವುದು. ಅತಿ ಪ್ರಾಚೀನ ಕಾಲದಿಂದಲೂ ಗುರುಗಳ ತೀವ್ರ ಆಧ್ಯಾತ್ಮಿಕ ಸಾಧನೆಯ ಪ್ರತಿಫಲವಾಗಿ ಆರಾಧಿಸುವ ದೇವತೆಗಳ ನಾಮದ ರಹಸ್ಯಶಕ್ತಿ ಅವರು ನೀಡುವ ಮಂತ್ರಗಳಲ್ಲಿ ಏಕತ್ರವಾಗಿದೆ. ಈ ಮಂತ್ರವೇ ಸಾಧಕನ ಭರವಸೆ, ಇಷ್ಟದೇವತೆಯ ಪ್ರತೀಕ. ವಿಧಿಪೂರ್ವಕವಾಗಿ, ಯೋಗ್ಯ ಗುರುವಿನಿಂದ, ಪರಂಪರೆಯಿಂದ ಬಂದ ನಾಮದ ಉಪದೇಶವನ್ನು ಪಡೆಯಬೇಕು. ಭಕ್ತಿ ಮತ್ತು ಶ್ರದ್ಧೆಗಳಿಂದ ಮಂತ್ರವನ್ನು ಜಪಿಸುವುದರ ಮೂಲಕ ಮಂತ್ರಶಕ್ತಿಯ ಅರಿವಾಗಿ ಭಗವಂತನ ದರ್ಶನವಾಗುತ್ತದೆ. ಅಲ್ಲದೆ ದೇವರ ಕರುಣೆಯ ಫಲವಾಗಿ ಗುರುವಿನ ಮೂಲಕ ನಮಗೆ ಸಿದ್ಧಿಮಂತ್ರವು ಲಭಿಸುತ್ತದೆ. ಕೋಣೆಯ ಕೀಲಿಕೈಯಂತೆ, ಆಧ್ಯಾತ್ಮಿಕ ಸಾಮ್ರಾಜ್ಯದ ಕೀಲಿಕೈ ಗುರು ಕೊಟ್ಟಿರುವ ಮಂತ್ರವೆಂದು ತಿಳಿದವರು ಹೇಳುತ್ತಾರೆ. ಗುರುವಿನ ಅನುಗ್ರಹಕ್ಕೆ ನಾವು ಪಾತ್ರರಾಗಬೇಕಾದರೆ ಅವರು ಹೇಳಿರುವಂತೆ ಉಪಾಸನೆ, ಸಾಧನೆ ಮಾಡಬೇಕು. ಅದರಿಂದ ದೇವರ ಕೃಪೆ ನಮಗೆ ಶೀಘ್ರವಾಗಿ ಲಭಿಸುತ್ತದೆ. ಸಾಮಾನ್ಯವಾಗಿ ಸದ್ಗುರುವು ಸಿದ್ಧ ಮಂತ್ರವನ್ನು ನಮಗೆ ಉಪದೇಶಿಸುವನು. ಯೋಗಿಗಳೂ, ಋಷಿಗಳು, ಮಹಾನ್ ತಪಸ್ವಿಗಳೂ ಸಿದ್ಧ ಮಂತ್ರದ ನೆರವಿನಿಂದ ಪರಮಪದವನ್ನು ಹೊಂದಿರುವರು. ಗುರುವು ಮಂತ್ರವನ್ನು ತನ್ನ ಮನಸ್ಸಿನ ಊಹೆಯಿಂದ ಕೊಡದೆ, ಪರಂಪರೆಯಿಂದ, ಸಾಕ್ಷಾತ್ಕಾರದಿಂದ ಬಂದಿರುವದನ್ನು ನೀಡುತ್ತಾನೆ. ಆದ್ದರಿಂದ ಅದು ವಿಶೇಷವಾದ ಶಕ್ತಿಯನ್ನು ಹೊಂದಿರುತ್ತದೆ. ತಂತ್ರಶಾಸ್ತ್ರವು ಸಾಧಕನಿಗೆ ಕಿವಿ ಮಾತೊಂದನ್ನು ಹೇಳುತ್ತದೆ. ಸಾಧಕನು ಮಂತ್ರದ ಮಹತ್ವ ಮತ್ತು ಗುರುವಿನ ಶಕ್ತಿಯನ್ನು ತಿಳಿಯಲು ಸಾಧ್ಯವಾಗದಿದ್ದರೆ ಅದು ಅವನ ಅಪಕ್ವತೆಯೆಂದು ತಿಳಿಯಬೇಕು. ಸಾಧಕನೇನಾದರೂ ಗುರುವನ್ನು ಕೇವಲ ಮನುಷ್ಯನೆಂದು, ಇಷ್ಟದೇವರ ಮಂತ್ರವನ್ನು ಬರಿಯ ಹೆಸರು, ಅಥವಾ ಪದಗಳ ಗುಂಪು ಎಂದು ಎಣಿಸಿದರೆ, ಅವನು ನರಕಕ್ಕೆ ಹೋಗುತ್ತಾನೆ. ಆದ್ದರಿಂದ ಗುರು ಮತ್ತು ಅವನು ನೀಡುವ ಮಂತ್ರದಲ್ಲಿ ಅತೀವ ಶ್ರದ್ಧೆ-ಭಕ್ತಿಗಳಿಂದ ಸಾಧಕನು ನಿಯಮಿತವಾಗಿ ಜಪಿಸಿದರೆ, ಕಾಲಕ್ರಮೇಣ ಅದರ ಶಕ್ತಿಯ ಅರಿವಾಗಿ ಸತ್ಯದ ದರ್ಶನವಾಗುತ್ತದೆ. ಮಂತ್ರದೀಕ್ಷೆಯು ದೇಹ ಮತ್ತು ಮನಸ್ಸನ್ನು ಶುದ್ಧಿ ಮಾಡುತ್ತದೆ.

ಅಲ್ಲದೆ ಗುರುವಿನಿಂದ ಪಡೆದ ಮಹಾಮಂತ್ರವನ್ನು ಪುನಃ ಪುನಃ ಜಪಿಸುವುದರಿಂದ ನಮ್ಮ ಸಂಸ್ಕಾರಗಳು ಶುದ್ಧಗೊಳ್ಳುತ್ತವೆ. ಮನಸ್ಸಿನ ಚಿಂತನಾ ತರಂಗಗಳು ಶುಚಿತ್ವವನ್ನು ಪಡೆದುಕೊಳ್ಳುತ್ತವೆ. ನಾವು ಮಂತ್ರವನ್ನು ಮನನ ಮಾಡಿದಾಗ, ಅದು ಮನಸ್ಸಿನಲ್ಲೇ ಲಯವಾಯಿತು, ಕರಗಿಹೋಯಿತು ಎಂದು ನಾವು ಯೋಚಿಸುತ್ತೇವೆ. ಆದರೆ ಪ್ರತಿಬಾರಿ ನಾವು ಮಂತ್ರವನ್ನು ಜಪಿಸಿದಾಗ, 'ಹನಿಗೂಡಿದರೆ ಹಳ್ಳ' ಎಂಬಂತೆ ಮಂತ್ರವು ಮನಸ್ಸಿನಲ್ಲಿ ಸತ್‌ಸಂಸ್ಕಾರವನ್ನು ಉಂಟುಮಾಡುತ್ತದೆ. ಕೆಟ್ಟಚಿಂತನೆಗಳನ್ನು ನಾಶಮಾಡುತ್ತದೆ. ಕೆಲವು ವರ್ಷಗಳ ನಂತರ ಇಡೀ ವ್ಯಕ್ತಿತ್ವವನ್ನೇ ಬದಲು ಮಾಡಿಬಿಡುತ್ತದೆ. ಅವರು ನೂತನವಾದ ಸಾತ್ವಿಕ ಶರೀರವನ್ನು ಪಡೆಯುತ್ತಾರೆ. ಮಂತ್ರಜಪ ಆಧ್ಯಾತ್ಮಿಕ ಪಥದಲ್ಲಿ ಪ್ರಗತಿ ಹೊಂದಲು ಸುಲಭ ಹಾಗು ಸರಳ ಮಾರ್ಗ.

**ನಾಮ-ನಾಮಿ ಅಭೇದ :** ಭಗವಂತನ ನಾಮವು ಬರಿಯ ಹೆಸರಾಗಿರದೆ, ಅದ್ಭುತ ಶಕ್ತಿಯನ್ನು ಹೊಂದಿರುತ್ತದೆ. ಬೃಹದಾಕಾರವಾಗಿ ಬೆಳೆದಿರುವ ಆಲದಮರವು ತನ್ನ ಬೀಜದಲ್ಲಿ ಹೇಗೆ ಸುಪ್ತವಾಗಿ, ಸೂಕ್ಷ್ಮವಾಗಿ ನೆಲೆಸಿರುತ್ತದೆಯೋ, ಹಾಗೆಯೇ ಭಗವಂತನ ಶಕ್ತಿಯು ಅವನ ಹೆಸರಿನಲ್ಲಿ ಸುಪ್ತವಾಗಿ ನೆಲೆಸಿರುತ್ತದೆ. ತಂತ್ರಶಾಸ್ತ್ರವು 'ನಾಮ ಮತ್ತು ನಾಮಿ ಅಭೇದ' ಎಂದು ತಿಳಿಸುತ್ತದೆ. ನಾಮ ಎಂದರೆ ಹೆಸರು; ನಾಮಿ ಎಂದರೆ ಹೆಸರು ಸೂಚಿಸುವ ವ್ಯಕ್ತಿ, ವಸ್ತು ಎಂದು. ಹೆಸರು ಮತ್ತು ಅದು ಸೂಚಿಸುವ ವ್ಯಕ್ತಿಯು ಒಂದೇ. ನಾವು ಯಾರ ಹೆಸರನ್ನು ಕರೆಯುತ್ತೇವೆಯೋ ಅವನು ಸ್ಪಂದಿಸುತ್ತಾನೆ. ಉದಾಹರಣೆಗೆ ಗುಂಪಿನಲ್ಲಿ ಹಲವಾರು ಜನರು ಹೋಗುತ್ತಿರುತ್ತಾರೆ. ನಾವು 'ರಾಮ' ಎಂದು ಕೂಗಿದಾಗ ಆ ಹೆಸರುಳ್ಳ ವ್ಯಕ್ತಿ ಮಾತ್ರ ನಮ್ಮ ಕರೆಗೆ ಓಗೊಡುತ್ತಾನೆ. ಏಕೆಂದರೆ ಅವನು ತನ್ನ ಹೆಸರಿನ ಜೊತೆ ತಾದಾತ್ಮ್ಯವನ್ನು ಹೊಂದಿರುತ್ತಾನೆ. ಅದೇ ರೀತಿಯಲ್ಲಿ ಭಗವಂತನನ್ನು ನಾವು ಯಾವ ಹೆಸರಿನಿಂದ ಕರೆಯುತ್ತೇವೆಯೋ ಆ ರೂಪದಲ್ಲಿಯೇ ನಮಗೆ ಸ್ಪಂದಿಸುತ್ತಾನೆ. ಕೊಠಡಿಯ ಬಾಗಿಲನ್ನು ಮುಚ್ಚಿ ಮಲಗಿರುವ ಮನುಷ್ಯನು, ಯಾರಾದರೂ ತನ್ನ ಹೆಸರನ್ನು ಕೂಗಿ ಬಾಗಿಲು ತಟ್ಟಿದರೆ ಜವಾಬು ಕೊಡಲು ಏಳುತ್ತಾನೆ. ಅದರಂತೆ ಭಗವಂತನ ನಾಮ ಸ್ಮರಣೆ ಮತ್ತು ಪುರಶ್ಚರಣೆಯಿಂದ ನಮ್ಮ ಅಂತರಾತ್ಮದಲ್ಲಿ ಸುಪ್ತವಾಗಿ ನೆಲಸಿರುವ ಭಗವಂತನು ಜಾಗೃತನಾಗುವನು, ಪರಮಶಾಂತಿಯನ್ನು ನೀಡುವನು. ಸಾಧಕನ ಇಷ್ಟಾರ್ಥಸಿದ್ಧಿಯನ್ನು ಅನುಗ್ರಹಿಸುವನು.

**ಶಬ್ದ, ಅರ್ಥ** ಮತ್ತು **ಪ್ರತ್ಯಯ** ಎಂಬ ಮೂರು ಭಾವನೆಗಳಿವೆ: ಜಗತ್ತಿನಲ್ಲಿ ಯಾವುದೇ ಭಾಷೆ, ದೇಶ, ಸಂಸ್ಕೃತಿಯಾಗಿದ್ದರೂ ಪ್ರತಿಯೊಂದು ವಸ್ತುವಿಗೂ ತನ್ನದೇ ಆದ ಹೆಸರಿರುತ್ತದೆ. ವಸ್ತುವನ್ನು ಸೂಚಿಸಲು, ತಿಳಿಸಲು, ವ್ಯವಹರಿಸಲು ಉಪಯೋಗಿಸುವ ಹೆಸರು, ನಾಮವನ್ನು **ಶಬ್ದ** ಎಂದು ಕರೆಯುತ್ತಾರೆ. ಶಬ್ದವು ಸೂಚಿಸುವ ಅಥವಾ ಪ್ರತಿನಿಧಿಸುವ ವಸ್ತುವನ್ನು **ಅರ್ಥ** ಎಂದು ಕರೆಯುತ್ತಾರೆ. ವಸ್ತುವಿಗೆ ಸಂಬಂಧಿಸಿದ ಮಾನಸಿಕ ಭಾವನೆಯನ್ನು **ಪ್ರತ್ಯಯ** ಎಂದು ಕರೆಯುತ್ತಾರೆ. ಈ ಮೂರಕ್ಕೂ ಅವಿನಾಭಾವ ಸಂಬಂಧವಿದೆ. ವಸ್ತುವನ್ನು ನಾವು ನೋಡಿದ ಕೂಡಲೇ ಅದರ ಹೆಸರು ಮತ್ತು ಮಾನಸಿಕ ಭಾವನೆಯು ನಮ್ಮಲ್ಲಿ ಮೂಡುತ್ತದೆ. ಅದೇ ರೀತಿ

ಹೆಸರನ್ನು ಕೇಳಿದ ಕೂಡಲೇ ವಸ್ತುವಿನ ಚಿತ್ರ ಮತ್ತು ಭಾವನೆಯು ನಮ್ಮ ಮನಸ್ಸಿನಲ್ಲಿ ಉಂಟುಮಾಡುತ್ತದೆ. ಜಪಸಾಧನೆಯಲ್ಲಿ ಈ ಅವಿನಾಭಾವ ಸಂಬಂಧವನ್ನು ಅರ್ಥಮಾಡಿಕೊಳ್ಳುವುದು ಬಹಳ ಮುಖ್ಯ. ಈ ಸಂಬಂಧವನ್ನು ನಾವು ತಿಳಿದುಕೊಂಡಾಗ ನಮಗೆ ಭಗವಂತನ ನಾಮ ಮತ್ತು ಅವನ ನಡುವೆ ಇರುವ ಸಂಬಂಧವು ತಿಳಿದು, ನಾಮಜಪವನ್ನು ಮಾಡಲು ಪರಿಣಾಮಕಾರಿಯಾಗಿರುತ್ತದೆ. ಆದ್ದರಿಂದಲೇ ಸ್ವಾಮಿ ವಿರಜಾನಂದಜಿ, ''ನಾಮ ನಾಮಿ ಎರಡೂ ಒಂದೇ. ಈ ಭಾವನೆಯನ್ನು ಮನಸ್ಸಿನಲ್ಲಿ ದೃಢಪಡಿಸಿದಷ್ಟೂ ಅವನ ಆವಿರ್ಭಾವವನ್ನು, ಆತನ ಸಾನ್ನಿಧ್ಯವನ್ನು ನಿನ್ನ ಹೃದಯಾಂತರಾಳ ದಲ್ಲಿ ಹೆಚ್ಚು ಹೆಚ್ಚು ಅನುಭವಿಸುವೆ'' ಎಂದು ಹೇಳುತ್ತಾರೆ. **ತಜ್ಜಪಃ ತದರ್ಥಭಾವನಂ** ಎಂದು ಪತಂಜಲಿ ಮಹಾಮುನಿಗಳು ತಮ್ಮ ಯೋಗಸೂತ್ರದಲ್ಲಿ ತಿಳಿಸುತ್ತಾರೆ. ಮಂತ್ರವನ್ನು, ಭಗವಂತನ ನಾಮ ವನ್ನು ಜಪಿಸುವಾಗ ಅದರ ಅರ್ಥಭಾವನೆ ಅಂದರೆ ದೇವತಾ ಸ್ವರೂಪ ವನ್ನು ಧ್ಯಾನಿಸುವುದು, ಚಿಂತಿಸುವುದು. ಬರಿಯ ಜಪ ಮಾಡುತ್ತಿದ್ದರೆ ಎಷ್ಟೋ ಬಾರಿ ಅದು ಯಾಂತ್ರಿಕವಾಗಿಬಿಡುತ್ತದೆ. ಅಲ್ಲದೆ ನಾವು ಭಗವಂತನ ಹೆಸರನ್ನು ಹೇಳುತ್ತಾ ಬೇರೆ ಆಲೋಚನೆಯನ್ನು ಮಾಡುತ್ತೇವೆ. ಭಗವಂತನ ನಾಮಜಪವನ್ನು ಮಾಡುತ್ತಾ ಅವನ ಸುಂದರ ಸ್ವರೂಪವನ್ನು ಚಿಂತಿಸುವುದರಿಂದ ಅದು ಯಾಂತ್ರಿಕ ವಾಗದೆ, ಪ್ರಜ್ಞಾಪೂರ್ವಕವಾಗಿರುತ್ತದೆ. ಜಪವು ಹೆಚ್ಚು ಪರಿಣಾಮ ಕಾರಿಯಾಗಿ ಶೀಘ್ರಗತಿಯಲ್ಲಿ ಪ್ರಗತಿಯನ್ನು ಉಂಟುಮಾಡುತ್ತದೆ.

**ನಾಮ ಜಪದ ಮಹತ್ವ :** ದೇವರ ನಾಮವು ಕಲ್ಪತರುವಿದ್ದಂತೆ. ಅದು ನಮ್ಮ ಎಲ್ಲಾ ಕಾಮನೆಗಳನ್ನು ಪೂರೈಸಲು ಸಾಮರ್ಥ್ಯವನ್ನು ಹೊಂದಿ ರುವ ಅತ್ಯುತ್ತಮ ಸಾಧನ. ಸ್ವಾಮಿ ವಿರಜಾನಂದರು ನಾಮಜಪದ ಮಹತ್ವದ ಕುರಿತು ಹೀಗೆ ಹೇಳುತ್ತಾರೆ, ''ಭಗವನ್ನಾಮದ ಪ್ರಭಾವ, ಶಕ್ತಿ ಅನಂತವಾದುದು. ಅದರ ಉಚ್ಚಾರಣಾ ಮಾತ್ರದಿಂದಲೇ ಪಾಪಿ, ದುಃಖಿ, ದುಷ್ಟನೂ ಕೂಡ ಮುಕ್ತಿ ಹೊಂದುವನು. ದೈವಭಕ್ತನು ಅದ ರಲ್ಲಿ ಅಮೃತದ ಪದವಿಯನ್ನು ಕಂಡು ಪ್ರಪಂಚವನ್ನು ತಿರಸ್ಕರಿಸು ವನು. ನಿನಗೆ ಮತ್ತೇನೂ ಮಾಡುವುದಕ್ಕಾಗದೇ ಹೋದರೂ ಆತನ ನಾಮಸ್ಮರಣೆ ಮಾಡುತ್ತಾ, ವ್ಯಾಕುಲದಿಂದ ಅವನನ್ನು ಪ್ರಾರ್ಥಿಸು. ನಿನಗೆ ಶಕ್ತಿ, ಶಾಂತಿ ಪ್ರಾಪ್ತಿಯಾಗುವುದು. ಕಾಲಕ್ರಮೇಣ ಆತನ ಕೃಪೆಯಿಂದ ನೀನು ಆತನಿಗಾಗಿ ಪ್ರೇಮ ಮತ್ತು ಭಕ್ತಿಯನ್ನು ಹೊಂದುವೆ'' ಎಂದು. ''ದೇವರ ರೂಪ, ಗುಣ ಮತ್ತು ಭಾವನೆ ಅಸಂಖ್ಯಾತವಾಗಿರುವುದರಿಂದ ಅವನ ನಾಮವೂ ಅಸಂಖ್ಯಾತ ವಾಗಿರುತ್ತದೆ. ನಾಮದ ಶಕ್ತಿ ಅಪಾರವಾದುದು. ಅಸಾಧಾರಣ ವಾದುದು! ಯಾವ ನಾಮ ನಿನಗಿಷ್ಟವೋ ಅದನ್ನೇ ಜಪಿಸುತ್ತಾ ಹೋಗು. ಅವನು ಅದಕ್ಕೆ ಉತ್ತರಿಸುವನು. ನಿನ್ನೆಲ್ಲಾ ಇಷ್ಟಾರ್ಥಗಳೂ ಈಡೇರುವವು. ಕೇವಲ ಆತನ ನಾಮ ಪುರಶ್ಚರಣೆಯಿಂದಲೇ ಆತನ ಸಾಕ್ಷಾತ್ಕಾರವನ್ನು ಪಡೆಯಬಲ್ಲೆ'' ಎಂದಿರುವರು. ಆದರೆ ನಾವು ನಾಮಜಪದಿಂದ ಅಭ್ಯುದಯ ಮತ್ತು ನಿಶ್ರೇಯಸಗಳೆರಡನ್ನೂ ಪಡೆಯಬಹುದು.

ಉಪಾಸನೆಯ ಅಂಗವಾದ ಪ್ರಾರ್ಥನೆ, ಜಪ, ಧ್ಯಾನ, ಶಾಸ್ತ್ರೋಕ್ತ ಪೂಜೆ, ಶಾಸ್ತ್ರಗ್ರಂಥಗಳ ಪಠಣ ಇವುಗಳಲ್ಲಿ ಜಪ ಮತ್ತು ಧ್ಯಾನವು ಪ್ರಧಾನ ಸಾಧನೆಯೆಂದು ಸ್ವಾಮಿ ವಿರಜಾನಂದರು ಹೇಳುತ್ತಾರೆ. ಇವನ್ನು ನಿಯಮಿತವಾಗಿ ಪ್ರತಿನಿತ್ಯ ಮಾಡುತ್ತಾ ಹೋದರೆ ಈ ಜನ್ಮದ ಮತ್ತು ಹಿಂದಿನ ಜನ್ಮಗಳ ಪಾಪರಾಶಿಯನ್ನು ನಾಮ ಜಪವು ಭಸ್ಮ ಮಾಡುತ್ತದೆ. ಅಲ್ಲದೆ ಕರ್ಮ ಫಲಗಳನ್ನು ನಾಶಮಾಡುತ್ತದೆ. ಸತ್ ಸಂಸ್ಕಾರಗಳನ್ನು ಉಂಟುಮಾಡಿ ಜನ್ಮ ಜನ್ಮಾಂತರದ ದುಷ್ಟಸಂಸ್ಕಾರ ಗಳನ್ನು ನಿರ್ಮೂಲ ಮಾಡುತ್ತದೆ. ಮನಸ್ಸು ತಿಳಿಯಾದಷ್ಟು ಸಜ್ಜನಿಕೆ ಯನ್ನು ಹೊಂದಿ ಶಾಂತಿಯನ್ನು ಪಡೆಯುತ್ತದೆ. ಮನಸ್ಸು ನಿರ್ಮಲ ವಾಗುವವರೆಗೂ ನಮ್ಮಲ್ಲಿ ಯಾವುದೇ ಸತ್ಕಾರ್ಯಗಳನ್ನು, ಮಹಾನ್ ಕಾರ್ಯಗಳನ್ನು ಸಾಧಿಸಲು ಸಾಧ್ಯವಿಲ್ಲ. ಅಂತರಂಗವು ಪ್ರಕ್ಷುಬ್ಧ ಗೊಂಡರೆ ಸುಲಭವಾಗಿ, ಸರಿಯಾಗಿ ನಿರ್ಣಯಗಳನ್ನು ತೆಗೆದುಕೊಳ್ಳ ಲಾಗುವುದಿಲ್ಲ. ಆದ್ದರಿಂದಲೇ '**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ**' ಎಂದು ಶಾಸ್ತ್ರಗಳು ಸಾರಿರುವುದು. ನಾಮಜಪ ದಿಂದ ಚಿತ್ತಶುದ್ಧಿಯಾಗಿ, ಭಗವಂತನ ಹಾಗು ಗುರುವಿನ ಕೃಪೆಗೆ ಪಾತ್ರರಾಗುತ್ತೇವೆ. ಮನಸ್ಸನ್ನು ನಿಯಂತ್ರಿಸುವುದರಿಂದ ಉಪಯುಕ್ತ ವಾದ ದಾರಿಯಲ್ಲಿ ಅಥವಾ ಗುರಿಯತ್ತ ನಡೆದು ಹೋಗಲು ನಮಗೆ ಜಪವು ನೆರವಾಗುತ್ತದೆ. ಜಪವನ್ನು ಯಾಂತ್ರಿಕವಾಗಿ ಮಾಡದೆ, ಮನಸ್ಸನ್ನು ಭಗವಂತನಲ್ಲಿ ಸ್ಥಾಪಿಸಿ, ಭಕ್ತಿಯಿಂದ ನಾಮದ ಪುರಶ್ಚರಣೆಯನ್ನು ಮಾಡಿದಾಗ ಅವನು ಆಲಿಸುತ್ತಾನೆ. ಜಪವನ್ನು ಪದೇಪದೇ ಮಾಡುತ್ತಾ ಹೋದರೆ ನಿಶ್ಚಲತೆ ಮತ್ತು ದೇವರ ಸಾಮೀಪ್ಯದ ಅನುಭವವು ದೃಢವಾಗಿ, ಮನಸ್ಸು ತಲ್ಲೀನವಾಗಿ ಬಿಡುತ್ತದೆ. ಭಗವಂತನ ಪಾದಕಮಲಗಳಲ್ಲಿ ನಿಷ್ಕಲ್ಮಶ ಭಕ್ತಿಯನ್ನು ಉಂಟುಮಾಡಿ ಪರಮಪದವನ್ನು ಪಡೆಯಲು ನೆರವಾಗುತ್ತದೆ. ನಾಮಜಪದಿಂದ ನಮ್ಮ ಇಷ್ಟಸಿದ್ಧಿ ಯನ್ನು ಹೊಂದಲು ಸಾಧ್ಯ.

ಆಧ್ಯಾತ್ಮಿಕ ಸಾಧನೆಗಳಲ್ಲಿ ಜಪಸಾಧನವು ಅತ್ಯಂತ ಸುಲಭ ಮತ್ತು ಸರಳ ಮಾರ್ಗ. ಸ್ವಾಮಿ ವಿರಜಾನಂದಜಿ, ''ನಿನಗೆ ಮತ್ತೇನೂ ಮಾಡುವುದಕ್ಕಾಗದೇ ಹೋದರೂ ಆತನ ನಾಮಸ್ಮರಣೆ ಮಾಡುತ್ತಾ, ವ್ಯಾಕುಲದಿಂದ ಅವನನ್ನು ಪ್ರಾರ್ಥಿಸು. ನಿನಗೆ ಶಕ್ತಿ, ಶಾಂತಿ ಪ್ರಾಪ್ತಿ ಯಾಗುವುದು. ಕಾಲಕ್ರಮೇಣ ಆತನ ಕೃಪೆಯಿಂದ ನೀನು ಆತನಿಗಾಗಿ ಪ್ರೇಮ ಮತ್ತು ಭಕ್ತಿಯನ್ನು ಹೊಂದುವೆ'' ಎಂದು ಹೇಳುತ್ತಾರೆ. ಜಪ ಧ್ಯಾನಗಳನ್ನು ನಿಯತವಾಗಿ ಶ್ರದ್ಧಾ-ಭಕ್ತಿಗಳಿಂದ ಮುಂದುವರಿಸಿ ಕೊಂಡು ಹೋದರೆ ಮನಸ್ಸು ನಿರ್ಮಲವಾಗಿ ನಿಜವಾದ ಗುರು ವಾಗುತ್ತದೆ. ಬಾವಿಯು ತಿಳಿಯಾಗಿದ್ದರೆ ಹೇಗೆ ನಾವು ಅದರ ತಳವನ್ನು ಕಾಣಬಹುದೋ ಅದೇ ರೀತಿಯಲ್ಲಿ ನಮ್ಮ ಅಥವಾ ಭಗವಂತನ ನೈಜ ಸ್ವರೂಪವನ್ನು ತಿಳಿಯಬಹುದು. ಪ್ರತಿಯೊಂದು ವಿಷಯವನ್ನು ಯಥಾರ್ಥವಾಗಿಯೂ ಹಾಗೂ ವಿಷಯದ ಸೂಕ್ಷ್ಮತೆ ಗಳನ್ನೂ ಅರಿಯಬಹುದು. ಸಾಧಕನು ತನ್ನ ಸಂದೇಹಗಳನ್ನು ತಾನೇ ಸ್ವತಃ ನಿವಾರಿಸಲು ಶಕ್ಯನಾಗಬಹುದು.

ಭಗವಂತನ ಹೆಸರು ಮತ್ತು ಅವನಲ್ಲಿ ಯಾವುದೇ ಭೇದವೂ ಇಲ್ಲ. ನಾಮಜಪ ಅತ್ಯುತ್ತಮ ಸಾಧನೆ ಎಂದು ಈಗಾಗಲೇ ನಾವು ತಿಳಿ ದಿರುವೆವು. ಆದರೆ ಮಂತ್ರ ಅಥವಾ ನಾಮ ಜಪ ಹೇಗೆ ನಮ್ಮಲ್ಲಿ ಬದಲಾವಣೆಯನ್ನು ತರುತ್ತದೆ? ಅದರ ವೈಜ್ಞಾನಿಕ ಹಿನ್ನೆಲೆ ಏನು ಎಂಬ ಪ್ರಶ್ನೆ ನಮ್ಮಲ್ಲಿ ಉದ್ಭವಿಸಬಹುದು. ಅದಕ್ಕೆ ಉತ್ತರವಾಗಿ ಪ್ರತಿಯೊಂದು ಮಂತ್ರವು ನಿರ್ದಿಷ್ಟ ದೇವತೆಯ ಸ್ಪಂದನದ ಸ್ಥಿತಿ ಯನ್ನು ಪ್ರತಿನಿಧಿಸುತ್ತದೆ. ಏಕೆಂದರೆ ಭಾರತದ ತತ್ತ್ವಶಾಸ್ತ್ರದ ಒಂದು

ಸಿದ್ಧಾಂತದ ಪ್ರಕಾರ ಜಗತ್ತು ಅಥವಾ ಇಡೀ ಸೃಷ್ಟಿಯು ಸ್ಪಂದನದಿಂದ ಉಂಟಾಗಿದೆ. ಮೇಜು, ಕುರ್ಚಿಗಳೂ ಕೂಡ ಅದರದೇ ಸ್ಪಂದನವನ್ನು ಹೊಂದಿವೆ. ತಂತ್ರಶಾಸ್ತ್ರದ ಪ್ರಕಾರ ದೇವತೆಯು ತನ್ನದೇ ಆದ ಸ್ಪಂದನದ ಸ್ತರದಲ್ಲಿ ನೆಲಸಿರುತ್ತದೆ. ಆಯಾ ದೇವತೆಗೆ ಸಂಬಂಧಿಸಿದ ಬೀಜಮಂತ್ರವು ಆಯಾ ದೇವತೆಯ ಸ್ಪಂದನದ ಸ್ಥಿತಿಯನ್ನು ಪ್ರತಿನಿಧಿಸುತ್ತದೆ. ಆಧ್ಯಾತ್ಮಿಕ ಪಿಪಾಸುವು ಜಪ ಸಾಧನೆಯನ್ನು ಮಾಡುತ್ತಾ ತನ್ನ ಮನಸ್ಸನ್ನು ಮಂತ್ರದ ಸ್ಪಂದನದ ನೆಲೆಗೆ ಕರೆದೊಯ್ದಾಗ ಸಿದ್ಧಿಯನ್ನು ಹೊಂದುತ್ತಾನೆ, ದೇವತಾ ದರ್ಶನವನ್ನು ಪಡೆಯುತ್ತಾನೆ. ಅಲ್ಲದೆ ಅವನ ಬೇರೆಯ ಚಿಂತನೆಗಳು ನಶಿಸಿ, ಅವನ ವ್ಯಕ್ತಿತ್ವವು ಬದಲಾಗಿರುವುದನ್ನು ನಾವು ಸ್ಥೂಲವಾಗಿ ತಿಳಿಯುತ್ತೇವೆ.

ನಾಮ ಅಥವಾ ಮಂತ್ರ ಜಪಗಳನ್ನು ಆಧ್ಯಾತ್ಮಿಕ ಉನ್ನತಿಗಾಗಿ ಮಾಡುವುದು ಅತ್ಯಂತ ಶ್ರೇಷ್ಠ. ಆದರೆ ಮನಃಶಾಂತಿಗಾಗಿ, ದುಃಖ, ಸಂಕಷ್ಟಗಳ ನಿವಾರಣೆಗಾಗಿ, ಯಾವುದೋ ಲೌಕಿಕ ಸಿದ್ಧಿಗಾಗಿಯೂ ಕೂಡ ಮಂತ್ರ ಜಪವನ್ನು ಮಾಡುವುದನ್ನು ನಾವು ನೋಡಬಹುದು.

ಸಾಮಾನ್ಯವಾಗಿ ನಮ್ಮ ಮನಸ್ಸಿನಲ್ಲಿ ಅನೇಕ ಆಲೋಚನೆಗಳು ಬಂದು ಹೋಗುತ್ತಿರುತ್ತವೆ. ಅನೇಕ ಭಾವನಾ ತರಂಗಗಳು ಉದ್ಭವಿಸಿ ಚಿತ್ ಸಾಗರದಲ್ಲಿ ಅನೇಕ ಅಲೆಗಳು ಉಂಟಾಗುತ್ತಿರುತ್ತವೆ. ಆದ್ದರಿಂದ ನಮಗೆ ಏಕಾಗ್ರತೆ ಉಂಟಾಗಲು ಸಾಧ್ಯವಿಲ್ಲ. ಇದನ್ನು ನಿವಾರಿಸಲು ಉತ್ತಮ ಉಪಾಯ ಎಂದರೆ ನಾಮ ಜಪ. ಭಗವಂತನೇ ಭಕ್ತನಿಗೆ ಸರ್ವಸ್ವ. ಭಕ್ತನಿಗೆ ಭಗವಂತನ ಸಾನ್ನಿಧ್ಯ ಅತ್ಯಾವಶ್ಯಕ. ನಾಮ ಜಪವನ್ನು ಹೆಚ್ಚು ಹೆಚ್ಚು ಮಾಡುವುದರಿಂದ ಭಕ್ತನ ಆಲೋಚನೆ ಮತ್ತು ಮನಸ್ಸು ಭಗವಂತನ ಚಿಂತನೆಗಳಿಂದ ತುಂಬುತ್ತವೆ. ಅಲ್ಲದೆ ಭಕ್ತನ ಅನ್ಯ ಚಿಂತೆಗಳು, ಆಲೋಚನಾ ತರಂಗಗಳು ಮಾಯವಾಗುತ್ತವೆ. ಭಕ್ತನಿಗೆ ಭಗವಂತನ ಚಿಂತನೆ ಸುಲಭ ಸಾಧ್ಯವಾಗಿ, ಸಮಸ್ತ ಫಲವನ್ನು ನೀಡುತ್ತದೆ. ಇದಕ್ಕೆ ನಿದರ್ಶನವೆಂಬಂತೆ ಕ್ರೀಡಾಪಟುವು ಕ್ರೀಡೆಯಲ್ಲಿ ಯಶಸ್ಸನ್ನು ಹೊಂದಲು ಸಂಪೂರ್ಣ ಮನಸ್ಸಿನಿಂದ ಪ್ರಯತ್ನ ಮಾಡುತ್ತಿರುವಾಗ, ಅನ್ಯ ಆಲೋಚನೆಗಳು ದೂರವಾಗುತ್ತವೆ. ಅವನಿಗೆ ಕ್ರೀಡಾ ಸಾಧನೆಯ ಆಲೋಚನೆ ಮಾತ್ರವಿರುತ್ತದೆ. ಪುನಃ ಪುನಃ ಕ್ರೀಡಾ ಅಭ್ಯಾಸವನ್ನು ಮಾಡಿ ಯಶಸ್ಸನ್ನು ಪಡೆಯುತ್ತಾನೆ. ಅವನು ಕೂತಲ್ಲಿ, ನಿಂತಲ್ಲಿ, ಮಲಗಿರುವಾಗಲೂ ತನ್ನ ಸಾಧನೆಯ ಆಲೋಚನೆಯಲ್ಲಿ ಮಗ್ನನಾಗಿರುತ್ತಾನೆ.

**'ಯದ್ಭಾವಂ ತದ್ಭವತಿ'** ಎನ್ನುವಂತೆ ನಾವು ಯಾವಾಗಲೂ ಏನನ್ನು ಆಲೋಚಿಸುತ್ತಿರುತ್ತೇವೆಯೋ, ಹಾಗೆ ನಮ್ಮ ವ್ಯಕ್ತಿತ್ವವು ಮೂಡುತ್ತದೆ. ನಮ್ಮ ಆಲೋಚನೆಗಳು ನಮ್ಮನ್ನು ಪ್ರತಿಬಿಂಬಿಸುತ್ತವೆ. ಆಲೋಚನೆಗಳು ಸಂಸ್ಕಾರಗಳಾಗಿ ನಮ್ಮ ವ್ಯಕ್ತಿತ್ವವಾಗಿ ಮಾರ್ಪಾಡಾಗುತ್ತದೆ. ಆಲೋಚನೆಗಳಿಗೆ ತಕ್ಕಂತೆ ನಾವು ಕೆಲಸ-ಕಾರ್ಯಗಳನ್ನು ಮಾಡಲು, ವ್ಯವಹರಿಸಲು ಪ್ರಾರಂಭಿಸುತ್ತೇವೆ. ಅನುಕೂಲ ಪರಿಸ್ಥಿತಿ ಉಂಟಾದಾಗ ಅಥವಾ ನಾವು ಸುಮ್ಮನೆ ಕುಳಿತಾಗ ನಮಗರಿವಿಲ್ಲದೆಯೇ ನಮ್ಮ ಮುಖ್ಯ ಆಲೋಚನೆಯು ಮನಸ್ಸಿನಲ್ಲಿ ಮೂಡುತ್ತದೆ. ಅದು ಒಳ್ಳೆಯ ಆಲೋಚನೆ ಅಥವಾ ಕೆಟ್ಟ ಆಲೋಚನೆಯಾಗಿರಬಹುದು. ಆದ್ದರಿಂದ ನಾವು ಪುನಃ ಪುನಃ ದೇವರ ಪ್ರಾರ್ಥನೆ, ಜಪ, ಧ್ಯಾನಗಳನ್ನು ಮಾಡುತ್ತಿದ್ದರೆ ಎಲ್ಲಾ ಸಮಯದಲ್ಲೂ, ಮರಣದ ಸಮಯದಲ್ಲಿಯೂ ಕೂಡ ಭಗವಂತನ ಚಿಂತನೆಗಳು ಉಂಟಾಗಿ ಭಗವಂತನ ಸಾನ್ನಿಧ್ಯವನ್ನು ನಾವು ಪಡೆಯುತ್ತೇವೆ. ಪಾದ್ರಿಯೊಬ್ಬನು ಸದಾ 'ಏನಿದು ನರಕ! ಏನಿದು ನರಕ!' ಎಂದು ಸುಮ್ಮನೆ ಉದ್ಗಾರವನ್ನು ಮಾಡುತ್ತಿದ್ದನು. ಕ್ರಮೇಣ ಅದು ಬೇಡವೆಂದರೂ ಅವನಿಗೆ ಗೊತ್ತಿಲ್ಲದೆ ಅವನ ಬಾಯಿಂದ ಹೊರಬರುತ್ತಿತ್ತು. ಒಮ್ಮೆ ಅವನು ಪಕ್ಕದ ಗ್ರಾಮಕ್ಕೆ ನದಿಯ ಮೇಲಿರುವ ಸೇತುವೆಯ ಮೇಲೆ ಹಾದುಹೋಗುತ್ತಿದ್ದನು. ಸೇತುವೆ ಅತ್ಯಂತ ಶಿಥಿಲವಾಗಿತ್ತು. ಇವನ ಕರ್ಮದ ಫಲವೋ ಏನೋ ಎಂಬಂತೆ ಅದು ಮುರಿದು ಬಿತ್ತು. ಅವನ ಆರಾಧ್ಯ ದೇವನನ್ನು ನೆನೆಯುವ ಬದಲು 'ಏನಿದು ನರಕ!' ಎಂದು ಜೋರಾಗಿ ಕೂಗುತ್ತ ಪ್ರಾಣಬಿಟ್ಟನು. ಏಕೆಂದರೆ ಅದು ಅವನ ಸ್ವಭಾವವಾಗಿತ್ತು. ನಮ್ಮಲ್ಲಿ ಕೆಲವು ಹಿರಿಯರು ಭಗವಂತನನ್ನು ಅರುವತ್ತು ವರ್ಷಗಳಾದ ಮೇಲೆ ನೆನೆದರೆ ಸಾಕು ಎಂಬ ಮಾತನ್ನು ಹೇಳುತ್ತಿರುತ್ತಾರೆ. ಆದರೆ ಅವರು ಇಡೀ ಜೀವನವನ್ನು ವಿಷಯಚಿಂತನೆಗೆ ಒಳಪಡಿಸಿರುತ್ತಾರೆ. ಅವರಿಗೆ ವೃದ್ಧಾಪ್ಯದಲ್ಲಿ ಭಗವಂತನ ಚಿಂತನೆ ಮಾಡಲು ನಿಜವಾಗಿಯೂ ಕಷ್ಟ ಸಾಧ್ಯ. ಆದ್ದರಿಂದ ನಾವು ಭಗವಂತನನ್ನು ಸದಾ ನೆನೆಯುತ್ತಿದ್ದರೆ, ಅದು ನಮ್ಮ ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗುತ್ತದೆ. ಮರಣದ ಸಮಯದಲ್ಲಿ ಕೂಡ ಭಗವಂತನನ್ನು ನೆನೆದು ಸಾಯುಜ್ಯವನ್ನು ಹೊಂದಲು ಸಾಧ್ಯವಾಗುತ್ತದೆ. **''ಇಷ್ಟದೇವತಾ ಸ್ಮರಣ ಮನನ ಎಂದರೆ, ದೇವರೊಂದಿಗೆ ಸಂಬಂಧವನ್ನು ಬೆಳೆಸುವುದು ಎಂದು ಅರ್ಥ. ನಮ್ಮ ಯೋಚನಾತರಂಗಗಳು ಆತನ ಕಡೆ ಎಷ್ಟು ಗಾಢವಾಗಿ ನಿರರ್ಗಳವಾಗಿ ಹರಿದರೆ, ಅಷ್ಟು ಹೆಚ್ಚಾಗಿ ನಮ್ಮ ಅಂತಃಕರಣವನ್ನು ಕದಡುವ ಆಲೋಚನೆಗಳು ಶಾಂತವಾಗುವುವು''** ಎಂದು ಸ್ವಾಮಿ ವಿರಜಾನಂದಜಿ ನುಡಿಯುತ್ತಾರೆ.

**'ಜಪ್ಯತೇ ಇತಿ ಜಪಃ'** ಅಂದರೆ ಪುನಃ ಪುನಃ ಉಚ್ಚರಿಸುವುದು. ಜಪವನ್ನು ಪದೇ ಪದೇ ಮಾಡುವ ಅಭ್ಯಾಸವನ್ನಿಟ್ಟಿದ್ದರೆ ನಿಶ್ಚಲತೆ ಮತ್ತು ದೇವರ ಸಾಮೀಪ್ಯದ ಮನೋಭಾವ ದೃಢವಾಗುತ್ತದೆ. ಮನಸ್ಸು ಆತನಲ್ಲೇ ತಲ್ಲೀನವಾಗಿ ಆತನ ಸಾನ್ನಿಧ್ಯ ಸ್ಪಷ್ಟವಾಗಿ ಅರಿವಾಗುತ್ತದೆ. ಭಗವಂತನ ದರ್ಶನವು ಲಭಿಸಿ ಜನನ ಮರಣದ ಚಕ್ರದಿಂದ ಪಾರಾಗುತ್ತೇವೆ. ಆದ್ದರಿಂದಲೇ **'ಜಪಾತ್ ಸಿದ್ಧಿಃ'** ಎಂದು ಶಾಸ್ತ್ರಗಳು ಸಾರಿರುವುದು.

**ಪ್ರಶ್ನೆ:** ಕೆಲವೊಮ್ಮೆ ಜಪ ಮಾಡಿ ಸುಸ್ತಾಗುತ್ತದೆ. ಆಗ ಜಪವನ್ನು ಮುಂದುವರಿಸಬೇಕೆ ಅಥವಾ ಅದರ ಬದಲು ಒಳ್ಳೆಯ ಪುಸ್ತಕವನ್ನು ಓದಬೇಕೆ?

**ಸ್ವಾಮಿ ವಿವೇಕಾನಂದರು:** ಎರಡು ಕಾರಣಗಳಿಂದಾಗಿ ಜಪ ಮಾಡಿ ಸುಸ್ತಾಗುತ್ತದೆ. ಕೆಲವೊಮ್ಮೆ ಮಿದುಳಿಗೆ ದಣಿವಾಗುತ್ತದೆ. ಕೆಲವೊಮ್ಮೆ ಆಲಸ್ಯವೇ ಅದಕ್ಕೆ ಕಾರಣವಾಗಿರುತ್ತದೆ. ಮೊದಲನೆಯ ಕಾರಣವಾಗಿದ್ದರೆ ಜಪವನ್ನು ಸ್ವಲ್ಪ ಸಮಯದ ಮಟ್ಟಿಗೆ ನಿಲ್ಲಿಸಬೇಕು. ಏಕೆಂದರೆ ಆ ರೀತಿ ಮುಂದುವರಿಯುವುದರಿಂದ ಏನೇನೋ ಭ್ರಾಂತಿದರ್ಶನಗಳಾಗಬಹುದು ಅಥವಾ ಹುಚ್ಚು ಹಿಡಿಯಬಹುದು, ಅಥವಾ ಇನ್ನೇನಾದರೂ ಕೆಟ್ಟ ಪರಿಣಾಮ ಉಂಟಾಗಬಹುದು. ಆದರೆ ಎರಡನೆಯ ಕಾರಣವಾಗಿದ್ದರೆ ಒತ್ತಾಯಪೂರ್ವಕವಾಗಿ ಜಪವನ್ನು ಮುಂದುವರಿಸಬೇಕು.



# ರಾಮಕೃಷ್ಣ ಪರಂಪರೆ, ಮಂತ್ರದೀಕ್ಷೆ, ಸಾಧನೆಗಳಲ್ಲಿ ನಾಮಮಹಿಮೆ

ಕೆ.ವಿ. ಸ್ವರ್ಣಗೌರಿ

ಶ್ರೀರಾಮಕೃಷ್ಣ ಪರಂಪರೆಯಲ್ಲಿ ಸಾಧನೆ, ದೀಕ್ಷೆ, ನಾಮಜಪ ಇವುಗಳಿಗೆ ವಿಶೇಷ ಮಹತ್ವವಿದೆ. ಗುರುಪರಂಪರೆಯ ಮೂಲಕ ಹರಿದು ಬಂದ ಈ ಆಚರಣೆಗಳ ಹಿಂದಿರುವ ತತ್ತ್ವ ಹಾಗೂ ಸಂಪ್ರದಾಯಗಳನ್ನು ಕುರಿತು ಬರೆದಿರುವ ಲೇಖಕಿ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು. ಇವರ ಅನೇಕ ಲೇಖನಗಳು 'ವಿವೇಕಪ್ರಭ'ದಲ್ಲಿ ಪ್ರಕಟವಾಗಿದ್ದು, ಹಲವು ಗ್ರಂಥಗಳನ್ನು ಅನುವಾದಿಸಿದ್ದಾರೆ.

''ಭಗವಂತನ ನಾಮೋಚ್ಚಾರಣೆಯನ್ನು ಸರ್ವದಾ ಮಾಡುತ್ತಿರಬೇಕು. ಕಲಿಯುಗದಲ್ಲಿ ನಾಮಮಾಹಾತ್ಮ್ಯ. ಈ ಯುಗದಲ್ಲಿ ಅನ್ನಗತಪ್ರಾಣವಾದ್ದರಿಂದ ಯೋಗಾಭ್ಯಾಸ ಸಾಧ್ಯವಿಲ್ಲ. ದೇಹವೆಂಬ ವೃಕ್ಷದಲ್ಲಿ ಪಾಪವೆಂಬ ಹಕ್ಕಿಗಳು ಕುಳಿತುಕೊಳ್ಳುತ್ತವೆ. ಭಗವಂತನ ನಾಮಗುಣ ಕೀರ್ತನೆ ಮಾಡುವುದೇ ಕೈ ಚಪ್ಪಾಳೆ ಹೊಡೆದ ಹಾಗೆ. ಕೈ ಚಪ್ಪಾಳೆ ಹಾಕಿದೊಡನೆಯೇ ಮರದಿಂದ ಎಲ್ಲಾ ಹಕ್ಕಿಗಳು ಓಡಿಹೋಗುವ ಹಾಗೆ, ಭಗಂತನ ನಾಮಗುಣ ಕೀರ್ತನೆ ಮಾಡಿದೊಡನೆಯೇ ಎಲ್ಲಾ ಪಾಪಗಳೂ ಕಂಬಿ ಕೀಳುತ್ತವೆ.

''ಹುಲ್ಲುಗಾವಲಿನಲ್ಲಿ ತೆಗೆದಿರುವ ಕುಂಟೆಯ ನೀರು ಸೂರ್ಯನ ತಾಪದಿಂದ ತನ್ನಷ್ಟಕ್ಕೆ ತಾನೇ ಇಂಗಿ ಹೋಗಿಬಿಡುತ್ತದೆ. ಅದೇ ರೀತಿಯಾಗಿ ಪಾಪ-ಪುಷ್ಕರಿಣಿಯ ನೀರು ಭಗವಂತನ ನಾಮ ಗುಣ ಕೀರ್ತನೆಯಿಂದ ತನ್ನಷ್ಟಕ್ಕೆ ತಾನೇ ಇಂಗಿ ಹೋಗಿಬಿಡುತ್ತದೆ.'' *(ಶ್ರೀರಾಮಕೃಷ್ಣ ವಚನವೇದ, ಸಂಪುಟ ೧, ಪು. ೧೩೪-೩೫, ೨೦೮)*

ಶ್ರೀರಾಮಕೃಷ್ಣರು ಕಲಿಯುಗಕ್ಕೆ ನಾರದೀಯ ಭಕ್ತಿಯೇ ಸುಲಭೋಪಾಯವೆಂದು ನಾಮಜಪಕ್ಕೆ ಹೆಚ್ಚು ಒತ್ತನ್ನು ನೀಡಿದ್ದಾರೆ. ದೇಹ, ಮನಸ್ಸು, ಬುದ್ಧಿಗಳೊಡನೆ ತಾದಾತ್ಮ್ಯಭಾವವೇ ಅನ್ನಗತ ಪ್ರಾಣ. ಈ ದೇಹವಿರುವವರೆಗೂ ಅದು ಹೋಗದು, ಬಿಡಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ಆದರೆ ಭಗವಂತನ ನಾಮ ಮನಸ್ಸನ್ನು ಈ ಕೆಳಗಿನ ಹಂತದಿಂದ ಭಗವಂತನ ಸಾಕ್ಷಾತ್ಕಾರದೆತ್ತರಕ್ಕೆ ಒಯ್ಯುವುದು. **'ನಾಮಸ್ಮರಣಾತ್ ಅನ್ಯ ಉಪಾಯಂ ನ ಹಿ ಪಶ್ಯಾಮೋ ಭವತರಣೇ.'** ಜಪವೆಂದರೇನು? ಈಶ್ವರನ ಯಾವುದೋ ಒಂದು ಮೂರ್ತಿಯನ್ನು ನಮ್ಮ ಇಷ್ಟದೇವತೆಯೆಂದು ಸ್ವೀಕರಿಸಿ, ಆ ದೇವತೆಯ ಹೆಸರು ಅಥವಾ ಮಂತ್ರವನ್ನು ಪುನಃ ಪುನಃ ಆವೃತ್ತಿ ಮಾಡುವುದು. **ಜಪಾತ್ ಸಿದ್ಧಿಃ** ಎನ್ನುತ್ತಿದ್ದರು ಶ್ರೀರಾಮಕೃಷ್ಣರು. ಸಾವಿರಾರು ಜನರು ಜಪದ ಮೂಲಕ ಆಧ್ಯಾತ್ಮಿಕ ಪ್ರಗತಿ ಸಾಧಿಸಿರುವರು. ಕೃಷ್ಣನಾಮದಿಂದ ಸುಪ್ರಸಿದ್ಧ ಮಧುಸೂದನ ಸರಸ್ವತಿ, ಗಾಯತ್ರೀ ಮಂತ್ರದಿಂದ 'ಪಂಚದಶೀ' ಲೇಖಕರಾದ ವಿದ್ಯಾರಣ್ಯರು, ನಾರಾಯಣ ನಾಮದಿಂದ ಅಜಾಮಿಳ, ರಾಮನಾಮದಿಂದ ತುಳಸೀದಾಸರು, ಸೂರದಾಸರು, ಕಬೀರದಾಸರು, ಪಿಂಗಳಾ ಎಂಬ ವೇಶ್ಯೆ, ಶ್ರೀರಾಮಕೃಷ್ಣರ ಕಾಲದಲ್ಲಿ ಬಾಲಗೋಪಾಲನನ್ನು ಸಾಕ್ಷಾತ್ಕರಿಸಿ ಎತ್ತಿ ಮುದ್ದಾಡಿದ ಅಘೋರಮಣೀ ದೇವಿ, ಹೀಗೆ ಅನೇಕಾನೇಕ ಭಕ್ತರು ನಾಮ ಬಲದಿಂದ ಉದ್ಧಾರವಾಗಿ ಹೋಗಿದ್ದಾರೆ. ತುಳಸೀದಾಸರು ತುಳಸೀದಳದ ಮೇಲೆ ರಾಮನಾಮವನ್ನು ಬರೆದು ಅದರ ರಸವನ್ನು ಹಿಂಡಿ ಸಿಂಪಡಿಸುವುದರ ಮೂಲಕ ೫೦ ಜನ ಕುಷ್ಠರೋಗಿಗಳನ್ನು ಗುಣಪಡಿಸಿದರಂತೆ! ಸೂರದಾಸರು ನದಿಯ ಮೇಲೆ ತೇಲುತ್ತಿದ್ದ ಹೆಣದ ಒಂದು ಕಿವಿಯಲ್ಲಿ ಕೇವಲ 'ರಾಮ್!' ('ರಾಮ' ಎಂಬ ಪೂರ್ಣ ನಾಮವೂ ಅಲ್ಲ) ಎಂದುಚ್ಚರಿಸುವ ಮೂಲಕ ಅದರಲ್ಲಿ ಜೀವ ತುಂಬಿದರಂತೆ! ನೋಡಿದಿರಾ ನಾಮ ಮಹಿಮೆಯನ್ನು! ಕಬೀರದಾಸರು, ಯಾರಾದರೂ 'ರಾಮಾ! ರಾಮ!' ಎಂದು ಕನಸಿನಲ್ಲಿ ಉಚ್ಚರಿಸಿದರೋ, ಅವರಿಗೆ ನನ್ನ ಚರ್ಮದಿಂದ ಚಪ್ಪಲಿ ಹೊಲಿಸಿ ಕೊಡುವೆ ಎನ್ನುತ್ತಿದ್ದರು.

''ನಾಮದ ಶಕ್ತಿಗೆ ಮಿತಿಯುಂಟೆ? ನಾಮದ ಶಕ್ತಿಗಿಂತಲೂ ದೊಡ್ಡದಾದ ಬೇರೆ ಇನ್ನಾವ ಶಕ್ತಿಯೂ ಇಲ್ಲ ಧರೆಯೊಳಗೆ'' ಎಂದಿದ್ದಾರೆ ಸ್ವಾಮಿ ಅದ್ಭುತಾನಂದರು. *(ಅದ್ಭುತವಾಣಿ, ಪು. ೭೧)*

''ಜಪವೆಂದರೆ ಮೌನವಾಗಿ ಏಕಾಂತದಲ್ಲಿ ಭಗವನ್ನಾಮವನ್ನು ಉಚ್ಚರಿಸುವುದು. ಏಕಭಕ್ತಿಯಿಂದ ಅವನ ಹೆಸರನ್ನು ಪಠಿಸಿದರೆ ನೀವು ದೇವರ ರೂಪವನ್ನು ನೋಡಬಹುದು ಮತ್ತು ಅವನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಒಂದು ಮರದ ದಿಮ್ಮಿಯನ್ನು ಗಂಗಾ ನದಿಯಲ್ಲಿ ತೇಲಿಬಿಟ್ಟು ಅದನ್ನು ಸರಪಳಿಯಿಂದ ದಡದಲ್ಲಿ ಕಟ್ಟಿರುವರೆಂದು ಭಾವಿಸಿ. ನೀವು ಸರಪಳಿಯ ಒಂದೊಂದೇ ಕೊಂಡಿಯನ್ನು ಹಿಡಿದುಕೊಂಡು ಹೋಗಿ ಆ ಮರದ ದಿಮ್ಮಿಯನ್ನು ತಲುಪಬಹುದು. ಹಾಗೆಯೇ ದೇವರನಾಮವನ್ನು ಉಚ್ಚರಿಸುತ್ತ ಕೊನೆಯಲ್ಲಿ ಭಗವತ್ ಸಾಕ್ಷಾತ್ಕಾರ ಪಡೆಯಬಹುದು'' ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. *('ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ', ಸ್ವಾಮಿ ಯತೀಶ್ವರಾನಂದ, ಪು. ೩೫೧)*

ದಿನವೆಲ್ಲಾ ವಿಷಯಚಿಂತನೆ ಮಾಡಿ, ಹತ್ತೋ, ಹದಿನೈದೋ ನಿಮಿಷಗಳೋ ಅಥವಾ ಒಂದೆರಡು ಗಂಟೆಗಳ ಕಾಲ ಜಪಮಾಡಿದರೆ ಸಾಲದು. ಪ್ರಾಪಂಚಿಕ ಭಗವದನುರಾಗ ಕೆಂಪಗೆ ಕಾದ ಬಾಣಲೆ ಮೇಲೆ ಒಂದು ತೊಟ್ಟು ನೀರು ಬಿದ್ದರೆ ಅದು ಇಂಗಿಹೋಗಲು ಎಷ್ಟು ಸಮಯ ಬೇಕೋ ಅಷ್ಟು ಕ್ಷಣಿಕ ಎನ್ನುತ್ತಿದ್ದರು ಶ್ರೀರಾಮಕೃಷ್ಣರು. *(ಶ್ರೀರಾಮಕೃಷ್ಣ ವಚನವೇದ, ಸಂಪುಟ ೧, ಪು. ೧೮೧)* ನಮ್ಮ ಎಲ್ಲಾ ಕೆಲಸಕಾರ್ಯ, ಒತ್ತಡಗಳ ನಡುವೆಯೂ ಅಂತರಂಗದಲ್ಲಿ ಸದಾ ನಾಮಸ್ಮರಣೆ ನಡೆಯುತ್ತಿರಲೇಬೇಕು. ವಿಷಮಶೀತಜ್ವರದ ರೋಗಿಗೆ

ಸದಾ ಔಷಧಿ ಸೇವನೆ ಮುಖ್ಯ. ಜನ್ಮಜನ್ಮಾಂತರದ ಸಂಸ್ಕಾರಗಳನ್ನು ಹೊರಹಾಕಿ ದೇಹಮನಸ್ಸುಗಳನ್ನು ಶುಚಿಗೊಳಿಸುವ ಶಕ್ತಿ ನಾಮಕ್ಕೆ ಇದೆ. ಇಲ್ಲಿ ಶ್ರೀಮಾತೆ ಶಾರದಾದೇವಿಯವರ ವಚನ ನಮ್ಮ ನೆರವಿಗೆ ಬರುತ್ತದೆ: ''ಗಡಿಯಾರ 'ಟಿಕ್' 'ಟಿಕ್' ಶಬ್ದ ಮಾಡುವಂತೆ, ಭಗವಂತನ ನಾಮವನ್ನು ಸ್ಮರಿಸುತ್ತಲೇ ಹೋಗಬೇಕು. ಅದು ನಿನಗೆ ಎಲ್ಲವನ್ನೂ ಕೊಡುತ್ತದೆ. ಇನ್ನೇನನ್ನೂ ಮಾಡಬೇಕಾಗಿಯೇ ಇಲ್ಲ.'' ನಮ್ಮೆಲ್ಲ ಕೆಲಸಗಳ ನಡುವೆಯೂ ನಾಮಜಪ ನಡೆಯುತ್ತಿದ್ದರೆ ಎಲ್ಲಾ ಹೃದ್ವೇದನೆಯೂ ಶಾಂತವಾಗುವುದು. ಆದರೆ ಈ ವೈಜ್ಞಾನಿಕ ಯುಗದಲ್ಲಿ ಜನ ಭಗವನ್ನಾಮದಲ್ಲಿ ಶ್ರದ್ಧೆಯನ್ನು ಕಳೆದುಕೊಳ್ಳುತ್ತಿದ್ದಾರೆ.

ಜಪವನ್ನು ಮೂರು ರೀತಿಯಲ್ಲಿ ಮಾಡಬಹುದು. ತನಗೆ ಕೇಳಿಸುವಷ್ಟು ಗಟ್ಟಿಯಾಗಿ ಉಚ್ಚರಿಸುವುದು ವಾಚಿಕ ಜಪ, ತುಟಿಯನ್ನು ಮಾತ್ರ ಅಲುಗಾಡಿಸುತ್ತಾ ಯಾರಿಗೂ ಕೇಳಿಸದ ರೀತಿಯಲ್ಲಿ ಉಚ್ಚಾರಣೆ ಮಾಡುವುದನ್ನು ಉಪಾಂಶು ಎನ್ನುತ್ತಾರೆ. ಮೂರನೆಯದೇ ನಾಲಿಗೆ, ತುಟಿಗಳನ್ನು ಚಲಿಸದೆ ಮನದಲ್ಲಿ ಉಚ್ಚರಿಸುವುದು ಮಾನಸಿಕ ಜಪ. ಇದೇ ಅತ್ಯುತ್ತಮವಾದದು. ಶಾಂಡಿಲ್ಯೋಪನಿಷತ್ತಿನಲ್ಲಿ, 'ವೈಖರಿಗೆ ವೇದದಲ್ಲಿ ಉಕ್ತಫಲ, ಉಪಾಂಶುವಿಗೆ ವೈಖರಿಯ ೧೦೦೦೦ ಪಟ್ಟು ಫಲ ಹಾಗೂ ಮಾನಸಿಕ ಜಪಕ್ಕೆ ಒಂದು ಕೋಟಿ ವೈಖರಿಯ ಫಲ' ಎಂದು ಹೇಳಿದೆ. ಆದರೆ ಸಾಧಕನು ತನ್ನ ಮನಸ್ಸಿನ ಸ್ಥಿತಿಯನ್ನು ಅರಿತು ಸಮಯ ಸಂದರ್ಭೋಚಿತವಾಗಿ ಉಪಯೋಗಿಸುವುದು ಕ್ಷೇಮ ಹಾಗೂ ಲಾಭಕರ.

**ವಿವಿಧ ಧರ್ಮಗಳಲ್ಲಿ ಜಪ:** ನನ್ನ ಮತವೇ ಸರಿ, ನನ್ನ ಪಥದಲ್ಲೇ ಎಲ್ಲರೂ ನಡೆಯಬೇಕು; ನನ್ನ ಇಷ್ಟದೇವತೆಯೊಂದೇ ದೇವರು ಎಂಬೀ ವಾದಗಳೆಲ್ಲಾ ಶುದ್ಧ ಮತಾಂಧ ಶ್ರದ್ಧೆ. ''ಅಂತರಂಗ ಶುದ್ಧವಾಗಿತ್ತು ಎಂದರೆ, ಎಲ್ಲಾ ಧರ್ಮಗಳ ಮೂಲಕವೂ ಭಗವಂತನನ್ನು ಪಡೆದುಕೊಳ್ಳಬಹುದು. ವೈಷ್ಣವರಿಗೂ ಭಗವಂತ ದೊರೆಯುತ್ತಾನೆ, ಶಾಕ್ತರಿಗೂ ದೊರೆಯುತ್ತಾನೆ. ವೇದಾಂತವಾದಿಗಳಿಗೂ ದೊರೆಯುತ್ತಾನೆ, ಬ್ರಾಹ್ಮಭಕ್ತರಿಗೂ ದೊರೆಯುತ್ತಾನೆ. ಮುಸಲ್ಮಾನ ಕ್ರಿಶ್ಚಿಯನ್ನರಿಗೂ ಆತ ದೊರೆಯುತ್ತಾನೆ. ಹೃತ್ಪೂರ್ವಕ ಮನಸ್ಸು ಇತ್ತು ಎಂದರೆ ಎಲ್ಲರಿಗೂ ಆತ ದೊರೆಯುತ್ತಾನೆ'' ಎನ್ನುವ ಶ್ರೀರಾಮಕೃಷ್ಣರ ವಚನ ಸ್ಮರಣಾರ್ಹ. *(ಶ್ರೀರಾಮಕೃಷ್ಣ ವಚನವೇದ, ಸಂ. ೧, ಪು. ೧೪೭)*

ಹಿಂದೂಧರ್ಮದಲ್ಲಿ ಜಪಕ್ಕೆ ಹೆಚ್ಚು ಪ್ರಾಧಾನ್ಯವಿದೆ. ದಕ್ಷಿಣ ಭಾರತದ ಶೈವ ಮತ್ತು ವೈಷ್ಣವ ಸಂತರೆಲ್ಲರೂ ನಿರಂತರ ನಾಮೋಚ್ಚಾರಣೆ ಒತ್ತಿ ಹೇಳಿರುವರು. ಗುರುನಾನಕ್ ಮತ್ತು ಅವರ ಅನುಯಾಯಿಗಳು ದಿವ್ಯನಾಮಕ್ಕೆ ಹೆಚ್ಚು ಪ್ರಾಧಾನ್ಯ ಕೊಟ್ಟಿರುವರು. ಚೈತನ್ಯರು,'**ನಾಮೇ ರುಚಿ, ಜೀವೇ ದಯಾ, ಮತ್ತು ವೈಷ್ಣವ ಸೇವೆ**' ಎನ್ನುತ್ತಾ ಜಪವನ್ನು ಬಂಗಾಳ ದೇಶದಲ್ಲಿ ಜನಪ್ರಿಯಗೊಳಿಸಿದರು. ಮಹಾಯಾನ ಬೌದ್ಧಧರ್ಮ ಹಾಗೂ ಜಪಾನಿನ ಶಿನ್ ಬೌದ್ಧ ಧರ್ಮ ನಾಮಜಪವನ್ನು ಮುಖ್ಯ ಸಾಧನೆಯನ್ನಾಗಿ ಬಳಸುತ್ತವೆ. ಇಸ್ಲಾಂ ಸೂಫಿ ಅನುಭಾವಿಗಳು ಅನೇಕ ಶತಮಾನಗಳಿಂದ ಆಲಿಯ (ಅಲ್ಲಾನ) ಜಪವನ್ನು ಸಾಧನವನ್ನಾಗಿ ಉಪಯೋಗಿಸುತ್ತಿರುವರು. ಕ್ರೈಸ್ತಧರ್ಮದಲ್ಲಿ ನಾಮೋಚ್ಚಾರಣೆಗಿಂತ ಪ್ರಾರ್ಥನೆಗೇ ಹೆಚ್ಚು ಪ್ರಾಧಾನ್ಯವಾದರೂ ಗ್ರೀಕ್ ಆರ್ಥೋಡಾಕ್ಸ್ ಚರ್ಚ್‌ನಲ್ಲಿ ನಮ್ಮ ಜಪಕ್ಕೆ ಹೋಲುವ ಸಾಧನಾ ಪದ್ಧತಿಯಿದೆ.

**ಮಂತ್ರವೆಂದರೇನು?** ಭಗವಂತನ ನಾಮಕ್ಕೆ ಮಂತ್ರ ಎನ್ನುತ್ತಾರೆ. ಇವನ್ನು ಗುರುಮುಖೇನ ತೆಗೆದುಕೊಳ್ಳಬೇಕು ಎನ್ನುತ್ತದೆ ಶಾಸ್ತ್ರ. ಸಂಸ್ಕೃತದಲ್ಲಿ **ಮಂತ್ರ** ಶಬ್ದದ ವ್ಯುತ್ಪತ್ತಿ ರೂಪ ಹೀಗಿದೆ: '**ಮನನಾತ್ ತ್ರಾಯತೇ ಇತಿ ಮಂತ್ರಃ**'. ಮಂತ್ರವೆಂದರೆ ಯಾವುದರ ಮನನದಿಂದ ಮನುಷ್ಯನು ಜನ್ಮಮೃತ್ಯುಗಳ ಪರಂಪರೆಯಿಂದ, ಸಂಸಾರಸಮುದ್ರದಿಂದ, ಮಾಯೆ ಅಥವಾ ಅವಿದ್ಯೆಯಿಂದ ಮುಕ್ತನಾಗುವನೋ ಅದು. 'ಮನ್' ಎಂದರೆ ಆಲೋಚಿಸುವುದು, ಮನನ ಮಾಡುವುದು ಹಾಗೂ 'ತ್ರಾ' ಎಂದರೆ ರಕ್ಷಿಸು, ಬಿಡುಗಡೆ ಎಂದರ್ಥ. ಯಾವುದನ್ನು ಪುನಃ ಪುನಃ ಉಚ್ಚರಿಸಿದರೆ ಈ ಸಂಸಾರಬಂಧನದಿಂದ ಬಿಡುಗಡೆ ದೊರೆಯುವುದೋ ಅದೇ ಮಂತ್ರ. ಮಂತ್ರಗಳನ್ನು ಸುಮ್ಮನೆ ಯಾರೋ ರಚಿಸಿದ್ದಲ್ಲ. ಅವು ಯೋಗಿಗಳ ಅನುಭವದ ದರ್ಶನ, ಧ್ಯಾನದಲ್ಲಿ ಮಿಂಚಿದ್ದು (flash).

ಮಂತ್ರದಲ್ಲಿ ನಾಲ್ಕು ಭಾಗಗಳಿವೆ: ಓಂಕಾರ, ಬೀಜ, ನಾಮ ಹಾಗೂ ಸಾಧಕನ ಭಾವ. ಓಂಕಾರವು ಅಖಂಡವನ್ನು ಪ್ರತಿನಿಧಿಸಿದರೆ, ನಾಮವು ಖಂಡವನ್ನು ನಿರ್ದೇಶಿಸುತ್ತದೆ. ಇವೆರಡನ್ನೂ ಸೇರಿಸುವ ಕೊಂಡಿಯೇ ಬೀಜ. ಪ್ರತಿಯೊಂದು ದೇವತೆಗೂ ಒಂದೊಂದು ಬೀಜಮಂತ್ರವಿರುತ್ತದೆ. ಆ ದೇವತೆಯ ವಿಶೇಷ ಶಕ್ತಿ ಅದರಲ್ಲಿ ಅಡಗಿದೆ. ಹೇಗೆ ಸಣ್ಣ ಬೀಜವು ಚಿಗುರೊಡೆದು ಬೃಹದಾಕಾರವಾದ ಮರವಾಗುವುದೋ ಹಾಗೆಯೇ ನಿರಂತರ ಜಪ ಮಾಡುವುದರಿಂದ ಮಂತ್ರದಲ್ಲಿ ಅಡಗಿರುವ ಆ ಶಕ್ತಿಯು ಜಾಗೃತಗೊಂಡು ಒಬ್ಬಾತನನ್ನು ಆಧ್ಯಾತ್ಮಿಕತೆಯ ಉನ್ನತ ಹಂತಗಳಿಗೆ ಒಯ್ಯುವುದು. ಬ್ರಹ್ಮಜ್ಞಾನ ನೀಡುವುದು ಎಂಬ ಶ್ರೀಶಾರದಾದೇವಿಯವರ ವಚನದಲ್ಲಿ ಬೀಜದ ಅದ್ಭುತ ಶಕ್ತಿಯ ಮನವರಿಕೆಯಾಗುವುದು.

ಗುರುವಿನಿಂದ ಮಂತ್ರವನ್ನು ಪಡೆದ ಸಾಧಕನು ಅದನ್ನು ತನ್ನ ಹತ್ತಿರದ ಸಂಬಂಧಿಕರಿಗೂ ಹೇಳದೆ ಗೋಪ್ಯವಾಗಿಡಬೇಕೆನ್ನುವುದು ನಿಯಮ. ಇಂದಿನ ಕಾಲದಲ್ಲಿ ಎಲ್ಲವೂ ಮುದ್ರಿತವಾಗಿವೆ. ಆದರೆ ಪುಸ್ತಕದಿಂದ ಓದಿ ಪಠಿಸುವುದು ಸರಿಯಾದ ಮಾರ್ಗವಲ್ಲ. **'ಆಚಾರ್ಯಾತ್ ಹಿ ಏವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪತಿ ಇತಿ'** *(ಛಾಂದೋಗ್ಯೋಪನಿಷತ್, ೪.೯.೩)* – ಗುರುವಿನಿಂದ ಪಡೆದ ಮಂತ್ರವು ಮಾತ್ರ ಫಲಪ್ರದವಾಗುವುದು. ಇದಕ್ಕೆ ಕಾರಣವಿಷ್ಟೆ, ಗುರು ಬರಿಯ ಮಂತ್ರ ಮಾತ್ರ ಕೊಡುವುದಿಲ್ಲ, ತನ್ನ ಆಧ್ಯಾತ್ಮಿಕ ಶಕ್ತಿಯನ್ನು ಶಿಷ್ಯನಲ್ಲಿ ಹರಿಸುತ್ತಾನೆ. ಈ ರೀತಿ ಪಡೆದ ಮಂತ್ರವು ಮಾತ್ರ ಫಲಪ್ರದವಾಗುವುದು. ಈ ರೀತಿ ಸಜೀವ ಸಂಪರ್ಕದಿಂದಲೇ ಮಂತ್ರವು ಶಕ್ತಿಶಾಲಿಯಾಗುವುದು. ಈ ಶಕ್ತಿಯನ್ನು ಕಾಪಾಡುವುದಕ್ಕಾಗಿಯೇ ಶಾಸ್ತ್ರವು ಮಂತ್ರವನ್ನು ರಹಸ್ಯವಾಗಿಡಲು ಆದೇಶಿಸುತ್ತದೆ. ಜನರು ಈ ಮಂತ್ರವನ್ನು ಲಘುವಾಗಿ ಅಥವಾ ತುಚ್ಛವಾಗಿ ನೋಡದಿರಲಿ ಎಂಬುದೇ ಈ ನಿಯಮದ ಹಿಂದಿರುವ ಉದ್ದೇಶ. ಯೋಗ್ಯ ಗುರುವಿನಿಂದ ಮಂತ್ರ ಪಡೆದಾಗ ಆಗುವ ಪರಿಣಾಮವೇ ಬೇರೆ.

ಮಂತ್ರವು ಈಶ್ವರನ ಪ್ರತೀಕ, ಶಬ್ದರೂಪದಿಂದ ಪ್ರಕಾಶಿಸುತ್ತಿರುವ ಬ್ರಹ್ಮ. ಹಲವಾರು ಸಾಧಕರು ಮಂತ್ರವನ್ನು ಅತ್ಯಂತ ಉಜ್ಜ್ವಲವಾದ ಜ್ಯೋತಿಯ ರೂಪದಲ್ಲಿ ಪ್ರತ್ಯಕ್ಷ ಕಂಡಿದ್ದಾರೆ. ಸ್ವಾಮಿ ವಿವೇಕಾನಂದರ ಆಪ್ತ ಸ್ನೇಹಿತೆಯೆಂದು ಪರಿಗಣಿಸಲಾಗಿದ್ದ ಪಾಶ್ಚಾತ್ಯ ಶಿಷ್ಯೆ ಜೋಸೆಫಿನ್ ಮ್ಯಾಕ್‌ಲೌಡ್‌ಳು ಒಮ್ಮೆ ಧ್ಯಾನದಲ್ಲಿ ತನ್ನ ಗುರುವಿತ್ತ ಮಂತ್ರಾ

ಕ್ಷರಗಳಿಂದ ಅಗ್ನಿಯ ಜ್ವಾಲೆಗಳು ಬರುತ್ತಿದ್ದನ್ನು ಸ್ಪಷ್ಟವಾಗಿ ಕಂಡಳು. ಮಂತ್ರವು ಅಪ್ರಯತ್ನಪೂರ್ವಕವಾಗಿ ಹೃದಯದಿಂದ ತಾನೇತಾನಾಗಿ ಚಿಮ್ಮುತ್ತಿರುವುದನ್ನು ಅನುಭವಿಸಿದ್ದಳು!

**ದೀಕ್ಷೆಯೆಂದರೇನು?** – ಭಗವನ್ನಾಮವನ್ನು ಗುರುವಿನಿಂದ ಪಡೆಯುವುದಕ್ಕೆ ದೀಕ್ಷೆ ಎನ್ನುತ್ತಾರೆ.'**ದೀಯತೇ ವಿಮಲಂ ಜ್ಞಾನಂ ಕ್ಷೀಯತೇ ಕರ್ಮ ವಾಸನಾ ।**' ಯಾವುದು ಶುದ್ಧಜ್ಞಾನ ನೀಡುವುದೋ ಹಾಗೂ ಕರ್ಮ ಮತ್ತು ವಾಸನೆಗಳನ್ನು ನಾಶಗೊಳಿಸುವುದೋ ಅದೇ ದೀಕ್ಷೆ. ದೀಕ್ಷೆ ಎಂಬ ಸಂಸ್ಕೃತ ಮೂಲಶಬ್ದದ ಅರ್ಥ ಯಾವುದಾದರೂ ಕ್ರಿಯೆಯನ್ನು ಪ್ರಾರಂಭಿಸುವುದು ಅಥವಾ ಹಾಗೆ ಪ್ರಾರಂಭಿಸುವ ಸಂಕಲ್ಪ ಮಾಡುವುದು ಎಂದು. ಮಂತ್ರದೀಕ್ಷೆಯ ತಾತ್ಪರ್ಯ, ಆಧ್ಯಾತ್ಮಿಕ ಜೀವನದಲ್ಲಿ ಅದರ ಗುರುತ್ವ ಎಷ್ಟರಮಟ್ಟಿನದು ಎಂಬುದರ ಸ್ಪಷ್ಟ ಕಲ್ಪನೆಯಿಲ್ಲದೆ ಅನೇಕರು ದೀಕ್ಷೆ ಪಡೆಯಲಿಚ್ಛಿಸುತ್ತಾರೆ.

**ದೀಕ್ಷೆಯ ಬಗೆಗಳು:** ಅನೇಕ ರೀತಿಯ ದೀಕ್ಷೆಗಳ ಬಗ್ಗೆ ಶಾಸ್ತ್ರ ಉಲ್ಲೇಖಿಸುವುದು. ಆಗಮ ಶಾಸ್ತ್ರದಲ್ಲಿ ಶಾಂಭವೀ, ಶಾಕ್ತೀ ಮತ್ತು ಮಾಂತ್ರೀ ದೀಕ್ಷೆಗಳ ವಿವರಣೆ ಇದೆ. ಶಾಂಭವೀ ದೀಕ್ಷೆಯಲ್ಲಿ ಸ್ಪರ್ಶದೀಕ್ಷಾ, ವಾಗ್ದೀಕ್ಷಾ ಹಾಗೂ ದೃಗ್ದೀಕ್ಷಾಗಳಿವೆ. ಗುರುವಿನ ಸ್ಪರ್ಶ, ಸಂಭಾಷಣೆ ಮತ್ತು ದರ್ಶನದ ಮೂಲಕವೇ ಜೀವನಿಗೆ ಹಠಾತ್ತನೆ ಜ್ಞಾನೋದಯವಾಗುವುದು. *(ಶ್ರೀರಾಮಕೃಷ್ಣ ಲೀಲಾಪ್ರಸಂಗ, ಭಾಗ ೨, ಪು.೧೩೫-೩೭)*

ಒಮ್ಮೆ ಶ್ರೀರಾಮಕೃಷ್ಣರು ತಮ್ಮ ನೇರ ಶಿಷ್ಯ ನಿರಂಜನನನ್ನು ಸ್ಪರ್ಶಿಸಿದ ಮಾತ್ರಕ್ಕೆ ಆತ ಮೂರು ಹಗಲು, ಮೂರು ರಾತ್ರಿ, ಒಂದೇ ಒಂದು ಕ್ಷಣ ಕಣ್ಣುಮುಚ್ಚದೆ, ನಿರಂತರ ನಾಮಸ್ಮರಣೆಯಿಂದ ಅವನ ತುಟಿಗಳು ಅಲುಗಾಡುತ್ತಿದ್ದವು. ಅವನು ಅದ್ಭುತವಾದ ಬೆಳಕನ್ನು ನಿರಂತರ ದರ್ಶಿಸಿದನು! (*'Adbhutananda as we saw Him', p.355)*

ಶಾಂಭವೀ ದೀಕ್ಷೆಯಲ್ಲಿ ಆಚಾರ್ಯನ ಮನಸ್ಸಿನಲ್ಲಿ ದೀಕ್ಷೆ ನೀಡುತ್ತೇನೆಂದಾಗಲಿ ಹಾಗೂ ಶಿಷ್ಯನ ಮನದಲ್ಲಿ ಅದನ್ನು ಪಡೆಯುತ್ತೇನೆಂದಾಗಲೀ ಪೂರ್ವ ಸಂಕಲ್ಪವಿರುವುದಿಲ್ಲ. ಪರಸ್ಪರರನ್ನು ನೋಡಿದಾಕ್ಷಣವೇ ಆಚಾರ್ಯನಿಗೆ ಕರುಣೆ ಉದಯಿಸಿ ಕೃಪೆ ತೋರುವನು. ಇದರಿಂದಲೇ ಶಿಷ್ಯನ ಒಳಗೆ ಅದ್ವೈತ ವಸ್ತುವಿನ ಜ್ಞಾನವುಂಟಾಗಿ ಅವನಿಂದ ಶಿಷ್ಯತ್ವ ಸ್ವೀಕರಿಸುತ್ತಾನೆ. ಸಿದ್ಧಪುರುಷರು ಯಾವ ಬಾಹ್ಯ ಉಪಾಯವನ್ನೂ ಅವಲಂಬಿಸದೆ ಕೇವಲ ತಮ್ಮ ಆಧ್ಯಾತ್ಮಿಕ ಶಕ್ತಿಯ ಸಹಾಯದಿಂದಲೇ ಶಿಷ್ಯನಲ್ಲಿ ದಿವ್ಯಜ್ಞಾನವನ್ನುಂಟುಮಾಡಿದರೆ, ಅದನ್ನು 'ಶಾಕ್ತೀ ದೀಕ್ಷೆ' ಎನ್ನುತ್ತಾರೆ. ಮಾಂತ್ರೀ ದೀಕ್ಷೆಯ ಪ್ರಕಾರ ಗುರುವು ಮಂಡಲ, ಘಟಸ್ಥಾಪನೆ ಮತ್ತು ದೇವತಾರ್ಚನೆ ಇವುಗಳ ಮೂಲಕ ಮಂತ್ರವನ್ನು ಶಿಷ್ಯನ ಕಿವಿಯಲ್ಲಿ ಉಚ್ಚರಿಸುತ್ತಾನೆ.

ಇದಲ್ಲದೆ ಕ್ರಿಯಾವತೀ, ವರ್ಣಮಯೀ, ಕಲಾವತೀ, ವೇದಮಯೀ ಎಂಬ ದೀಕ್ಷಾವಿಧಿಗಳ ಉಲ್ಲೇಖನವೂ ಇದೆ ಶಾಸ್ತ್ರಗಳಲ್ಲಿ. ದಿವ್ಯಪುರುಷರು ಉಪದೇಶ, ದೀಕ್ಷೆ ಮುಂತಾದ ಶಾಸ್ತ್ರ ವಿಧಿನಿಯಮಗಳ ಪರಿಧಿಯ ಹೊರಗೆ ಇರುವರು. ಕಾಶೀಪುರದಲ್ಲಿ ಶ್ರೀರಾಮಕೃಷ್ಣರು ದೀರ್ಘವ್ಯಾಧಿಯಿಂದ ನರಳುತ್ತಿದ್ದಾಗ ತಮ್ಮ ಶಕ್ತಿಯ ಪ್ರಕಾಶವನ್ನು ನಿರ್ದೇಶಿಸಿ ಒಂದು ದಿನ ತಮ್ಮ ಶಿಷ್ಯರಿಗೆ ಹೀಗೆಂದರು: ''ಮಾತೆಯು ತೋರಿಸಿರುವಳು, ಈಗ ಇಲ್ಲಿ ಎಂಥಾ ಶಕ್ತಿ ಇದೆಯೆಂದರೆ ನಾನು ಜನರನ್ನು ಸ್ಪರ್ಶಿಸಬೇಕಾಗಿಯೂ ಇಲ್ಲ, ನಾನು ನಿಮಗೆ ಅವರನ್ನು ಸ್ಪರ್ಶಿಸಲು ಹೇಳುತ್ತೇನೆ. ನಿಮ್ಮ ಸ್ಪರ್ಶದಿಂದಲೇ ಅವರ ಚೈತನ್ಯ ಜಾಗೃತವಾಗುವುದು. ತಾಯಿಯೆ ಈಗ ಇದನ್ನು (ದೇಹವನ್ನು) ಗುಣಪಡಿಸಿದರೆ ಎಷ್ಟೊಂದು ಜನ ಬಂದು ಮುತ್ತುತ್ತಾರೆಂದರೆ ನಿಮಗೆ ಆ ಜನಜಂಗುಳಿಯನ್ನು ಹೊರಗೆ ತಳ್ಳಲು ಸಾಧ್ಯವೇ ಆಗುವುದಿಲ್ಲ. ನೀವು ಎಷ್ಟು ಕಷ್ಟಪಡಬೇಕಾಗುವುದೆಂದರೆ ನಿಮ್ಮ ದೇಹದ ನೋವನ್ನು ಗುಣಪಡಿಸಿಕೊಳ್ಳಲು ಔಷಧಿ ತೆಗೆದುಕೊಳ್ಳಬೇಕಾಗುತ್ತದೆ. *(ಲೀಲಾಪ್ರಸಂಗ, ಭಾಗ ೨, ಪು. ೧೩೭)*

**ಉಪಸಂಹಾರ:** ''ನಾಮದಲ್ಲಿ ಒಳ್ಳೇ ಮಾಹಾತ್ಮ್ಯವಿರುವುದೇನೋ ನಿಜ, ಆದರೆ ಅನುರಾಗವಿಲ್ಲದಿದ್ದರೆ ಏನು ದೊರೆಯುತ್ತದೆ? ಭಗವಂತನಿಗಾಗಿ ಪ್ರಾಣ ಸುಮ್ಮನೆ ವ್ಯಾಕುಲಪಡಬೇಕು'' *(ವಚನ ವೇದ, ಸಂ ೧, ಪು. ೧೪೬)* ಎಂಬ ಶ್ರೀರಾಮಕೃಷ್ಣರ ಎಚ್ಚರಿಕೆಯ ಧ್ವನಿಯನ್ನು ನಾವು ಕೇಳಲೇಬೇಕು. ವ್ಯಾಕುಲತೆ ಪಡೆಯುವ ಉಪಾಯವನ್ನು ಅವರೇ ತಿಳಿಸಿದ್ದಾರೆ: ''ಭಗವನ್ನಾಮೋಚ್ಚಾರಣೆಯನ್ನೂ ಮಾಡಿ; ಜೊತೆಗೆ ಪ್ರಾರ್ಥಿಸಿಕೊಳ್ಳಿ: ಈ ಎರಡು ದಿನದ ಬಾಳಿನಲ್ಲಿ ಹಣ, ಕೀರ್ತಿ, ದೇಹಸುಖ ಇವುಗಳ ಮೇಲಿನ ಆಸಕ್ತಿ ದಿನದಿನಕ್ಕೂ ಕಡಿಮೆಯಾಗುತ್ತಾ ಬರುವಂತೆ ಕರುಣಿಸಬೇಕೆಂದು.''

*(ವಚನವೇದ, ಸಂ ೧, ಪು. ೧೪೬)*

ಏಕೆಂದರೆ ಭಗವನ್ನಾಮೋಚ್ಚಾರಣೆಯಿಂದ ಒಮ್ಮೆ ಶುದ್ಧನಾದರೂ ಮನುಷ್ಯನ ಮನಸ್ಸು ಎಷ್ಟು ದುರ್ಬಲವೆಂದರೆ ಮತ್ತೆ ಪಾಪಕಾರ್ಯಗಳಲ್ಲಿ ಮುಳುಗಿಬಿಡುತ್ತಾನೆ. ಸಾಧನೆಯ ಪಥದಲ್ಲಿ ಎಷ್ಟೇ ಎಚ್ಚರಿಕೆಯಿಂದ ನಡೆಯುತ್ತಿದ್ದರೂ ಮುಗ್ಗರಿಸಿ ಬೀಳುವುದು, ಎಡರುವುದು, ಗಾಯಗೊಳ್ಳುವುದು ಇದ್ದೇ ಇರುತ್ತದೆ. ಸುದೃಢ ಸಂಕಲ್ಪ ಮತ್ತು ವಿಶ್ವಾಸ ಆವಶ್ಯಕ. ಅನೇಕಾನೇಕ ಜನ್ಮಗಳನ್ನು ತೆತ್ತುಕೊಳ್ಳುವ ಅಮೂಲ್ಯ ವಸ್ತುವಿಗಾಗಿ ಅರಸುತ್ತಿರುವೆವು ಎಂಬುದನ್ನು ಮರೆಯಬಾರದು. '**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ**' *(ಕಠೋಪನಿಷತ್, ೧.೩.೪)* 'ಈ ಪಥವು ಅತ್ಯಂತ ದುರ್ಗಮ, ಕತ್ತಿಯ ಅಲುಗಿನಂತೆ ಹರಿತವಾದದ್ದು ಎಂದು ಜ್ಞಾನಿಗಳು ಹೇಳುತ್ತಾರೆ.' ಇಂತಹ ಕತ್ತಿಯ ಅಲುಗಿನ ಮೇಲೆ ದುರ್ಬಲ ಮನಸ್ಸಿನ ನಾವು ನಡೆಯುವಾಗ...?

ಶ್ರೀರಾಮಕೃಷ್ಣರ ನೇರ ಶಿಷ್ಯರಾದ ಸ್ವಾಮಿ ಅದ್ಭುತಾನಂದರ ಈ ಪ್ರಾರ್ಥನೆಯನ್ನು ಪ್ರತಿದಿನವೂ ಹೃತ್ಪೂರ್ವಕವಾಗಿ ಸ್ಮರಿಸುತ್ತಾ ಭಗವಂತನ ನಾಮದಲ್ಲಿ ಅಭಿರುಚಿ, ಅನುರಾಗಗಳನ್ನು ವೃದ್ಧಿಗೊಳಿಸುತ್ತಾ, ಆಧ್ಯಾತ್ಮಿಕ ಪಥದಲ್ಲಿ ದೃಢ ಹೆಜ್ಜೆಗಳನ್ನು ಇಡುತ್ತಾ ಅದಮ್ಯ ಉತ್ಸಾಹ, ಶಕ್ತಿಗಳೊಂದಿಗೆ ಹೋರಾಡೋಣ :

''ಹೇ ಭಗವಂತನೆ, ನಿನ್ನ ಹೆಸರನ್ನು ನಾವು ಮರೆಯದಂತಾಗಲಿ. ನಾನು ನಿನಗೆ ಶರಣಾಗಿರುವೆ. ನಿನ್ನ ಕಾರ್ಯದಲ್ಲಿ ನನ್ನನ್ನು ತೊಡಗಿಸು. ನನ್ನ ಎಲ್ಲ ವಿಘ್ನಗಳನ್ನೂ ದೂರ ಮಾಡು. ಎಲ್ಲ ಸಂಶಯಗಳನ್ನು ನಾಶಗೊಳಿಸು. ನೀನೇ ನನ್ನ ಸ್ವಾಮಿ, ನನ್ನ ಗುರು, ನನ್ನ ತಂದೆತಾಯಿ. ನಾನು ನಿನ್ನ ಸಂತಾನ. ನನಗೆ ಯಾವುದು ಕಲ್ಯಾಣಕರವೋ ಆ ಮಾರ್ಗದಲ್ಲಿ ನನ್ನನ್ನು ನಡೆಸಿಕೊಂಡು ಹೋಗು, ನನ್ನ ಮೂಲಕ ನಿನ್ನ ಎಲ್ಲ ಕೆಲಸಗಳನ್ನು ಮಾಡಿಸಿಕೋ. ಆದರೆ ನಿನ್ನ ಮಾಯೆಯಿಂದ ನನ್ನನ್ನು ಮುಗ್ಧಗೊಳಿಸಬೇಡ. ಪ್ರಭು! ನಾನಾದರೂ ನಿನ್ನನ್ನು ನೋಡಿಲ್ಲ, ನಿನ್ನ ಹೆಸರನ್ನು ಮಾತ್ರ ಕೇಳಿದ್ದೇನೆ. ನನ್ನ ಮೇಲೆ ದಯೆ ತೋರಿ ನನ್ನನ್ನು ನಿನ್ನವನನ್ನಾಗಿ ಮಾಡಿಕೋ.'' *(ಅದ್ಭುತವಾಣಿ , ಪು. ೭೫)* ❖






# ‘ವಿವೇಕ ತೀರ್ಥ’ ಯೋಜನೆಯ ಶಿಲಾನ್ಯಾಸ

ಸ್ವಾಮಿ ವಿವೇಕಾನಂದರು ಬಯಸಿದ್ದ ‘ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆ’ ನೀಡಬಲ್ಲ, ಪುರುಷಸಿಂಹಗಳನ್ನು ನಿರ್ಮಾಣ ಮಾಡಬಲ್ಲ ಶಿಕ್ಷಣ ಹಾಗೂ ತರಬೇತಿ ಇವನ್ನು ಒದಗಿಸುವ ಮಹತ್ವಾಕಾಂಕ್ಷೆಯ ಕೇಂದ್ರವೊಂದನ್ನು ಸ್ಥಾಪಿಸಲು ರಾಮಕೃಷ್ಣ ಮಿಷನ್ನಿನ ಪ್ರಧಾನ ಕೇಂದ್ರವಾದ ಬೇಲೂರು ಮಠವು ನಿರ್ಧರಿಸಿದೆ. ಪಶ್ಚಿಮ ಬಂಗಾಳ ಮುಖ್ಯಮಂತ್ರಿಯವರ ಪ್ರೇರಣೆಯನ್ವಯ ಅಲ್ಲಿನ ಸರ್ಕಾರ ಮುಂದಿಟ್ಟ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಮಿಷನ್ ಮುಂದಾಗಿದೆ. ನವೆಂಬರ್ ೧೧ ರಂದು ಈ ಯೋಜನೆಯ ಶಿಲಾನ್ಯಾಸ ಕಾರ್ಯಕ್ರಮ ನಡೆಯಿತು. ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಕು. ಮಮತಾ ಬ್ಯಾನರ್ಜಿಯವರು ಶಿಲಾನ್ಯಾಸ ಮಾಡಿ ಯೋಜನೆಗೆ ಶುಭ ಕೋರಿದರು.

‘ವಿವೇಕ ತೀರ್ಥ’ ಎಂಬ ಹೆಸರಿನ ಈ ಕೇಂದ್ರವು 'Ramakrishna Mission Vivekananda Centre for Human Excellence and Social Sciences' ಎಂಬ ಉಪಶೀರ್ಷಿಕೆಯೊಂದಿಗೆ ಅಸ್ತಿತ್ವಕ್ಕೆ ಬಂದಿದೆ. ಕೊಲ್ಕತಾದ ನ್ಯೂ ಟೌನ್ ನಲ್ಲಿರುವ ರಾಜರ್‌ಹಾಟ್ ಎಂಬಲ್ಲಿ ಪಶ್ಚಿಮ ಬಂಗಾಳ ಸರ್ಕಾರ ನೀಡಿರುವ ಐದು ಎಕರೆ ಜಮೀನಿನಲ್ಲಿ ಈ ಕೇಂದ್ರವನ್ನು ಸ್ಥಾಪಿಸಲು ನಿರ್ಧರಿಸಿರುವ ಮಿಷನ್, ಸುಮಾರು ೧೭೫ ಕೋಟಿ ವೆಚ್ಚದಲ್ಲಿ ಈ ಸಂಸ್ಥೆಯ ವಿವಿಧ ಹಂತದ ನಿರ್ಮಾಣ ಕಾರ್ಯವನ್ನು ಐದು ವರ್ಷಗಳಲ್ಲಿ ಪೂರೈಸಲು ಯೋಜಿಸಿದೆ.

ವಿವಿಧ ಬಗೆಯ ವ್ಯಕ್ತಿತ್ವ ನಿರ್ಮಾಣ ಅಧ್ಯಯನಗಳು, ವಿಚಾರ ಸಂಕಿರಣಗಳು, ಯೋಗ-ಧ್ಯಾನವೇ ಮೊದಲಾದ ಶಿಬಿರಗಳು, ಯುವಕರಿಗೆ ನೆರವಾಗಬಲ್ಲ ವಿಭಿನ್ನ ಚಟುವಟಿಕೆಗಳು, ವೈದ್ಯಕೀಯ ಇಂಜಿನಿಯರಿಂಗ್ ಮುಂತಾದ ವಿಭಿನ್ನ ಸ್ತರದಲ್ಲಿರುವ ಉದ್ಯೋಗಸ್ಥರಿಗೂ, ಶಿಕ್ಷಕ-ಪಾಲಕ ವರ್ಗದವರಿಗೂ ನೆರವಾಗುವ ಕಾರ್ಯಕ್ರಮಗಳು ಇಲ್ಲಿ ನಡೆಯಲಿವೆ.

೧೮೯೩ರಲ್ಲಿ ಸ್ವಾಮಿ ವಿವೇಕಾನಂದರು ಶಿಕಾಗೋದಲ್ಲಿ ಸುಪ್ರಸಿದ್ಧ ಭಾಷಣ ನೀಡಿದ ‘ಆರ್ಟ್ ಇನ್‌ಸ್ಟಿಟ್ಯೂಟ್’ ಕಟ್ಟಡವನ್ನು ಹೋಲುವ ಒಂದು ಬೃಹತ್ ಕಟ್ಟಡವೊಂದನ್ನು ಈ ಯೋಜನೆಯಡಿ ನಿರ್ಮಿಸಲಾಗುವುದು. ಇದರೊಂದಿಗೆ ಭಾರತೀಯ ಸಂಸ್ಕೃತಿ, ಆಧ್ಯಾತ್ಮಿಕ ಪರಂಪರೆಯನ್ನು ಉಳಿಸಿ ಬೆಳೆಸುವಲ್ಲಿ ನೆರವಗುವ ಪ್ರದರ್ಶನ ಕೇಂದ್ರ, ವಿವೇಕಾನಂದ ಸಂಶೋಧನ ಕೇಂದ್ರ , ಪ್ರಕಟಣ ವಿಭಾಗಗಳೂ ಇಲ್ಲಿ ಮೂಡಿ ಬರಲಿವೆ.

ರಾಮಕೃಷ್ಣ ಮಿಷನ್ನಿನ ಉಪಾಧ್ಯಕ್ಷರಲ್ಲಿ ಒಬ್ಬರಾದ ಪೂಜ್ಯ ಸ್ವಾಮಿ ಪ್ರಭಾನಂದಜಿ ಮಹಾರಾಜ್, ಗೌರವ ಕಾರ್ಯದರ್ಶಿಗಳಾದ ಪೂಜ್ಯ ಸ್ವಾಮಿ ಸುಹಿತಾನಂದಜಿ ಮಹಾರಾಜ್, ಮಿಷನ್ನಿನ ಹಲವು ಮಂದಿ ಸಂನ್ಯಾಸಿಗಳು ಹಾಗೂ ಭಕ್ತವೃಂದ, ಅನೇಕ ಮಂದಿ ಸರ್ಕಾರಿ ಅಧಿಕಾರಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.





Managing Editor : Swami Muktidananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಶ್ರೀಶಾರದಾಶ್ರಮ

ವಾಸವಿ ಕಾಲನಿ, ಬೆಂಗಳೂರು ರಸ್ತೆ, ಚಳ್ಳಕೆರೆ - 577 522

ಫೋನ್ : 9686177923

# ಮಂದಿರ ಪ್ರತಿಷ್ಠಾಪನಾ ಕಾರ್ಯಕ್ರಮ

**ದಿನಾಂಕ:** ಜನವರಿ 25, 2015 **ಸಮಯ:** ಬೆಳಿಗ್ಗೆ 8.00 ರಿಂದ ಸಾಯಂಕಾಲ 5.00

★ ಶ್ರೀ ಶ್ರೀ ಚಂಡಿಕಾ ಹೋಮ

★ ''ಶ್ರೀ ದೇವೀ ದಿವ್ಯ ದರ್ಶನ''

(ನೃತ್ಯನಿಕೇತನ ಕಲಾತಂಡ, ಚಳ್ಳಕೆರೆ ಇವರಿಂದ ನೃತ್ಯರೂಪಕ )

★ ಉಪನ್ಯಾಸಗಳು

**ದಿನಾಂಕ:** ಜನವರಿ 26, 2015 **ಸಮಯ:** ಬೆಳಿಗ್ಗೆ 6.30 ರಿಂದ ಸಾಯಂಕಾಲ 7.00

## ಶೋಭಾಯಾತ್ರೆ ಮತ್ತು ಪ್ರತಿಷ್ಠಾಪನೆ

**ಪರಮಪೂಜ್ಯ ಸ್ವಾಮಿ ರಾಘವೇಶಾನಂದಜೀ ಮಹಾರಾಜ್**

ಅಧ್ಯಕ್ಷರು, ರಾಮಕೃಷ್ಣ ಮಠ, ಉದಕಮಂಡಲ

**ಪರಮಪೂಜ್ಯ ಸ್ವಾಮಿ ಮುಕ್ತಿದಾನಂದಜೀ ಮಹಾರಾಜ್**

ಟ್ರಸ್ಟಿಗಳು, ರಾಮಕೃಷ್ಣ ಮಠ ಮತ್ತು ಮಿಷನ್, ಬೇಲೂರು ಮಠ ಹಾಗೂ

ಅಧ್ಯಕ್ಷರು, ಶ್ರೀರಾಮಕೃಷ್ಣ ಆಶ್ರಮ, ಮೈಸೂರು

ಮತ್ತು

**ಶ್ರೀರಾಮಕೃಷ್ಣ ಮಹಾಸಂಘದ ಹಿರಿಯ ಯತಿವರೇಣ್ಯರು,** ಹಾಗೂ

**ಮಾತಾಜಿಯವರಿಂದ**

ಬೆಳಿಗ್ಗೆ 9.30 ರಿಂದ ಸಾಯಂಕಾಲ 5.00

**ಭಜನೆ, ಪ್ರವಚನಗಳು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು**

**ದಿನಾಂಕ :** ಜನವರಿ 27, 2015 **ಸಮಯ :** ಬೆಳಿಗ್ಗೆ 9.30 ರಿಂದ 12.30

**ಆಧ್ಯಾತ್ಮ ಸಂವಾದ ತರಂಗಿಣಿ**

ಶ್ರೀ ಇಬ್ರಾಹಿಂ ಸುತಾರ್ ಮತ್ತು ಸಂಗಡಿಗರಿಂದ

**ಎಲ್ಲರಿಗೂ ಆತ್ಮೀಯ ಸ್ವಾಗತ**



ಶ್ರೀರಾಮಕೃಷ್ಣ ವಿದ್ಯಾಶ್ರಮ ಟ್ರಸ್ಟ್

# ಶ್ರೀರಾಮಕೃಷ್ಣ ವಿದ್ಯಾನಿಕೇತನ (ರಿ)



**ವಸತಿ ವಿದ್ಯಾಲಯ**

(ಪೂರ್ವ ಪ್ರಾಥಮಿಕ, ಪ್ರಾಥಮಿಕ, ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆ – ಆಂಗ್ಲ ಮತ್ತು ಕನ್ನಡ ಮಾಧ್ಯಮ)

**'ಎಫ್' ಬ್ಲಾಕ್, ಗೋಪಾಲಗೌಡ ಬಡಾವಣೆ, ಶಿವಮೊಗ್ಗ–577 205**

ದೂರವಾಣಿ : (08182) 258286;
ಮೊ: 98455 60531; 99020 60960;
90359037423; 98442 53144

**ಅಧ್ಯಾತ್ಮದಲ್ಲಿ ವೈಜ್ಞಾನಿಕ ಶಿಕ್ಷಣ – ಗುರುಕುಲ ಮಾದರಿಯಲ್ಲಿ**

## ಶಾಲೆಯಲ್ಲಿ ನೀಡಲಾಗುವ ಶಿಕ್ಷಣದ ವೈಶಿಷ್ಟ್ಯತೆಗಳು

1. ಪ್ರತಿಯೊಂದು ಮಗುವಿನಲ್ಲೂ ಪರಮಾತ್ಮನ ಸ್ವರೂಪನಾದ ಆತ್ಮನಿರುತ್ತಾನೆ. ಈ ಮಹಾ ಚೈತನ್ಯವನ್ನು ಯೋಗ, ಧ್ಯಾನ, ಭಜನೆ, ಮಹಾತ್ಮರ ಜೀವನಕಥೆ – ಇವುಗಳ ಮೂಲಕ ಜಾಗೃತಗೊಳಿಸಿ, ಆ ಮಗುವು ತನ್ನ ಜವಾಬ್ದಾರಿಯನ್ನು ಅರಿಯುವಂತೆ ಮಾಡಿ, ಪೋಷಕರಿಗೆ ಪ್ರೀತಿಯ ಮಗನನ್ನಾಗಿಯೂ, ಶಿಕ್ಷಕರಿಗೆ ಒಳ್ಳೆಯ ವಿದ್ಯಾರ್ಥಿಯನ್ನಾಗಿಯೂ, ದೇಶಕ್ಕೆ **ಉತ್ಕೃಷ್ಟ** ಪ್ರಜೆಯನ್ನಾಗಿಯೂ ಮಾಡುವುದೇ ಈ ಸಂಸ್ಥೆಯ ಮೂಲ ಉದ್ದೇಶ.
2. ಪ್ರತಿ ಮಗುವಿಗೂ **ಪ್ರತ್ಯೇಕ ಆಪ್ತಸಲಹೆಯನ್ನು** (Counselling) ಮಾಡಿ, ಅದರ ಪ್ರಗತಿ ಕುಂಠಿತವಾಗಲು ಕಾರಣಗಳನ್ನು ಹುಡುಕಿ, ಅದಕ್ಕೆ ಸರಿಯಾಗಿ ತರಬೇತಿ ಕೊಟ್ಟು, ಪ್ರತಿಯೊಂದು ಮಗುವನ್ನೂ ತಯಾರು ಮಾಡುವ ಕಾರ್ಯ ಈ ಶಾಲೆಯಲ್ಲಿ ನಡೆಯುತ್ತಿದೆ.
3. ಮಕ್ಕಳ ಸರ್ವಾಂಗೀಣ ಪ್ರಗತಿಯ ಬಗ್ಗೆ **ಸ್ವತಃ ಕಾರ್ಯದರ್ಶಿಯವರೇ** ಗಮನವೀಯುತ್ತಾರೆ. ಅವರೇ ಮಕ್ಕಳನ್ನು, ಶಿಕ್ಷಕರನ್ನು ಉತ್ತೇಜಿಸಿ, ಶಾಲೆಯಲ್ಲಿ ನಡೆಯುವ ಆಟ, ಊಟ, ಪಾಠ, ಯೋಗ, ಧ್ಯಾನ, ಭಜನೆ, ಭರತನಾಟ್ಯ, ಕರಾಟೆ, ಸಂಗೀತ – ಹೀಗೆ ಎಲ್ಲ ಚಟುವಟಿಕೆಗಳಲ್ಲಿಯೂ ಸಕ್ರಿಯವಾಗಿ ಭಾಗವಹಿಸುವಂತೆ ಪ್ರೇರೇಪಿಸುತ್ತಾರೆ; ಎಲ್ಲ ರೀತಿಯ ತರಬೇತಿ ಪಡೆಯುವಂತೆ ಪ್ರೋತ್ಸಾಹಿಸುತ್ತಾರೆ.
4. ಎಲ್ಲ ಮಕ್ಕಳನ್ನೂ **ಸಾಂಸ್ಕೃತಿಕ ಮತ್ತು ಜ್ಞಾನ ವಿಜ್ಞಾನ ವಸ್ತು ಪ್ರದರ್ಶನ ಕಾರ್ಯಕ್ರಮ**ಗಳಲ್ಲಿ ಭಾಗವಹಿಸುವಂತೆ ಪ್ರೇರೇಪಿಸಲಾಗುತ್ತದೆ. ಇದಲ್ಲದೆ ಭಾಷಣಕಲೆಯನ್ನು ಕಲಿತುಕೊಳ್ಳಲು ಕೂಡ ತರಬೇತಿ ನೀಡಲಾಗುತ್ತದೆ. ಪ್ರತಿ ಭಾನುವಾರ ಪ್ರಾಯೋಗಿಕವಾಗಿ ವೇದಿಕೆಯ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ.
5. ಮಕ್ಕಳ **ಆಂತರಿಕ, ದೈಹಿಕ** ಮತ್ತು **ಮಾನಸಿಕ ಪ್ರಗತಿಗೆ** ಅನುಕೂಲವಾಗುವಂತೆ ಯೋಗ, ಧ್ಯಾನ, ಕರಾಟೆ, ಭರತನಾಟ್ಯ, ಸಂಗೀತ, ಚಿತ್ರಕಲೆ ಹೀಗೆ ವೈವಿಧ್ಯಮಯ ತರಬೇತಿಗಳನ್ನು ನೀಡಿ, ಪ್ರತಿ ಮಗುವಿನಲ್ಲಿರುವ ಪ್ರತಿಭೆಯನ್ನು ಹುಡುಕಿ ಹೊರ ತೆಗೆದು, ಸೂಕ್ತ ತರಬೇತಿ ಕೊಟ್ಟು, ಎಲ್ಲ ಮಕ್ಕಳನ್ನೂ ಉತ್ಕೃಷ್ಟ ಪ್ರಜೆಗಳನ್ನಾಗಿ ಮಾಡುವ ಧ್ಯೇಯವನ್ನು ಈ ಶಾಲೆ ಹೊಂದಿದೆ.



ಯೋಗಾಸನದಲ್ಲಿ ನಿರತರಾದ ವಿದ್ಯಾರ್ಥಿಗಳು

**2015–16 ರ ಸಾಲಿಗೆ ಪ್ರವೇಶಕ್ಕಿರುವ ತರಗತಿಗಳು :**

**5 ಮತ್ತು 8 ನೇ ತರಗತಿ (ಆಂಗ್ಲ ಮಾಧ್ಯಮ)**

**ಗಂಡು ಮತ್ತು ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಹಾಸ್ಟೆಲ್ ವ್ಯವಸ್ಥೆ ಇರುತ್ತದೆ.**

ಪ್ರವೇಶ ಬಯಸುವವರು ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಒಡನೆ ರೂ. 200/– ಅನ್ನು ಡಿ.ಡಿ. ಅಥವಾ ಎಂ.ಓ. ಮೂಲಕ 'ಕಾರ್ಯದರ್ಶಿ, ಶ್ರೀರಾಮಕೃಷ್ಣ ವಿದ್ಯಾನಿಕೇತನ, ಶಿವಮೊಗ್ಗ' – ಈ ಹೆಸರಿಗೆ ಬರೆದು ಮೇಲಿನ ವಿಳಾಸಕ್ಕೆ ಕಳಿಸಬಹುದು.

ಇಂತಿ ತಮ್ಮ ಸೇವೆಯಲ್ಲಿ ಸಂತೋಷವನ್ನು ಕಾಣುವ

*ವೆಂಕಟರಮಣ ದಾವಣೆಬೈಲು*

ಶ್ರೀರಾಮಕೃಷ್ಣ ವಿದ್ಯಾಶ್ರಮ ಟ್ರಸ್ಟ್

# ಶ್ರೀರಾಮಕೃಷ್ಣ ವಿದ್ಯಾನಿಕೇತನ (ರಿ)

**ವಸತಿ ವಿದ್ಯಾಲಯ**

(ಪೂರ್ವ ಪ್ರಾಥಮಿಕ, ಪ್ರಾಥಮಿಕ, ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆ – ಆಂಗ್ಲ ಮತ್ತು ಕನ್ನಡ ಮಾಧ್ಯಮ)

**'ಎಫ್' ಬ್ಲಾಕ್, ಗೋಪಾಲಗೌಡ ಬಡಾವಣೆ, ಶಿವಮೊಗ್ಗ–577 205**

ದೂರವಾಣಿ : (08182) 258286;
ಮೊ: 98455 60531; 99020 60960;
90359037423; 98442 53144

**ಅಧ್ಯಾತ್ಮದಲ್ಲಿ ವೈಜ್ಞಾನಿಕ ಶಿಕ್ಷಣ – ಗುರುಕುಲ ಮಾದರಿಯಲ್ಲಿ**

## ಶಾಲೆಯಲ್ಲಿ ನೀಡಲಾಗುವ ಶಿಕ್ಷಣದ ವೈಶಿಷ್ಟ್ಯತೆಗಳು

1. ಪ್ರತಿಯೊಂದು ಮಗುವಿನಲ್ಲೂ ಪರಮಾತ್ಮನ ಸ್ವರೂಪನಾದ ಆತ್ಮನಿರುತ್ತಾನೆ. ಈ ಮಹಾ ಚೈತನ್ಯವನ್ನು ಯೋಗ, ಧ್ಯಾನ, ಭಜನೆ, ಮಹಾತ್ಮರ ಜೀವನಕಥೆ – ಇವುಗಳ ಮೂಲಕ ಜಾಗೃತಗೊಳಿಸಿ, ಆ ಮಗುವು ತನ್ನ ಜವಾಬ್ದಾರಿಯನ್ನು ಅರಿಯುವಂತೆ ಮಾಡಿ, ಪೋಷಕರಿಗೆ ಪ್ರೀತಿಯ ಮಗನನ್ನಾಗಿಯೂ, ಶಿಕ್ಷಕರಿಗೆ ಒಳ್ಳೆಯ ವಿದ್ಯಾರ್ಥಿಯನ್ನಾಗಿಯೂ, ದೇಶಕ್ಕೆ **ಉತ್ಕೃಷ್ಟ** ಪ್ರಜೆಯನ್ನಾಗಿಯೂ ಮಾಡುವುದೇ ಈ ಸಂಸ್ಥೆಯ ಮೂಲ ಉದ್ದೇಶ.
2. ಪ್ರತಿ ಮಗುವಿಗೂ **ಪ್ರತ್ಯೇಕ ಆಪ್ತಸಲಹೆ**ಯನ್ನು (Counselling) ಮಾಡಿ, ಅದರ ಪ್ರಗತಿ ಕುಂಠಿತವಾಗಲು ಕಾರಣಗಳನ್ನು ಹುಡುಕಿ, ಅದಕ್ಕೆ ಸರಿಯಾಗಿ ತರಬೇತಿ ಕೊಟ್ಟು, ಪ್ರತಿಯೊಂದು ಮಗುವನ್ನೂ ತಯಾರು ಮಾಡುವ ಕಾರ್ಯ ಈ ಶಾಲೆಯಲ್ಲಿ ನಡೆಯುತ್ತಿದೆ.
3. ಮಕ್ಕಳ ಸರ್ವಾಂಗೀಣ ಪ್ರಗತಿಯ ಬಗ್ಗೆ **ಸ್ವತಃ ಕಾರ್ಯದರ್ಶಿಯವರೇ** ಗಮನವೀಯುತ್ತಾರೆ. ಅವರೇ ಮಕ್ಕಳನ್ನು, ಶಿಕ್ಷಕರನ್ನು ಉತ್ತೇಜಿಸಿ, ಶಾಲೆಯಲ್ಲಿ ನಡೆಯುವ ಆಟ, ಊಟ, ಪಾಠ, ಯೋಗ, ಧ್ಯಾನ, ಭಜನೆ, ಭರತನಾಟ್ಯ, ಕರಾಟೆ, ಸಂಗೀತ – ಹೀಗೆ ಎಲ್ಲ ಚಟುವಟಿಕೆಗಳಲ್ಲಿಯೂ ಸಕ್ರಿಯವಾಗಿ ಭಾಗವಹಿಸುವಂತೆ ಪ್ರೇರೇಪಿಸುತ್ತಾರೆ; ಎಲ್ಲ ರೀತಿಯ ತರಬೇತಿ ಪಡೆಯುವಂತೆ ಪ್ರೋತ್ಸಾಹಿಸುತ್ತಾರೆ.
4. ಎಲ್ಲ ಮಕ್ಕಳನ್ನೂ **ಸಾಂಸ್ಕೃತಿಕ ಮತ್ತು ಜ್ಞಾನ ವಿಜ್ಞಾನ ವಸ್ತು ಪ್ರದರ್ಶನ ಕಾರ್ಯಕ್ರಮ**ಗಳಲ್ಲಿ ಭಾಗವಹಿಸುವಂತೆ ಪ್ರೇರೇಪಿಸಲಾಗುತ್ತದೆ. ಇದಲ್ಲದೆ ಭಾಷಣಕಲೆಯನ್ನು ಕಲಿತುಕೊಳ್ಳಲು ಕೂಡ ತರಬೇತಿ ನೀಡಲಾಗುತ್ತದೆ. ಪ್ರತಿ ಭಾನುವಾರ ಪ್ರಾಯೋಗಿಕವಾಗಿ ವೇದಿಕೆಯ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ.
5. ಮಕ್ಕಳ **ಆಂತರಿಕ, ದೈಹಿಕ** ಮತ್ತು **ಮಾನಸಿಕ ಪ್ರಗತಿಗೆ** ಅನುಕೂಲವಾಗುವಂತೆ ಯೋಗ, ಧ್ಯಾನ, ಕರಾಟೆ, ಭರತನಾಟ್ಯ, ಸಂಗೀತ, ಚಿತ್ರಕಲೆ ಹೀಗೆ ವೈವಿಧ್ಯಮಯ ತರಬೇತಿಗಳನ್ನು ನೀಡಿ, ಪ್ರತಿ ಮಗುವಿನಲ್ಲಿರುವ ಪ್ರತಿಭೆಯನ್ನು ಹುಡುಕಿ ಹೊರ ತೆಗೆದು, ಸೂಕ್ತ ತರಬೇತಿ ಕೊಟ್ಟು, ಎಲ್ಲ ಮಕ್ಕಳನ್ನೂ ಉತ್ಕೃಷ್ಟ ಪ್ರಜೆಗಳನ್ನಾಗಿ ಮಾಡುವ ಧ್ಯೇಯವನ್ನು ಈ ಶಾಲೆ ಹೊಂದಿದೆ.


ಯೋಗಾಸನದಲ್ಲಿ ನಿರತರಾದ ವಿದ್ಯಾರ್ಥಿಗಳು

**2015–16 ರ ಸಾಲಿಗೆ ಪ್ರವೇಶಕ್ಕಿರುವ ತರಗತಿಗಳು :**
**5 ಮತ್ತು 8 ನೇ ತರಗತಿ (ಆಂಗ್ಲ ಮಾಧ್ಯಮ)**

**ಗಂಡು ಮತ್ತು ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಹಾಸ್ಟೆಲ್ ವ್ಯವಸ್ಥೆ ಇರುತ್ತದೆ.**

ಪ್ರವೇಶ ಬಯಸುವವರು ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಒಡನೆ ರೂ. 200/– ಅನ್ನು ಡಿ.ಡಿ. ಅಥವಾ ಎಂ.ಓ. ಮೂಲಕ 'ಕಾರ್ಯದರ್ಶಿ, ಶ್ರೀರಾಮಕೃಷ್ಣ ವಿದ್ಯಾನಿಕೇತನ, ಶಿವಮೊಗ್ಗ' – ಈ ಹೆಸರಿಗೆ ಬರೆದು ಮೇಲಿನ ವಿಳಾಸಕ್ಕೆ ಕಳಿಸಬಹುದು.

ಇಂತಿ ತಮ್ಮ ಸೇವೆಯಲ್ಲಿ ಸಂತೋಷವನ್ನು ಕಾಣುವ
*ವೆಂಕಟರಮಣ ದಾವಣೆಬೈಲು*

